# ರಾಯಚೂರು ದೋ-ಅಬ್ ಪ್ರದೇಶ: ಅಧಿಕಾರ ಮತ್ತು ಹೋರಾಟ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕ
ಅಮರೇಶ ಹನುಮಂತ

ಮಾರ್ಗದರ್ಶಕರು
ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ -೫೮೩ ೨೭೬
೨೦೧೪

568

568

# ರಾಯಚೂರು ದೋ-ಅಬ್ ಪ್ರದೇಶ: ಅಧಿಕಾರ ಮತ್ತು ಹೋರಾಟ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕ
**ಅಮರೇಶ ಹನುಮಂತ**

ಮಾರ್ಗದರ್ಶಕರು
**ಡಾ. ವಿಜಯ್ ಪೂಣಚ್ಚ ತಂಬಂಡ**
ಪ್ರಾಧ್ಯಾಪಕರು



**ಚರಿತ್ರೆ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬

೨೦೧೪

# ದೃಢೀಕರಣ ಪತ್ರ

**ಅಮರೇಶ ಹನುಮಂತ** ಅವರು **ರಾಯಚೂರು ದೋ-ಅಬ್ ಪ್ರದೇಶ: ಅಧಿಕಾರ ಮತ್ತು ಹೋರಾಟ** ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸಲಾಗುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 23.06.2014
ಸ್ಥಳ : ವಿದ್ಯಾರಣ್ಯ

23/6/14

ಡಾ. ವಿಜಯ್ ಪೂಣಚ್ಚ ತಂಬಂಡ
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಪ್ರಮಾಣ ಪತ್ರ

**ರಾಯಚೂರು ದೋ-ಅಬ್ ಪ್ರದೇಶ: ಅಧಿಕಾರ ಮತ್ತು ಹೋರಾಟ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸಲು ಡಾ. ವಿಜಯ್ ಪೂಣಚ್ಚ ತಂಬಂಡ, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ** : 23.06.2014

**ಸ್ಥಳ** : **ವಿದ್ಯಾರಣ್ಯ**

**ಅಮರೇಶ ಹನುಮಂತ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಪರಿವಿಡಿ

ಅನುಬಂಧಗಳು

ಅಧ್ಯಾಯ ಒಂದು

# ಪ್ರಸ್ತಾವನೆ

---

೧.೧. ಅಧ್ಯಯನಗಳ ಸಮೀಕ್ಷೆ

೧.೧.೧. ಪ್ರಭುತ್ವಕೇಂದ್ರಿತ ಅಧ್ಯಯನಗಳು

೧.೧.೨. ಸಂಕೀರ್ಣ ಅಧ್ಯಯನಗಳು

೧.೨. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಕರ್ನಾಟಕ ಚರಿತ್ರೆಯ ಸಾಂಪ್ರದಾಯಿಕ ಬರವಣಿಗೆಗಳಲ್ಲಿ ಅಷ್ಟಾಗಿ ಕಾಣಸಿಗದ ಚರಿತ್ರೆಯ ಬಹುಮುಖ್ಯವಾದ ಅಧ್ಯಯನ ಕ್ಷೇತ್ರಗಳು ಆದ್ಯತೆಯನ್ನು ಪಡೆಯದಿರುವುದನ್ನು ಗಮನಿಸಬಹುದಾಗಿದೆ. ದೋ-ಅಬ್ ಪ್ರದೇಶಗಳ ಅಧ್ಯಯನ ಇವುಗಳಲ್ಲಿ ಮುಖ್ಯವಾದುದು. ರಾಜ್ಯ ಕೇಂದ್ರಿತ ಅಥವಾ ವ್ಯಕ್ತಿ ಕೇಂದ್ರಿತ ಚರಿತ್ರೆ ಅಧ್ಯಯನಗಳಿಗಿಂತ ಭಿನ್ನವಾಗಿ ಮನುಷ್ಯ ಸಮಾಜ ಬಹಳ ಮಟ್ಟಿಗೆ ತನ್ನ ವಾಸ ಸ್ಥಾನ, ತನ್ನ ಚಲನ ವಲನ ಹಾಗೂ ಅದರ ಮೂಲಕ ಅಸ್ತಿತ್ವವನ್ನು ಕಂಡುಕೊಂಡ ನದಿ ಪ್ರದೇಶಗಳ ಫಲವತ್ತಾದ ಭೂಮಿಯ ಅಧ್ಯಯನ ಈ ನಿಟ್ಟಿನಲ್ಲಿ ವಿರಳವಾಗಿದೆ. ಕರ್ನಾಟಕದ ಮಟ್ಟಿಗೆ ದೋ-ಅಬ್ ಪ್ರದೇಶಗಳಲ್ಲಿ ಮುಖ್ಯವಾದುವು ಸಗರನಾಡು, ಕಾವೇರಿ ಕಪಿಲಾ ನದಿಗಳ ಎಡೆದೊರೆ ನಾಡು, ಬೀಳಗಿ, ಕೂಡಲಸಂಗಮ ಮತ್ತು ರಾಯಚೂರು ದೋ-ಅಬ್ ಪ್ರದೇಶಗಳು. ಈ ಪ್ರದೇಶಗಳ ಹತೋಟಿಗಾಗಿ ಅನೇಕಾನೇಕ ರಾಜಮಹಾರಾಜರು, ಪಾಳೆಯಗಾರರು, ಸಮುದಾಯಗಳು ಶತಮಾನ ಗಳಿಂದ ಪ್ರಯತ್ನಪಟ್ಟಿದ್ದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ತಾತ್ವಿಕವಾಗಿ ಈ ಪ್ರದೇಶಗಳನ್ನು ಆಳಿದ ಭಿನ್ನ ಭಿನ್ನ ಅರಸು ಮನೆತನಗಳನ್ನು ನಾವು ಗುರುತಿಸಿದರೂ ಆ ಪ್ರದೇಶಗಳನ್ನು ಆಯಾಯ ಕಾಲಘಟ್ಟದಲ್ಲಿ ವಿವಿಧ "ರಾಜ್ಯಗಳು" ಆಳಿರುವುದನ್ನು ಮತ್ತು ಆ ಪ್ರದೇಶಗಳನ್ನು ತಮ್ಮ ಹತೋಟಿಗೆ ತೆಗೆದುಕೊಂಡಿರುವುದನ್ನು ಗಮನಿಸಬಹುದು. ಯಾರೇ ರಾಜ್ಯಭಾರ ಮಾಡಿದರೂ, ಪೈಪೋಟಿಯಲ್ಲಿ ಯಾರೇ ಮೇಲಾಟ ಹೊಂದಿದರೂ ಮೂಲಭೂತವಾಗಿ ಅದು ದೋ-ಅಬ್ ಪ್ರದೇಶದ ಫಲವತ್ತಾದ ಭೂಮಿಯ ಮೇಲೆ ಅಧಿಪತ್ಯವನ್ನು ಸ್ಥಾಪಿಸುವುದಕ್ಕಾಗಿಯೇ ಎನ್ನುವುದರಲ್ಲಿ ಸಂಶಯವಿಲ್ಲ. ರಾಜ್ಯಗಳು ಅಳಿದು ಹೋದರೂ ರಾಜ ಮಹಾರಾಜರು, ಪಾಳೆಯಗಾರರು, ನಿಜಾಮರು ಅಳಿದು ಹೋದರೂ ಅಲ್ಲಿ ಕಂಡುಬರುವುದು ದೋ-ಅಬ್ ಪ್ರದೇಶದ ಅನನ್ಯವಾದ ಸಂಸ್ಕೃತಿ ಮಾತ್ರ.

ಬೇಟೆ, ಪಶುಪಾಲನೆ, ಕೃಷಿ ಕೇಂದ್ರಿತ ಸಮಾಜ ಕಾಲಕಾಲದ ಸ್ಥಿತ್ಯಂತರಗಳಲ್ಲಿ ನಗರ ಕೇಂದ್ರಗಳಾಗಿ ಬೆಳೆದದ್ದನ್ನು, ನಂತರ ಅವು ವ್ಯಾಪಾರ ವಾಣಿಜ್ಯ ಕೇಂದ್ರಗಳಾಗಿ ಬೆಳೆದದ್ದನ್ನು ಅಭ್ಯಸಿಸುವ ಪ್ರಯತ್ನ ರಾಯಚೂರು ದೋ-ಅಬ್ ಪ್ರದೇಶದ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ. ಊಳಿಗಮಾನ್ಯ ಸ್ವರೂಪದ ಶಕ್ತಿಗಳು ತಮ್ಮ ತಮ್ಮ ಸಮುದಾಯಗಳ ಮೂಲಕ ಶಕ್ತಿ ಕೇಂದ್ರಗಳಾಗಿ ಬೆಳೆದು ಯಾರೇ ಅಧಿಕಾರ ದಲ್ಲಿದ್ದರೂ ತಮ್ಮ ಅಧಿಕಾರವನ್ನು ಹಾಗೆಯೇ ಉಳಿಸಿಕೊಳ್ಳಲು ಶಕ್ತವಾದ ಅಂಶಗಳನ್ನು ಪ್ರಸ್ತುತ ಅಧ್ಯಯನ ಅಭ್ಯಸಿಸಲು ಯತ್ನಿಸಿದೆ. ಅದಕ್ಕಾಗಿ ನಡೆದ ಯುದ್ಧಗಳನ್ನು ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಆಯಾಮಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ನಂತರದಲ್ಲಿ ಬೆಳವಣಿಗೆಗೊಂಡ ಸಮಾಜ, ಜಾತಿ, ಧಾರ್ಮಿಕ ಅಂಶಗಳು ಹೇಗೆ ಒಂದು ಶಕ್ತಿಶಾಲಿ ಸಾಮಾಜಿಕ ವ್ಯವಸ್ಥೆಯನ್ನು ಹುಟ್ಟುಹಾಕಿದವು ಎನ್ನುವುದು ಈ ಅಧ್ಯಯನದ ವಿಷಯವಾಗಿದೆ. ಕ್ರಿ.ಶ. ೧೦ ರಿಂದ ೨೦ನೆಯ ಶತಮಾನದವರೆಗಿನ ಸಾಮಂತರು, ಸಂಸ್ಥಾನಿಕರು ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ಸ್ಥಳೀಯ ಸಂಸ್ಕೃತಿಯನ್ನು ಹುಟ್ಟುಹಾಕಿದ ಬಗೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ.

ಸ್ವಾತಂತ್ರ್ಯ ಹೋರಾಟವೂ ಇದರೊಡನೆ ಬೆಸೆದದ್ದನ್ನು ವಿವರಿಸುವ ಈ ಅಧ್ಯಯನವು ಜನ ಕೇಂದ್ರಿತ ಅಧ್ಯಯನವನ್ನಾಗಿ ರೂಪುಗೊಳ್ಳಲು ಪ್ರಸ್ತುತ ಅಧ್ಯಯನ ಶ್ರಮಿಸಿದೆ. ಸಾಮಾಜಿಕ, ಆರ್ಥಿಕ, ಸಾಮುದಾಯಿಕ, ಧಾರ್ಮಿಕ, ಆಡಳಿತ ವಲಯಗಳಲ್ಲಿ ಜನ ಸಾಮಾನ್ಯರು ಮುಖ್ಯವಾಗಿ ರೈತಾಪಿ ವರ್ಗಗಳು, ಕುಶಲಕರ್ಮಿಗಳು, ಧಾರ್ಮಿಕ ಕ್ಷೇತ್ರಗಳಲ್ಲಿ ಹತೋಟಿ ಸಾಧಿಸಿದ ವರ್ಗಗಳು ಹೇಗೆ ರಾಯಚೂರು ದೋ-ಅಬ್ ಪ್ರದೇಶದ ಸಂಸ್ಕೃತಿಯನ್ನು ರೂಪಿಸಿದವು ಎನ್ನುವುದನ್ನು ಅಭ್ಯಸಿಸಲು ಯತ್ನಿಸಲಾಗಿದೆ. ಇಂಥ ಸಮುದಾಯಗಳು ತಮಗೆ ಕಾಲಕಾಲಕ್ಕೆ ಬೇಕಾದ ರಾಜ್ಯಗಳನ್ನು, ವ್ಯವಸ್ಥೆಗಳನ್ನು ಹುಟ್ಟುಹಾಕಿಕೊಂಡವು ಎನ್ನುವುದೂ ಗಮನಾರ್ಹವಾದ ಅಂಶವಾಗಿದೆ. ಚರಿತ್ರೆಯ ವಾಸ್ತವಿಕತೆಯಿಂದ ದೂರ ನಿಂತು ನೋಡಿದರೆ, ಒಂದು ರಾಜ್ಯದ ನಂತರ ಇನ್ನೊಂದು, ಒಬ್ಬ ರಾಜನಾದ ನಂತರ ಇನ್ನೊಬ್ಬ ಬಂದನೆಂಬ ಸಾರ್ವಕಾಲಿಕ ಭ್ರಮೆ ಆವರಿಸಿದರೂ ವಾಸ್ತವಿಕವಾಗಿ ಆ ಪ್ರದೇಶಗಳಲ್ಲಿ ಅಧಿಕಾರ ಯಾರ ಕೈಯಲ್ಲಿರಬೇಕೆಂಬುದು ಆಯಾ ಕಾಲದಲ್ಲಿದ್ದ ಬಲಾಢ್ಯ ವರ್ಗಗಳ ಆಶಯವಾಗಿತ್ತು ಎನ್ನುವುದು ಹೆಚ್ಚು ಸೂಕ್ತವಾಗುವುದು. ಅವು ಎಲ್ಲ ಕಾಲಘಟ್ಟಗಳಲ್ಲಿಯೂ ಕ್ರಿಯಾಶೀಲವಾಗಿದ್ದು ಆಡಳಿತ, ವ್ಯವಹಾರ ಇತ್ಯಾದಿಗಳನ್ನು ನಿರ್ದೇಶಿಸಿರುವ ಅಂಶಗಳು ಗಮನಾರ್ಹವಾದದ್ದು. ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಶತಶತಮಾನಗಳಿಂದ ಈ ಪ್ರದೇಶದ ಹತೋಟಿಗಾಗಿ, ಅಧಿಕಾರಕ್ಕಾಗಿ ನಡೆದ ಹೋರಾಟದ, ಸಂಘರ್ಷದ ವಿನ್ಯಾಸಗಳನ್ನು ಪ್ರಸ್ತುತ ಮಹಾಪ್ರಬಂಧ ನಿರ್ವಚಿಸಲು ಯತ್ನಿಸಿದೆ.

** ** **

ರಾಯಚೂರು ದೋ-ಆಬ್ ಪ್ರದೇಶದ ಚರಿತ್ರೆಗೆ ಬೇಕಾದ ಆಕರಗಳು ನಿರೀಕ್ಷಿತ ಪ್ರಮಾಣದಲ್ಲಿ ಲಭ್ಯವಾಗುತ್ತಿಲ್ಲ. ಚಾರಿತ್ರಿಕವಾಗಿ ಕರ್ನಾಟಕದ ರಾಜಮನೆತನಗಳ ಚರಿತ್ರೆಯ ಸಂದರ್ಭದಲ್ಲಿ ಈ ಪ್ರದೇಶ ತನ್ನ ಅನನ್ಯತೆಯನ್ನು ಉಳಿಸಿಕೊಂಡಿದೆ. ರಾಜಕೀಯ ಸ್ಥಿತ್ಯಂತರಗಳು, ವಿವಿಧ ಅರಸು ಮನೆತನಗಳ ನಡುವೆ ಈ ಪ್ರದೇಶಕ್ಕಾಗಿ ನಡೆದ ಯುದ್ಧಗಳು ಮತ್ತು ಅವುಗಳ ಹೋರಾಟದ ಸ್ವರೂಪ, ಕಾರಣ-ಪರಿಣಾಮಗಳು; ಈ ಪ್ರದೇಶದ ಜನಜೀವನ, ಆರ್ಥಿಕತೆ, ಸಾಮಾಜಿಕತೆ, ಧಾರ್ಮಿಕತೆ ಮತ್ತು ಸ್ಮಾರಕಗಳ ಹಿನ್ನೆಲೆಯಲ್ಲಿ ಚರಿತ್ರೆಯನ್ನು ಪುನರ್ ವಿಮರ್ಶಿಸಲು ಪ್ರಸ್ತುತ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ಯಾವುದೇ ಅರಸರ ನೇರ ಆಳ್ವಿಕೆಗೆ ಒಳಗಾಗದೆ ಸ್ವತಂತ್ರವಾಗಿದ್ದ ಸಾಮಂತ ಮತ್ತು ಸಂಸ್ಥಾನಿಕರ ಆಡಳಿತ ವ್ಯವಸ್ಥೆಯನ್ನು ಚರ್ಚಿಸಲಾಗಿದೆ. ಹಾಗೆಯೇ ಸ್ವಾತಂತ್ರ್ಯ ಹೋರಾಟದ ಸ್ವರೂಪವನ್ನು ವಿವರಿಸಲಾಗಿದೆ. ಹೀಗೆ ರಾಯಚೂರು ದೋ-ಅಬ್ ಪ್ರದೇಶದ ಸ್ಥಳೀಯ ಚರಿತ್ರೆಯನ್ನು ಅಭ್ಯಸಿಸಲು ಪ್ರಯತ್ನಿಸಲಾಗಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಚಾರಿತ್ರಿಕ ಹಿರಿಮೆಯನ್ನು ಹೊಂದಿರುವ ಈ ಪ್ರದೇಶ ಸಮಕಾಲೀನ ಇತಿಹಾಸದಲ್ಲಿ ತನ್ನ ಜೀವಂತಿಕೆಯನ್ನು ಇನ್ನೂ ಉಳಿಸಿಕೊಂಡು ಬಂದಿದೆ. ಇದರ ಚರಿತ್ರೆಯನ್ನು ಪುನರ್‌ರಚಿಸಲು ಪ್ರಯತ್ನಿಸುವುದು ಮುಖ್ಯವಾಗಿದೆ.

ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಕೇಂದ್ರವಾಗಿ ಗುರುತಿಸಿಕೊಂಡ ಈ ಪ್ರದೇಶ ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಒಳಗಾದದ್ದುಂಟು. ಮೌರ್ಯರಿಂದ ಹಿಡಿದು ನಿಜಾಮರ ಕಾಲದವರೆಗೆ ಅನೇಕ ಅರಸುಮನೆತನಗಳು ಈ ಪ್ರದೇಶದ ಮೇಲೆ ಅಧಿಕಾರವನ್ನು ಸ್ಥಾಪಿಸಿದ್ದವು. ಅಧಿಕಾರಕ್ಕಾಗಿ ಹೋರಾಟವನ್ನು ಮಾಡಿದವರಲ್ಲಿ ಮೌರ್ಯರು, ಶಾತವಾಹನರು, ವಾಕಾಟಕರು, ಚುಟುಗಳು, ಪಲ್ಲವರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಚೋಳರು, ಹೊಯ್ಸಳರು,

ಸೇವುಣರು, ಕಾಕತೀಯರು, ವಿಜಯನಗರ, ಬಹಮನಿ, ವಿಜಾಪುರ ಆದಿಲ್‌ಶಾಹಿಗಳು, ಮೊಗಲರು ಹಾಗೂ ನಿಜಾಮರು ಪ್ರಮುಖರಾಗಿದ್ದಾರೆ. ಅಲ್ಲದೆ ಸಾಮಂತರಾದ ಸಾಲಗುಂದೆಯ ಸಿಂದರು, ಕರಡಿಕಲ್ಲು ಕದಂಬರು, ಮೊರಟದ ಹೈಹಯರು ಹಾಗೂ ಸಮಕಾಲೀನ ಸಾಮಂತರು ಮತ್ತು ಅಮರನಾಯಕರು, ಅಲ್ಲದೆ ಸಂಸ್ಥಾನಿಕರಾದ ಗುಡಗುಂಟಿ, ಗುಂತಗೋಳ, ದೇವದುರ್ಗ, ಕ್ಯಾದಿಗ್ಗೇರಿ, ಜಾಲಹಳ್ಳಿ, ಗಲಗ, ಅರಕೇರಿ, ಮುಂಡರಗಿ, ಕರಿಗುಡ್ಡ ಹಾಗೂ ರಾಮದುರ್ಗ ಮುಂತಾದ ಸಂಸ್ಥಾನಿಕರು ಹಾಗೂ ಜನಜೀವನದ ಮೇಲೆ ಪ್ರಭಾವ ಬೀರಿದ ಜಮೀನ್ದಾರರ ಕುರಿತು ಅವಲೋಕಿಸಲು ಪ್ರಯತ್ನಿಸಲಾಗಿದೆ.

ಈ ಅಧ್ಯಾಯವನ್ನು ಎರಡು ಭಾಗಗಳಲ್ಲಿ ಮಂಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಈ ಕುರಿತು ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ಹಾಗೂ ಎರಡನೆಯ ಭಾಗದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪವನ್ನು ವಿವರಿಸಲು ಪ್ರಯತ್ನಿಸಲಾಗಿದೆ.

## ೧.೧. ಅಧ್ಯಯನಗಳ ಸಮೀಕ್ಷೆ

ಯಾವುದೇ ಪ್ರದೇಶದ ಅಧ್ಯಯನ ಮಾಡುವಾಗ ಆ ಪ್ರದೇಶದ ಕುರಿತು ನಡೆದ ಅಧ್ಯಯನಗಳನ್ನು ಸಮೀಕ್ಷೆ ಮಾಡುವುದು ಅಧ್ಯಯನ ದೃಷ್ಟಿಯಿಂದ ಅಗತ್ಯವಾಗಿದೆ. ರಾಯಚೂರು ದೋ-ಅಬ್ ಪ್ರದೇಶಕ್ಕೆ ಸಂಬಂಧಿಸಿ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು ಲೇಖನ, ಪುಸ್ತಕಗಳು, ಪ್ರಾಥಮಿಕ, ಆನುಷಂಗಿಕ, ಮೌಖಿಕ, ಶಾಸನಗಳು ಮುಂತಾದ ಲಿಖಿತ, ಅಲಿಖಿತ ಸ್ವರೂಪದಲ್ಲಿ ನಡೆದಿರುವುದು ಕಂಡುಬರುತ್ತದೆ. ಇವುಗಳ ಸಮೀಕ್ಷೆಯನ್ನು ಪ್ರಭುತ್ವಕೇಂದ್ರಿತ ಅಧ್ಯಯನಗಳು ಮತ್ತು ಸಂಕೀರ್ಣ ಅಧ್ಯಯನಗಳು ಎಂಬ ಎರಡು ಭಾಗಗಳಲ್ಲಿ ಚರ್ಚಿಸಲಾಗಿದೆ.

### ೧.೧.೧. ಪ್ರಭುತ್ವಕೇಂದ್ರಿತ ಅಧ್ಯಯನಗಳು

ಅಧಿಕಾರದ ನೆಲೆಯ ಅಧ್ಯಯನಗಳು ರಾಜಪ್ರಭುತ್ವ, ಅರಮನೆ, ಕೋಟೆ-ಕೊತ್ತಲ, ಕೆರೆ-ಕಟ್ಟೆ, ದೇವಾಲಯ, ಅಗ್ರಹಾರ, ಮಠ-ಮಾನ್ಯ, ಭೂದಾನ, ಶಾಸನ, ನಾಣ್ಯ, ಅರಸುಮನೆತನ, ರಾಜ, ಪ್ರಧಾನಿ, ಪುರೋಹಿತಶಾಹಿ, ಸಾಮಂತರು, ಸಂಸ್ಥಾನಿಕರು, ಜಹಗೀರ್‌ದಾರರು, ಜಮೀನ್ದಾರರು, ಭೂಮಾಲಿಕರು, ಪಟೇಲ, ಗೌಡ, ಕುಲಕರ್ಣಿ, ರಾಜಕೀಯ ಸೋಲು-ಗೆಲುವುಗಳ ನೆಲೆಯಲ್ಲಿ ನಡೆದಿರುವುದು ಕಂಡುಬರುತ್ತದೆ. ವ್ಯವಸ್ಥೆಯ ಬೆನ್ನೆಲುಬಾಗಿ ದುಡಿದವರ ಹೆಸರಿನೊಂದಿಗೆ ಗುರುತಿಸಿ ಕೊಳ್ಳದ ಮತ್ತು ಅರಮನೆ ಕೇಂದ್ರಿತವೂ ಅಧಿಕಾರ ಕೇಂದ್ರಿತವೂ ಆಗಿರುವುದನ್ನು ಪ್ರಭುತ್ವಕೇಂದ್ರಿತ ಎನ್ನಬಹುದಾಗಿದೆ. ಈ ಹಿನ್ನೆಲೆಯನ್ನು ಅಧ್ಯಯನಕ್ಕೆ ಒಳಪಡಿಸುವ ಕ್ರಮವನ್ನು ಪ್ರಭುತ್ವಕೇಂದ್ರಿತ ಅಧ್ಯಯನವೆಂದು ಕರೆಯಲಾಗಿದೆ. ರಾಯಚೂರು ದೋ-ಅಬ್ ಪ್ರದೇಶಕ್ಕೆ ಸಂಬಂಧಿಸಿದಂತೆ ಅನೇಕ ಪ್ರಭುತ್ವಕೇಂದ್ರಿತ ಅಧ್ಯಯನಗಳು ನಡೆದಿವೆ. ಅವು ಅಧಿಕಾರ ಕೇಂದ್ರಿತ ಮತ್ತು ಮೇಲ್ವರ್ಗ ಕೇಂದ್ರಿತವಾಗಿವೆ.

ದೇವರಕೊಂಡಾರೆಡ್ಡಿ, ಧ್ರುವನಾರಾಯಣ ಎಂ., ಸೂರ್ಯನಾಥ ಯು ಕಾಮತ್, ಮಹಾಬಲೇಶ್ವರಪ್ಪ ಬಿ.ಸಿ., ಗೋಪಾಲ್‌ರಾವ ಹೇಜೀಬ್, ಭೂಸರೆಡ್ಡಿ ಎಸ್.ಎಸ್., ಜೋಶಿ ರಾ.ಗು., ಶ್ರೀನಿವಾಸರಾವ್ ಬಿ.ವಿ., ಚಂದ್ರಶೇಖರ ನಾರಣಾಪುರ, ನರಸಿಂಹಮೂರ್ತಿ ಎ.ವಿ., ಖಂಡೋಬರಾವ್ ಎಚ್., ಚನ್ನಬಸವ ಹಿರೇಮಠ, ಚಿತ್ರಗಾರ ಎಚ್.ಎನ್., ಕಪಟರಾಳ ಕೃಷ್ಣರಾಯ, ಸಿ.ಎಸ್. ವಾಸುದೇವನ್, ಕೃಷ್ಣಮಾಚಾರ್ಯ

ಬಿ., ಶಿವಾನಂದ ವಿ., ಮಹೇಶ, ಸುಜಾತಮಲ್ಲನಗೌಡ, ರಮೇಶ ಮೂಲಗೆ, ಅಮರೇಶ ಯತಗಲ್ ಮುಂತಾದವರು ಪ್ರಭುತ್ವಕೇಂದ್ರಿತ ಅಧ್ಯಯನ ನಡೆಸಿರುವುದನ್ನು ಗಮನಿಸಬಹುದಾಗಿದೆ.

ಪ್ರಭುತ್ವದ ಮಾಧ್ಯಮವಾಗಿ ಗುರುತಿಸಿಕೊಂಡಿರುವ ಈ ಪ್ರದೇಶದ ಶಾಸನಗಳ ಕುರಿತು ಅಧ್ಯಯನ ನಡೆಸಿದ ಕರ್ನಲ್ ಮೆಕಂಜಿ, ಬೀಡನ್ ಮತ್ತು ಹೆಚ್. ಕೃಷ್ಣಶಾಸ್ತ್ರಿ, ಪಿ.ಬಿ. ದೇಸಾಯಿ, ಶ್ರೀನಿವಾಸ ರಿತ್ತಿ, ಎಂ.ಎಂ. ಕಲಬುರ್ಗಿ, ಅನ್ನಪೂರ್ಣ ಜಾಲವಾದಿ, ಸಿ.ಎಸ್. ಪಾಟೀಲ್, ಯಾಸಿನ್ ಖದ್ದೂಸಿ ಎಂ., ಶಿವಾನಂದ ವಿ., ಚನ್ನಬಸವ ಹಿರೇಮಠ ಹಾಗೂ ದೇವರಕೊಂಡಾರೆಡ್ಡಿ ಮುಂತಾದವರು ಉಲ್ಲೇಖಾರ್ಹರಾಗಿದ್ದಾರೆ(ಹಿರೇಮಠ ೨೦೦೮: ೮-೧೩). ಶ್ರೀನಿವಾಸ ರಿತ್ತಿ, ಚನ್ನಬಸವ ಹಿರೇಮಠರು ಪ್ರಮುಖರಾಗಿ ಕಂಡುಬರುತ್ತಾರೆ. ಆದರೆ ದೇವರಕೊಂಡಾರೆಡ್ಡಿ ಅವರು ಸಮಗ್ರ ಅಧ್ಯಯನ ಕೈಗೊಂಡಿರುವುದರಿಂದ ಮುಖ್ಯರಾಗುತ್ತಾರೆ. ನಾಣ್ಯಗಳನ್ನು ಕುರಿತು ಅಧ್ಯಯನ ಮಾಡಿದವರಲ್ಲಿ ಎ.ವಿ. ನರಸಿಂಹಮೂರ್ತಿ ಮತ್ತು ಖಂಡೋಬರಾವ್ ಎಚ್. ಅವರು ಮುಂದಿದ್ದಾರೆ. ಕರ್ನಾಟಕದ ನಾಣ್ಯಗಳ ಅಧ್ಯಯನ ಸಂದರ್ಭದಲ್ಲಿ ಇವರು ಈ ಪ್ರದೇಶದಲ್ಲಿ ದೊರೆತ ನಾಣ್ಯಗಳನ್ನೂ ಅಧ್ಯಯನ ಮಾಡಿದ್ದಾರೆ. ಇವರಿಬ್ಬರ ವಿಚಾರಗಳಲ್ಲಿ ಸಾಮ್ಯತೆ ಇದೆ. ಇಲ್ಲಿನ ದೇವಾಲಯಗಳ ಅಧ್ಯಯನದಲ್ಲಿ ತೊಡಗಿಸಿಕೊಂಡವರಲ್ಲಿ ಸಿ.ಎಸ್. ಪಾಟೀಲ, ಎಚ್.ಎನ್. ಚಿತ್ರಗಾರ, ಸಿ.ಎಸ್. ವಾಸುದೇವನ್ ಮುಂತಾದವರು ಪ್ರಮುಖರಾಗಿದ್ದಾರೆ. ಸಿ.ಎಸ್. ಪಾಟೀಲ ಮತ್ತು ಚಿತ್ರಗಾರ ಎಚ್.ಎನ್. ಸ್ಥಳೀಯರಾಗಿ ಈ ಬಗೆಯ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಈ ಪ್ರದೇಶದ ಎಲ್ಲ ದೇವಾಲಯಗಳನ್ನು ಅಧ್ಯಯನ ಮಾಡಿರುವ ಸಿ.ಎಸ್. ವಾಸುದೇವನ್ ಅವರು ಸ್ಥಳೀಯ ಸಂಶೋಧಕರಿಗಿಂತ ಭಿನ್ನವಾಗಿ ಕಂಡುಬರುತ್ತಾರೆ. ಅಲ್ಲದೆ ಪಿಎಚ್.ಡಿ. ಮತ್ತು ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿದ ಪ್ರಬಂಧಗಳು ಮೇಲಿನವರನ್ನು ಅವಲಂಬಿಸಿವೆ ಮತ್ತು ದಾಖಲಾಗದೆ ಉಳಿದಿರುವ ಅಲ್ಲೊಂದು ಇಲ್ಲೊಂದು ದೇವಾಲಯಗಳನ್ನು ದಾಖಲಿಸುವ ಪ್ರಯತ್ನ ಮಾಡಿವೆ.

ಕೋಟೆಗಳು ಈ ಪ್ರದೇಶದಲ್ಲಿ ಕಂಡುಬರುವ ಬಹುಮುಖ್ಯವಾದ ಸ್ಮಾರಕಗಳಾಗಿವೆ. ಈ ಕುರಿತು ಇನ್ನೂ ಸಮಗ್ರ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಸಾರಿಗೆ ಸಂಪರ್ಕ ಸೌಲಭ್ಯವಿರುವ ಸ್ಥಳಗಳಲ್ಲಿನ ಕೋಟೆಗಳನ್ನು ಕುರಿತು ಅಧ್ಯಯನ ನಡೆದಿದೆ. ಇತ್ತೀಚೆಗೆ ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ಅಜ್ಞಾತ ಕೋಟೆಗಳ ಬಗ್ಗೆಯೂ ಗಮನಹರಿಸುವ ಪ್ರಯತ್ನಗಳು ನಡೆದಿವೆ.

ಇಲ್ಲಿನ ಕೋಟೆಗಳನ್ನು ಕುರಿತು ಸಿ.ಎಸ್. ಪಾಟೀಲ್, ಸುಗುಣಶರ್ಮ, ಸುಜಾತ ಮಲ್ಲನಗೌಡ, ರಡ್ಡೆಪ್ಪಹಳ್ಳಿ ಮುಂತಾದವರು ಅಧ್ಯಯನ ಮಾಡಿದ್ದಾರೆ. ಸುಗುಣಶರ್ಮ ಮತ್ತು ರಡ್ಡೆಪ್ಪ ಹಳ್ಳಿಯವರು ಕೇವಲ ರಾಯಚೂರು ಕೋಟೆಯನ್ನು ಕುರಿತು ಅಧ್ಯಯನ ಮಾಡಿದ್ದರೆ, ಸಿ.ಎಸ್. ಪಾಟೀಲ್ ಅವರು ಸುಮಾರು ಇಪ್ಪತ್ತು ಕೋಟೆಗಳನ್ನು ಗುರುತಿಸಿದ್ದಾರೆ. ಸುಜಾತ ಮಲ್ಲನಗೌಡ ಅವರು ತಮ್ಮ ಪಿಎಚ್.ಡಿ. ಅಧ್ಯಯನ ಸಂದರ್ಭದಲ್ಲಿ ಸಿ.ಎಸ್. ಪಾಟೀಲ ಅವರ ಇಪ್ಪತ್ತು ಕೋಟೆಗಳ ಪಟ್ಟಿಗೆ ಹೊಸ ನಾಲ್ಕು ಕೋಟೆಗಳನ್ನು ಪತ್ತೆ ಹಚ್ಚಿ ಸೇರಿಸಿದ್ದಾರೆ. ಮಹೇಶ ಅವರು ದೇವದುರ್ಗ ತಾಲೂಕಿನಲ್ಲಿ ನಾಲ್ಕು ಕೋಟೆಗಳನ್ನು ಗುರುತಿಸಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೇವದುರ್ಗ ತಾಲೂಕಿನ ಗಲಗ ಮತ್ತು ಮಾನ್ವಿ ತಾಲೂಕಿನ ವಡವಟ್ಟಿಯಲ್ಲಿ ಕೋಟೆಗಳಿರುವುದು ಕಂಡುಬಂದಿದೆ. ಕೋಟೆಗಳ ಅಧ್ಯಯನಗಳನ್ನು ನಡೆಸಿದವರಲ್ಲಿ ಸಿ.ಎಸ್. ಪಾಟೀಲ್ ಅವರು ಮುಖ್ಯರಾಗಿದ್ದು, ಈ ಅಧ್ಯಯನಕಾರರು ಕೋಟೆಗಳಿಗೆ ಸಂಬಂಧಿಸಿದ ಐತಿಹ್ಯಗಳನ್ನು ಸಂಗ್ರಹಿಸದಿರುವುದು ಗೋಚರಿಸುತ್ತದೆ.

ಚಂದ್ರಶೇಖರ ನಾರಣಾಪುರ ಮತ್ತು ರಮೇಶ ಮೂಲಗೆ ಅವರು ಈ ಪ್ರದೇಶದಲ್ಲಿನ ವೀರಶೈವ ಮಠಗಳನ್ನು ಐತಿಹ್ಯ, ಪವಾಡ, ಕಥೆಗಳ ಮೂಲಕ ಅಧ್ಯಯನ ಮಾಡಿ, ಮಠಗಳನ್ನು ಪ್ರತಿನಿಧಿಸಿದ್ದಾರೆ. ರಾ.ಗು.ಜೋಶಿ, ಎಸ್.ಎಸ್. ಭೂಸರೆಡ್ಡಿ, ಶ್ರೀನಿವಾಸರಾವ್ ಬಿ.ವಿ., ಕಪಟರಾಳ ಕೃಷ್ಣರಾಯ, ಬಿ.ಕೃಷ್ಣಮಾಚಾರ್ಯ, ಅಮರೇಶ ಯತಗಲ್, ಸಿ.ಎಸ್. ಪಾಟೀಲ್, ಮೊದಲಾದವರು ಇಲ್ಲಿನ ಚರಿತ್ರೆಯನ್ನು ರಾಜಕೀಯದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ರಾ.ಗು. ಜೋಶಿ, ಎಸ್.ಎಸ್. ಭೂಸರೆಡ್ಡಿ, ಶ್ರೀನಿವಾಸರಾವ್ ಬಿ.ವಿ. ಹಾಗೂ ಸಿ.ಎಸ್. ಪಾಟೀಲ್ ಅವರು ರಾಯಚೂರು ದೋ-ಅಬ್ ಪ್ರದೇಶ ವಿವಿಧ ಅರಸುಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದ ಬಗ್ಗೆ ಸ್ಪಷ್ಟ ಉಲ್ಲೇಖ ಒದಗಿಸುತ್ತಾರೆ. ಇವರಲ್ಲಿ ಶ್ರೀನಿವಾಸರಾವ್ ಈ ಪ್ರದೇಶದ ರಾಜಕೀಯ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದರೆ, ಕಪಟರಾಳ ಕೃಷ್ಣರಾಯ, ಬಿ. ಕೃಷ್ಣಮಾಚಾರ್ಯ, ಅಮರೇಶ ಯತಗಲ್ ಮುಂತಾದವರು ಇಲ್ಲಿನ ನಾಯಕರ ಸಂಸ್ಥಾನಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಸುರಪುರ ಸಂಸ್ಥಾನಿಕರ ಬಗ್ಗೆ ಬಹುಪಾಲು ಮಾಹಿತಿ ನೀಡುವ ಕಪಟರಾಳ ಕೃಷ್ಣರಾಯ ಅವರು ಸಂಸ್ಥಾನಿಕರ ಚರಿತ್ರೆ ರಚನೆ ಮಾಡುವವರಿಗೆ ಪ್ರಮುಖ ಆಕರಗಳನ್ನು ಒದಸಿಗಿದ್ದಾರೆ. ಅಮರೇಶ ಯತಗಲ್ ಈ ಪ್ರದೇಶದಲ್ಲಿನ ಗುಡಗುಂಟಿ, ಗುಂತಗೋಳ ಮತ್ತು ದೇವದುರ್ಗ ಸಂಸ್ಥಾನಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ. ಈ ಪ್ರದೇಶದ ರಾಜಕೀಯ ವಿಚಾರಗಳನ್ನು ತಿಳಿಸುವಲ್ಲಿ ಶ್ರೀನಿವಾಸರಾವ್ ಬಿ.ವಿ. ಮತ್ತು ಕಪಟರಾಳ ಕೃಷ್ಣರಾಯ ಮುಖ್ಯರಾಗಿದ್ದಾರೆ. ಸೂರ್ಯನಾಥ ಕಾಮತ್, ಬಿ.ಸಿ. ಮಹಾಬಲೇಶ್ವರಪ್ಪ, ಧ್ರುವನಾರಾಯಣ ಎಂ., ಗೋಪಾಲ್‌ರಾವ್ ಹೇಜೀಬ್ ಮತ್ತು ರಾಮಣ್ಣ ಹವಳೆ ಮುಂತಾದವರು ಹೈದರಾಬಾದ್ ಕರ್ನಾಟಕ ವಿಮೋಚನೆ ಮತ್ತು ರಜಾಕಾರ ವಿರೋಧಿ ಚಳವಳಿಯನ್ನು ಅಧ್ಯಯನ ಮಾಡಿದ್ದಾರೆ.

### ೧.೧.೨. ಸಂಕೀರ್ಣ ಅಧ್ಯಯನಗಳು

ಈ ಪ್ರದೇಶದ ಬಗ್ಗೆ ಸಮಗ್ರ ಅಧ್ಯಯನ ನಡೆದಿರುವುದು ವಿರಳವೆಂದೇ ಹೇಳಬೇಕು. ಇದುವರೆಗೆ ನಡೆದಿರುವ ಪ್ರತ್ಯೇಕ ಅಧ್ಯಯನಗಳು ಸಂಕೀರ್ಣತೆಯಿಂದ ಕೂಡಿವೆ. ಇದರಲ್ಲಿ ಚರಿತ್ರೆ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಜಾನಪದ, ಐತಿಹ್ಯ, ಭಾಷೆ, ಸಮಾಜ, ಧರ್ಮ, ಶಿಕ್ಷಣ, ದುಡಿಯುವ ವರ್ಗ, ಆರ್ಥಿಕ, ರಾಜಕೀಯ, ಸಾಮಾಜಿಕ ಚಳವಳಿಗಳು, ಮಹಿಳಾ ಕಾರ್ಮಿಕರು, ಕುಶಲಕರ್ಮಿಗಳು, ಜಾತ್ರೆ, ಹಬ್ಬ, ದೇವಾಲಯ, ಕೆರೆ, ಬಾವಿ, ಸಂಪನ್ಮೂಲಗಳು, ಆಚರಣೆ, ಶಾಸನ ಮತ್ತು ಅವಶೇಷಗಳು, ವ್ಯಕ್ತಿ ಪರಿಚಯ, ಮಠ–ಮಾನ್ಯ, ಸ್ವಾತಂತ್ರ್ಯ ಹೋರಾಟ, ಪ್ರಭುತ್ವದ ಬೆಂಬಲಿಗರಾಗಿ ಜನಸಾಮಾನ್ಯರು ಮುಂತಾದ ಅಂಶಗಳನ್ನು ಕುರಿತಿವೆ. ಸ್ಮರಣ ಸಂಚಿಕೆಗಳು, ಪ್ರತ್ಯೇಕ ಕೃತಿಗಳು ಮತ್ತು ಹತ್ತು ಹಲವು ಲೇಖನಗಳು ಇವೆ.

ಈ ಹಿನ್ನೆಲೆಯಲ್ಲಿ ಅ.ಸುಂದರ, ಕೆ.ಬಿ. ಶಿವತಾರಕ್, ಗಿರಿರಾಜ ಹೊಸಮನಿ, ಬಸವಲಿಂಗ ಸೊಪ್ಪಿಮಠ, ರಾಮಣ್ಣ ಹವಳೆ, ಅಮರೇಶ ನುಗಡೋಣಿ, ಹಳೆಮನೆ ರಾಜಶೇಖರ, ಚನ್ನಬಸವ ಹಿರೇಮಠ, ಶಾಶ್ವತಸ್ವಾಮಿ ಮುಕ್ಕಂದಿಮಠ, ಅಮರೇಶ ಯತಗಲ್, ಮಹಾದೇವಪ್ಪ ನಾಗರಾಳ, ಗಿರೇಗೌಡ ಅರಳಹಳ್ಳಿ, ನಲ್ಲಾರೆಡ್ಡಿ, ವಿಜಯಲಕ್ಷ್ಮೀ, ಶಶಿಕಾಂತ ಬಿಲ್ಲವ, ಶಶಿಧರ ಮಲ್ಲಪ್ಪ, ಯರಿಯಪ್ಪ, ಗುಂಡಮ್ಮ, ಶಿಲ್ಪ ಜೆ.ಎಂ., ರಜನಿಕಾಂತ ಮುಂತಾದವರು ಈ ಪ್ರದೇಶವನ್ನು ಕುರಿತು ಸಂಕೀರ್ಣ ಅಧ್ಯಯನ ಮಾಡಿದ್ದಾರೆ.

ಇವರಲ್ಲಿ ಹಳೆಮನೆ ರಾಜಶೇಖರ, ಅಮರೇಶ ನುಗಡೋಣಿ ಅವರ ಅಧ್ಯಯನಗಳು ಪ್ರತಿರೋಧದ ನೆಲೆಯಲ್ಲಿ ನಡೆದಿವೆ. ಇವರು ಸಮಾಜದ ವಾಸ್ತವ ಚಿತ್ರಣ ಗುರುತಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿರುವುದು ಗಮನಾರ್ಹ. ಈ ಪ್ರದೇಶವನ್ನು ಕುರಿತು ವಿವಿಧ ಸಂದರ್ಭಗಳಲ್ಲಿ ಪ್ರಕಟಗೊಂಡ ಸ್ಮರಣ ಸಂಚಿಕೆಗಳು ಸಂಕೀರ್ಣತೆಯಿಂದ ಕೂಡಿವೆ. ಎಂ.ಫಿಲ್. ಮತ್ತು ಪಿಎಚ್.ಡಿ. ಪದವಿಗೆ ಸಿದ್ಧಪಡಿಸಿದ ಪ್ರಬಂಧಗಳು ವಿವಿಧ ಆಯಾಮಗಳಿಂದ ಕೂಡಿವೆ. ಶಾಶ್ವತಸ್ವಾಮಿ ಮುಕ್ಕುಂದಿಮಠ ಮುಂತಾದವರ ಬರಹಗಳನ್ನು ಅವಲೋಕಿಸಬಹುದಾಗಿದೆ. ಈ ಪ್ರದೇಶ ಕುರಿತು ನಡೆದಿರುವ ಅಧ್ಯಯನಗಳು ಸಂಕೀರ್ಣತೆಯಿಂದ ಕೂಡಿ, ಮಾಹಿತಿ ಪ್ರಧಾನವಾಗಿವೆ. ಕೆಲವು ಸಂದರ್ಭಗಳಲ್ಲಿ ವೈಭವೀಕರಣವೂ ಕಂಡುಬರುತ್ತದೆ. ಬಹುತೇಕ ಅಧ್ಯಯನಗಳು ವಾಸ್ತವದ ಕಡೆ ಗಮನ ಹರಿಸದಿರುವುದರಿಂದ ಈ ಪ್ರದೇಶದ ಸಮಗ್ರ ಚರಿತ್ರೆ ಪುನರ್‌ರಚಿಸುವಲ್ಲಿನ ಕೊರತೆಯನ್ನು ಮತ್ತು ಅದರ ಅಗತ್ಯತೆಯನ್ನೂ ಮನಗಾಣಿಸುತ್ತದೆ.

ಪ್ರಕಟಿತ ಲೇಖನಗಳು, ಕೃತಿಗಳು ಮತ್ತು ಪ್ರಬಂಧಗಳಲ್ಲಿ ಒಟ್ಟಾರೆಯಾಗಿ ಈ ಪ್ರದೇಶದ ಎಲ್ಲಾ ವಿಚಾರಗಳನ್ನು ದಾಖಲಿಸುವ ಕಾರ್ಯ ನಡೆದಿಲ್ಲ. ಹಾಗಾಗಿ ಲಭ್ಯವಿರುವ ಆಕರಗಳನ್ನು ಬಳಸಿಕೊಂಡು ಒಪ್ಪಿತ ಚರಿತ್ರೆಗಿಂತ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ನೋಡುವ ಉದ್ದೇಶವನ್ನು ಪ್ರಸ್ತುತ ಅಧ್ಯಯನ ಹೊಂದಿದೆ. ಈ ಪ್ರದೇಶದ ಚರಿತ್ರೆಯನ್ನು ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಅಭ್ಯಸಿಸಲಾಗಿದೆ. ಇದು ಚರಿತ್ರೆ ಅಧ್ಯಯನಕ್ಕೆ ಹೊಸ ಕೊಡುಗೆ ನೀಡಬಲ್ಲುದಾಗಿದೆ. ಸಾಮಾನ್ಯ ಜನರ ಬದುಕು ಹಾಗೂ ಸ್ಥಳೀಯ ಚರಿತ್ರೆಯ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುತ್ತದೆ.

## ೧.೨. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಚರಿತ್ರೆ ಬರವಣಿಗೆಯಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಪ್ರತಿಯೊಂದು ಪ್ರದೇಶ ತನ್ನದೇ ಆದ ಚರಿತ್ರೆಯನ್ನು ಹೊಂದಿದೆ. ಸ್ಥಳೀಯ ಚರಿತ್ರೆಯ ಸೂಕ್ಷ್ಮ ಪರಿಶೀಲನೆ ಮಾಡಿದರೆ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಗೋಚರವಾಗುತ್ತವೆ. ಕರ್ನಾಟಕ ಚರಿತ್ರೆಯನ್ನು ರೂಪಿಸುವಲ್ಲಿ ಹೈದರಾಬಾದ್ ಕರ್ನಾಟಕ ಚರಿತ್ರೆ ಬರವಣಿಗೆ ಸಮರ್ಥವಾಗಿದ್ದರೂ ವಾಸ್ತವವಾಗಿ ಸಫಲವಾಗಿರುವುದು ಕಂಡುಬರುವುದಿಲ್ಲ. ಈ ಪ್ರದೇಶ ಚಾರಿತ್ರಿಕವಾಗಿ ಶ್ರೀಮಂತವಾಗಿದ್ದರೂ ಆರ್ಥಿಕವಾಗಿ ಹಿಂದುಳಿದಿದೆ. ಪ್ರಾಗೈತಿಹಾಸಿಕ ಕಾಲದ ಜನಜೀವನದಿಂದ ಹಿಡಿದು ರಾಜಕೀಯ ಸ್ಥಿತ್ಯಂತರ, ಅಧಿಕಾರ ಸ್ಥಾಪನೆಗಾಗಿ ನಡೆದ ಹೋರಾಟದ ಸ್ವರೂಪವೆ ಎಲ್ಲಕ್ಕಿಂತ ಮುಖ್ಯವಾಗಿದೆ. ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಜನಸಾಮಾನ್ಯರ ದೃಷ್ಟಿಕೋನದಿಂದ ಯುದ್ಧ ಪರಿಣಾಮಗಳನ್ನು ವಿಶ್ಲೇಷಣೆ ಮಾಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನ ಕೈಗೆತ್ತಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವನ್ನು ರಾಯಚೂರು ಜಿಲ್ಲೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಕ್ರಿಪೂ. ೩ನೆಯ ಶತಮಾನದಿಂದ ಕ್ರಿಶ. ೨೦ನೆಯ ಶತಮಾನದವರೆಗೆ ಕಂಡುಬರುವ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ವಿಚಾರಗಳನ್ನು ಇಲ್ಲಿ ಪ್ರಸ್ತುತ ಪಡಿಸಲಾಗಿದೆ. ಅಧ್ಯಯನ ಸಂದರ್ಭದಲ್ಲಿ ಪ್ರಾಥಮಿಕ, ಆನುಷಂಗಿಕ ಮಾಹಿತಿಗಳು, ಲೇಖನಗಳು, ವರದಿಗಳು, ವಿಶ್ವಕೋಶಗಳು, ಗೆಜೆಟಿಯರ್‌ಗಳು, ಪತ್ರಿಕೆಗಳು, ಲಿಖಿತ, ಅಲಿಖಿತ, ಪ್ರಕಟಿತ, ಅಪ್ರಕಟಿತ, ಆಕರಗಳ ಜೊತೆಗೆ ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿಯನ್ನು ಬಳಸಿಕೊಳ್ಳುವ ಮೂಲಕ ಸ್ಥಳೀಯ ಚರಿತ್ರೆಯನ್ನು ಪುನರ್‌ರಚಿಸಲು ಪ್ರಯತ್ನಿಸಿದೆ. ಹೈದರಾಬಾದ್

ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಆಯಾಮಗಳ ಜೊತೆಗೆ ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳನ್ನು ತಲಸ್ಪರ್ಶಿಯಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಯನ ಆರು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳನ್ನು ಪ್ರಭುತ್ವಕೇಂದ್ರಿತ ಅಧ್ಯಯನಗಳು ಮತ್ತು ಸಂಕೀರ್ಣ ಅಧ್ಯಯನಗಳು ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ರಾಜ ಪ್ರಭುತ್ವದ ಮಾಧ್ಯಮಗಳಾದ ಶಾಸನಗಳು, ಸ್ಮಾರಕಗಳು ಹಾಗೂ ಕಾವ್ಯ ಉಲ್ಲೇಖಿತ ಚರಿತ್ರೆ ಬರವಣಿಗೆಯಲ್ಲಿ ರೈತಾಪಿವರ್ಗ, ಕೃಷಿ ಕೂಲಿಕಾರರು, ಕುಶಲಕರ್ಮಿಗಳು, ಮಹಿಳೆಯರು ಮುಂತಾದವರು ನಿರ್ಲಕ್ಷ್ಯಕ್ಕೆ ಒಳಗಾಗಿರುವ ಅಂಶವನ್ನು ಗುರುತಿಸಿದೆ. ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನವನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ರಾಯಚೂರು ಪದದ ನಿಷ್ಪತ್ತಿಯನ್ನು ಐತಿಹ್ಯದ ಮೂಲಕ ವಿವರಿಸಲಾಗಿದೆ. ರಾಯಚೂರು ದೋ-ಅಬ್ ಪದದ ಅರ್ಥ ಮತ್ತು ಸ್ವರೂಪವನ್ನು ವಿವಿಧ ಕಾಲಘಟ್ಟ ಗಳಲ್ಲಿನ ವಿಚಾರಗಳನ್ನು ಗುರುತಿಸಲಾಗಿದೆ. ಮೆಸಪಟೋಮಿಯಾ, ಎಡೆದೊರೆನಾಡು ಎಂಬ ಪದ ನಿಷ್ಪತ್ತಿಗಳ ಆಶಯದ ಹಿನ್ನೆಲೆಯಲ್ಲಿ ದೋ-ಅಬ್ ಪದದ ಅರ್ಥವನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಕರ್ನಾಟಕದಲ್ಲಿ ಕಂಡುಬರುವ ದೋ-ಆಬ್ ಪ್ರದೇಶಗಳನ್ನು ಗುರುತಿಸಲಾಗಿದೆ. ಚರಿತ್ರೆಯನ್ನು ಗುರುತಿಸಲು ಶಿಲಾಯುಗಗಳ ಕಾಲ ಮತ್ತು ನಂತರದ ಕಾಲಘಟ್ಟಗಳಲ್ಲಿ ಕಂಡುಬರುವ ಜನಜೀವನವನ್ನು ಕುರಿತು ವಿವರಿಸಲಾಗಿದೆ. ರಾಜಪ್ರಭುತ್ವ ವ್ಯವಸ್ಥೆಯ ಪೂರ್ವದ ಈ ಸನ್ನಿವೇಶವನ್ನು ಶಿಲಾಯುಗಗಳ ಕಾಲದ ಚಿತ್ರಕಲೆ ಮತ್ತು ಅವಶೇಷಗಳ ನೆಲೆಗಳ ಹಿನ್ನೆಲೆಯಲ್ಲಿ ಬೇಟೆ ಸಂಸ್ಕೃತಿ, ಪಶುಪಾಲನೆ ಮತ್ತು ಕೃಷಿ, ಗ್ರಾಮೀಣ ಮತ್ತು ನಗರ ಸಂಸ್ಕೃತಿ ಹಾಗೂ ಜನರು ವಾಸಿಸುವ ವಾಸದ ನೆಲೆಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಪ್ರಾಗೈತಿಹಾಸಿಕ ಕಾಲದ ಜನಜೀವನ ಹಂತ ಹಂತವಾಗಿ ಬದಲಾವಣೆ ಹೊಂದಿರುವುದನ್ನು ಗುರುತಿಸಲಾಗಿದೆ. ಇದು ನಂತರ ರಾಜ್ಯ ನಿರ್ಮಾಣ ಪ್ರಕ್ರಿಯೆಗೆ ಚಾಲನೆ ನೀಡಿದುದನ್ನು, ಆ ವೇಳೆಗೆ ಅಸ್ತಿತ್ವಕ್ಕೆ ಬಂದ ಅರಸುಮನೆತನಗಳು ಅಧಿಕಾರವನ್ನು ಸ್ಥಾಪಿಸಲು ಪ್ರಯತ್ನಿಸಿದ್ದನ್ನು, ರಾಜಕೀಯ ಸ್ಥಿತ್ಯಂತರಗಳು ನಡೆದುದನ್ನು, ರಾಜಕೀಯ ಸ್ಥಿತ್ಯಂತರದಲ್ಲಿ ಬಂದು ಹೋದ ವಿವಿಧ ಅರಸು ಮನೆತನಗಳನ್ನು ಕುರಿತು ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಈ ಪ್ರದೇಶದ ಒಡೆತನಕ್ಕಾಗಿ ನಡೆದ ಯುದ್ಧಗಳ ಕುರಿತು ಅಭ್ಯಾಸ ನಡೆಸಲು ಮೂರು ಭಾಗಗಳನ್ನು ಮಾಡಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಯುದ್ಧಗಳಿಗೆ ಕಾರಣವಾದ ಅಂಶಗಳನ್ನು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಅಧಿಕಾರ ಸ್ಥಾಪಿಸಲು ನಡೆದ ಹೋರಾಟಗಳ ಸ್ವರೂಪವನ್ನು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಅವಲೋಕಿಸಲು ಪ್ರಯತ್ನಿಸಲಾಗಿದೆ. ಮೂರನೆಯ ಭಾಗದಲ್ಲಿ ಯುದ್ಧಗಳ ಪರಿಣಾಮಗಳನ್ನು ಕುರಿತು ಚರ್ಚಿಸಲಾಗಿದೆ. ಪರಿಣಾಮಗಳನ್ನು ನಾಲ್ಕು ಭಾಗ ಮಾಡಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಆರ್ಥಿಕತೆಯನ್ನು ಕೃಷಿ ವ್ಯವಸ್ಥೆಯ ಮೂಲಕ ಪ್ರಧಾನವಾಗಿ ಅಧ್ಯಯನ ಮಾಡುತ್ತಾ, ಅದರಲ್ಲಿನ ಕೃಷಿ ಭೂಮಿ ವಿಸ್ತರಣೆ, ನೀರಾವರಿ ವ್ಯವಸ್ಥೆ, ದಾನ ಪ್ರಕ್ರಿಯೆ, ಭೂಮಾಲಿಕ ವರ್ಗ ಮತ್ತು ಊಳಿಗಮಾನ್ಯ ವ್ಯವಸ್ಥೆ ಕುರಿತು ಚರ್ಚಿಸಲಾಗಿದೆ. ಕುಶಲಕರ್ಮಿಗಳು, ತೆರಿಗೆಗಳು ಹಾಗೂ ವರ್ತಕರು ಮತ್ತು

ವ್ಯಾಪಾರ ಸಂಬಂಧಗಳನ್ನು ವ್ಯಾಪಾರ ಸಂಬಂಧಗಳ ಉಗಮ ಮತ್ತು ಬೆಳವಣಿಗೆ, ವರ್ತಕರ ಪ್ರಭಾವ, ವ್ಯಾಪಾರ ಕೇಂದ್ರಗಳು, ವ್ಯಾಪಾರ ವಿಸ್ತೀರ್ಣತೆ ಹಾಗೂ ವ್ಯಾಪಾರ ಮಾರ್ಗಗಳು ಎಂಬ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಎರಡನೆಯ ಭಾಗದಲ್ಲಿ ಸಾಮಾಜಿಕತೆಯನ್ನು ಜಾತಿ ಪದ್ಧತಿ, ಶಿಕ್ಷಣ, ಮಹಿಳೆಯರ ಸ್ಥಾನಮಾನ, ಬಹುಪತ್ನಿತ್ವ, ಸತಿ ಪದ್ಧತಿ, ದೇವದಾಸಿ ಪದ್ಧತಿಗಳ ಹಿನ್ನೆಲೆಯಲ್ಲಿ ಅವಲೋಕನ ಮಾಡಿ, ಈ ಪ್ರದೇಶದಲ್ಲಿ ಬೆಳೆದುಬಂದ ವೈಚಾರಿಕ ಸಾಹಿತ್ಯದ ಪ್ರಭಾವ ಮತ್ತು ಪರಿಣಾಮಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಮೂರನೆಯ ಭಾಗ ಧಾರ್ಮಿಕತೆಯನ್ನು ಕುರಿತಿದೆ. ಈ ಪ್ರದೇಶದಲ್ಲಿ ಕಂಡುಬಂದಿರುವ ವೈದಿಕ, ಬೌದ್ಧ, ಜೈನ, ಶೈವ, ವೈಷ್ಣವ, ಕಾಳಾಮುಖ ಮತಗಳು, ಇಸ್ಲಾಂ ಮತ್ತು ಕ್ರಿಶ್ಚಿಯನ್ ಧರ್ಮಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಸ್ಮಾರಕಗಳನ್ನು ಪ್ರಭುತ್ವದ ಸ್ಮಾರಕಗಳು ಮತ್ತು ಪ್ರಜೆಗಳ ಸ್ಮಾರಕಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಈ ಪ್ರದೇಶದಲ್ಲಿ ಆಳಿದ ವಿವಿಧ ಅರಸುಮನೆತನಗಳ ಸಾಮಂತರು ಮತ್ತು ಸಂಸ್ಥಾನಿಕರನ್ನು ಕುರಿತು ಚರ್ಚಿಸಲಾಗಿದೆ. ಇದನ್ನು ಮೂರು ಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಸಾಮಂತರು ಮತ್ತು ಸಾರ್ವಭೌಮರ ನಡುವಿನ ಸಂಬಂಧಗಳನ್ನು ಕುರಿತು ಚರ್ಚಿಸಲಾಗಿದೆ. ಇದೇ ಭಾಗದಲ್ಲಿ ಇಲ್ಲಿನ ಸಾಮಂತರ ಕುರಿತು ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಎರಡನೆಯ ಭಾಗದಲ್ಲಿ ರಾಜಕೀಯ ಅಸ್ತಿತ್ವಕ್ಕಾಗಿ ಪರದಾಡಿದ ಸಂಸ್ಥಾನಗಳನ್ನು ಕುರಿತು ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಇವು ತಮ್ಮ ಅಸ್ತಿತ್ವಕ್ಕಾಗಿ ಬಿಜಾಪುರದ ಆದಿಲ್‌ಶಾಹಿಗಳು, ಮೊಗಲರು ಮತ್ತು ಹೈದರಾಬಾದ್ ನಿಜಾಮರ ಕಾಲದಲ್ಲಿ ಹೋರಾಟ ಮಾಡಿವೆ. ಸಾಮಂತರು ಮತ್ತು ಸಂಸ್ಥಾನಿಕರು ತಮ್ಮ ಆಡಳಿತ ನಿರ್ವಹಣೆಗಾಗಿ ಹಲವಾರು ಆಡಳಿತ ಕೇಂದ್ರಗಳನ್ನು ರಚಿಸಿಕೊಂಡಿದ್ದರು. ಕೊನೆಯದಾಗಿ ನಾಲ್ಕನೆಯ ಭಾಗದಲ್ಲಿ ಈ ಪ್ರದೇಶದಲ್ಲಿ ಬ್ರಿಟಿಶರ ಪ್ರಭಾವ, ಬ್ರಿಟಿಶರು ತಮ್ಮ ರಕ್ಷಣೆಗಾಗಿ ನಿರ್ಮಿಸಿಕೊಂಡ ೧೮೪೨ರಲ್ಲಿ ಕಂಟೋನ್ಮೆಂಟ್ ಸ್ಥಾಪನೆ, ೧೮೫೩ರ ಬೀರಾರ್ ಒಪ್ಪಂದ ಮತ್ತು ೧೮೫೭ರ ಬಂಡಾಯದಲ್ಲಿ ಈ ಪ್ರದೇಶ ವಹಿಸಿದ ಪಾತ್ರವನ್ನು ವಿವರಿಸಲಾಗಿದೆ.

ಐದನೆಯ ಅಧ್ಯಾಯ ಈ ಪ್ರದೇಶದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ಕುರಿತಾಗಿದೆ. ಇದನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಆರಂಭಿಕ ಹಂತದ ಸ್ವಾತಂತ್ರ್ಯ ಹೋರಾಟದ ಹಾದಿಯ ಸ್ವರೂಪವನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ೧೯೪೭ರ ನಂತರದ ವಿಮೋಚನಾ ಚಳವಳಿಯ ಸ್ವರೂಪವನ್ನು ಲೆವಿ ಸಂಗ್ರಹ ವಿರೋಧಿ ಚಳವಳಿ, ಒಕ್ಕೂಟ ಸೇರಲು ಚಳವಳಿ, ಗಡಿ ಶಿಬಿರಗಳ ಸ್ಥಾಪನೆ ಮತ್ತು ಭೂಗತ ಚಳವಳಿಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಈ ಪ್ರದೇಶದ ವಿವಿಧ ಬಗೆಯ ಚಳವಳಿಗಳು ವಿಫಲವಾದ ಬಗೆ, ನಿಜಾಮ ಮತ್ತು ರಜಾಕಾರರ ವಿರುದ್ಧ ಸಫಲತೆ ಕಾಣದ ಶಸ್ತ್ರಾಸ್ತ್ರ ಹೋರಾಟ, ಕೊನೆಯ ಹಂತದಲ್ಲಿ ಅಸ್ತಿತ್ವಕ್ಕೆ ಬಂದ ಭಾರತ ಯೂನಿಯನ್ ಸರ್ಕಾರ ಮತ್ತದರ ಮಧ್ಯಪ್ರವೇಶದಿಂದ ಪೊಲೀಸ್ ಕಾರ್ಯಾಚರಣೆ ಹೆಸರಿನಲ್ಲಿ ನಡೆದ ಸೈನಿಕ ಕಾರ್ಯಾಚರಣೆ, ನಿಜಾಮ ಸಂಸ್ಥಾನವನ್ನು ವಶಪಡಿಸಿಕೊಂಡ ಬಗೆಯನ್ನು ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದಿಂದ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ.

□

ಅಧ್ಯಾಯ ಎರಡು

# ರಾಯಚೂರು ದೋ-ಅಬ್ ಪ್ರದೇಶದ ಚಾರಿತ್ರಿಕ ಹಿನ್ನೆಲೆ

## ೨.೧.

ದಖ್ಖನ್ ಪ್ರಸ್ಥಭೂಮಿಯ ಭೂ ಭಾಗವಾಗಿರುವ ರಾಯಚೂರು ದೋ-ಅಬ್ ಪ್ರದೇಶ ಭಾರತದ ಪ್ರಮುಖ ದೋ-ಅಬ್ ಪ್ರದೇಶಗಳಲ್ಲಿ ಒಂದಾಗಿದೆ. ಅಲ್ಲಿನ ಭೌಗೋಳಿಕ ಸ್ವರೂಪ ಮತ್ತು ನದಿತೀರ ಪ್ರದೇಶಗಳು ಮಾನವನ ಏಳಿಗೆಗೆ, ಸಂಸ್ಕೃತಿಯ ಬೆಳವಣಿಗೆಗೆ ಮತ್ತು ಜನಜೀವನಕ್ಕನುಕೂಲಕರವಾದ ವಾತಾವರಣ ಕಲ್ಪಿಸಿವೆ ಎಂಬುದು ಚರಿತ್ರೆ ಬರವಣಿಗೆಗಳಿಂದ ತಿಳಿದುಬರುತ್ತದೆ. ಭೌಗೋಳಿಕ ಸನ್ನಿವೇಶಗಳು ಯಾವುದೇ ಪ್ರದೇಶದ ಸಮಗ್ರ ಬೆಳವಣಿಗೆಯಲ್ಲಿ ಮಹತ್ವದ ಸ್ಥಾನ ಪಡೆದಿದ್ದವು. ತನ್ನ ಭೂ, ಜಲ ಮತ್ತು ಖನಿಜ ಸಂಪತ್ತುಗಳಿಂದಾಗಿ ಚರಿತ್ರೆಯ ಎಲ್ಲ ಕಾಲಗಳಲ್ಲಿಯೂ ರಾಜ್ಯಗಳ ಸ್ಥಾಪನೆ, ಪರರಾಜರು, ವ್ಯಾಪಾರಿಗಳನ್ನು ಮುಂತಾದವರನ್ನು ತನ್ನ ಕಡೆಗೆ ಸೆಳೆದುಕೊಂಡು ತನ್ನದೇ ಛಾಪು ಮೂಡಿಸಿದ ದೋ-ಅಬ್ ಪ್ರದೇಶಗಳು ಚಾರಿತ್ರಿಕವಾಗಿ ಪ್ರಮುಖ ಪಾತ್ರ ವಹಿಸಿವೆ. ಭಾರತದಾದ್ಯಂತ ಅನೇಕ ದೋ-ಅಬ್ ಪ್ರದೇಶಗಳು ಕಂಡುಬರುತ್ತವೆ. ಅಂತಹ ದೋ-ಅಬ್ ಪ್ರದೇಶಗಳಲ್ಲಿ ಗಂಗಾ–ಯಮುನಾ, ಪಂಜಾಬ್ ಮತ್ತು ರಾಯಚೂರು ದೋ-ಅಬ್ ಪ್ರದೇಶಗಳು ಪ್ರಮುಖವಾಗಿವೆ.

ನಾಗರಿಕತೆ ರೂಪಿಸಿದ ದೋ-ಅಬ್ ಪ್ರದೇಶಗಳಲ್ಲಿ ಯುಫ್ರೆಟಿಸ್ ಮತ್ತು ಟೈಗ್ರಿಸ್ ನದಿಗಳ ಮಧ್ಯದ ಮೆಸಪಟೊಮಿಯ ಜಗತ್ತಿನ ಮೊಟ್ಟ ಮೊದಲ ನಾಗರಿಕತೆಯಾಗಿ ಮತ್ತು ಭಾರತದಲ್ಲಿನ ಸಿಂಧೂ ನಾಗರಿಕತೆ ಮೊದಲ ಬಾರಿಗೆ ನಗರ ಜೀವನ ಕಟ್ಟಿಕೊಟ್ಟ ಕುರಿತಾಗಿ ತಿಳಿಸಿಕೊಡುತ್ತವೆ. ಭಾರತದ ಗಂಗಾ–ಯಮುನಾ ನದಿಗಳ ದೋ-ಅಬ್ ಪ್ರದೇಶ ಮೌರ್ಯ, ಗುಪ್ತ ಮತ್ತು ವರ್ಧನಗಳಂತಹ ದೊಡ್ಡ ದೊಡ್ಡ ರಾಜ್ಯಗಳ ಸ್ಥಾಪನೆಗೆ ಕಾರಣವಾಯಿತು. ತನ್ನ ಭೌಗೋಳಿಕ ಸಂಪತ್ತಿನ ಮೂಲಕ ಆಯಕಟ್ಟಿನ ಸ್ಥಳವಾಗಿ ಪರಿಣಮಿಸಿ ಸದಾಕಾಲ ಅಧಿಕಾರಕ್ಕಾಗಿ ನಡೆಯುವ ಹೋರಾಟಗಳ ಕೇಂದ್ರ ಬಿಂದುವಾಗಿ ಗುರುತಿಸಿಕೊಂಡಿತು. ಅದರಂತೆ ಅನೇಕ ರಾಜ ಮನೆತನಗಳ ಗಮನ ಸೆಳೆದು ಕರ್ನಾಟಕದಲ್ಲಿ ರಾಜಕೀಯವಾಗಿ ಪ್ರಮುಖ ಪಾತ್ರವಹಿಸಿದ್ದು ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದ ಬಯಲು ಪ್ರದೇಶವಾಗಿದೆ. ಈ ರಾಯಚೂರು ದೋ-ಅಬ್ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ತನ್ನದೆಯಾದ ಆಸ್ಮಿತೆಯನ್ನು ಪಡೆದಿದೆ. ಪೌರಾಣಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕವಾಗಿ ಪ್ರಭಾವಿಯಾಗಿ ಗುರುತಿಸಿಕೊಂಡಿದೆ. ಈ ಪ್ರದೇಶ ರಾಜಕೀಯ ಪ್ರತಿಷ್ಠೆಯ ಕಣವಾಗಿ ಚರಿತ್ರೆಯುದ್ದಕ್ಕೂ ಪರಿಣಮಿಸಿತ್ತು. ಮೌರ್ಯರಾದಿಯಾಗಿ ಹೈದರಾಬಾದ್ ನಿಜಾಮರವರೆಗೆ ಸಾಮಂತ, ಸಂಸ್ಥಾನಿಕರು ಮತ್ತು ಸಣ್ಣ ಪುಟ್ಟ ಆಡಳಿತಗಾರರನ್ನೊಳಗೊಂಡ ಎಲ್ಲ ಪ್ರತಿಷ್ಠಿತ ಅರಸು ಮನೆತನಗಳ ಆಕರ್ಷಣೆ ಕೇಂದ್ರವಾಗಿತ್ತು. ಈ ಪ್ರದೇಶದ ದಕ್ಷಿಣ ಮೇರೆಯಾದ ತುಂಗಭದ್ರ ನದಿ ಕರ್ನಾಟಕವನ್ನು ಉತ್ತರ ಮತ್ತು ದಕ್ಷಿಣ ಕರ್ನಾಟಕಗಳನ್ನಾಗಿ ವಿಭಜನೆ ಮಾಡುವಲ್ಲಿಯೂ ಪ್ರಮುಖ ಪಾತ್ರವಹಿಸಿದೆ. ದಕ್ಷಿಣ ಮತ್ತು ಉತ್ತರ ಕರ್ನಾಟಕಗಳ ಅರಸು ಮನೆತನಗಳು ಈ ನದಿಯ ಗಡಿರೇಖೆಯನ್ನು ಮೀರುವ ಪ್ರಯತ್ನ ಮಾಡಿದವು.

ಅವು ರಾಜ್ಯ ವಿಸ್ತರಣೆ ಮತ್ತು ಇನ್ನೊಂದು ಪ್ರದೇಶದ ಮೇಲೆ ತಮ್ಮ ಅಧಿಕಾರ ಸ್ಥಾಪನೆ ಮಾಡುವ ಪ್ರಯತ್ನದಲ್ಲಿ ಮೀರುವ ಹೋರಾಟಗಳನ್ನು ನಡೆಸಿದವು. ವಿವಿಧ ಅರಸು ಮನೆತನಗಳ ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವಾದ ಪ್ರದೇಶವಾಗಿದ್ದು ಇಲ್ಲಿನ ಪ್ರಾದೇಶಿಕ ಚರಿತ್ರೆಯನ್ನು ತಿಳಿದುಕೊಳ್ಳುವುದು ಬಹುಮುಖ್ಯ ಸಂಗತಿಯಾಗಿದೆ.

ರಾಯಚೂರು ದೋ-ಅಬ್ ಪ್ರದೇಶದ ಚಾರಿತ್ರಿಕತೆಯನ್ನು ಅರಿಯಲು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಮೊದಲನೆಯ ಭಾಗದಲ್ಲಿ ರಾಯಚೂರು ಪದದ ನಿಷ್ಪತ್ತಿ, ಎರಡನೆಯ ಭಾಗದಲ್ಲಿ ದೋ-ಅಬ್ ಪದದ ಅರ್ಥ ಮತ್ತು ಸ್ವರೂಪ, ಇದರಲ್ಲಿ ಮೆಸಪಟೊಮಿಯ, ಎಡೆದೊರೆನಾಡು ಮತ್ತು ದೋ–ಅಬ್ ಪದದ ಅರ್ಥವನ್ನು ಕುರಿತು ವಿವರಿಸಲಾಗಿದೆ. ಮೂರನೆಯ ಭಾಗದಲ್ಲಿ ರಾಜಪ್ರಭುತ್ವ ವ್ಯವಸ್ಥೆಯ ಪೂರ್ವದ ಸನ್ನಿವೇಶವನ್ನು ವಿಶ್ಲೇಷಿಸಲಾಗಿದೆ. ಅದರ ಮುಂದುವರೆದ ಭಾಗವಾಗಿ ಜನ ಜೀವನದ ವಿವಿಧ ಹಂತಗಳಾದ ಬೇಟೆ, ಪಶುಪಾಲನೆ ಮತ್ತು ಕೃಷಿ, ಗ್ರಾಮೀಣ ಮತ್ತು ನಗರ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಅಭ್ಯಸಿಸಲಾಗಿದೆ. ಅವರು ವಾಸಿಸುವ ನೆಲೆಗಳನ್ನು ಪರಿಶೀಲಿಸುವ ಪ್ರಯತ್ನವೂ ಮಾಡಲಾಗಿದೆ. ನಾಲ್ಕನೆಯ ಭಾಗದಲ್ಲಿ ರಾಜಕೀಯ ಸ್ಥಿತ್ಯಂತರಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

## ೨.೨. ರಾಯಚೂರು ಪದ ನಿಷ್ಪತ್ತಿ

ಪ್ರದೇಶವೊಂದರ ಚರಿತ್ರೆಯಲ್ಲಿ ಆ ಪ್ರದೇಶದ ಹೆಸರಿನ ಹಿನ್ನೆಲೆ, ಐತಿಹ್ಯಗಳು, ಸ್ಥಳೀಯವಾಗಿ ಕರೆಯುವ ಬಗೆಯನ್ನು ಗಮನಿಸಬಹುದಾಗಿದೆ. ರಾಯಚೂರು ಪ್ರದೇಶದಲ್ಲಿ ಹೆಸರು, ಐತಿಹ್ಯ ಮತ್ತು ಶಾಸನಗಳು ಪ್ರಮುಖ ಆಕರಗಳಾಗಿ ಕಂಡುಬರುತ್ತವೆ. ಐತಿಹ್ಯದ ಪ್ರಕಾರ ಮೊಲವೊಂದು ನಾಯಿಯನ್ನು ಅಟ್ಟಿಸಿಕೊಂಡು ಹೋಗಿ ಅದನ್ನು ಹೊಡೆದು ಚೂರು ಮಾಡಿತು. ಆದ್ದರಿಂದ "ನಾಯಿಚೂರು" ಎಂದು ಈ ಸ್ಥಳಕ್ಕೆ ಕರೆಯುವುದು ವಾಡಿಕೆಯಾಯಿತೆಂದು ತಿಳಿದುಬರುತ್ತದೆ(ಕಾಮತ್ ೨೦೦೬: ೬೮). ಕಾಲಾನಂತರದಲ್ಲಿ ರಾಯಚೂರು ಆಗಿರಬೇಕು. ಈ ಪ್ರದೇಶ ಕಲ್ಲುಗುಡ್ಡಗಳಿಂದ ಕೂಡಿದೆ. ಸಣ್ಣ ಪ್ರಮಾಣದ ಕಲ್ಲುಗಳು ಹೇರಳವಾಗಿವೆ. ತೆಲುಗಿನಲ್ಲಿ ರಾಯಿ ಎಂದರೆ ಕಲ್ಲು, ಚೂರು ಎಂದರೆ ಊರು ಎಂದರ್ಥವಾಗುತ್ತದೆ. ತೆಲುಗಿನ ಪ್ರಭಾವದಿಂದ ಈ ಪ್ರದೇಶಕ್ಕೆ ರಾಯಚೂರು ಎಂಬ ಹೆಸರು ಬಂದಿರಬೇಕೆಂದು ಸೂರ್ಯನಾಥ ಕಾಮತ್ ಅವರು ಪದ ನಿಷ್ಪತ್ತಿ ತಿಳಿಯಲು ಯತ್ನಿಸಿದ್ದಾರೆ.

ರಾಯಚೂರು ಪದದ ಹಿನ್ನೆಲೆಯಲ್ಲಿ ದೊರಕುವ ಸುಳಿವಿನ ಮೂಲಕ ಚರ್ಚೆಯನ್ನು ಬೆಳೆಸಬಹುದಾಗಿದೆ. ಈ ಪ್ರದೇಶದಲ್ಲಿ ದೊರೆತ ಕಲ್ಲಿನ ಆಯುಧಗಳು ತುಂಬಾ ಚಿಕ್ಕವು. ಸಣ್ಣ ಕಲ್ಲಿನ ಹಾಗೆ ನೀಳವಾದ, ಹರಿತವಾದ ಬದಿಯುಳ್ಳ ಕಲ್ಲಿನ ಚಕ್ಕೆಗಳು ಇಂದಿನ ಕಬ್ಬಿಣದ ಚೂರಿಯಂತೆ ಇದ್ದಿರಬೇಕು. ಒಂದು ಬದಿ ಮೊಂಡು ಮಾಡಿದ ಉದ್ದನೆಯ ಚಕ್ಕೆಗಳೂ ಇದ್ದಿರಬೇಕು. ಕಲ್ಲಿನಿಂದ ಸಿದ್ಧಪಡಿಸಿದ ದೊಡ್ಡ ಪ್ರಮಾಣದ ಚೂರಿಯಾಕಾರದ ಕಲ್ಲುಗಳು ಕಂಡುಬಂದ ಹಿನ್ನೆಲೆಯಲ್ಲಿ ರಾಚೂರು, ರಾಯಚೂರು ಎಂದು ಹೆಸರು ಬಂದಿರಬೇಕೆಂದು ಊಹಿಸಬಹುದಾಗಿದೆ. ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಸಂಗಮ ಸ್ಥಳದಲ್ಲಿ ಆದಿಮಾನವ ಬಳಸಿದ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚಕ್ಕೆಗಳು ಕಂಡುಬರುತ್ತವೆ.[೧] ಅವು ಕಾವೇರಿ ನದಿ ಬಯಲು ಪ್ರದೇಶವನ್ನು ಬಿಜ್ಜರೆ ರಾಯಚೂರು ದೋ-ಅಬ್ ಪ್ರದೇಶದ ಸಂಗಮದ ಬಯಲು ಪ್ರದೇಶದಲ್ಲಿ ವಿಪುಲವಾಗಿವೆ. ಮಹಾರಾಷ್ಟ್ರದ ವ್ಯಾಪಾರ ಮಾರ್ಗವೊಂದು ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನಿಂದ ಹಾದು ವಿಜಯನಗರ, ಹರಿಹರ ಮತ್ತು ಮೈಸೂರು

ಮೂಲಕ ಕಾವೇರಿ ನದಿ ಬಯಲಿಗೆ ಸಂಪರ್ಕವನ್ನು ಪಡೆದಿರುವುದು ಗಮನಾರ್ಹ ಸಂಗತಿ.[೨] ಈ ವ್ಯಾಪಾರಿ ಮಾರ್ಗ ಮಧ್ಯದಲ್ಲಿ ರಾಯಚೂರು ಇದೆ. ಅವರು ತಮ್ಮ ರಕ್ಷಣೆಗಾಗಿ ಇಲ್ಲಿ ಸಿಗುವ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚಕ್ಕೆಗಳನ್ನು ಬಳಸುತ್ತಿದ್ದಿರಬೇಕು. ಚಕ್ಕೆ ಕಲ್ಲಿನ ರಾಶಿ ಇಲ್ಲಿರಬೇಕು. ವ್ಯಾಪಾರಿಗಳು ತೆಲುಗಿನವರೇ ಅಧಿಕ ಸಂಖ್ಯೆಯವರಾಗಿರಬೇಕು. ಹಾಗಾಗಿ ಅವರು ಕಲ್ಲಿನ ಚಕ್ಕೆಗಳಿರುವ ಈ ಸ್ಥಳವನ್ನು "ರಾಚೂರು" ಎಂದು ಕರೆದಿರಬೇಕು. 'ರಾ' ಎಂದರೆ ರಾಯಿ, 'ಚೂರು' ಎಂದರೆ ತುಂಡು, ಹೋಳು ಎಂಬ ಅರ್ಥವಿದೆ.[೩] ಈ ಅರ್ಥವೂ ಕೊಡಲಿ, ಭರ್ಚಿ ಮುಂತಾದ ಆಕಾರದ ಕಲ್ಲಿನ ಚಕ್ಕೆಗಳನ್ನು ಧ್ವನಿಸುತ್ತದೆ. ತೆಲುಗಿನ ಪ್ರಭಾವಕ್ಕೆ ಒಳಗಾದ 'ರಾಚೂರು' ಶಬ್ದ ಕಾಕತೀಯರ ಕ್ರಿ.ಶ. ೧೨೯೪ರ ರಾಯಚೂರು ಕೋಟೆಯೊಳಗಿನ ಶಾಸನದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದಾಗಿದೆ. ಕಾಕತೀಯರು ತೆಲುಗು ಮೂಲದವರಾದ್ದರಿಂದ ರಾಯಚೂರನ್ನು 'ರಾಚೂರಿ' ಪಟ್ಟಣ ಎಂದೇ ಕರೆದಿರುವರು.[೪] 'ರಾಚೂರು' ಪದ ಮೂಲ ತೆಲುಗು ಪ್ರಭಾವದಿಂದ ಒಡಮೂಡಿದ್ದಿರ ಬಹುದಾದರೂ ಇಲ್ಲಿನ ಸ್ಥಳೀಯರ ಮೂಲ ಭಾಷೆ ಕನ್ನಡವೇ ಆಗಿತ್ತು. ೧೬ನೆಯ ಶತಮಾನದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ 'ರಾಚೂರು' ಎಂದೇ ಕರೆಯಲಾಗಿದೆ.[೫] ಬಹಮನಿಯವರ ಕಾಲದಲ್ಲಿ 'ರೈಚೂರು' ಎಂದಾಗಿದೆ. ಉರ್ದು ಮತ್ತು ಪರ್ಶಿಯನ್ ಭಾಷೆಯ ಪ್ರಭಾವದಿಂದ 'ರಾ' ರೈ ಆಗಿ ಉಚ್ಚಾರವಾಗಿದೆ. ೧೭ನೆಯ ಶತಮಾನದಲ್ಲಿ ರಯಿಚುರು, ರಾಯಿಚೂರು ಎಂದು ಕರೆಯಲಾಯಿತು.[೬] ಮುಂದಿನ ದಿನಗಳಲ್ಲಿ ರಾಯಚೂರು ಎಂದು ಬರವಣಿಗೆ ರೂಪ ಪಡೆಯಿತು. ಆದರೂ ಈ ಪ್ರದೇಶದಲ್ಲಿ ನಿಜಾಮ ಆಡಳಿತ ಬೀರಿದ ಉರ್ದು ಪ್ರಭಾವದಿಂದ ಉಚ್ಚರಣೆಯಲ್ಲಿ ರೈಚೂರು (ಇಂಗ್ಲಿಶ್ ಬರಹ ರೂಪ 'Raichur') ಎಂದೂ ಬರವಣಿಗೆಯಲ್ಲಿ ರಾಯಚೂರು ಎಂದು ಉಳಿದು ಬಂದಿದೆ.

## ೨.೩. ದೋ-ಅಬ್ ಪದದ ಅರ್ಥ ಮತ್ತು ಸ್ವರೂಪ

ಪ್ರಸ್ತುತ ರಾಯಚೂರು ದೋ-ಅಬ್ ಪ್ರದೇಶವನ್ನು ಅಧ್ಯಯನಕ್ಕೆ ಒಳಪಡಿಸುವ ಮೊದಲು ದೋ-ಅಬ್ ಪದದ ಅರ್ಥ ಮತ್ತು ಸ್ವರೂಪವನ್ನು ತಿಳಿದುಕೊಳ್ಳುವುದು ಅವಶ್ಯವೆನಿಸುತ್ತದೆ. ಇದಕ್ಕೂ ಪೂರ್ವದಲ್ಲಿ ಮೆಸಪಟೋಮಿಯ ಮತ್ತು ಎಡೆದೊರೆನಾಡು ಎಂಬ ಪದಗಳನ್ನು ಕುರಿತು ಚರ್ಚಿಸಲಾಗಿದೆ. ದೋ-ಅಬ್ ಎಂದು ಕರೆಯುವುದಕ್ಕಿಂತ ಮುಂಚೆ ಈ ಪ್ರದೇಶವನ್ನು 'ಎಡೆದೊರೆ ನಾಡು' ಎಂದು ಕರೆಯಲಾಗುತ್ತಿತ್ತು. ಅದಕ್ಕೂ ಮುಂಚೆ ಎರಡು ನದಿಗಳ ನಡುವಿನ ಪ್ರದೇಶವನ್ನು ಮೆಸಪಟೋಮಿಯ ಎಂಬ ಹೆಸರಿನಿಂದ ಕರೆದಿರುವ ಬಗ್ಗೆ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಮೆಸಪಟೋಮಿಯ ಮತ್ತು ಎಡದೊರೆ ನಾಡು ಹಾಗೂ ದೋ-ಅಬ್ ಪದಗಳ ಅರ್ಥವನ್ನೂ ಸ್ವರೂಪವನ್ನೂ ಚರ್ಚಿಸಲಾಗಿದೆ.

ಚರಿತ್ರೆಯ ಪುಟಗಳಲ್ಲಿ ದಾಖಲಾಗಿರುವ ಪ್ರಾಚೀನ ನಾಗರಿಕತೆಗಳು, ಪ್ರಮುಖ ಯುದ್ಧಗಳು, ದೊಡ್ಡ ದೊಡ್ಡ ರಾಜ್ಯಗಳು, ಮಹಾನಗರಗಳು, ಸಣ್ಣ ಸಣ್ಣ ರಾಜ್ಯಗಳು, ಸಂಸ್ಥಾನಗಳು, ಕೆಲವು ಧಾರ್ಮಿಕ ಕ್ಷೇತ್ರಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಗೆ ಕಾರಣವಾಗಿರುವ ಬೆಟ್ಟಗುಡ್ಡಗಳು, ಗವಿಗಳು ಮುಂತಾದವು ಆರ್ಥಿಕ ಅಭಿವೃದ್ಧಿ ಸಾಧಿಸಲು ಮತ್ತು ಜೀವನೋಪಾಯ ಕಂಡುಕೊಳ್ಳಲು ನದಿ ಬಯಲಿನ ಪ್ರದೇಶಗಳಲ್ಲಿ ನೆಲೆಯೂರಿರುವುದನ್ನು ಗಮನಿಸಬಹುದು. ನಾಗರಿಕತೆಯನ್ನು ಉಚ್ಚ ಸ್ಥಿತಿಗೆ ಕೊಂಡೊಯ್ದಿರುವ ನದಿ ಬಯಲು ಪ್ರದೇಶಗಳಲ್ಲಿ ಮೆಸಪಟೋಮಿಯ ನಾಗರಿಕತೆ, ಈಜಿಪ್ಟ್ ನಾಗರಿಕತೆ, ಚೀನಾ ನಾಗರಿಕತೆ ಮತ್ತು ಸಿಂಧೂ ನಾಗರಿಕತೆಗಳು ಪ್ರಮುಖವಾಗಿವೆ. ಕೆಲವು ನಾಗರಿಕತೆಗಳು

ಒಂದೇ ನದಿ ಬಯಲು ಪ್ರದೇಶದಲ್ಲಿ ಕಂಡುಬಂದರೆ ಇನ್ನು ಕೆಲವು ಎರಡು ನದಿಗಳ ಬಯಲು ಪ್ರದೇಶದಲ್ಲಿ ಕಂಡುಬರುತ್ತವೆ. ಈಜಿಪ್ಟ್, ಗ್ರೀಕ್ ಮತ್ತು ಸಿಂಧೂ ಬಯಲಿನ ನಾಗರಿಕತೆಗಳು ಕ್ರಮವಾಗಿ ನೈಲ್‌ನದಿ, ಮೆಡಿಟರೇನಿಯನ್ ಮತ್ತು ಸಿಂಧೂ ನದಿ ಬಯಲಿನ ನಾಗರಿಕತೆಗಳಾಗಿವೆ. ಎರಡು ನದಿಗಳ ಬಯಲಿನ ನಾಗರಿಕತೆಯಾಗಿ ಮೆಸಪೊಟೋಮಿಯ ನಾಗರಿಕತೆ ಯುಫ್ರೆಟಿಸ್ ಮತ್ತು ಟೈಗ್ರೀಸ್ ನದಿಗಳ ನಡುವಿನ ಪ್ರದೇಶವಾಗಿತ್ತು. ಚೀನಾ ನಾಗರಿಕತೆ ಹ್ಯಾಂಗ್ ಹೋ ಮತ್ತು ಯಾಂಗ್-ಟ್ಸಿ- ಕಿಯಾಂಗ್ ನದಿಗಳ ನಡುವೆ ವ್ಯಾಪಿಸಿಕೊಂಡಿತ್ತು. ರೋಮ್ ನಾಗರಿಕತೆ ಪೊ ಮತ್ತು ಟೈಬರ್ ನದಿಗಳ ಮಧ್ಯದ ಬಯಲು ಪ್ರದೇಶದಲ್ಲಿ ಕಂಡುಬರುತ್ತದೆ. ಜಗತ್ತಿನ ಪ್ರಮುಖ ನಾಗರಿಕತೆಗಳು ಏಳಿಗೆಯ ತುತ್ತತುದಿಯನ್ನು ತಲುಪಿರುವುದಕ್ಕೆ ನದಿಗಳೇ ಪ್ರಮುಖ ಕಾರಣವಾಗಿವೆ.

ಎರಡು ನದಿಗಳ ನಡುವಿನ ಬಯಲು ಪ್ರದೇಶದ ಚರಿತ್ರೆ ಅಧ್ಯಯನದ ದೃಷ್ಟಿಯಿಂದ ಅವಶ್ಯವಿದೆ. ಎರಡು ನದಿಗಳ ನಡುವಿನ ಬಯಲು ಪ್ರದೇಶವನ್ನು ದೋ-ಅಬ್ ಪ್ರದೇಶವೆಂದು ಕರೆಯುವ ಪೂರ್ವದಲ್ಲಿ ಆಯಾ ಕಾಲಘಟ್ಟಕ್ಕೆ ಅನುಗುಣವಾಗಿ ಮೆಸಪಟೋಮಿಯ ಎಂದೂ ಭಾರತದಲ್ಲಿ ಎಡೆ(ತೊರೆ) ದೊರೆನಾಡು ಎಂದೂ ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಮೆಸಪೊಟೋಮಿಯ ಮತ್ತು ಎಡೆದೊರೆನಾಡು ಮತ್ತು ದೋ-ಅಬ್ ಪದಗಳ ನಿಷ್ಪತ್ತಿಯನ್ನು ಕುರಿತು ಚರ್ಚಿಸಲಾಗಿದೆ.

**೨.೩.೧. ಮೆಸಪಟೋಮಿಯ**

ಕಪ್ಪು ಸಮುದ್ರ ಮತ್ತು ಭೂ ಮಧ್ಯ ಸಮುದ್ರದ ಪಕ್ಕಕ್ಕೆ ಇರುವಂಥ ಏಷ್ಯಾ ಖಂಡದ ಪಶ್ಚಿಮ ಭಾಗವನ್ನು ಮಧ್ಯ ಪ್ರಾಚ್ಯ ಅಥವಾ ಪಶ್ಚಿಮ ಏಷ್ಯಾ ಎನ್ನುತ್ತಾರೆ. ಇಲ್ಲಿರುವ ಅನೇಕ ಮರುಭೂಮಿಗಳ ನಡುವೆ ನದಿ ಕಣಿವೆಯ ಕೆಲವು ಬಯಲುಗಳನ್ನು ನೋಡಬಹುದು. ಅಂಥ ನದಿಕಣಿವೆ ಬಯಲಿನ ಪ್ರದೇಶಗಳಲ್ಲಿ ಅತಿ ದೊಡ್ಡದಾದ ಫಲವತ್ತಾದ ಬಯಲು ಯುಫ್ರೆಟಿಸ್ ಮತ್ತು ಟೈಗ್ರೀಸ್ ನದಿಗಳ ನಡುವೆ ರೂಪಿತವಾಗಿದೆ. ಈ ನದಿಗಳು ತಂದೊಡ್ಡುವ ಫಲವತ್ತಾದ ಮೆಕ್ಕಲು ಮಣ್ಣು ಕೃಷಿ ಯೋಗ್ಯವನ್ನಾಗಿಸಿದೆ. ಹಿತಕರವಾದ ಹವಾಗುಣ ಪಶುಪಾಲನೆಗೆ ಅನುಕೂಲವನ್ನುಂಟು ಮಾಡಿದೆ. ಈ ಪ್ರದೇಶದಲ್ಲಿ ಮಾನವ ಕ್ರಿಪೂ. ೫೦೦೦ ವೇಳೆಗೆ ನೆಲೆನಿಂತು ನಾಗರಿಕತೆಯನ್ನು ಆರಂಭಿಸಿದ. ಇಲ್ಲಿ ಹುಟ್ಟಿ ಬೆಳೆದ ನಾಗರಿಕತೆಯನ್ನು ಮೆಸಪಟೋಮಿಯ ನಾಗರಿಕತೆ ಎನ್ನಲಾಗಿದೆ. ಈ ಕುರಿತು ಅಮೆರಿಕಾದ ರಾಲಿನ್‌ಸನ್, ವೂಲ್ಸಿ ಮೊದಲಾದ ವಿದ್ವಾಂಸರು ೧೯ನೆಯ ಶತಮಾನದಲ್ಲಿ ಆರಂಭಿಕ ಸಂಶೋಧನೆಯನ್ನು ಕೈಗೊಂಡ ಬಗ್ಗೆ ತಿಳಿದು ಬರುತ್ತದೆ. ಈಜಿಪ್ಟ್‌ನಂತೆ ನೈಸರ್ಗಿಕ ರಕ್ಷಣೆಯೂ ಈ ಎರಡು ನದಿ ಬಯಲಿನ ಪ್ರದೇಶಕ್ಕೆ ಇರಲಿಲ್ಲ. ಫಲವತ್ತಾದ ಬಯಲನ್ನು ಕಬಳಿಸಲು ಹೊರಗಿನಿಂದ ಆಕ್ರಮಣಗಳು ಆರಂಭಗೊಂಡವು. ಇಲ್ಲಿ ಅನೇಕ ಜನಾಂಗಗಳು ಇದ್ದುದರಿಂದ ಒಗ್ಗಟ್ಟಾಗಿ ಪ್ರತಿಭಟಿಸಲು ಸಾಧ್ಯವಾಗಿರಲಿಲ್ಲ. ಈ ಮೆಸಪಟೋಮಿಯ ಭೂಭಾಗ ಉತ್ತರ, ಪೂರ್ವ ಹಾಗೂ ಪಶ್ಚಿಮ ದಿಕ್ಕುಗಳಿಂದ ಪರಕೀಯರ ಆಕ್ರಮಣಕ್ಕೆ ಒಳಗಾಯಿತು(ಚಂದ್ರಶೇಖರ್ ೧೯೬೭: ೧೯). ಆಕ್ರಮಣಗಳಿಗೆ ಕಾರಣವಾದ ಮೆಸಪಟೋಮಿಯ ಪದ ನಿಷ್ಪತ್ತಿಯನ್ನು ಕುರಿತು ತಿಳಿದುಕೊಳ್ಳುವುದು ಅವಶ್ಯವಿದೆ.

ಎರಡು ನದಿಗಳ ನಡುವಿನ ಪ್ರದೇಶವನ್ನು ಗ್ರೀಕ್ ಭಾಷೆಯಲ್ಲಿ 'ಮೆಸಪಟೋಮಿಯ' ಎಂದು ಕರೆಯಲಾಗುತ್ತದೆ. ಈ ಹೆಸರು ಯುಫ್ರೆಟಿಸ್ ಮತ್ತು ಟೈಗ್ರಿಸ್ ನದಿಗಳ ನಡುವಿನ ಪ್ರದೇಶದಲ್ಲೂ ಕಂಡುಬರುತ್ತದೆ. ಈ ನದಿಗಳ ನಡುವೆ ಬೆಳೆದ ಮೆಸಪಟೋಮಿಯ ನಾಗರಿಕತೆ ಪ್ರಪಂಚದಲ್ಲಿಯೆ ಮೊದಲ ನಗರ ಜೀವನವನ್ನು ಕಂಡ ನಾಗರಿಕತೆಯಾಗಿದೆ. ಜಲಾಶಯದಂತಿರುವ ಈ ಪ್ರದೇಶಕ್ಕೆ

ಎಲ್ಲಾ ಕಡೆಯಿಂದ ವಿವಿಧ ಜನರು ನಿರಂತರವಾಗಿ ವಲಸೆ ಬಂದು ನೆಲೆಸಿದರು. ಈ ಜನರ ಪೈಕಿ ಸುಮೇರಿಯನ್ ಹಾಗೂ ಬೆಬಿಲೋನಿಯನ್ ಜನಾಂಗಗಳು ಬಹಳ ಮುಖ್ಯವಾದವು. ಮೆಸಪಟೋಮಿಯದ ಮೇಲೆ ಎಲ್ಲಾ ದಿಕ್ಕುಗಳಿಂದ ಆಕ್ರಮಣಗಳು ನಡೆದವು. ಇದರಿಂದ ಮೆಸಪಟೋಮಿಯ ನಾಗರಿಕತೆ ನಂತರದಲ್ಲಿ ಕಾಣೆಯಾಯಿತು. ಅದರ ಜಾಗದಲ್ಲಿ ಸುಮೇರಿಯನ್ ನಾಗರಿಕತೆ ಹಾಗೂ ಬೆಬಿಲೋನಿಯನ್ ನಾಗರಿಕತೆಗಳು ಬೆಳವಣಿಗೆ ಹೊಂದಿದವು. ಯುಫ್ರೆಟಿಸ್ ನದಿ ಪಶ್ಚಿಮ ದಿಕ್ಕಿಗೆ ಹರಿದರೆ ಟೈಗ್ರಿಸ್ ನದಿ ಪೂರ್ವ ದಿಕ್ಕಿಗೆ ಹರಿಯುತ್ತದೆ.[೭]

### ೨.೩.೨. ಎಡೆದೊರೆ ನಾಡು ಕುರಿತು ಚರ್ಚೆ

ಮೆಸಪಟೋಮಿಯ ಶಬ್ದದ ಅರ್ಥವನ್ನು ಭಾರತದಲ್ಲಿ ಅನ್ವಯಿಸಿ ನೋಡಬಹುದು. ಮೆಸಪೊಟೋಮಿಯ ಪದಕ್ಕೆ ಸಂವಾದಿಯಾಗಿ 'ಎಡೆದೊರೆ' ನಾಡು ಎಂಬ ಪದ ಬಳಕೆಯಾಗಿರುವುದು ಕಂಡುಬರುತ್ತದೆ. ಎಡೆದೊರೆ, ಎಡೆತೊರೆ ಪದ ನಿಷ್ಪತ್ತಿ ಪ್ರಕಾರ ಎಡೆ ಎಂದರೆ ಸ್ಥಳ, ನಡುವೆ, ಹತ್ತಿರ ಮುಂತಾದ ಅರ್ಥಗಳು ಇವೆ. ತೊರೆ ಎಂದರೆ ಹೊಳೆ ಎಂದರ್ಥ. ಹೊಳೆ ಎಂದರೆ ನದಿ ಎಂಬ ಅರ್ಥವಿದೆ. ಇಲ್ಲಿ ಕೃಷ್ಣಾ ಮತ್ತು ತುಂಗಭದ್ರ ನದಿಗಳು ಇರುವುದರಿಂದ ಎರಡು ನದಿಗಳ ನಡುವಿನ ಪ್ರದೇಶವನ್ನು ಎಡೆದೊರೆನಾಡು ಎಂದು ಕರೆದಿರುವುದು ಸ್ಪಷ್ಟವಿದೆ.[೮] 'ಎಡೆದೊರೆ' ಎಂಬ ಉಲ್ಲೇಖ ಯಾವಾಗ ಕಂಡುಬಂದಿತೆಂಬುದು ಕುತೂಹಲಕರವಾದುದು. ಎಡೆದೊರೆ ಪದದ ಪ್ರಾಚೀನ ಉಲ್ಲೇಖ ಕ್ರಿ.ಶ. ೮೩೦ರ ಕೆಸರಬಾವಿ ಶಾಸನದಲ್ಲಿದೆ. ಈ ಶಾಸನ ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲೂಕಿನ ಕೆಸರಬಾವಿಯಲ್ಲಿದೆ.[೯] ಆದರೆ ಈ ಶಾಸನಕ್ಕಿಂತ ಪೂರ್ವದಲ್ಲಿಯೆ ಮೈಸೂರು ಭಾಗದ ಬಸವನಪುರದ ಕ್ರಿ.ಶ. ೭-೮ನೆಯ ಶತಮಾನದ ತಾಮ್ರ ಶಾಸನದಲ್ಲಿ ಉಲ್ಲೇಖವಾಗಿದೆ.[೧೦] ಅನಂತರದಲ್ಲಿ ಕ್ರಿ.ಶ. ೯ನೆಯ ಶತಮಾನದಲ್ಲಿ ರಾಯಚೂರು ಜಿಲ್ಲೆಯ ಮಾನವಿ ತಾಲೂಕಿನ ಭೋಗಾವತಿ ಶಾಸನದಲ್ಲಿ ಉಲ್ಲೇಖಗೊಂಡಿದೆ.[೧೧] ನಂತರ ಮುಂದುವರೆದು ಹದಿನಾರನೆಯ ಶತಮಾನದವರೆಗೂ ಶಾಸನಗಳಲ್ಲಿ ಉಲ್ಲೇಖವಿದೆ. ಶಾಸನಗಳ ಉಲ್ಲೇಖಗಳಿಂದ ಎಡೆದೊರೆನಾಡಿನ ವ್ಯಾಪ್ತಿ ಗುರುತಿಸಲು ಪ್ರಯತ್ನಿಸಿ ಹಲವು ಆಡಳಿತ ವಿಭಾಗಗಳನ್ನು ಹೊಂದಿರುವ ಬಗ್ಗೆ ಗಮನ ಸೆಳೆಯಲಾಗಿದೆ.

### ೨.೩.೩. ದೋ-ಅಬ್ ಪದದ ಅರ್ಥ ಮತ್ತು ಸ್ವರೂಪ

ಎಡೆದೊರೆ ನಾಡು ಎಂಬ ಆಡಳಿತ ವಿಭಾಗಗಳು ಅಸ್ತಿತ್ವದಲ್ಲಿರುವಾಗಲೇ ಭಾರತದಲ್ಲಿ ಮುಸ್ಲಿಂರ ಆಳ್ವಿಕೆ ಪ್ರಾರಂಭವಾಯಿತು. ಈ ಮೂಲಕ ಭಾರತದಲ್ಲಿ ಪರ್ಶಿಯನ್ ಮತ್ತು ಉರ್ದು ಭಾಷೆಗಳು ಆಡಳಿತ ಭಾಷೆಗಳಾಗಿ ಅಸ್ತಿತ್ವ ಪಡೆದುಕೊಂಡವು. ಮುಸ್ಲಿಂ ಅರಸರ ರಾಜ್ಯಕ್ಕೆ ಹೆಚ್ಚಿನ ಆದಾಯವನ್ನು ನೀಡುವ ಪ್ರದೇಶಗಳಲ್ಲಿ ಎರಡು ನದಿಗಳ ನಡುವಿನ ಪ್ರದೇಶಗಳು ಮಹತ್ವಪೂರ್ಣವಾಗಿದ್ದವು. ಹಾಗಾಗಿ ಅವನ್ನು ದೋ-ಅಬ್ ಎಂದು ಕರೆದರು. ದೋ-ಅಬ್ ಪರ್ಶಿಯನ್ ಮತ್ತು ಉರ್ದು ಭಾಷೆಗಳ ಸಂಯೋಜಿತ ಪದವಾಗಿದೆ. ಇದು ಪಾರಿಭಾಷಿಕ ಪದವಾಗಿದೆ.

ದೋ ಎಂದರೆ ಎರಡು, ಅಬ್ ಎಂದರೆ ತೀರ, ದಂಡೆ ಎಂದರ್ಥವಿದೆ. ಎರಡು ನದಿಗಳ ನಡುವಿನ ಬಯಲು ಪ್ರದೇಶವನ್ನು ದೋ-ಅಬ್ ಎಂದು ಕರೆಯಲಾಗುತ್ತದೆ. ದೋ–ಅಬ್ ಪ್ರದೇಶಗಳು ಪ್ರಾಗೈತಿಹಾಸಿಕ ಕಾಲದಿಂದಲೂ ತಮ್ಮ ಅಸ್ಮಿತೆಯನ್ನು ಪಡೆದುಕೊಂಡಿವೆ. ಅವು ದೋ-ಅಬ್ ಎಂದು ಕರೆಯಿಸಿಕೊಳ್ಳುವುದಕ್ಕಿಂತಲೂ ಮುಂಚೆ ಕಾಲಕ್ಕೆ ತಕ್ಕಂತೆ ಅವುಗಳ ಆಡಳಿತ ಭಾಗಗಳ ಹೆಸರುಗಳು ಸ್ಥಿತ್ಯಂತರಗೊಳ್ಳುತ್ತಿದ್ದವು. ಆಡಳಿತದ ದೃಷ್ಟಿಯಿಂದ ರಾಜ್ಯವನ್ನು ನಾಡು, ಮಂಡಲ, ವಿಷಯ, ಸೀಮೆ,

ವೇಂಟೆ, ಚಾವಡಿ, ಸ್ಥಳ, ನಗರ, ಗ್ರಾಮ ಮುಂತಾಗಿ ನಿರ್ದಿಷ್ಟ ಶ್ರೇಣೀಕೃತ ವಿಭಾಗಗಳನ್ನಾಗಿ ವಿಭಜಿಸಿ ರಾಜ್ಯವನ್ನು ಪರಿಪಾಲಿಸುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ವ್ಯವಸ್ಥೆಯನ್ನು ಎಲ್ಲಾ ಅರಸು ಮನೆತನದವರು ಮುಂದುವರೆಸಿಕೊಂಡು ಬಂದಿವೆ. ಕಾಲದಿಂದ ಕಾಲಕ್ಕೆ ಮತ್ತು ಒಂದು ಅರಸು ಮನೆತನದಿಂದ ಮತ್ತೊಂದು ಅರಸು ಮನೆತನಕ್ಕೆ ಸಾಕಷ್ಟು ರೂಪಾಂತರಗೊಳ್ಳುತ್ತಲೂ ಬಂದಿದೆ. ಆಡಳಿತ ವಿಭಾಗ ಅಥವಾ ಭೌಗೋಳಿಕ ವಿಭಾಗದ ವ್ಯಾಪ್ತಿಯಲ್ಲಿ ಭಾಷಿಕವಾಗಿ ಮತ್ತು ಹೆಸರುಗಳಲ್ಲಿ ಕೆಲವೊಂದು ಸಣ್ಣ ಪುಟ್ಟ ಮಾರ್ಪಾಟುಗಳು ಕಾಲಾನುಕ್ರಮದಲ್ಲಿ ನಡೆಯುತ್ತಿದ್ದವು. ಇದನ್ನು ದೋ-ಅಬ್ ಪದ ನಿಷ್ಪತ್ತಿ ಮತ್ತು ಸ್ವರೂಪದಲ್ಲೂ ಕಾಣಬಹುದು. ಇದಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಅಂತರ್ಜಾಲದಿಂದ ಪಡೆದುಕೊಳ್ಳಲಾಗಿದೆ. ಜೊತೆಗೆ ಕರ್ನಾಟಕದ ಸಂದರ್ಭದಲ್ಲಿ ಎರಡು ನದಿಗಳ ನಡುವಿನ ಪ್ರದೇಶಗಳನ್ನು ಗುರುತಿಸಲಾಗಿದೆ.

**ದೋ-ಅಬ್ ಬಗೆಗಿನ ವ್ಯಾಖ್ಯಾನಗಳ ವಿವರ ಹೀಗಿದೆ.**

೧. ಕೋಲಂಬಿಯಾ ಎನ್ ಸೈಕ್ಲೋಪಿಡಿಯಾ: ಒಂದು ಭೂ ಪ್ರದೇಶದಲ್ಲಿ ಯಾವುದೇ ಹೆಸರಿನ ಎರಡು ನದಿಗಳು ಹರಿದರೆ, ಆ ನದಿಗಳ ನಡುವಿನ ಭೂಪ್ರದೇಶವನ್ನು ದೋ-ಅಬ್ ಎಂದು ಕರೆಯಲಾಗಿದೆ.

೨. ವಿಕೀಪಿಡಿಯಾ: ದೋ- ಅಂದರೆ ಎರಡು, ಅಬ್ ಎಂದರೆ ನದಿತೀರ. ಎರಡು ನದಿಗಳ ನಡುವಿನ ಪ್ರದೇಶವನ್ನು ದೋ-ಅಬ್ ಎನ್ನಲಾಗಿದೆ. ದೋ-ಅಬ್ ಪರ್ಶಿಯನ್ ಮತ್ತು ಉರ್ದು ಭಾಷೆಗಳ ಪದವಾಗಿದೆ.

ಭಾರತದಲ್ಲಿ ಅನೇಕ ದೋ-ಅಬ್ ಪ್ರದೇಶಗಳು ಕಂಡುಬರುತ್ತವೆ. ಅವನ್ನು ಅವುಗಳ ಪ್ರಮಾಣದ ಆಧಾರದ ಮೇಲೆ ನಾಲ್ಕು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ. ೧. ಪ್ರಮುಖ ದೋ-ಅಬ್ ಪ್ರದೇಶ ೨.ಮುಖ್ಯ ದೋ-ಅಬ್ ಪ್ರದೇಶ ೩. ಮಧ್ಯಮ ದೋ-ಅಬ್ ಪ್ರದೇಶ ೪. ಕನಿಷ್ಠ ದೋ-ಅಬ್ ಪ್ರದೇಶ ಕರ್ನಾಟಕದಲ್ಲಿನ ದೋ-ಅಬ್ ಪ್ರದೇಶಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಪ್ರಮುಖ ದೋ-ಅಬ್ ಪ್ರದೇಶಗಳು**

ಭಾರತದಲ್ಲಿ ಕಂಡುಬರುವ ಪ್ರಮುಖ ದೋ-ಅಬ್ ಪ್ರದೇಶಗಳನ್ನು ಮೂರು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಇವು ಭಾರತದಲ್ಲಿ ಅನೇಕ ಮಹತ್ವದ ಘಟನೆಗಳಿಗೆ ಕಾರಣವಾಗಿರುವುದಲ್ಲದೆ ಜನಜೀವನದ ಆಶ್ರಯ ತಾಣಗಳಾಗಿ ಗುರುತಿಸಿಕೊಂಡಿವೆ. ನಾಗರಿಕತೆಯ ಬದಲಾವಣೆಗಳಿಗೆ ಪ್ರೇರಕ ಶಕ್ತಿಗಳಾಗಿವೆ. ಇವು ಎಲ್ಲ ದಿಕ್ಕುಗಳಿಂದ ಬೇರೆ ಬೇರೆ ಪ್ರದೇಶಗಳ ಜನತೆ ಇಲ್ಲಿಗೆ ವಲಸೆ ಬಂದು ನೆಲೆಸಿರುವ ಸ್ಥಳಗಳಾಗಿವೆ. ಅವುಗಳ ಸ್ಥೂಲ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

**ಗಂಗಾ-ಯಮುನಾ ದೋ-ಅಬ್ ಪ್ರದೇಶ**

ಈ ಪ್ರದೇಶ ಉತ್ತರ ಪ್ರದೇಶದಲ್ಲಿದೆ. ಗಂಗಾ-ಯಮುನಾ ನದಿಗಳ ನಡುವಿನ ಪ್ರದೇಶವಾದ್ದರಿಂದ ಇದನ್ನು ಗಂಗಾ-ಯಮುನಾ ದೋ-ಅಬ್ ಪ್ರದೇಶವೆಂದೆ ಗುರುತಿಸಲಾಗಿದೆ. ಗಂಗಾನದಿ ಪಶ್ಚಿಮದಿಂದ ಉತ್ತರ-ದಕ್ಷಿಣ ವಾಹಿನಿಯಾಗಿ ಹರಿಯುತ್ತದೆ. ಯಮುನಾ ನದಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಈ ಎರಡು ನದಿಗಳು ಸಂಗಮವಾಗುವ ಸ್ಥಳ ಪ್ರಯಾಗವೆಂದು ಪ್ರಸಿದ್ಧಿಯಾಗಿದೆ. ಈ ಪ್ರದೇಶದಲ್ಲಿ ಭಾರತದ ಪ್ರಮುಖ ಅರಸುಮನೆತನಗಳು ಸ್ಥಾಪನೆಗೊಂಡಿವೆ. ಏಕಚಕ್ರಾಧಿಪತ್ಯ ಸಾಧಿಸಿದ ಮೊಟ್ಟಮೊದಲ

ಅರಸುಮನೆತನವೆಂದು ಖ್ಯಾತಿ ಪಡೆದ ಮೌರ್ಯ ಸಾಮ್ರಾಜ್ಯ ಇಲ್ಲಿಯೆ ಸ್ಥಾಪನೆಗೊಂಡಿತು. ಒಂದಿಲ್ಲೊಂದು ಅರಸುಮನೆತನಗಳು ಇಲ್ಲಿ ಸದಾ ಏಳಿಗೆ ಹೊಂದಿವೆ. ಭಾರತದ ಪ್ರಮುಖ ಆಯಕಟ್ಟಿನ ಸ್ಥಳವಾಗಿ ಗಂಗಾ-ಯಮುನಾ ದೋ-ಅಬ್ ಪ್ರದೇಶ ತನ್ನ ಅಸ್ಮಿತೆಯನ್ನು ಇಂದಿಗೂ ಉಳಿಸಿಕೊಂಡಿದೆ.

**ಪಂಜಾಬ್ ದೋ-ಅಬ್ ಪ್ರದೇಶ**

ಇದು ಜೇಲಂ ಮತ್ತು ಚಿನಾಬ್ ನದಿಗಳ ನಡುವಿನ ಪ್ರದೇಶವಾಗಿದೆ. ಇಲ್ಲಿನ ಎರಡು ನದಿಗಳು ಉತ್ತರದಿಂದ ದಕ್ಷಿಣಾಭಿಮುಖವಾಗಿ ಹರಿಯುತ್ತವೆ. ಜಗತ್ತನ್ನೆ ತನ್ನ ಕೈಯಲ್ಲಿಟ್ಟುಕೊಳ್ಳುವ ಮಹತ್ವಾಕಾಂಕ್ಷೆ ಉಳ್ಳವನಾಗಿದ್ದ ಅಲೆಕ್ಸಾಂಡರ್, ಈ ಪ್ರದೇಶದ ಅರಸ ಪೋರಸನ ಮೇಲೆ ದಾಳಿ ಮಾಡಿದ. ಈ ಯುದ್ಧ ನಡೆದದ್ದು ಜೇಲಂ ನದಿ ದಡದಲ್ಲಿ ಎಂಬುದಾಗಿದೆ. ಮಳೆಗಾಲದಲ್ಲಿ ರಾತ್ರೋರಾತ್ರಿ ಗೆರಿಲ್ಲಾ ದಾಳಿ ಮಾಡಿ ಪೋರಸನನ್ನು ಸೋಲಿಸಿದ. ಆದರೆ ಪೋರಸ್ ತನ್ನ ದಿಟ್ಟತನದಿಂದ ಅಲೆಕ್ಸಾಂಡರ್‌ನಿಂದ ಪುನಃ ಅಧಿಕಾರ ಮತ್ತು ಗೌರವ ಪಡೆದು ಆಡಳಿತ ನಡೆಸಿದ. ಇಲ್ಲಿನ ನದಿಗಳು ಜನವಸತಿಗೆ ಯೋಗ್ಯವಾದ ವಾತಾವರಣ ನಿರ್ಮಿಸಿದ ಸ್ಥಳವಾಗಿದೆ.

**ರಾಯಚೂರು ದೋ-ಅಬ್ ಪ್ರದೇಶ**

ಇದು ಕೃಷ್ಣಾ ಮತ್ತು ತುಂಗಭದ್ರ ನದಿಗಳ ನಡುವಿನ ಪ್ರದೇಶವಾಗಿದೆ. ಕೃಷ್ಣಾ ನದಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ತುಂಗಭದ್ರಾ ನದಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಹರಿದು ನಂತರ ಪೂರ್ವಾಭಿಮುಖವಾಗಿ ಹರಿಯುತ್ತದೆ. ಈ ಎರಡು ನದಿಗಳ ನಡುವಿನ ಪ್ರದೇಶವೆ ರಾಯಚೂರು ದೋ-ಅಬ್ ಪ್ರದೇಶವಾಗಿದೆ. ಇದು ಫಲವತ್ತಾದ ಬಯಲು ಪ್ರದೇಶವಾಗಿದೆ. ಈ ನದಿಗಳು ತಂದೊಡ್ಡುವ ಫಲವತ್ತಾದ ಮೆಕ್ಕಲು ಮಣ್ಣು ಕೃಷಿಯೋಗ್ಯವಾಗಿದೆ. ಅಲ್ಲದೆ ಪಶುಪಾಲನೆಗೆ ಅನುಕೂಲವನ್ನುಂಟು ಮಾಡಿದೆ. ಇಲ್ಲಿ ಚಿನ್ನದ ಗಣಿಗಾರಿಕೆಯ ಜೊತೆಗೆ ಇತರ ಲೋಹದ ನಿಕ್ಷೇಪಗಳಿದ್ದು, ಆರ್ಥಿಕವಾಗಿ ರಾಜ್ಯಾದಾಯವನ್ನು ಹೆಚ್ಚಿಸಲು ಪ್ರಮುಖ ಪಾತ್ರ ವಹಿಸಿದೆ. ವಿಜಯನಗರ ರಾಜ್ಯದ ಅವನತಿಗೆ ಪ್ರಮುಖ ಕಾರಣವಾಗಿ ಈ ಪ್ರದೇಶ ಗುರುತಿಸಿಕೊಂಡಿತು. ಈ ಪ್ರದೇಶ ವಿವಿಧ ಆಯಾಮಗಳ ಮೂಲಕ ರಾಜಕೀಯ ಪ್ರೇರಿತ ಕೇಂದ್ರವಾಗಿತ್ತು. ಜೊತೆಗೆ ವ್ಯಾಪಾರ ಕೇಂದ್ರವೂ ಆಗಿದ್ದಿತು ಎಂದು ತಿಳಿದುಬರುತ್ತದೆ. ಇಲ್ಲಿನ ಫಲವತ್ತಾದ ಭೂಮಿಯನ್ನು ವಶಪಡಿಸಿಕೊಳ್ಳಲು ಹಲವಾರು ಆಕ್ರಮಣಗಳು ನಡೆದಿವೆ. ವಿವಿಧ ಅರಸು ಮನೆತನಗಳು ಎಲ್ಲ ದಿಕ್ಕುಗಳಿಂದ ಈ ಭೂಭಾಗವನ್ನು ಆಕ್ರಮಿಸಲು ಅವಕಾಶವಿತ್ತು. ಹಾಗೆಯೇ ಈ ಪ್ರದೇಶ ಆಕ್ರಮಣಕ್ಕೂ ಒಳಗಾಗಿತ್ತು. ಕ್ರಿಪೂ. ೩ನೆಯ ಶತಮಾನದಿಂದ ಕ್ರಿಶ. ೨೦ನೆಯ ಶತಮಾನದವರೆಗೆ ನಿರಂತರವಾಗಿ ಯುದ್ಧ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಪ್ರಮುಖ ಅರಸುಮನೆತನಗಳು ಈ ಪ್ರದೇಶದ ಮೇಲೆ ತಮ್ಮ ಅಧಿಕಾರ ಸ್ಥಾಪಿಸಲು ಮಾಡಿದ ಹೋರಾಟಗಳಿಗೆ ಹಲವು ಉದಾಹರಣೆಗಳಿವೆ. ಪ್ರಾಚೀನ ಕಾಲದಿಂದಲೂ ಇದು ಹಲವು ಅರಸುಮನೆತನಗಳ ಆಕರ್ಷಣೆಗೆ ಕಾರಣವಾದ ಪ್ರದೇಶವಾಗಿತ್ತು.

**ಮುಖ್ಯ ದೋ-ಅಬ್ ಪ್ರದೇಶಗಳು**

ಉತ್ತರದಲ್ಲಿ ಗಂಗಾ-ಯಮುನಾ ನದಿಗಳ ದೋ-ಅಬ್ ಪ್ರದೇಶವನ್ನು ಮುಖ್ಯ ದೋ-ಅಬ್ ಪ್ರದೇಶವೆಂದು ಗುರುತಿಸಲಾಗಿದೆ. ಡೆಹರಾಡೂನ್, ಹರಿದ್ವಾರ, ಹೃಷಿಕೇಶ, ಸಹಾನ್‌ಪುರ, ಮುಜಾಫರ

ನಗರ, ಮಿರತ್, ದೆಹಲಿ, ಗಾಜಿಯಾಬಾದ್, ಗೌತಮಬುದ್ಧ ನಗರ ಮತ್ತು ಬುಲಂದಿ ಶಹರಗಳು ಹೀಗೆ ಗುರುತಿಸಿಕೊಂಡಿರುವ ಪ್ರದೇಶಗಳಾಗಿವೆ. ಇವುಗಳ ಜೊತೆಗೆ ಪಂಜಾಬ್ ರಾಜ್ಯದಲ್ಲಿ ಅನೇಕ ದೋ-ಅಬ್ ಪ್ರದೇಶಗಳು ಕಂಡುಬರುತ್ತವೆ.

೧. **ಸಿಂಧ್ ಸಾಗರ್ ದೋ-ಅಬ್**: ಸಿಂಧೂ ಮತ್ತು ಜೇಲಂ ನದಿಗಳ ನಡುವಣ ಪ್ರದೇಶ.

೨. **ಜೇಚಾ ದೋ-ಅಬ್**: ಜೇಲಂ ಮತ್ತು ಚಿನಾಬ್ ನದಿಗಳ ನಡುವಿನ ಪ್ರದೇಶ.

೩. **ಬಾರಿ ದೋ-ಅಬ್**: ರಾವಿ ಮತ್ತು ಬಿಯಾಸ ನದಿಗಳ ನಡುವಿನ ಪ್ರದೇಶ. ರಾವಿ ನದಿ ಪೂರ್ವದಿಂದ ಪಶ್ಚಿಮಕ್ಕೆ ಹರಿದರೆ, ಬಿಯಾಸ ನದಿ ಈಶಾನ್ಯದಿಂದ ಪಶ್ಚಿಮಕ್ಕೆ ಹಾಗೂ ದಕ್ಷಿಣಕ್ಕೆ ಹರಿಯುತ್ತದೆ. ಸಿಖ್ಖರ ಪ್ರಮುಖ ಧಾರ್ಮಿಕ ಕೇಂದ್ರವಾದ ಸ್ವರ್ಣ ದೇವಾಲಯ ಈ ಪ್ರದೇಶದ ಅಮೃತಸರದಲ್ಲಿದೆ.

೪. **ರೇಚ್ನಾ ದೋ-ಅಬ್**: ಚಿನಾಬ್ ಮತ್ತು ರಾವಿ ನದಿಗಳ ನಡುವೆ ಇದೆ.

೫. **ಬಿಸ್ತಾ(ಜಲಂಧರ) ದೋ-ಅಬ್**: ಬಿಯಾಸ್ ಮತ್ತು ಸಟ್ಲೆಜ್ ನದಿಗಳ ಮಧ್ಯದ ಪ್ರದೇಶವಾಗಿದೆ.

### ಮಧ್ಯಮ ದೋ-ಅಬ್ ಪ್ರದೇಶಗಳು

ಗಂಗಾ-ಯಮುನಾ ನದಿಗಳ ಮಧ್ಯದ ಪ್ರದೇಶದಲ್ಲಿ ಮಧ್ಯಮ ದೋ-ಅಬ್ ಪ್ರದೇಶಗಳು ಕಂಡುಬರುತ್ತವೆ. ಅಲಿಘಡ, ಇಟಾ, ಹತ್ರಾಸ್, ಫಿರೋಜಾಬಾದ್, ಮಥುರಾ ಮತ್ತು ಅಗ್ರಹಾರಗಳು ಮಧ್ಯಮ ದೋ-ಅಬ್ ಪ್ರದೇಶಗಳೆಂದು ಗುರುತಿಸಿಕೊಂಡಿವೆ.

### ಕನಿಷ್ಠ ದೋ-ಅಬ್ ಪ್ರದೇಶಗಳು

ಗಂಗಾ-ಯಮುನಾ ನದಿಗಳ ಮಧ್ಯದ ಪ್ರದೇಶದಲ್ಲಿ ಕನಿಷ್ಠ ದೋ-ಅಬ್ ಪ್ರದೇಶಗಳು ಕಂಡುಬರುತ್ತವೆ. ಅವು ಮೈನಾಪುರಿ, ಈಟವಾ, ಕನೌಜ್, ಫಾರೂಖ್‌ಬಾದ್, ಔರಿಯಾ, ಖಾನಪುರ, ಫತೇಪುರ, ಕೌಸಾಂಬಿ ಮತ್ತು ಅಲಹಾಬಾದ್‌ಗಳಾಗಿವೆ. ಹೀಗೆ ನಾಲ್ಕು ಬಗೆಯ ದೋ-ಅಬ್ ಪ್ರದೇಶಗಳು ಆಯಾ ಕಾಲಕ್ಕೆ ತಕ್ಕಂತೆ ವಿವಿಧ ಬಗೆಯ ಬೆಳವಣಿಗೆಗೆ ಕಾರಣವಾಗಿವೆ (ಅಂತರ್ಜಾಲದ ಮಾಹಿತಿ).

### ಕರ್ನಾಟಕದಲ್ಲಿ ಕಂಡುಬರುವ ದೋ-ಅಬ್ ಪ್ರದೇಶಗಳು

ಕರ್ನಾಟಕ ಹಲವು ನದಿಗಳು ಹರಿಯುವ ನಾಡಾಗಿದೆ. ಇದು ಜನಜೀವನಕ್ಕೆ ಆಧಾರವಾಗಿದ್ದ ನದಿಗಳನ್ನು ಹೊಂದಿದೆ. ಅವು ಬೇರೆ ಬೇರೆ ಪ್ರದೇಶದಲ್ಲಿ ಹುಟ್ಟಿದರೂ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹರಿದು ಹೋಗುತ್ತವೆ. ನೀರಾವರಿಗೆ ನೀರನ್ನು ಒದಗಿಸಿ ಜನರ ಜೀವನಾಡಿಯಾಗಿ ಗುರುತಿಸಿಕೊಂಡಿವೆ. ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಜನ ಜೀವನಕ್ಕೆ ಈ ನದಿಗಳ ಬಯಲು ಪ್ರದೇಶಗಳು ಅವಕಾಶ ಮಾಡಿಕೊಟ್ಟಿವೆ. ಕೃಷಿಯೋಗ್ಯ ಭೂಮಿ ಸಹ ನದಿ ಪಾತ್ರದಲ್ಲಿರುವುದು ಕೃಷಿ ಜೀವನ ನಡೆಸುವಂತೆ ಮಾಡಿದವು. ಕರ್ನಾಟಕದಲ್ಲಿ ಇದುವರೆಗೆ ರಾಯಚೂರು ದೋ-ಅಬ್ ಪ್ರದೇಶ ಒಂದನ್ನೇ ಮಾತ್ರ ದೋ-ಅಬ್ ಪ್ರದೇಶವೆಂದು ಗುರುತಿಸಲಾಗಿದೆ. ಇದರಂತೆ ಕರ್ನಾಟಕದಲ್ಲಿ ದೋ-ಅಬ್ ಪ್ರದೇಶಗಳು ಅಲ್ಲಲ್ಲಿ ಕಂಡುಬರುತ್ತವೆ. ಅವನ್ನು ಸ್ಥೂಲವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ.

ಉತ್ತರ ಭಾರತದಲ್ಲಿ ಉತ್ತರ ಪ್ರದೇಶ ನದಿಗಳನ್ನು ಹೊಂದಿರುವಂತೆ ದಕ್ಷಿಣ ಭಾರತದಲ್ಲಿ ಕರ್ನಾಟಕ ಸಹ ಅನೇಕ ನದಿ ಪಾತ್ರಗಳನ್ನು ಹೊಂದಿದೆ. ನದಿ ಜಾಲದ ಹಿನ್ನೆಲೆಯಲ್ಲಿ ಕರ್ನಾಟಕಕ್ಕೂ

ಉತ್ತರ ಪ್ರದೇಶಕ್ಕೂ ಅವಿನಾಭಾವ ಸಂಬಂಧವಿರಬೇಕೆನಿಸುತ್ತದೆ. ಉದಾಹರಣೆ: 'ಗಂಗಾ ಸ್ನಾನ ತುಂಗಾ ಪಾನ' ಎಂಬ ಮಾತು ಈ ಸಂಬಂಧವನ್ನು ಸೂಚಿಸುತ್ತದೆ. ಪ್ರಸ್ತುತ ಕರ್ನಾಟಕದಲ್ಲಿ ಐದು ದೋ-ಅಬ್ ಪ್ರದೇಶಗಳನ್ನು ಗುರುತಿಸಲಾಗಿದೆ.

**ಸಗರನಾಡು ದೋ-ಅಬ್**

ಇದು ಕೃಷ್ಣಾ ಮತ್ತು ಭೀಮಾ ನದಿಗಳ ನಡುವಣ ಪ್ರದೇಶವಾಗಿದೆ. ಈ ದೋ-ಅಬ್ ಪ್ರದೇಶ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕು, ಯಾದಗಿರಿ ಜಿಲ್ಲೆಯ ಶಹಾಪುರ ಮತ್ತು ಸುರಪುರ ತಾಲೂಕುಗಳನ್ನು ಒಳಗೊಂಡಿದೆ. ಈ ಪ್ರದೇಶವೂ ಚಾರಿತ್ರಿಕವಾಗಿ ಗಮನ ಸೆಳೆದ ಕೇಂದ್ರವಾಗಿದೆ. ಇಲ್ಲಿ ಮುಸ್ಲಿಂ ಅರಸರ ಪ್ರಭಾವವನ್ನು ಹೆಚ್ಚಾಗಿ ಕಾಣಬಹುದಾಗಿದೆ. ಜೊತೆಗೆ ದಿಲ್ಲಿಯ ಸುಲ್ತಾನ ಔರಂಗಜೇಬನ ಕೆಂಗಣ್ಣಿಗೆ ಗುರಿಯಾದ ಪ್ರದೇಶವಾಗಿದೆ. ೧೮೫೭ರ ಪ್ರಥಮ ಸ್ವಾತಂತ್ರ್ಯ ದಂಗೆಯ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಬ್ರಿಟಿಶರ ವಿರುದ್ಧ ಹೋರಾಡಿದ ಸುರಪುರ ಸಂಸ್ಥಾನ ಈ ಪ್ರದೇಶದ ಕಳಸದಂತಿದೆ. ಇಲ್ಲಿನ ಗೋಗಿಯಲ್ಲಿ ಅಣುಶಕ್ತಿಗೆ ಬೇಕಾಗುವ ಅಪರೂಪದ ಲೋಹವಾದ 'ಯುರೇನಿಯಂ' ಗಣಿಗಾರಿಕೆ ನಡೆಯುತ್ತಿದೆ. ಇದು ಬಿಜಾಪುರದ ಆದಿಲ್‌ಶಾಹಿಗಳ ಹಿಡಿತದಲ್ಲಿದ್ದ ಪ್ರಮುಖ ಪ್ರದೇಶವಾಗಿತ್ತು.

**ರಾಯಚೂರು ದೋ-ಅಬ್**

ಈ ಪ್ರದೇಶ ದೇಶದ ಪ್ರಮುಖ ದೋ-ಅಬ್ ಪ್ರದೇಶಗಳಲ್ಲಿ ಒಂದಾಗಿದೆ. ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಈ ಬಯಲು ಪ್ರದೇಶ ದೇವದುರ್ಗ, ರಾಯಚೂರು, ಮಾನ್ವಿ, ಸಿಂಧನೂರು ಮತ್ತು ಲಿಂಗಸೂಗೂರು ತಾಲೂಕುಗಳನ್ನು ಹೊಂದಿದೆ. ಇದು ಹಲವು ಘಟನೆಗಳಿಗೆ ಕಾರಣವಾಗಿದೆ. ಚೋಳರು ಮತ್ತು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಯುದ್ಧ ಕೇಂದ್ರವಾಗಿದ್ದು, ನಂತರ ವಿಜಯನಗರ ಮತ್ತು ಬಹಮನಿಗಳ ಸಂದರ್ಭದಲ್ಲಿ ನಿರಂತರ ಯುದ್ಧ ಕೇಂದ್ರವಾಗಿ ಮಾರ್ಪಟ್ಟಿತ್ತು. ವ್ಯಾಪಾರ ಸಂಬಂಧಗಳನ್ನು ಅಧಿಕ ಪ್ರಮಾಣದಲ್ಲಿ ಹೊಂದಿತ್ತು. ಮೌರ್ಯ ಅರಸ ಅಶೋಕ ಚಕ್ರವರ್ತಿಯ ಪೂರ್ಣ ಹೆಸರನ್ನು ಸೂಚಿಸಿದ ಮಸ್ಕಿ ಶಾಸನ ಸಹ ಇಲ್ಲಿದೆ. ಹಲವು ವಿಶೇಷತೆಗಳ ಹಿನ್ನೆಲೆಯಲ್ಲಿ ರಾಜಕೀಯ ಜಿದ್ದಿನ ಪ್ರದೇಶವಾಗಿಯೂ ಇದು ಗುರುತಿಸಿಕೊಂಡಿತ್ತು.

**ಬೀಳಗಿ ದೋ-ಅಬ್**

ಇದು ಕೃಷ್ಣಾ ಮತ್ತು ಘಟಪ್ರಭ ನದಿಗಳ ನಡುವಿನ ಪ್ರದೇಶವಾಗಿದೆ. ಬಾಗಲಕೋಟೆ ಜಿಲ್ಲೆಯ ಬೀಳಗಿ, ಮುಧೋಳ, ಜಮಖಂಡಿ ತಾಲೂಕುಗಳಿಂದ ಆವೃತ್ತಗೊಂಡಿದೆ. ಇದು ಕೂಡ ಪ್ರಾಗೈತಿಹಾಸಿಕ ಕಾಲದ ಪ್ರಮುಖ ಕೇಂದ್ರವಾಗಿದೆ ಎಂದು ತಿಳಿದುಬರುತ್ತದೆ.

**ಕೂಡಲ ಸಂಗಮ ದೋ–ಅಬ್**

ಕೃಷ್ಣಾ ಮತ್ತು ಘಟಪ್ರಭ ನದಿಗಳ ಮಧ್ಯದ ಈ ಬಯಲು ಪ್ರದೇಶ ಬಾಗಲಕೋಟೆ ಜಿಲ್ಲೆಯ ಬಾಗಲಕೋಟೆ, ಬದಾಮಿ, ಹುನುಗುಂದ ತಾಲೂಕಿನ ಕೆಲವು ಹಳ್ಳಿಗಳನ್ನು ಒಳಗೊಂಡಿದೆ. ಬಾದಾಮಿ ಚಾಲುಕ್ಯರ ಆಡಳಿತ ಕೇಂದ್ರವೂ ಆಗಿತ್ತು ಎಂದು ತಿಳಿದುಬರುತ್ತದೆ.

**ಮೈಸೂರು ದೋ-ಅಬ್**

ಇದು ಕಾವೇರಿ ಮತ್ತು ಕಪಿಲಾ ನದಿಗಳ ಮಧ್ಯದ ಪ್ರದೇಶವಾಗಿದೆ. ಇದನ್ನು ಎಡೆದೊರೆ ಎಂದು ಗುರುತಿಸಲಾಗಿದೆ. ಮೈಸೂರು, ಹುಣಸೂರು, ನಂಜನಗೂಡು ತಾಲೂಕಿನ ಕೆಲವು ಹಳ್ಳಿಗಳು,

ಟಿ. ನರಸಿಪುರ ತಾಲೂಕಿನ ಕೆಲವು ಹಳ್ಳಿಗಳು ಇಲ್ಲಿ ಸಮಾವೇಶಗೊಂಡಿವೆ. ನದಿಗಳು ದಕ್ಷಿಣಾಭಿಮುಖ ವಾಗಿ ಹರಿಯುತ್ತಿವೆ. ಕಾವೇರಿ ಆ ಭಾಗದ ಜೀವನಾಡಿಯಾಗಿದ್ದು, ದೊಡ್ಡ ಪಟ್ಟಣಗಳಾದ ಬೆಂಗಳೂರು, ಮೈಸೂರು ನಗರಗಳಿಗೆ ಕುಡಿಯುವ ನೀರಿನ ಸರಬರಾಜು ಮಾಡುತ್ತಿದೆ.

ಕರ್ನಾಟಕದಲ್ಲಿ ಗುರುತಿಸಿರುವ ಈ ದೋ-ಅಬ್ ಪ್ರದೇಶಗಳಲ್ಲಿ ರಾಯಚೂರು ದೋ-ಅಬ್ ಪ್ರದೇಶ ಪ್ರಮುಖವಾಗಿದೆ. ಈ ಮೇಲಿನ ಐದು ದೋ-ಅಬ್ ಪ್ರದೇಶಗಳು ವಿವಿಧ ನೆಲೆಗಳಿಂದ ಆಕರ್ಷಣೆಯ ಕೇಂದ್ರಗಳಾಗಿ ಗುರುತಿಸಿಕೊಂಡಿವೆ.

ರಾಯಚೂರು ದೋ–ಅಬ್ ಪ್ರದೇಶ ಮತ್ತು ಇತರ ದೋ–ಅಬ್‌ಗಳ ನಡುವಿನ ಸಂಬಂಧಗಳು ಭಾರತದಲ್ಲಿ, ಕರ್ನಾಟಕದಲ್ಲಿ ಕಂಡುಬರುವ ಗಂಗಾ ಯಮುನಾ, ಸಗರನಾಡು, ಕೂಡಲಸಂಗಮ, ಬೀಳಗಿ, ಮೈಸೂರು ದೋ–ಅಬ್ ಪ್ರದೇಶಗಳೊಂದಿಗೆ ರಾಜಕೀಯ ಮತ್ತು ಆರ್ಥಿಕ ಸಂಬಂಧಗಳನ್ನು ಹೊಂದಿತ್ತೆಂದು ತಿಳಿದುಬರುತ್ತದೆ.

ಗಂಗಾ ಯಮುನಾ ದೋ–ಅಬ್ ಪ್ರದೇಶವು ರಾಯಚೂರು ದೋ–ಅಬ್ ಪ್ರದೇಶದೊಂದಿಗೆ ಅವಿನಾಭಾವ ಸಂಬಂಧ ಹೊಂದಿತ್ತೆಂದೇ ಹೇಳಬೇಕಾಗುತ್ತದೆ. ಕ್ರಿಪೂ. ೩ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿ ಮೌರ್ಯರು ರಾಜಕೀಯವಾಗಿ ಪ್ರಭಾವಿಯಾಗಿ ಗಂಗಾಯಮುನಾ ದೋ–ಅಬ್‌ನಲ್ಲಿ ಗುರುತಿಸಿಕೊಂಡರು. ಸಾಮ್ರಾಜ್ಯ ವಿಸ್ತರಣೆಯ ಹಿನ್ನೆಲೆಯಲ್ಲಿ ಮೌರ್ಯರ ಅರಸ ಅಶೋಕನ ರಾಜಕೀಯ ಸಂಬಂಧವನ್ನು ಸೂಚಿಸಲು ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿಯಲ್ಲಿ ಅಶೋಕನು ಹಾಕಿಸಿರುವ ಶಾಸನ ಸಾಕ್ಷಿಯಾಗಿದೆ. ಹಾಗೆಯೇ ಆರ್ಥಿಕವಾಗಿ ಭದ್ರವಾಗಲು ಈ ಪ್ರದೇಶದ ಹಟ್ಟಿ ಚಿನ್ನದ ಗಣಿಯಿಂದ ರಾಜಧಾನಿ ಪಾಟಲಿಪುತ್ರಕ್ಕೆ ಚಿನ್ನವನ್ನು ಸರಬರಾಜು ಮಾಡಲಾಗುತ್ತಿತ್ತು. ಧಾರ್ಮಿಕವಾಗಿ ಮಸ್ಕಿಯು ಬೌದ್ಧ ಮತದ ಪ್ರಚಾರದ ಕೇಂದ್ರವಾಗಿತ್ತು. ಮಸ್ಕಿಯ ಮೂಲ ಹೆಸರು ಮಹಾಸಂಘ ಎಂದು ಕರೆಯಲಾಗುತ್ತಿತ್ತು. ರೂಪಾಂತರಗೊಂಡು ಮಾಸಂಗಿ, ಮೊಸಂಗಿ, ಮಸ್ಕಿಯಾಗಿದೆ.

ಸಗರನಾಡು ದೋ–ಅಬ್ ರಾಯಚೂರು ದೋ–ಅಬ್‌ಗೆ ಅಂಟಿಕೊಂಡಿದೆ ಮೇಲಾಗಿ ಕೃಷ್ಣಾ ನದಿಯ ಹಿನ್ನಲೆಯಿಂದ ಕೂಡಿದೆ. ರಾಜಕೀಯವಾಗಿ ಹೆಚ್ಚು ಕಡಿಮೆ ಒಂದೇ ಚೌಕಟ್ಟಿನಲ್ಲಿ ಒಳಪಟ್ಟಿವೆ. ಆದರೂ ಕೆಲವು ಬಾರಿ ಅರಸರು ರಾಯಚೂರು ದೋ–ಅಬ್‌ನ ಮೇಲೆ ಆಡಳಿತದ ನಿರ್ವಹಣೆಯನ್ನು ಮಾಡುವಾಗ ಸಗರನಾಡು ದೋ–ಅಬ್‌ನ (ಏತಗಿರಿಯ) ಯಾದಗಿರಿಯ ನೆಲದಿಂದ ಆಡಳಿತವನ್ನು ನಡೆಸುತ್ತಿದ್ದರು. ಈ ಬಗೆಯ ಆಡಳಿತವನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಂಡುಬರುತ್ತದೆ. ಆರ್ಥಿಕವಾಗಿಯೂ ಸಹ ಈ ಪ್ರದೇಶಗಳಲ್ಲಿ ಕಂಡುಬರುವ ಶಾಸನಗಳು ಕೃಷಿ, ವ್ಯಾಪಾರ, ವಾಣಿಜ್ಯ, ರೈತಾಪಿವರ್ಗ, ಕುಶಲಕರ್ಮಿಗಳು ಮುಂತಾದ ಉತ್ಪಾದನಾ ವಲಯ, ವರ್ತಕ ಸಂಘಗಳು, ಪರಸ್ಪರ ಕೊಡುಕೊಳ್ಳುವಿಕೆಯನ್ನು ಸಂಬಂಧವನ್ನು ಹೊಂದಿದ್ದವೆಂದು ಗುರುತಿಸಬಹುದಾಗಿದೆ. ಎರಡೂ ಸ್ಥಳಗಳಲ್ಲಿ ರಾಜಕೀಯವಾಗಿ ಕರ್ನಾಟಕದ ಎಲ್ಲ ಅರಸುಮನೆತನಗಳ ಆಳ್ವಿಕೆ ಇತ್ತು. ಸಂಸ್ಥಾನಿಕರ ಕಾಲದಲ್ಲಿ ಸುರಪುರ ಸಂಸ್ಥಾನ ರಾಯಚೂರು ಪ್ರದೇಶದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿತ್ತು. ಸಾಮಾಜಿಕವಾಗಿ ಇಲ್ಲಿನ ಸಂಸ್ಥಾನಿಕರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿತ್ತು. ನಿಜಾಮ ಮತ್ತು ಬ್ರಿಟಿಶರ ಕಾಲದಲ್ಲಿ ಸುರಪುರ ಸಂಸ್ಥಾನವನ್ನು ನಿಯಂತ್ರಿಸಲು ರಾಯಚೂರು ದೋ–ಅಬ್ ಪ್ರದೇಶದ ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್‌ನ್ನು ಸ್ಥಾಪಿಸಲಾಯಿತು.

ಮಲಪ್ರಭ ಮತ್ತು ಕೃಷ್ಣಾ ನದಿಗಳ ಕೂಡಲಸಂಗಮ ದೋ-ಅಬ್ ಪ್ರದೇಶವು ರಾಯಚೂರು ದೋ-ಅಬ್ ಪಶ್ಚಿಮಕ್ಕಿದೆ. ಹೊಂದಿಕೊಂಡಿದೆ. ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಒಂದೇ ಬಗೆಯ ಸಂಗತಿಗಳನ್ನು ಹೊಂದಿದ್ದವು. ಘಟಪ್ರಭಾ ಮತ್ತು ಕೃಷ್ಣಾನದಿಗಳ ಜೀಳಗಿ ದೋ-ಅಬ್‌ನೊಂದಿಗೆ ರಾಜಕೀಯ ಸಂಬಂಧವನ್ನು ಒಂದೇ ಬಗೆಯಲ್ಲಿ ಗುರುತಿಸಬಹುದು. ಆದರೆ ಸಾಮಾಜಿಕವಾಗಿ, ಆರ್ಥಿಕವಾಗಿ ಇದ್ದ ಸಂಬಂಧಗಳ ಬಗ್ಗೆ ಅಷ್ಟಾಗಿ ತಿಳಿದುಬರುವುದಿಲ್ಲ. ಮೈಸೂರು ದೋ-ಅಬ್‌ಗೆ ರಾಯಚೂರು ದೋ-ಅಬ್‌ನಿಂದ ವ್ಯಾಪಾರ ಮಾರ್ಗವಿದ್ದಿತು. ಅದು ಪ್ರಮುಖವಾಗಿತ್ತು. ಇದನ್ನು ಹೊರತು ಪಡಿಸಿ ಮತ್ತಾವ ಸಂಗತಿಗಳು ಅಷ್ಟಾಗಿ ಗುರುತಿಸಲಾಗಿಲ್ಲ.

### ೨.೪. ರಾಜಪ್ರಭುತ್ವ ವ್ಯವಸ್ಥೆಯ ಪೂರ್ವದ ಸನ್ನಿವೇಶ

ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಕೇಂದ್ರವಾಗಿದೆ. ಯಾವುದೇ ಒಂದು ಪ್ರದೇಶ ವಿಶಿಷ್ಟತೆಯಿಂದ ಕೂಡಿದ್ದರೆ ಅದು ಆ ಪ್ರದೇಶದ ಭೌಗೋಳಿಕತೆಯನ್ನು ಅವಲಂಬಿಸಿರುತ್ತದೆ. ಅಂತಹ ವೈಶಿಷ್ಟ್ಯಪೂರ್ಣವಾದ ಪರಿಸರವನ್ನು ಈ ಪ್ರದೇಶ ಹೊಂದಿದೆ. ನೀರು, ಆಹಾರ ಮತ್ತು ವಸತಿ ಅಖಂಡ ಜೀವಜಾಲಕ್ಕೆ ಬಹುಮುಖ್ಯ ಮೂಲಭೂತ ಅಗತ್ಯಗಳಾಗಿವೆ. ಈ ಮೂರು ಅಂಶಗಳಿಗೆ ಇಲ್ಲಿ ಕೊರತೆ ಇರಲಿಲ್ಲ. ಕೃಷ್ಣಾ-ತುಂಗಭದ್ರಾ ನದಿಗಳು ಈ ಪ್ರದೇಶವನ್ನು ಆವರಿಸಿಕೊಂಡು ಹರಿಯುತ್ತವೆ. ಒಳನಾಡಿನಲ್ಲಿ ದೊಡ್ಡ ದೊಡ್ಡ ಹಳ್ಳಗಳು, ಕೆರೆಗಳು, ಬೆಂಚಿಗಳು, ನೀರಿನ ಚಿಲುಮೆಗಳು ನಿರ್ಮಾಣವಾಗಿ ಜಲಸಂಪತ್ತು ಅಧಿಕವಾಗಿದೆ. ತಪ್ಪಲು, ಗುಡ್ಡಗಳಲ್ಲಿ ಹಲವಾರು ಬಗೆಯ ಹಣ್ಣಿನ ಗಿಡಗಳು, ಗೆಡ್ಡೆ-ಗೆಣಸು ಆಹಾರವಾಗಿ ದೊರೆಯುತ್ತವೆ. ಬೇಟೆ, ಪಶುಸಂಗೋಪನೆ ಮತ್ತು ಕೃಷಿಯ ಮೂಲಕ ಆಹಾರ ಕೊರತೆ ನೀಗಿಸಿಕೊಳ್ಳಲು ಅವಕಾಶವಿತ್ತು. ವಸತಿಗೆ ಸಂಬಂಧಿಸಿದಂತೆ ಅನೇಕ ಕುರುಹುಗಳು ಕಂಡುಬರುತ್ತವೆ. ಬೆಟ್ಟ ಗುಡ್ಡಗಳು, ಸಣ್ಣ ಗುಡ್ಡಗಳು, ಮರಡಿಗಳು ವಸತಿ ಕೇಂದ್ರಗಳಾಗಿದ್ದವು. ಕಾಲಾನಂತರದಲ್ಲಿ ಅಂದರೆ ಕ್ರಿ.ಪೂ. ೧೨೦೦ರ ಹೊತ್ತಿಗೆ ಹಲವು ಬಗೆಯ ಧಾನ್ಯ ಬೇಳೆ-ಕಾಳುಗಳನ್ನು ಬೆಳೆದು, ಗುಹೆ ತೊರೆದು, ದುರ್ಗಗಳಂತಿದ್ದ ಬೆಟ್ಟಗಳ ಇಳಿಜಾರು ಪ್ರದೇಶಗಳಲ್ಲಿ ವೃತ್ತಾಕಾರದ ಮತ್ತು ಆಯತಾಕಾರದ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುವುದು ಕಂಡುಬರುತ್ತದೆ. ಈ ಪ್ರದೇಶದ ಚರಿತ್ರೆಯನ್ನು ಪ್ರಾಗೈತಿಹಾಸಿಕ ಕಾಲದ ಜನಜೀವನದ ಜೊತೆಗೆ ಸಾಂಸ್ಕೃತಿಕ ಅನನ್ಯತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಇಲ್ಲಿನ ರಾಜಪ್ರಭುತ್ವ ವ್ಯವಸ್ಥೆಯ ಪೂರ್ವ ಸನ್ನಿವೇಶವನ್ನು ಕುರಿತು ಆ ಸುಂದರ, ಎಸ್.ಆರ್. ರಾವ್, ಡಿ.ಡಿ. ಕೊಸಾಂಬಿ, ಆರ್.ಎಸ್. ಶರ್ಮ, ಕೆ.ಪಿ. ಶಿವತಾರಕ್, ಎಸ್.ಎಸ್. ಬೂಸರೆಡ್ಡಿ, ಗಿರಿರಾಜ ಹೊಸಮನಿ, ಚನ್ನಬಸವ ಹಿರೇಮಠ, ಎಸ್.ಸಿ. ಪಾಟೀಲ್, ಎ.ವಿ. ನರಸಿಂಹ ಮೂರ್ತಿ, ಖಂಡೋಬರಾವ್ ಹೆಚ್, ಕ್ಯಾಪ್ಟನ್ ಲಿಯೋನಾರ್ಡ್‌ಮನ್, ಹೈದರಾಬಾದ್ ಪುರಾತತ್ವ ಸರ್ವೇಕ್ಷಣಾ ಮತ್ತು ಭೂ-ವಿಜ್ಞಾನ ವಿಭಾಗ, ಅಲ್ಚಿನ್ ದಂಪತಿಗಳು, ದೇವರಕೊಂಡಾರೆಡ್ಡಿ, ಸೂರ್ಯನಾಥ ಕಾಮತ್, ಚಂದ್ರಶೇಖರ ಹೆಚ್ ಮುಂತಾದವರ ಬರಹಗಳನ್ನು ಬಳಸಿಕೊಳ್ಳಲಾಗಿದೆ.

ಈ ಭಾಗದಲ್ಲಿ ಬೇಟೆ ಸಂಸ್ಕೃತಿಯನ್ನು ಮೊದಲಿಗೆ, ಪಶುಪಾಲನೆ ಮತ್ತು ಕೃಷಿಯನ್ನು ನಂತರದಲ್ಲಿ ವಿವರಿಸಲಾಗಿದೆ. ಗ್ರಾಮೀಣ ಮತ್ತು ನಗರ ಸಂಸ್ಕೃತಿಯನ್ನು ಮೂರನೆಯದಾಗಿ ಅಭ್ಯಸಿಸಿದರೆ, ವಾಸದ ನೆಲೆಗಳನ್ನು ನಾಲ್ಕನೆಯದಾಗಿ ಅರಿಯುವ ಪ್ರಯತ್ನ ಮಾಡಲಾಗಿದೆ. ಈ ನಾಲ್ಕು ಅಂಶಗಳನ್ನು ಜನರ ಜೀವನ ಮತ್ತು ಅವರ ಅನನ್ಯತೆ ಗುರುತಿಸುವ ಹಿನ್ನೆಲೆಯಲ್ಲಿ ಅಭ್ಯಸಿಸಲಾಗಿದೆ.

ಪ್ರಾಗೈತಿಹಾಸಿಕ ಕಾಲದಲ್ಲಿ ರಾಜಪ್ರಭುತ್ವ ವ್ಯವಸ್ಥೆ ಅಸ್ತಿತ್ವಕ್ಕೆ ಬರುವ ವೇಳೆಗೆ ಮಾನವ ವಿವಿಧ ಹಂತಗಳನ್ನು ದಾಟಿ ಬಂದಿದ್ದನು. ಈ ಕಾಲಾವಧಿಗೆ ಸಂಬಂಧಿಸಿ ಯಾವುದೇ ಲಿಖಿತ ದಾಖಲೆಗಳು ಸಿಗುವುದಿಲ್ಲ. ಅವರ ಜೀವನದ ಭಾಗವಾಗಿ ಉಳಿದಿರುವ ಮತ್ತು ಸಂಶೋಧನೆಗಳಿಂದ ಕಂಡು ಬಂದಿರುವ ಪ್ರಾಗೈತಿಹಾಸಿಕ ನೆಲೆಗಳ ಆಧಾರದ ಮೇಲೆ ಆ ಕಾಲದ ಜನಜೀವನವನ್ನು ಅರಿಯಲು ಪ್ರಯತ್ನಿಸಲಾಗಿದೆ. ಈ ಪ್ರದೇಶದಲ್ಲಿ ಕಂಡುಬರುವ ಚಿತ್ರಕಲೆ ಮತ್ತು ಅವಶೇಷಗಳ ನೆಲೆಗಳಲ್ಲಿ ಮೊದಲಿಗೆ ಚಿತ್ರಕಲೆಯ ನೆಲೆಗಳನ್ನು ಗುರುತಿಸಿ, ನಂತರ ಅವಶೇಷಗಳ ನೆಲೆಗಳನ್ನು ಪರಿಶೀಲಿಸಲಾಗಿದೆ.

ಇಲ್ಲಿನ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ ನೆಲೆಗಳು ಮಾನವನ ಜೀವನದ ವಿವಿಧ ಸಂಗತಿಗಳನ್ನು ಕುರಿತು ತಿಳಿಸುವಂತಹುಗಳಾಗಿವೆ. ಇವನ್ನು ಪತ್ತೆ ಹಚ್ಚುವ ಕಾರ್ಯ ೧೮೪೨ರಲ್ಲಿ ಲಿಂಗಸೂಗೂರಿಗೆ ಬಂದಿದ್ದ ಪ್ರಿಮ್‌ರೋಸ್[೧೨]ನಿಂದ ಕೈಗೆತ್ತಿಕೊಳ್ಳಲಾಯಿತಾದರೂ ಅಧಿಕೃತವಾಗಿ ೧೯೩೫ರಲ್ಲಿ ಕ್ಯಾಪ್ಟನ್ ಲಿಯೋನಾರ್ಡ್‌ಮನ್ ಅವರಿಂದ ಆರಂಭವಾಯಿತು. ಅವರು ಭಿಲ್ಲಮರಾಯನ ಗುಡ್ಡವನ್ನು ಪತ್ತೆ ಹಚ್ಚಿದರು.[೧೩] ನಂತರ ಹೈದರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂ ವಿಜ್ಞಾನ ವಿಭಾಗ ೧೯೪೦ರಲ್ಲಿ ಮಸ್ಕಿ, ಕಲ್ಲೂರು, ಸಿರವಾರ ಮತ್ತು ಅತ್ತನೂರುಗಳನ್ನು ಗುರುತಿಸಿತು.[೧೪] ೧೯೫೧ರಲ್ಲಿ ಅಲ್ಚಿನ್ ದಂಪತಿಗಳು ಪಿಕ್ಲಿಹಾಳ್[೧೫]ವನ್ನು ಪತ್ತೆ ಹಚ್ಚಿದರು. ಅ.ಸುಂದರ ಅವರು ಈ ಪ್ರದೇಶದ ಮಾನ್ವಿ ಮತ್ತು ಬೈಲ್‌ಮರ್ಚೇಡ ನೆಲೆಗಳನ್ನು ೧೯೭೪ರಲ್ಲಿ ಪತ್ತೆ ಹಚ್ಚಿದರು.[೧೬] ದೇವರಕೊಡಾರೆಡ್ಡಿ ಅವರು ೨೦೦೬ರಲ್ಲಿ ಗಬ್ಬೂರನ್ನು ಗುರುತಿಸಿದರು.[೧೭] ಮಹೇಶ ಅವರು ೨೦೦೬ರಲ್ಲಿ ಮಲದಕಲ್ಲನ್ನು ಪತ್ತೆ ಹಚ್ಚಿದ್ದಾರೆ.[೧೮] ೨೦೧೧ರಲ್ಲಿ ಆಲ್ಕೋಡವನ್ನು ಹೊಸ ಪುರಾತತ್ವ ನೆಲೆಯೆಂದು ಗುರುತಿಸಲಾಗಿದೆ.[೧೯] ಚಂದ್ರಶೇಖರ್ ಹೆಚ್. ಅವರು ಹಿರೇಬೂದೂರು ಕೂಡಾ ಚಿತ್ರಕಲೆ ನೆಲೆಯೆಂದು ಉಲ್ಲೇಖಿಸುತ್ತಾರೆ.[೨೦] ಈ ನೆಲೆಗಳಲ್ಲಿ ಗೂಳಿ, ಕುದುರೆ, ಜಿಂಕೆ, ಆನೆ. ಎತ್ತು, ಎಮ್ಮೆ, ಕೋಣ, ಹುಲಿ, ಮನುಷ್ಯ ಮುಂತಾದ ಚಿತ್ರಗಳು ಕಂಡುಬರುತ್ತವೆ.

ಇಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆಯ ಜೊತೆಗೆ ಮಾನವನು ಬಾಳಿ ಬದುಕಿದ, ಜೀವನದ ಭಾಗವಾಗಿರುವ ಮತ್ತು ಅವನು ಬಳಸಿದ ವಸ್ತುಗಳು ಅವಶೇಷಗಳಾಗಿ ದೊರಕುತ್ತವೆ. ಅಂತಹ ಅವಶೇಷಗಳು ಮಾನವನ ಆಗುಹೋಗುಗಳನ್ನು ತಿಳಿಸುವಲ್ಲಿ ಸಹಕಾರಿಯಾಗಿವೆ. ಉತ್ತರ ಕರ್ನಾಟಕದಲ್ಲಿ ರಾಯಚೂರು ಜಿಲ್ಲೆ ಅತಿ ಹೆಚ್ಚು ಪುರಾತತ್ವ ನೆಲೆಗಳನ್ನು ಹೊಂದಿರುವ ಪ್ರದೇಶವೆಂದು ಗುರುತಿಸಿಕೊಂಡಿದೆ. ಪುರಾತತ್ವ ನೆಲೆಗಳನ್ನು ಪತ್ತೆ ಹಚ್ಚಿರುವ ಸಂಶೋಧಕರಲ್ಲಿ ಕರ್ನಲ್ ಮೆಡೋಸ್ ಟೇಲರ್(೧೮೫೩) ಮೊದಲಿಗನಾಗಿದ್ದಾನೆ. ರೆವರೆಂಡ್ ಜಿ. ಕೇಯಿಸ್(೧೮೭೦-೧೮೮೦), ರಾಬರ್ಟ್ ಬ್ರೂಸ್ ಫೂಟ್(೧೯೧೬), ಕ್ಯಾಪ್ಟನ್ ಲಿಯೋನಾರ್ಡ್ ಮನ್(೧೯೩೪) ಹಾಗೂ ಹೈದರಾಬಾದ ಸಂಸ್ಥಾನ ಪುರಾತತ್ವ ಸರ್ವೇಕ್ಷಣ ಭೂ ವಿಜ್ಞಾನ ವಿಭಾಗ(೧೯೪೦),[೨೧] ಕ್ಯಾಮನ್(೧೯೩೬-೩೭),[೨೨] ಭಾರತದ ಕೇಂದ್ರ ಪುರಾತತ್ವ ಸರ್ವೇಕ್ಷಣ ವಿಭಾಗ(೧೯೪೭-೧೯೫೪),[೨೩] ಯಾಜದಾನಿ(೧೯೩೫-೩೬)[೨೪] ಹಾಗೂ ಅಲ್ಚಿನ್ ದಂಪತಿಗಳು[೨೫] ಅಲ್ಲದೆ ಇನ್ನೂ ಮುಂತಾದವರು ಈ ನಿಟ್ಟಿನಲ್ಲಿ ಸಂಶೋಧನೆ ಮಾಡಿದ್ದಾರೆ. ಈ ಎಲ್ಲ ಸಂಶೋಧಕರು, ಮತ್ತಿತರರು ಪತ್ತೆ ಹಚ್ಚಿರುವ ಪುರಾತತ್ವ ನೆಲೆಗಳು ಒಂದು ನೂರಾ ಇಪ್ಪತ್ತಕ್ಕೂ(೧೨೦) ಹೆಚ್ಚಿದ್ದು, ಇವು ಜಿಲ್ಲೆಯಾದ್ಯಂತ ವ್ಯಾಪಿಸಿಕೊಂಡಿವೆ.

ಮಾನ್ವಿ ತಾಲೂಕಿನ ಕರಡಿಗುಡ್ಡ ಹಳೆಯ ಶಿಲಾಯುಗ ಸಂಸ್ಕೃತಿಯಲ್ಲಿ ಆದಿಶಿಲಾಯುಗದ ಪುರಾತತ್ವ ನೆಲೆಯಾಗಿದೆ.[೨೬] ಇಲ್ಲಿ ಕಂಡುಬರುವ ಏಕೈಕ ಆದಿಮ ಹಳೆಯ ಶಿಲಾಯುಗದ ನೆಲೆಯಾಗಿದೆ.

ಇದರಿಂದಾಗಿ ಈ ಪ್ರದೇಶದ ಚರಿತ್ರೆಯನ್ನು ಮತ್ತಷ್ಟು ಹಿಂದಕ್ಕೊಯ್ಯಬಹುದಾಗಿದೆ. ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಗೆ ಸೇರಿದ ಇಪ್ಪತ್ತೂರು(೨೩) ಪುರಾತತ್ವ ನೆಲೆಗಳಿವೆ. ದೇವದುರ್ಗ ತಾಲೂಕಿನಲ್ಲಿ ಅಂಚೆಸೂಗೂರು, ಅಂಜಳ, ಇಟಗಿ, ಕರ್ಕಿಹಳ್ಳಿ, ಕೊಂಚೆಪಾಡಿ, ಕೋಣಚಪ್ಪಳಿ, ಗೂಗಲ್ಲು, ಗೋಪಾಳಪುರ, ಚಿಕ್ಕರಾಯಕುಂಪಿ, ದೊಂಡಂಬಳಿ, ಪರತಪುರ, ಬೆಣಕಲ್ಲು, ಯಾಟಗಲ್ಲು, ವಗಡಂಬಳಿ, ಹಿರೇರಾಯಕುಂಪಿ ಮುಂತಾದ ಹದಿನಾರು(೧೬) ನೆಲೆಗಳು ಕಂಡುಬರುತ್ತವೆ.[೨೭] ಲಿಂಗಸೂಗೂರು, ತಾಲೂಕಿನ ರೌಡಲಬಂಡಿ(ದೇವರಗಡ್ಡೆ), ಚಿತ್ತಾಪುರ, ಪಲಗಲದಿನ್ನಿ, ಜಲದುರ್ಗ ಮತ್ತು ಐದುಭಾವಿ ಗ್ರಾಮಗಳು.[೨೮] ರಾಯಚೂರು ತಾಲೂಕಿನ ದೇವಸೂಗೂರು ಮತ್ತು ಯದ್ಲಾಪುರ ಗ್ರಾಮಗಳು ಈ ಕಾಲಕ್ಕೆ ಸೇರಿದವಾಗಿವೆ.[೨೯]

ಅಂತ್ಯಹಳೆಯ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ನೆಲೆಗಳು ಇಲ್ಲಿ ಕಂಡುಬರುವುದಿಲ್ಲ. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ಏಕೈಕ ನೆಲೆ ಮಾನ್ವಿ ತಾಲೂಕಿನ ಕಲ್ಲೂರು ಆಗಿದೆ.[೩೦] ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳು ಹನ್ನೆರಡು(೧೨) ಇವೆ. ಮಾನ್ವಿ ತಾಲೂಕಿನಲ್ಲಿ ಆನಂದಗಲ್ಲು, ಕಲ್ಲೂರು, ಕವಿತಾಳ, ಗೋರ್ಕಲ್ಲು, ಬೆಟ್ಟದೂರು ಮತ್ತು ಸಿರವಾರಗಳು ಸೇರಿವೆ.[೩೧] ಲಿಂಗಸೂಗೂರು ತಾಲೂಕಿಗೆ ಸೇರಿದ ನೆಲೆಗಳೆಂದರೆ, ಪಿಕ್ಲಿಹಾಳ, ಭಿಲ್ಲಮರಾಯನಗುಡ್ಡ ಮತ್ತು ಹೊನ್ನಳ್ಳಿಗಳಾಗಿವೆ.[೩೨] ಸಿಂಧನೂರು ತಾಲೂಕಿಗೆ ಸೇರಿದ ಕುನ್ನಟಗಿ, ರೌಡಕುಂದ ಮತ್ತು ಬಾದರ್ಲಿಗಳು ಈ ನೆಲೆಗಳಾಗಿವೆ.[೩೩] ದೇವದುರ್ಗ ತಾಲೂಕಿಗೆ ಸೇರಿದ ಆಲ್ಕೋಡ[೩೪] ಹಾಗೂ ರಾಯಚೂರು ತಾಲೂಕಿನಲ್ಲಿ ಈ ಸಂಸ್ಕೃತಿಗೆ ಸೇರಿದ ಪುರಾತತ್ವ ನೆಲೆಗಳು ಕಂಡುಬರುವುದಿಲ್ಲ. ತಾಮ್ರ ಶಿಲಾಯುಗ ಸಂಸ್ಕೃತಿಗೆ ಸೇರಿದ ಇಪ್ಪತ್ತೂರು(೨೩) ನೆಲೆಗಳು ದೇವದುರ್ಗ ತಾಲೂಕಿನ ವಂದಲಿ,[೩೫] ಮಾನ್ವಿ ತಾಲೂಕಿನ ಆನಂದಗಲ್ಲು, ಕರಡಿಗುಡ್ಡ, ಕಲ್ಲೂರು, ಕೋಟೆಕಲ್ಲು, ಗೋರ್ಕಲ್ಲು, ನವಲಕಲ್ಲು, ಪಟಕನದೊಡ್ಡಿ, ಬೈಲ್‌ಮರ್ಚೆಡ್, ವಟಗಲ್ಲು, ರಾಜಲಬಂಡಾ, ಹಾಲಾಪುರಗಳಲ್ಲಿ[೩೬] ಮತ್ತು ರಾಯಚೂರು ತಾಲೂಕಿನ ಆಕನೂರುನಲ್ಲಿ ಒಂದು ನೆಲೆಯಿದೆ.[೩೭] ಲಿಂಗಸೂಗೂರು ತಾಲೂಕಿನ ಪಿಕ್ಲಿಹಾಳ, ಮಸ್ಕಿ ಮತ್ತು ಸಾನಬಾಳ,[೩೮] ಆನೆಹೊಸೂರು, ಐದನಾಳ, ಕರಡಿಕಲ್ಲು, ಮಾಚನೂರು ಹಾಗೂ ಗೌಡೂರುಗಳು[೩೯] ಹಾಗೂ ಸಿಂಧನೂರು ತಾಲೂಕಿನ ಗೊಬ್ಬರಕಲ್ಲು[೪೦] ಪ್ರದೇಶಗಳು ಅದಕ್ಕೆ ಸೇರಿವೆ. ಕಬ್ಬಿಣ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ದೇವದುರ್ಗ ತಾಲೂಕಿನ ಮದರಕಲ್ಲು, ಮಾನ್ವಿ ತಾಲೂಕಿನ ಕರಡಿಗುಡ್ಡ, ಗೋರ್ಕಲ್ಲು, ಜೂಕೂರು, ತೊಗಲಗಲ್ಲು, ದದ್ದಲ, ನವಲಕಲ್ಲು, ಮಲ್ಲಟ, ವಲ್ಕಂದಿನ್ನಿ, ವಟಗಲ್ಲು, ಸಾದಾಪುರ, ಕಲ್ಲೂರು, ಕೋಟೆಕಲ್ಲು, ಕವಿತಾಳ, ಸಿರವಾರ, ಅರೋಲಿ, ರಾಜಲಬಂಡಾ ಮತ್ತು ಅಲಸಂದಿಗುಡ್ಡ (ಸಿರವಾರ), ಲಿಂಗಸೂಗೂರು ತಾಲೂಕಿನ ಪಿಕ್ಲಿಹಾಳ, ಲಿಂಗಸೂಗೂರು, ಮುದಬಾಳ, ಭಿಲ್ಲಮರಾಯನಗುಡ್ಡ, ಹೊನ್ನಳ್ಳಿ, ವೆಂಕಟಾಪುರ, ರಾಯಚೂರು ತಾಲೂಕಿನ ಕಟಕನೂರು, ಕರೆಕಲ್ಲು, ಗುರ್ಜಾಪುರ, ಸಿಂಧನೂರು ತಾಲೂಕಿನ ಹುಲ್ಲೂರು, ರೌಡಕುಂದ, ಕುರಕುಂದಿ, ಸಾಲಗುಂದಿ ಗ್ರಾಮಗಳು ಸೇರಿವೆ. ಇತಿಹಾಸ ಆರಂಭ ಕಾಲದ ಸಂಸ್ಕೃತಿಗೆ ದೇವದುರ್ಗ ತಾಲೂಕಿನ ಬುದ್ದಿನ್ನಿ, ರಾಯಚೂರು ತಾಲೂಕಿನ ತಲಮಾರಿ, ಲಿಂಗಸೂಗೂರು ತಾಲೂಕಿನ ಗೌಡೂರು, ಚಿಕ್ಕಹೆಸರೂರು, ಪಿಕ್ಲಿಹಾಳು, ಮಸ್ಕಿ, ಯರಗುಂಟ, ಸಾನಬಾಳ, ಹಿರೆ–ಜಾವೂರು, ಮಾನ್ವಿ ತಾಲೂಕಿನ ಕಲ್ಲೂರು, ಕವಿತಾಳ, ನವಲಕಲ್ಲು, ಮಾನ್ವಿ, ಮಾಚನೂರು, ಮುಷ್ಟೂರು, ವಟಗಲ್ಲು, ಸಿರವಾರ, ಸಿಂಧನೂರು ತಾಲೂಕಿನ ಕುನ್ನಟಗಿ ಮತ್ತು ಬಾದರ್ಲಿ ಗ್ರಾಮಗಳು ಸೇರಿಕೊಂಡಿವೆ ಎಂದು ತಿಳಿದುಬರುತ್ತದೆ.[೪೧]

ಈ ಪ್ರದೇಶದಲ್ಲಿ ಇದುವರೆಗೆ ಪತ್ತೆ ಹಚ್ಚಿರುವ ಪುರಾತತ್ವ ನೆಲೆಗಳನ್ನು ಕುರಿತು ಕೆ.ಬಿ.ಶಿವತಾರಕ್ ಅವರು ಸಮಗ್ರವಾಗಿ ಒಂದೆಡೆ ಕಲೆ ಹಾಕಿದ್ದಾರೆ. ಈ ರೀತಿ ಸುಮಾರು ಒಂದು ನೂರಾ ಇಪ್ಪತ್ತುಕ್ಕೂ (೧೨೦)ಹೆಚ್ಚು ಪುರಾತತ್ವ ನೆಲೆಗಳಲ್ಲಿ ಕಂಡುಬರುವ ಅವಶೇಷಗಳು ಮಾನವನ ಜನ ಜೀವನವನ್ನು ಕುರಿತು ಮಹತ್ವದ ಸಂಗತಿಗಳನ್ನು ಹೊರಹಾಕಿವೆ.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ರಾಜಪ್ರಭುತ್ವ ವ್ಯವಸ್ಥೆ ಕ್ರಿಪೂ. ೩ನೆಯ ಶತಮಾನದಲ್ಲಿ ಮೌರ್ಯ ಅರಸ ಅಶೋಕನಿಂದ ಆರಂಭವಾಗುತ್ತದೆ. ಕ್ರಿಪೂ. ೩ನೆಯ ಶತಮಾನಕ್ಕಿಂತ ಹಿಂದಿನ ಸಾವಿರಾರು ವರ್ಷಗಳ ಚರಿತ್ರೆಯ ಸ್ವರೂಪವೇನು, ಜನಜೀವನ ಯಾವ ವ್ಯವಸ್ಥೆಯಲ್ಲಿ ನಡೆಯುತ್ತಿತ್ತು, ಎಂಬ ಗಂಭೀರ ಪ್ರಶ್ನೆ ಏಳುತ್ತದೆ. ಈ ಹಿನ್ನೆಲೆಯಲ್ಲಿ ಬೇಟೆ, ಸಂಸ್ಕೃತಿ, ಪಶುಪಾಲನೆ ಮತ್ತು ಕೃಷಿ, ಗ್ರಾಮೀಣ ಮತ್ತು ನಗರ ಸಂಸ್ಕೃತಿ ಮತ್ತು ವಾಸದ ನೆಲೆಗಳು ಕುರಿತು ಇಲ್ಲಿ ವಿವರಿಸಲಾಗಿದೆ.

### ೨.೪.೧. ಬೇಟೆ ಸಂಸ್ಕೃತಿ

ಅಲೆಮಾರಿಯಾಗಿದ್ದ ಜನರು ಇಲ್ಲಿ ಜೀವನೋಪಾಯಕ್ಕೆ ಬೇಟೆಯಾಡುವುದನ್ನು ಕಲಿತಿದ್ದರು. ಮಾಂಸಾಹಾರವನ್ನೇ ಹೆಚ್ಚಾಗಿ ಸೇವಿಸುವುದರ ಜೊತೆಗೆ ಕಾಡಿನಲ್ಲಿ ದೊರೆಯುವ ಗೆಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ಸೇವಿಸುತ್ತಿದ್ದರು. ಬೇಟೆ ಸಂಸ್ಕೃತಿ ಅಧಿಕವಾಗಿದ್ದಂತೆ ಕಂಡರೂ ಬಲವಾದ ಲಿಖಿತ ಆಕರಗಳಿಲ್ಲ. ಈ ಪ್ರದೇಶದಲ್ಲಿ ಅಲ್ಲಲ್ಲಿ ಕೆತ್ತಲ್ಪಟ್ಟಿರುವ ಪ್ರಾಗೈತಿಹಾಸಿಕ ಚಿತ್ರಕಲೆಯಿಂದಾಗಿ ಬೇಟೆ ಸಂಸ್ಕೃತಿಯನ್ನು ನಿರೂಪಿಸಬಹುದಾಗಿದೆ. ಅತ್ತನೂರು, ಕಲ್ಲೂರು, ಸಿರವಾರ, ಪಿಕ್ಲಿಹಾಳ, ಮಸ್ಕಿ, ಮಲದಕಲ್ಲು, ಗಬ್ಬೂರು, ಆಲ್ಕೋಡ ಮತ್ತು ಶಾವಂತಗಲ್ಲುಗಳಲ್ಲಿ ಕಂಡುಬರುವ ಜಿಂಕೆಯ ಚಿತ್ರಕಲೆ ಬೇಟೆಯನ್ನು ಸೂಚಿಸುತ್ತದೆ. ಹಾಗೆಯೇ ಮಸ್ಕಿ, ಪಿಕ್ಲಿಹಾಳ, ಕರಡಿಕಲ್ಲು, ಗಬ್ಬೂರು ಮುಂತಾದ ಕಡೆಗಳಲ್ಲಿ ಕಂಡುಬರುವ ಕಲ್ಲಿನ ಕೊಡಲಿ ಕಲ್ಲಿನ ಆಯುಧಗಳು, ಕಲ್ಲಿನ ಇತರೆ ವಸ್ತುಗಳಾದ ಕಲ್ಲಿನ ಚಾಕು, ಬೈರಿಗೆ, ಕುರುಪಿ ಮುಂತಾದವನ್ನು ಬಳಸಿರುವುದನ್ನು ಕಾಣಬಹುದಾಗಿದೆ. ಇದು ಆ ಕಾಲದ ಜನಜೀವನ ಆಹಾರಕ್ಕಾಗಿ ಅಲೆದಾಡುವುದಾಗಿತ್ತು. ಕಾಡು ಪ್ರಾಣಿಗಳನ್ನು ಬೇಟೆಯಾಡಿ ಹೊಟ್ಟೆ ತುಂಬಿಸಿಕೊಳ್ಳಬೇಕಿತ್ತು. ಅದಕ್ಕಾಗಿ ತಮಗೆ ತೋರಿದ ಮಾದರಿಯಲ್ಲಿ ಕಲ್ಲಿನಲ್ಲಿ ಕೊಡಲಿ, ಆಯುಧ, ಚಾಕು, ಚೂರಿಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಅಸ್ತಿಪಂಜರದ ಮೂಳೆಗಳನ್ನು ಸಹ ಆಯುಧಗಳನ್ನಾಗಿ ಬಳಸಲಾಗುತ್ತಿತ್ತು. ಈ ಅಂಶಗಳ ಹಿನ್ನೆಲೆಯಲ್ಲಿ ಇಲ್ಲಿನ ಜನರು ಬೇಟೆ ಸಂಸ್ಕೃತಿಯನ್ನು ರೂಢಿಸಿ ಕೊಂಡಿದ್ದರು. ಆಗ ಇವರ ಜೀವನಕ್ಕೆ ಆಹಾರವಾಗಿದ್ದ ಕಾಡು ಹಂದಿ ಮತ್ತು ಜಿಂಕೆಗಳ ಸಂಖ್ಯೆ ಅಧಿಕವಾಗಿದ್ದಂತೆ ತೋರುತ್ತದೆ. ಬಹುತೇಕ ಪ್ರಾಗೈತಿಹಾಸಿಕ ಚಿತ್ರಕಲೆ ನೆಲೆಗಳಲ್ಲಿ ಹೆಚ್ಚಾಗಿ ಜಿಂಕೆಯ ಚಿತ್ರವೇ ಕಂಡುಬರುತ್ತದೆ. ಇದಲ್ಲದೆ ಪುರಾತತ್ವ ನೆಲೆಗಳಲ್ಲಿ ಕಂಡುಬರುವ ಕಲ್ಲಿನ ಕೊಡಲಿ, ಕಲ್ಲಿನ ಆಯುಧ, ಕಲ್ಲಿನ ಚಾಕು, ಚೂರಿ ಮುಂತಾದ ಅವಶೇಷಗಳೂ ಇದಕ್ಕೆ ಸಾಕ್ಷಿಯಾಗಿವೆ. ಅಲ್ಲದೆ ಕೆಲವು ದೊಡ್ಡ ಪ್ರಾಣಿಗಳನ್ನೂ ಸಹ ಬೇಟೆಯಾಡುತ್ತಿದ್ದರೆನಿಸುತ್ತದೆ.

### ೨.೪.೨. ಪಶುಪಾಲನೆ ಮತ್ತು ಕೃಷಿ

ಈ ಪ್ರದೇಶದಲ್ಲಿ ಪಶುಪಾಲನೆ ಜೊತೆಯಲ್ಲಿ ಕೃಷಿಯೂ ಸಹ ಆರಂಭವಾಯಿತೆನಿಸುತ್ತದೆ. ಇದಕ್ಕೆ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ ನೆಲೆಗಳಾದ ಬೈಲ್‌ಮರ್ಚೆಡ, ಕಲ್ಲೂರು, ಪಿಕ್ಲಿಹಾಳು, ಭಿಲ್ಲಮರಾಯನ ಗುಡ್ಡ, ಮಸ್ಕಿ, ಗಬ್ಬೂರು, ಶಾವಂತಗಲ್ಲು, ಆಲ್ಕೋಡ, ಸಿರವಾರ, ಮಸರಕಲ್ಲು ಮುಂತಾದ ಕಡೆಗಳಲ್ಲಿ ಕಂಡುಬರುವ ಕುರಿ, ಗೂಳಿ, ಕೋಣ, ಎಮ್ಮೆ ಮತ್ತು ಎತ್ತುಗಳ ಚಿತ್ರಗಳು

ಪಶುಪಾಲನೆ ಮತ್ತು ಕೃಷಿಯನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಇದಕ್ಕೆ ಪೂರಕವಾಗಿ ಪುರಾತತ್ವ ನೆಲೆಗಳಲ್ಲಿನ ಮಣ್ಣಿನ ವಿವಿಧ ಬಗೆಯ ಮಡಕೆಗಳು, ಮುಚ್ಚಳಗಳು, ಬಟ್ಟಲುಗಳು, ಅಲ್ಲದೆ ಕಬ್ಬಿಣದ ಆಯುಧಗಳು, ತಾಮ್ರದ ಆಯುಧಗಳು, ಕಂಚಿನ ಮೂರ್ತಿಗಳು ಮುಂತಾದವು ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆಗೂ ಇದೇ ಕಾಲದಲ್ಲಿ ದೊರೆಯುವ ವಿವಿಧ ಬಗೆಯ ಅವಶೇಷಗಳಿಗೂ ಹೆಚ್ಚು ಕಡಿಮೆ ಸಾಮ್ಯತೆ ಇರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಬೇಟೆ ಸಂಸ್ಕೃತಿಗಿಂತ ಪಶುಪಾಲನೆ ಮತ್ತು ಕೃಷಿಯ ಕಾಲಾವಧಿಯಲ್ಲಿ ಮಹತ್ವದ ಬೆಳವಣಿಗೆ ಕಂಡುಬರುತ್ತದೆ. ಕೃಷಿಯಲ್ಲಿ ಕಬ್ಬಿಣ ಬಳಸಿ ಹೆಚ್ಚುವರಿ ಉತ್ಪಾದನೆ ಮಾಡುವುದರಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆ ಉಂಟಾಯಿತೆಂದು ಹೇಳಬಹುದಾಗಿದೆ. ಈ ರೀತಿಯ ಬದಲಾವಣೆಗೆ ಅಂದು ಯಾವುದೇ ಪ್ರಭುತ್ವ ಅಸ್ತಿತ್ವದಲ್ಲಿರಲಿಲ್ಲ. ಈ ಸಂದರ್ಭದಲ್ಲಿ ಕುಂಬಾರಿಕೆ, ಕಮ್ಮಾರಿಕೆ, ಬಡಗಿತನ, ನೇಕಾರಿಕೆ, ಅಕ್ಕಸಾಲಿಗ, ಶಿಲ್ಪಿ ಮುಂತಾದ ಕುಶಲಕರ್ಮಿ ವರ್ಗ ಸೃಷ್ಟಿಯಾಯಿತು. ಇಲ್ಲಿನ ಕುಂಬಾರಿಕೆಯನ್ನು ಈ ಪ್ರದೇಶದಲ್ಲಿ ದೊರೆತ ಮಡಿಕೆಗಳು, ಮುಚ್ಚಳಗಳು, ಬಟ್ಟಲುಗಳು, ಪಾತ್ರೆಗಳು, ಕುಡಿಕೆಗಳು, ಜೇಡಿಮಣ್ಣಿನ ವಸ್ತುಗಳು ಪ್ರತಿನಿಧಿಸುತ್ತವೆ. ಜನ ತಮ್ಮ ಜೀವನ ಅಗತ್ಯ ವಸ್ತುಗಳನ್ನು ಸಿದ್ಧಪಡಿಸುವ ವೃತ್ತಿ ಅನುಸರಿಸಿ ಜೀವನದ ಭಾಗವಾಗಿದ್ದ ಎಲ್ಲರನ್ನು ಬೆಸೆಯುವಂತೆ ಮಾಡಿತ್ತು ಎನ್ನಬಹುದು.

ತಾಮ್ರದ ಆಯುಧಗಳು, ಬಾಚಿ, ಉಳಿ, ತಾಮ್ರದ ಖಡ್ಗ, ಕಬ್ಬಿಣದ ಆಯುಧ ಮುಂತಾದವು ಕಂಬಾರಿಕೆಯನ್ನು ಪ್ರತಿನಿಧಿಸುತ್ತವೆ. ಕಲ್ಲೂರು, ಕವಿತಾಳ ಮತ್ತು ಮಸ್ಕಿಗಳಲ್ಲಿ ಕುಲುಮೆಗಳಿದ್ದವು. ಇದು ತಾಮ್ರದ ಗಣಿಗಾರಿಕೆಯನ್ನು ಸೂಚಿಸುತ್ತದೆ. ಮಾನ್ವಿ ತಾಲೂಕಿನ ಕಲ್ಲೂರು ಮತ್ತು ಮಾಚನೂರು, ಲಿಂಗಸೂಗೂರು ತಾಲೂಕಿನ ಚಿಕ್ಕಹೆಸರೂರು, ಹಿರೇಹೆಸರೂರು, ತಿಮ್ಮಾಪುರ, ಗೌಡೂರು ಮತ್ತು ಮಾಚನೂರು ಹಾಗೂ ದೇವದುರ್ಗ ತಾಲೂಕಿನ ಮುಂಡರಗಿ ಬಳಿ ತಾಮ್ರದ ನಿಕ್ಷೇಪಗಳಿರುವುದಾಗಿ ಬಿ.ಪಿ. ರಾಧಾಕೃಷ್ಣ ಅವರು ತಿಳಿಸುತ್ತಾರೆ(ರಾಧಾಕೃಷ್ಣ ೨೦೦೩: ೨೨೯-೨೩೭). ಕಲ್ಲೂರಿನಲ್ಲಿ ಕಂಡುಬಂದ ತಾಮ್ರದ ಖಡ್ಗಗಳ ಸಂಕಲನ ಮತ್ತು ಗಂಗಾಕೊಳ್ಳದಲ್ಲಿ ಕಂಡುಬಂದ ತಾಮ್ರದ ಉಪಕರಣಗಳ ನಡುವೆ ಎದ್ದು ಕಾಣುವ ಹೋಲಿಕೆ, ಉತ್ತರ ಭಾರತ ಹಾಗೂ ಡೆಕ್ಕನ್ ಪ್ರದೇಶಗಳ ನಡುವಿನ ಸಂಬಂಧವನ್ನು ಕ್ರಿಪೂ. ೨೦೦೦ ವರ್ಷಗಳ ಹಿಂದಿನ ಸ್ಥಿತಿಯಲ್ಲಿ ಅರಿಯಲು ಸಹಕಾರಿಯಾಗಿದೆಯೆಂದು ತಿಳಿದುಬರುತ್ತದೆ(ನುಗಡೋಣಿ ೨೦೦೩: ೩). ಈ ಸಂಗತಿಗಳು ತಾಮ್ರದ ಬಳಕೆ ಮತ್ತು ತಾಮ್ರವನ್ನು ಕರಗಿಸುವ ಕುಲುಮೆ ಹೊಂದಿದ್ದ ಸೂಚನೆಯಾಗಿವೆ.

ಮಸ್ಕಿ, ಪಿಕ್ಲಿಹಾಳ, ಆನೆಹೊಸೂರು, ಐದನಾಳ, ಕರಡಿಕಲ್ಲು ಮುಂತಾದ ಸ್ಥಳಗಳಲ್ಲಿ ದೊರೆತ ಮಣಿಸರಗಳು, ಕರ್ಣಾಭರಣಗಳು, ಬೆರಳುಂಗುರಗಳು, ಕೈ ಬಳೆಗಳು, ನೆಕ್‌ಲೆಸ್‌ಗಳು, ಶಂಖದ ಸರಗಳು, ಬಂಗಾರದ ಆಭರಣಗಳು, ಮಣಿಗಳು, ಬಳೆಗಳು, ಉಂಗುರ ಮುಂತಾದವು ಚಿನ್ನದ ಗಣಿಗಾರಿಕೆ ಮತ್ತು ಅಕ್ಕಸಾಲಿಗನನ್ನು ಪ್ರತಿನಿಧಿಸುತ್ತವೆ. ಈ ಪ್ರದೇಶದಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿತ್ತು ಎಂದು ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ರಾಯಚೂರು ಜಿಲ್ಲೆಯ ಲಿಂಗಸೂಗೂರು, ಮಾನ್ವಿ ಮತ್ತು ದೇವದುರ್ಗ ತಾಲೂಕುಗಳಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿದೆ. ಈ ಪ್ರದೇಶಗಳ ವ್ಯಾಪ್ತಿಯಲ್ಲಿ "ಕ್ರಿ.ಶ. ೧೮೭೪ರಲ್ಲಿ ಭೂ-ಸಮೀಕ್ಷಾ ಅಧಿಕಾರಿಯಾದ ರಾಬರ್ಟ್ ಬ್ರೂಸ್ ಫೂಟ್ ಮತ್ತು ಕ್ಯಾಪ್ಟನ್ ಲಿಯೋನಾರ್ಡ್ ಮನ್ ಅವರು ಹಟ್ಟಿ ಪ್ರದೇಶದಲ್ಲಿ ನಡೆಸಿದ ಸಮೀಕ್ಷೆ ಪ್ರಕಾರ ಸುಮಾರು ೨೦೦-೩೦೦ಕ್ಕಿಂತ ಹೆಚ್ಚಿನ ಪುರಾತನ ಚಿನ್ನದ ಗಣಿಗಳಿವೆ ಎಂಬುದಾಗಿ ತಿಳಿದುಬರುತ್ತದೆ(ವಿಜಯಲಕ್ಷ್ಮಿ ೨೦೦೬: ೧೫-೧೬). ಮುಂದುವರೆದು ಎಫ್.ಆರ್. ಅಲ್ಚಿನ್ ದಂಪತಿಗಳು ಕೂಡ ರಾಜಪ್ರಭುತ್ವ

ವ್ಯವಸ್ಥೆ ಅಸ್ತಿತ್ವಕ್ಕೆ ಬರುವ ಪೂರ್ವದಲ್ಲಿ ಕ್ರಿಪೂ. ೮ನೆಯ ಶತಮಾನದ ವೇಳೆಗೆ ಹಟ್ಟಿಯಲ್ಲಿ ಚಿನ್ನದ ಗಣಿಗಾರಿಕೆ ನಡೆದಿತ್ತೆಂಬುದಾಗಿ ಗುರುತಿಸುತ್ತಾರೆ(ತೆಲಗಾವಿ ೨೦೦೪: ೨೯). ಸಿಂಧೂ ನಾಗರಿಕತೆಯ ಸಂಸ್ಕೃತಿ ಕಾಲದ ಹರಪ್ಪಾ ನಗರಗಳಿಗೆ ಹಟ್ಟಿ ಚಿನ್ನದ ಗಣಿಯಿಂದ ಚಿನ್ನವನ್ನು ರಫ್ತು ಮಾಡಲಾಗುತ್ತಿತ್ತೆಂದು ಎಸ್.ಆರ್. ರಾವ್ ಅವರು ಗಮನ ಸೆಳೆಯುತ್ತಾರೆ (ಗುರುರಾಜಾಚಾರ್ ೧೯೯೪: ೧೦೦-೧೧೫). ಈ ಅಭಿಪ್ರಾಯಗಳು ಈ ಪ್ರದೇಶದಲ್ಲಿ ಗಣಿಗಾರಿಕೆ ನಡೆದಿರುವುದನ್ನು ಖಚಿತಪಡಿಸುತ್ತವೆ. ಜೊತೆಗೆ ಕುಶಲಕರ್ಮಿಗಳಾದ ಅಕ್ಕಸಾಲಿಗರು ಸಿದ್ಧಪಡಿಸಿದ ಆಭರಣಗಳು ಇದಕ್ಕೆ ಬಲವಾದ ಸಾಕ್ಷಿ ಒದಗಿಸುತ್ತವೆ. ಇದರಿಂದ ವ್ಯಾಪಾರ ಸಂಬಂಧ ಹೆಚ್ಚಿ ಜನರ ಆಕರ್ಷಣ ಕೇಂದ್ರವಾಗಿತ್ತು ಎನ್ನಬಹುದು.

ಆನೆಹೊಸೂರು, ಐದನಾಳ, ಕರಡಿಕಲ್ಲುಗಳಲ್ಲಿ ಕಂಚಿನ ಮೂರ್ತಿಯ ಅವಶೇಷಗಳು ಕಂಡು ಬರುತ್ತವೆ. ಇದು ಮೂರ್ತಿ ರಚಿಸುವ, ಶಿಲ್ಪ ಕೆತ್ತುವ ಕಾರ್ಯವನ್ನು ಪ್ರತಿನಿಧಿಸುತ್ತದೆ. ಮೂರ್ತಿ ಪೂಜೆ ಅಂದು ಬೆಳವಣಿಗೆ ಹೊಂದಿದ್ದನ್ನು ಸೂಚಿಸುತ್ತದೆ. ದೇವತೆ ಆರಾಧನೆ ಮೂಲಕ ಧಾರ್ಮಿಕ ಆಚರಣೆ ನಡೆಸಿ ಜನ ಸಂತೃಪ್ತರಾಗುತ್ತಿದ್ದರು. ಆರಂಭದಲ್ಲಿ ಮೂರ್ತಿ ಪೂಜೆ ಇರಲಿಲ್ಲ. ಆಗ ಸಿಂಧೂ ನಾಗರಿಕತೆ ಯಲ್ಲಿ ಕಂಡುಬರುವಂತೆ ಶಕ್ತಿ, ಶಿವ, ವೃಷಭ, ನಾಗ, ಅಶ್ವತ್ಥ, ಬೇವು ಇತ್ಯಾದಿ ದೇವತೆಗಳನ್ನೂ ಪ್ರಾಣಿ, ಪಕ್ಷಿ, ಗಿಡಮರಗಳನ್ನೂ ಪೂಜಿಸುತ್ತಿದ್ದರು. ಸಿಂಧೂ ಜನರು ಮಾತೃದೇವತಾರಾಧಕರಾಗಿದ್ದರು (ರಂಗಸ್ವಾಮಯ್ಯ ೨೦೦೩: ೩೪-೩೫). ಇದರಂತೆ ಈ ಪ್ರದೇಶದ ಜನಸಮುದಾಯಗಳು ಯಲ್ಲಮ್ಮ, ಮಾರೆಮ್ಮ, ಹುಲಿಗೆಮ್ಮ, ದುರುಗಮ್ಮ, ಸುಂಕ್ಲಮ್ಮ, ಏಳುಮಕ್ಕಳ ತಾಯಮ್ಮ, ಪಾಲಕಮ್ಮ ಮುಂತಾದ ಶಕ್ತಿದೇವತೆಗಳನ್ನು ಬೇವಿನ ಗಿಡಕ್ಕೆ ಸೀರೆ, ದಾರಗಳನ್ನು ಸುತ್ತಿ ಪೂಜಿಸುತ್ತಿದ್ದರು. ಬೆತ್ತಲೆ ಸೇವೆ ಸಂದರ್ಭದಲ್ಲಿ ಬೇವಿನಗಿಡದ ತೊಪ್ಪಲನ್ನು ದೇಹಕ್ಕೆ ಕಟ್ಟಿಕೊಂಡು ಉಟ್ಟಿಗೆ ಬಿಡುವುದನ್ನು ಗಮನಿಸಬಹುದು. ಆ ಕಾಲದಲ್ಲಿ ಯಾವುದೇ ಮೂರ್ತ ಸ್ವರೂಪದ ದೇವತೆಯ ಆರಾಧನೆ ಇರಲಿಲ್ಲ. ಬದಲಾವಣೆಯ ಕಾಲಚಕ್ರದಲ್ಲಿ ಮೂರ್ತಿಗಳನ್ನು ಪೂಜಿಸುವ ಮಟ್ಟಕ್ಕೆ ಮಾನವ ಬೆಳೆದ. ಇದು ಅಮೂರ್ತದಿಂದ ಮೂರ್ತದ ಕಡೆಗಿನ ಚಲನೆಯಾಗಿದೆ. ವಿಗ್ರಹಾರಾಧನೆ ಆರ್ಥಿಕ ಬೆಳವಣಿಗೆಯನ್ನು ಸೂಚಿಸುತ್ತದೆ. ಈ ಕಾಲಾವಧಿಯಲ್ಲಿ ಸಂಪ್ರದಾಯ ಹಂತ ಹಂತವಾಗಿ ಹುಟ್ಟಿಕೊಂಡಿರುವುದನ್ನು ಗಮನಿಸಬಹುದಾಗಿದೆ. ನೇಕಾರಿಕೆ ಈ ಪ್ರದೇಶದ ಕೃಷಿಯನ್ನು ಆಧರಿಸಿತ್ತೆಂದು ನಿರ್ಧರಿಸಬಹುದಾಗಿದೆ. ಭತ್ತ, ಹುರುಳಿ, ನವಣೆ, ಹತ್ತಿ ಮುಂತಾದ ಆಹಾರ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಇದರಿಂದ ಮಾನವನಿಗೆ ಅಗತ್ಯವಾಗಿದ್ದ ಬಟ್ಟೆಯನ್ನು ಸಿದ್ಧಪಡಿಸುವ ನೇಕಾರಿಕೆಯೂ ಬೆಳೆಯಿತು.

### ೨.೪.೩. ಗ್ರಾಮೀಣ ಮತ್ತು ನಗರ ಸಂಸ್ಕೃತಿ

ಪಶುಪಾಲನೆ ಮತ್ತು ಕೃಷಿಯಿಂದಾಗಿ ಅಲೆಮಾರಿಗಳು ಒಂದೆಡೆ ನೆಲೆನಿಂತರು. ಅನೇಕ ವೃತ್ತಿಗಳು ಬೆಳಕಿಗೆ ಬಂದವು. ಅನೇಕ ಸಂಪ್ರದಾಯಗಳು, ಮೂರ್ತಿ ಪೂಜೆ ರೂಢಿಗೆ ಬಂದವು. ಹಂತ ಹಂತವಾಗಿ ಕೃಷಿ ಚಟುವಟಿಕೆಗಳಿಂದ ಹೆಚ್ಚುವರಿ ಉತ್ಪಾದನೆ ಕಾಣಬಹುದಾಗಿದೆ. ಜನ ಗುಂಪುಗಳಲ್ಲಿ ವಾಸ ಮಾಡಿದ ಚಿತ್ರಕಲೆಯ ನೆಲೆಗಳನ್ನು ಮಸ್ಕಿ, ಮಲದಕಲ್ಲು, ಆಲ್ಕೋಡ, ಸಿರವಾರ ಮುಂತಾದೆಡೆಗಳಲ್ಲಿ ಗಮನಿಸಬಹುದು. ಪಿಕ್ಲಿಹಾಳದಲ್ಲಿ ಜನರು ಒಬ್ಬರ ಕೈಯನ್ನು ಒಬ್ಬರು ಹಿಡಿದು ದುಂಡಾಗಿ ನಿಂತು ಕುಣಿಯುತ್ತಿರುವ ಚಿತ್ರ ಕಂಡುಬರುತ್ತದೆ. ಇದು ಸುಗ್ಗಿಕಾಲವನ್ನು ಸೂಚಿಸುತ್ತದೆ. ಜನರು ಹೆಚ್ಚಿನ ಪ್ರಮಾಣದಲ್ಲಿ ಕೃಷಿಯಲ್ಲಿ ತೊಡಗಿದ್ದುದು ಇದರಿಂದ ತಿಳಿದುಬರುತ್ತದೆ.

ಈ ಪ್ರದೇಶದಲ್ಲಿ ಶವಸಂಸ್ಕಾರ ಪದ್ಧತಿ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ೧೮-೮-೨೦೧೨ರಂದು ಮಸ್ಕಿಯಲ್ಲಿ ಗೋಲಾಕಾರದ ಅಸ್ಥಿಪಂಜರವೊಂದು ಮಣ್ಣಿನ ಗಡಿಗೆಯಲ್ಲಿ ಕಂಡುಬಂದಿತು.

ಶವಸಂಸ್ಕಾರ ಪದ್ಧತಿಯನ್ನು ಗೋರಿ ಕಟ್ಟುವ, ಹೂಳುವ, ಮಡಿಕೆಗಳಲ್ಲಿ ಇಟ್ಟು ಗುಹೆಯಲ್ಲಿ ಮುಚ್ಚಿಡುವ ಹಾಗೂ ಅಸ್ಥಿಯನ್ನು ಮಡಿಕೆಯಲ್ಲಿಟ್ಟು ಹೂಳುವ ಮೂಲಕ ಅನುಸರಿಸಲಾಗುತ್ತಿತ್ತೆಂದು ತಿಳಿದುಬರುತ್ತದೆ. ಈ ದಿನದಂದು ಪತ್ತೆಯಾದ ಅಸ್ಥಿಪಂಜರ ಶವಸಂಸ್ಕಾರವನ್ನು ಸೂಚಿಸುತ್ತದೆ. ಶವ ಸಂಸ್ಕಾರದಲ್ಲಿ ಆರೇಳು ಅಡಿ ಎತ್ತರದ ಮಡಿಕೆಯ ಬಳಕೆಯಾಗಿರುವುದು ಅಂದಿನ ಜನರ ಎತ್ತರದ ಸ್ವರೂಪವನ್ನು ತಿಳಿಸುತ್ತದೆ.

ವ್ಯಾಪಾರ–ವಾಣಿಜ್ಯದ ದೃಷ್ಟಿಯಿಂದ ಈ ಪ್ರದೇಶ ಗುರುತಿಸಿಕೊಂಡಿದ್ದರೂ ವಾಣಿಜ್ಯ ಮಾರ್ಗಗಳ ಬಗ್ಗೆ ಉತ್ತರ ಪಥದಲ್ಲಿರುವಷ್ಟು ನಿಖರತೆ, ದಕ್ಷಿಣ ಪಥದಲ್ಲಿ ಇರಲಿಲ್ಲವೆಂಬುದು ತಿಳಿದುಬರುತ್ತದೆ. ಭೂ ಮಾರ್ಗದಲ್ಲಿ ವ್ಯಾಪಾರ ಸಂಪರ್ಕ ಇದ್ದಿತಾದರೂ ಅದು ನದಿದಂಡೆಗಳನ್ನು ಅನುಸರಿಸುತ್ತಿದ್ದುದೇ ಹೆಚ್ಚು. ಸೋನ್ ಕಣಿವೆಯಿಂದ ಸಹಸ್ರಾಮದವರೆಗೆ ಹಾಗೂ ಕಳಿಂಗದ ತೊಸಾಲಿ ಪ್ರಸ್ಥಭೂಮಿಯನ್ನು ಹಾದು ಕೃಷ್ಣಾ ಮುಖಜಭೂಮಿ ತಲುಪುವ ಮಾರ್ಗ ದಕ್ಷಿಣ ಭಾರತದಲ್ಲಿನ ನದಿದಂಡೆಯ ಮಾರ್ಗವಾಗಿದ್ದಿತು. ಆ ನಂತರದಲ್ಲಿ ಈ ಮಾರ್ಗ ಕೃಷ್ಣಾ ಕಣಿವೆಗುಂಟ ಸಾಗಿ ರಾಯಚೂರು ಪ್ರದೇಶವನ್ನು ತಲುಪುತ್ತದೆ. ಪಾಟಲೀಪುತ್ರದಿಂದ ದಕ್ಷಿಣ ಭಾರತಕ್ಕೆ ಸಂಚರಿಸಲು ಇತರ ನದಿದಂಡೆಯ ಮಾರ್ಗಗಳಿದ್ದವೆಂದು ತಿಳಿದುಬರುತ್ತದೆ(ತೆಲಗಾವಿ ೨೦೦೪: ೨೫). ಮಹಾರಾಷ್ಟ್ರದಿಂದ ಆಂಧ್ರಪ್ರದೇಶಕ್ಕೆ ಹೋಗುವ ಮಾರ್ಗ ಗುಲ್ಬರ್ಗಾ, ಬೆಳಗಾವಿ ಮತ್ತು ಬೀದರ್ ಮೂಲಕ ರಾಯಚೂರು ಪ್ರದೇಶವನ್ನು ಹಾದು ಹೋಗುತ್ತಿತ್ತು(ತೆಲಗಾವಿ ೨೦೦೪:೩೪). ಕರ್ನೂಲು ಜಿಲ್ಲೆಯಿಂದ ರಾಯಚೂರು ಭೂ ಪ್ರದೇಶಕ್ಕೆ ಸಂಪರ್ಕವಿತ್ತು. ಈ ಆಂತರಿಕ ಮಾರ್ಗ ಅಶೋಕನ ಶಾಸನಗಳು ದೊರೆತ ಮಸ್ಕಿ, ಪಾಲ್ಕಿಗುಂಡ, ನಿಟ್ಟೂರು, ಉದೆಗೊಳಂ, ಸಿದ್ದಾಪುರ, ಬ್ರಹ್ಮಗಿರಿ ಮತ್ತು ಜಟಂಗರಾಮೇಶ್ವರದವರೆಗೆ ಇದ್ದಿತು. ಇದಲ್ಲದೆ ಸಮುದ್ರ ವ್ಯಾಪಾರ ಸಂಬಂಧವನ್ನು ಕೂಡ ಈ ಪ್ರದೇಶ ಹೊಂದಿತ್ತು. ಸಮುದ್ರ ಮಾರ್ಗವಾಗಿ, ಭೂ ಮಾರ್ಗವಾಗಿ ವ್ಯಾಪಾರ–ವಾಣಿಜ್ಯ ಮಾರ್ಗಗಳನ್ನು ಹೊಂದಿತ್ತು. ಈ ಪ್ರದೇಶದೊಂದಿಗೆ ಸಿಂಧೂನಗರಗಳು, ರೋಮ್, ಈಜಿಪ್ತ್, ಮೆಸಪಟೊಮಿಯಾ ನಾಗರಿಕತೆಗಳು ವ್ಯಾಪಾರ ಸಂಬಂಧ ಹೊಂದಿತ್ತೆಂದು ತಿಳಿದುಬರುತ್ತದೆ(ಮೋತಿಚಂದ್ರ ೧೯೭೭: ೨೧೭). ಹಟ್ಟಿ ಮತ್ತು ಕೋಲಾರ ಚಿನ್ನದ ಗಣಿಯಿಂದ ಸಿಂಧೂ ನಾಗರಿಕತೆಯ ಹರಪ್ಪ, ಲೋಥಲ್ ನಗರಗಳಿಗೆ ಚಿನ್ನವನ್ನು ರಫ್ತು ಆಗುತ್ತಿತ್ತೆಂಬ ಎಸ್.ಆರ್.ರಾವ್ ಅವರು ಅಭಿಪ್ರಾಯವನ್ನು ಈ ಹಿಂದೆಯೇ ನೋಡಿದ್ದೇವೆ.

ಈ ಪ್ರದೇಶಕ್ಕೆ ಬಹುತೇಕವಾಗಿ ವಾಣಿಜ್ಯ ಮಾರ್ಗಗಳು ಮಹಾರಾಷ್ಟ್ರದ ಮೂಲಕವೇ ಪ್ರವೇಶ ಮಾಡಿರುವುದು ಕಂಡುಬರುತ್ತದೆ. ನವಶಿಲಾಯುಗ–ತಾಮ್ರ ಯುಗದ ಸಂದರ್ಭದಲ್ಲಿ ಮಹಾರಾಷ್ಟ್ರದಲ್ಲಿ ಕಂಡುಬರುವ ಸಾವಳ್ದ, ಜೋರ್ವೆ ಸಂಸ್ಕೃತಿ ಈ ಪ್ರದೇಶದಲ್ಲಿ ಕಾಣುತ್ತದೆ. ಮಸ್ಕಿ ತನ್ನದೇ ಆದ ಸಂಸ್ಕೃತಿಯನ್ನು ಹೊಂದಿ, ಬೂದುಬಣ್ಣದ ಮೃತ್ ಪಾತ್ರೆಗಳನ್ನು ತಯಾರಿಸುತ್ತಿದ್ದ ಬಗ್ಗೆ ಮಸ್ಕಿ, ಪಿಕ್ಲಿಹಾಳಗಳಲ್ಲಿ ನಡೆದ ಉತ್ಖನನದಿಂದ ತಿಳಿದುಬರುತ್ತದೆ(ಸುಂದರ ೧೯೯೪: ೫೯). ಈ ಸಂಸ್ಕೃತಿ ಸಹ್ಯಾದ್ರಿ ಮಾರ್ಗವಾಗಿ ಕರಾವಳಿ ಜಿಲ್ಲೆಗಳಲ್ಲಿ ಪಸರಿಸಿದ್ದುದಕ್ಕೆ ಮಸ್ಕಿಯಲ್ಲಿ ತಯಾರಾದ ಮೃತ್ಪಾತ್ರೆಗಳು ಆ ಮಾರ್ಗವಾಗಿ ಕರಾವಳಿ ಪ್ರದೇಶದಲ್ಲಿ ಸಾಗಣೆಯಾಗಿರುವ ಸೂಚನೆಯಾಗಿದೆ. ಅಲ್ಲದೆ ಇದು ಆಂಧ್ರಪ್ರದೇಶಕ್ಕೆ ಸಾಗುವ ಸೂಕ್ತವಾದ ಮಾರ್ಗವಾಗಿತ್ತು. ವಾಣಿಜ್ಯ ಹೆದ್ದಾರಿಗಳು ಹಾಗೂ ಒಳನಾಡು ಸಂಪರ್ಕ ಮಾರ್ಗಗಳ ಕೇಂದ್ರ ತಾಣ ಈ ಪ್ರದೇಶವಾಗಿತ್ತು. ಇಲ್ಲಿ ಶೋಧಗೊಂಡ ವಿವಿಧ ಖನಿಜ ನಿಕ್ಷೇಪಗಳಲ್ಲಿ ಉತ್ಪಾದಿಸಲಾದ ಅದಿರಿನಿಂದ ಹೆದ್ದಾರಿಗಳು, ಇತರ ವಾಣಿಜ್ಯ ಮಾರ್ಗಗಳು

ನಿರ್ಮಾಣಗೊಂಡಿರುವುದನ್ನು ಗಮನಿಸಬಹುದಾಗಿದೆ. ಮಸ್ಕಿ ದಕ್ಷಿಣ ಭಾರತದಲ್ಲಿ ವಿವಿಧ ಭಾಗಗಳಿಗೆ ಒಳಸಂಪರ್ಕ ಮತ್ತು ವಾಣಿಜ್ಯ ಮಾರ್ಗಗಳಿಗೆ ಸಂಪರ್ಕ ಕಲ್ಪಿಸುವ ಆಯಕಟ್ಟಿನ ಸ್ಥಳವಾಗಿದೆ. ಇದರ ಮೂಲಕ ಆಂಧ್ರಪ್ರದೇಶವನ್ನು ಪ್ರವೇಶಿಸಲಾಗುತ್ತಿತ್ತು. ಆಂಧ್ರಪ್ರದೇಶದಲ್ಲಿ ಬೌದ್ಧಧರ್ಮ ಪ್ರವೇಶಿಸಿದ್ದರಿಂದ ರಾಯಚೂರು ದೋ-ಅಬ್‌ನಿಂದ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳನ್ನು ಸಂಪರ್ಕಿಸಲು ಸಾಧ್ಯವಾಯಿತು(ತೆಲಗಾವಿ ೨೦೦೪: ೩೦-೩೫). ಈ ಪ್ರದೇಶ ವ್ಯಾಪಾರದಲ್ಲಿ ತೊಡಗಿಸಿ ಕೊಂಡಿತ್ತೆನ್ನುವುದಕ್ಕೆ ಮೌರ್ಯ ಪೂರ್ವ ಕಾಲದಲ್ಲಿ ಪಂಚ್ ಮಾಡಿದ ನಾಣ್ಯಗಳು ರಾಯಚೂರು ಮತ್ತು ಮಸ್ಕಿಯಲ್ಲಿ ದೊರೆಯುತ್ತವೆ. ನಾಣ್ಯಗಳ ಚಲಾವಣೆ ಸಂಪತ್ತಿನ ಉತ್ಪಾದನೆಯಲ್ಲಿ ಹೆಚ್ಚಳವನ್ನೂ ಹೆಚ್ಚಿನ ಪ್ರಮಾಣದಲ್ಲಿದ್ದ ಖನಿಜ ಸಂಪತ್ತಿನಿಂದ ವರ್ತಕರು ಆಕರ್ಷಣೆಗೆ ಒಳಗಾದುದನ್ನೂ ಸೂಚಿಸುತ್ತದೆ ಎಂದು ಹೇಳಬಹುದು.

ಉತ್ತರ ಮತ್ತು ದಕ್ಷಿಣದ ನಡುವೆ ನಿರಂತರ ಸಂಪರ್ಕ ಉಂಟಾದಾಗಿನಿಂದ ಕಾಲುದಾರಿಗಳು, ಬಂಡಿದಾರಿಗಳು, ಅಗಲವಾದ ರಸ್ತೆಗಳು, ನದಿದಂಡೆಯ ರಸ್ತೆಗಳು, ಹೆದ್ದಾರಿಗಳು ಹುಟ್ಟಿಕೊಂಡವು. ಅವುಗಳಿಗೆ ಈ ಪ್ರದೇಶ ಸಂಪರ್ಕ ಸೇತುವೆಯಾಗಿತ್ತು. ಈ ಮೂಲಕವೆ ಪ್ರಯಾಣಿಸಬೇಕಾಗಿತ್ತು. ಸಾಧು, ಸಂತರು, ಸನ್ಯಾಸಿಗಳು, ಬ್ರಾಹ್ಮಣರು ತಮ್ಮ ಸಾಧನೆಗಳಿಗಾಗಿ ನದಿದಂಡೆಗಳತ್ತ ಸಾಗುತ್ತಿದ್ದರು. ಅವರು ನಡೆದು ಬಂದ ದಾರಿಗಳೇ ಮುಂದೆ ವಾಣಿಜ್ಯ ಮಾರ್ಗಗಳಾಗಿ ಮಾರ್ಪಟ್ಟಿರಬೇಕು. ಈ ರೀತಿ ಗುರುತಿಸಿಕೊಂಡ ಈ ಪ್ರದೇಶ ವಿವಿಧ ಅರಸು ಮನೆತನಗಳಿಗೆ ಆಕರ್ಷಣೆಯ ಕೇಂದ್ರವಾಗಿ ರೂಪುಗೊಂಡಿತ್ತು.

### ೨.೪.೪. ವಾಸದ ನೆಲೆಗಳು

ಇಲ್ಲಿನ ಜನಜೀವನ ಬಹಳ ಉತ್ತಮವಾಗಿತ್ತು ಎಂದೇ ಹೇಳಬಹುದು. ಮೂಲಭೂತ ಅಗತ್ಯಗಳ ಕೊರತೆಯಿರಲಿಲ್ಲ. ಆರಂಭದಲ್ಲಿ ದೊಡ್ಡ ದೊಡ್ಡ ಗುಡ್ಡಗಳ ಗುಹೆಗಳು ವಾಸದ ನೆಲೆಯಾಗಿದ್ದವು. ಒಂದೆಡೆ ನೆಲೆನಿಂತ ನಂತರ ಸಾಮೂಹಿಕವಾಗಿ ವಾಸಿಸಲು ಆರಂಭಿಸಿದಾಗಲೂ ಬೆಟ್ಟಗಳು ವಾಸದ ತಾಣಗಳಾಗಿದ್ದವು. ಗುಹೆಗಳ ಬದಲಾಗಿ ಗುಡ್ಡಗಳ ಇಳಿಜಾರು ಪ್ರದೇಶಗಳಲ್ಲಿ ನೆಲೆ ನಿಲ್ಲಲಾರಂಭವಾಗಿತ್ತು. ಗೋಲಾಕಾರದ ಗುಡಿಸಲುಗಳು ನಿರ್ಮಾಣಗೊಂಡು ಆಶ್ರಯತಾಣಗಳಾದವು. ಕಾಲಾನಂತರದಲ್ಲಿ ಕುಟುಂಬ ಕೂಡು ಕುಂಟುಂಬವಾಗಿ ವಿಸ್ತರಣೆ ಪಡೆದು ಆಯತಾಕಾರದ ಗುಡಿಸಲುಗಳು ನಿರ್ಮಾಣ ವಾಗಲಾರಂಭಿಸಿದವು. ಗುಡಿಸಲುಗಳಿಗೆ ಸ್ಥಳೀಯ ಸಂಪನ್ಮೂಲವನ್ನೆ ಬಳಕೆಯಾಯಿತು. ಜನರ ಜೀವನದಲ್ಲಿ ಸುಧಾರಣೆ ಕಂಡಂತೆಲ್ಲ ಗುಡಿಸಲ ನಾಲ್ಕೂ ಗೋಡೆಗಳು ಗೊಬ್ಬರ ಬರೆ, ಉಡಗಿನ ಬರೆಗಳಿಂದ ನಿರ್ಮಿತವಾಯಿತು. ಅವನ್ನು ಕೆಸರಿನಿಂದ ಮೆತ್ತಲಾಗುತ್ತಿತ್ತು. ನಂತರದಲ್ಲಿ ಮಣ್ಣಿನಗೋಡೆ ಯನ್ನು ಅಲ್ಲಲ್ಲಿ ಕಲ್ಲು ಬಳಸಿ ಮನೆ ಕಟ್ಟಿಕೊಳ್ಳುವ ಕ್ರಮ ಬೆಳೆಯಿತು. ಬಂದರು ತಪ್ಪಲು ಬಳಸಿ ಮೇಲ್ಮುದ್ದಿ ಹಾಕುವ ಕ್ರಮ ಆ ಕಾಲದಲ್ಲಿ ಆರಂಭವಾದುದು ಇಂದಿಗೂ ಚಾಲ್ತಿಯಲ್ಲಿದೆ. ಇತ್ತೀಚೆಗೆ ಸಿಮೆಂಟಿನ, ತಗಡಿನ ಶೀಟ್‌ಗಳು ಮತ್ತು ಕಾಂಕ್ರಿಟ್ ಬಳಕೆ ಮಾಡಲಾಗುತ್ತಿದೆ. ಆದರೂ ಇನ್ನು ಅನೇಕ  ಗ್ರಾಮಗಳು ಗುಡ್ಡಗಳಲ್ಲಿರುವುದನ್ನು ಗಮನಿಸಬಹುದು. ಉದಾಹರಣೆಗೆ ರಾಯಚೂರು, ಮುದಗಲ್, ದೇವದುರ್ಗ, ಗುರುಗುಂಟಾ, ಮಾನ್ವಿ, ಕೋಟೆಕಲ್ಲು ಮುಂತಾದ ಕೋಟೆಗಳು. ಕ್ಯಾದಿಗ್ಗೇರಿ, ಅರಕೇರಿ, ಕೊತ್ತದೊಡ್ಡಿ, ಮಲ್ಲಿನಾಯಕನದೊಡ್ಡಿ, ದೇವದುರ್ಗ, ಅಡಕಲಗುಡ್ಡ, ಅನವಾರ, ಆಕಳಕುಂಪಿ, ಕಸನದೊಡ್ಡಿ, ಕುರಕುಂದಿ ಮುಂತಾದ ಗ್ರಾಮಗಳು ನೆಲೆಸಿವೆ.

ಕ್ರಿಪೂ. ೬೦೦ರ ವೇಳೆಗೆ ಉತ್ತರಭಾರತದಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು ಹುಟ್ಟಿಕೊಂಡವು. ದಕ್ಷಿಣದಲ್ಲಿ ರಾಜ್ಯಗಳಿರಲಿಲ್ಲ. ಪ್ರಾಚೀನ ಭಾರತದಲ್ಲಿ ಅನೇಕ ಜನಪದಗಳು ಅಲ್ಲಲ್ಲಿ ಅಸ್ತಿತ್ವಕ್ಕೆ ಬಂದವು. ವೇದಗಳಲ್ಲಿ ಮಗಧ, ಕೋಸಲ, ವತ್ಸ ಮುಂತಾದ ಮಹಾಜನಪದಗಳಲ್ಲದೆ ಕುರು ಪಾಂಚಾಲ, ಸೂರಸೇನ, ಕಾಶಿ, ಮಿಥಿಲ, ಅಂಗ, ಕಳಿಂಗ, ಅಶ್ಮಕ, ಗಾಂಧಾರ, ಕಾಂಭೋಜ ಎಂಬ ಸಣ್ಣ ಪುಟ್ಟ ದೇಶಗಳು ಇದ್ದವು. ಮಾರ್ಕಂಡೇಯ ಪುರಾಣದಲ್ಲಿ ಮತ್ಸ್ಯ, ಕುಶೂಲ, ಕುಲ್ಯ, ಕುಂತಳ, ಕಾಶಿ, ಕೋಸಲ, ಅರ್ಬುದ, ಪುಲಿಂದ ಮುಂತಾದ ರಾಜ್ಯಗಳ ಹೆಸರುಗಳು ಬರುತ್ತವೆ. ವೇದಗಳಲ್ಲಿ ಕಂಡುಬರುವ ಕಳಿಂಗ, ಮಾರ್ಕಂಡೇಯ ಪುರಾಣದಲ್ಲಿ ಬರುವ ಕುಂತಳ– ಇವು ದಕ್ಷಿಣ ಭಾರತದಲ್ಲಿ ಕಂಡುಬರುವ ಪ್ರದೇಶಗಳಾಗಿವೆ. ಕುಂತಳ ಕನ್ನಡದ ಪ್ರದೇಶವಾಗಿದೆ. ಪಾಣಿನೀಯ ಸಂಘಗಳಲ್ಲಿ ಕ್ಷುದ್ರಕ, ಅಂಬಷ್ಟ, ಹಸ್ತಿ ನಾಯನ, ಪ್ರಕಣ್ವ, ಮುದ್ರ, ಮಧು ಮಂತ, ಆಪ್ರೀತ, ಆಶ್ರ ಕಾಯಗಳು ಮುಖ್ಯವಾಗಿವೆ. ಜನಪದಗಳಲ್ಲಿ ಗಾಂಧಾರ, ಆವಂತಿ, ಕೋಸಲ, ಉಸೀನರ, ವಿದೇಹ, ಮಗಧ, ಅಂಗ, ವಂಗಗಳು ಮುಖ್ಯವಾಗಿದ್ದವು. ಪ್ರಜಾಸತ್ತಾತ್ಮಕ ಸಂಘಗಳು ಅಲೆಕ್ಸಾಂಡರನ ದಾಳಿಯವರೆಗೆ ಜೀವಂತವಾಗಿದ್ದು ಒಟ್ಟಾಗಿ ಅವನ ದಾಳಿಯನ್ನು ಎದುರಿಸಿದವು ಎಂದೂ ದಕ್ಷಿಣದಲ್ಲಿ ಅನೇಕ ಸಂಘಗಳು, ಜನಪದಗಳು ರಾಜ್ಯಭಾರ ಮಾಡುತ್ತಿದ್ದವೆಂದೂ ಪುರಾಣಗಳಲ್ಲಿ ಉಕ್ತವಾಗಿದೆ. ವಾಯುಪುರಾಣದಲ್ಲಿ ಈ ಜನಪದಗಳ ಹೆಸರು ಬರುತ್ತವೆ ಎಂಬುದಾಗಿ ತಿಳಿಸಲಾಗಿದೆಯೆ ಹೊರತು ಅವನ್ನು ಹೆಸರಿಸಿಲ್ಲ. ದಕ್ಷಿಣ ಪಥದಲ್ಲಿನ ಪಾಂಡ್ಯ, ಕೇರಳ, ವನವಾಸಿಕ, ಮಹಾರಾಷ್ಟ್ರ, ಮಾಹಿಷಕ, ಕಲಿಂಗ ಪೌನಿಕ, ಮೌನಿಕ, ಕುಂತಲ, ಆಂಧ್ರ ಇತ್ಯಾದಿಗಳಲ್ಲಿ ವನವಾಸಿಕ ಮತ್ತು ಕುಂತಲಗಳು ಕರ್ನಾಟಕದಲ್ಲಿ ಕಂಡುಬರುತ್ತವೆ (ಪಂಚಮುಖಿ ೨೦೦೮: ೨೨–೨೩).

ದಕ್ಷಿಣ ಭಾರತದ ಕಳಿಂಗ, ವನವಾಸಿಕ, ಕುಂತಲ, ಪಾಂಡ್ಯ, ಕೇರಳ ಮುಂತಾದವುಗಳಲ್ಲಿ ಪಾಂಡ್ಯ, ಕೇರಳ ರಾಜ್ಯಗಳು ಅಸ್ತಿತ್ವದಲ್ಲಿದ್ದು, ಹಾಗೆಯೆ ಮುಂದುವರೆದುಕೊಂಡು ಬಂದವು. ಕಳಿಂಗ ಪ್ರಬಲ ಹಾಗೂ ಬಲಿಷ್ಠ ರಾಜ್ಯವಾಗಿತ್ತು. ಮೌರ್ಯ ಅರಸರನ್ನು ಹೆದರಿಸುವಷ್ಟು ಸಾಮರ್ಥ್ಯ ಹೊಂದಿತ್ತು. ಆದರೆ ಕುಂತಳ, ವನವಾಸಿಕ, ಕರ್ನಾಟಕ ಎಂಬ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದ ಅರಸರ ಬಗ್ಗೆಯಾಗಲಿ, ಯುದ್ಧಗಳ ಬಗ್ಗೆಯಾಗಲಿ ತಿಳಿದುಬರುವುದಿಲ್ಲ. ವೈದಿಕ, ಬೌದ್ಧ, ಜೈನ ಸಂಸ್ಕೃತಿಗಳ ಆಶ್ರಯ ತಾಣವಾಗಿತ್ತು. ಸಿಂಧೂ ನಾಗರಿಕತೆಯ ಅವನತಿಯ ನಂತರದ ಕಾಲದಿಂದ ಮೌರ್ಯರ ಕಾಲದವರೆಗಿನ ರಾಯಚೂರು ದೋ–ಅಬ್ ಪ್ರದೇಶದ ಚರಿತ್ರೆ ಅಸ್ಪಷ್ಟವಾಗಿದೆ. ಈ ಕಾಲಾವಧಿಯ ಚರಿತ್ರೆಯನ್ನು ಕಟ್ಟಿಕೊಡುವ ಉದ್ದೇಶದಿಂದ ಭೂ ಉತ್ಖನನ, ಹಳೆಯ, ಸೂಕ್ಷ್ಮ, ನವ, ತಾಮ್ರ, ಬೃಹತ್ ಶಿಲಾಯುಗಗಳ ಸಂಸ್ಕೃತಿಯನ್ನು ತಿಳಿಸುವ ಪ್ರಾಗೈತಿಹಾಸಿಕ ಚಿತ್ರಕಲೆ ಮತ್ತು ಅವಶೇಷಗಳನ್ನು ಗಂಭೀರವಾಗಿ ಪರಿಗಣಿಸಿ ಅಧ್ಯಯನ ಮಾಡಲಾಗಿದೆ. ಇವನ್ನು ಆಧರಿಸಿ ಜನ ಜೀವನದ ಸಂಗತಿ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಫಲವತ್ತಾದ ಭೂಮಿಯ ಕಾರಣದಿಂದ ಕ್ರಿಪೂ. ೪ನೆಯ ಶತಮಾನದ ವೇಳೆಗೆ ರಾಜಕೀಯ ಒಡನಾಟಗಳು ಆರಂಭವಾದವು ಎನ್ನಬಹುದು. ವ್ಯಾಪಾರಿಗಳು, ಬೌದ್ಧ, ಜೈನ, ಬ್ರಾಹ್ಮಣ, ಧರ್ಮ ಪ್ರಚಾರಕರ ಸಂಪರ್ಕದಿಂದಾಗಿ ಹಳ್ಳಿಗಳು, ಊರುಗಳು ಸ್ಥಾಪನೆಗೊಂಡವು. ಉತ್ತರಪಥ ಮತ್ತು ದಕ್ಷಿಣಾಪಥಗಳ ನಡುವೆ ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ನಂಟು ಹುಟ್ಟಿಕೊಂಡಿತು. ಉತ್ತರ ಮತ್ತು ದಕ್ಷಿಣಗಳನ್ನು ಬೆಸೆಯುವಲ್ಲಿ ವರ್ತಕರ ಪಾತ್ರ ಮುಖ್ಯವಾಗಿದೆ. ಇದು ರಾಜಪ್ರಭುತ್ವ ವ್ಯವಸ್ಥೆ ಪೂರ್ವದ ಸನ್ನಿವೇಶವಾಗಿದ್ದು, ವಿವಿಧ ಅರಸುಮನೆತನಗಳ ಆಳ್ವಿಕೆಗೆ ಕಾರಣವಾಯಿತು.

## ೨.೫. ರಾಜಕೀಯ ಸ್ಥಿತ್ಯಂತರಗಳು

ಈ ಪ್ರದೇಶದ ವಿವಿಧ ಅರಸು ಮನೆತನಗಳು ರಾಜಕೀಯ ಸ್ಥಿತ್ಯಂತರಕ್ಕೆ ಒಳಪಟ್ಟಿರುವುದು ಕಂಡುಬರುತ್ತದೆ. ರಾಜ್ಯ ವಿಸ್ತರಣೆಯ ಮಹತ್ವಕಾಂಕ್ಷೆಯಿಂದ ಅಂಥ ಸ್ಥಿತಿ ಉಂಟಾದುದು ಮೇಲ್ನೋಟಕ್ಕೆ ಕಂಡುಬಂದರೂ ಆಂತರಿಕವಾಗಿ ಅವು ಸಂಪತ್ತಿನ ವ್ಯಾಮೋಹ ಮತ್ತು ಕ್ರೋಢೀಕರಣದಿಂದ ಹೊರತಾಗಿರದೆ ಆರ್ಥಿಕ ಭದ್ರತೆಯನ್ನು ಮುಖ್ಯ ಉದ್ದೇಶವಾಗಿರಿಸಿಕೊಂಡಿದ್ದವು. ಇದರೊಂದಿಗೆ ಸ್ಥಳೀಯವಾಗಿ ದೊರಕುವ ಹೇರಳವಾದ ಸಂಪನ್ಮೂಲಗಳು ಮತ್ತು ಇತರ ಪ್ರದೇಶಗಳೊಂದಿಗೆ ಹೊಂದಿದ್ದ ಸಂಪರ್ಕ ಪೂರಕ ಅಂಶವಾಗಿತ್ತು.

ವರ್ತಮಾನದಲ್ಲಿ ಬೆಂಗಳೂರು ಇತರ ಪ್ರದೇಶಗಳೊಂದಿಗೆ ಹೊಂದಿರುವ ಸಂಪರ್ಕದಿಂದಾಗಿ ಜಗತ್ತಿನ ಉತ್ತಮ ನಗರಗಳ ಸಾಲಿನಲ್ಲಿ ಸ್ಥಾನ ಪಡೆದು ಗಮನ ಸೆಳೆದಿದೆ. ಇದರಂತೆ ರಾಯಚೂರು ದೋ-ಅಬ್ ಪ್ರದೇಶ ತನ್ನ ಸಂಪನ್ಮೂಲಗಳ ಮೂಲಕ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕಾಲಘಟ್ಟದಲ್ಲಿ ವಿವಿಧ ಅರಸುಮನೆತನಗಳ ಅಧಿಕಾರ ಸ್ಥಾಪನೆಗಾಗಿ ನಡೆಸಿದ ಹೋರಾಟದ ಕೇಂದ್ರಬಿಂದುವಾಗಿ ಗಮನಸೆಳೆದಿತ್ತು. ಈ ಪ್ರದೇಶವನ್ನು ತಮ್ಮ ಅಧಿಕಾರದ ವ್ಯಾಪ್ತಿಗೆ ಸೇರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯನ್ನು ವಿವಿಧ ಅರಸುಮನೆತನಗಳಲ್ಲಿ ಹುಟ್ಟುಹಾಕಿತು. ಇದರಿಂದ ಸದಾ ರಾಜಕೀಯ ಹೋರಾಟದ ಕೇಂದ್ರವಾಗಿ ರೂಪುಗೊಂಡಿರುವುದನ್ನು ಗಮನಿಸಬಹುದು. ರಾಯಚೂರು ದೋ-ಅಬ್ ಪ್ರದೇಶದ ಚರಿತ್ರೆ ಮೌರ್ಯರಿಂದ ಆರಂಭಗೊಳ್ಳುತ್ತದೆ. ಮೌರ್ಯರಿಂದ ಹಿಡಿದು ಹೈದರಾಬಾದ್ ನಿಜಾಮರವರೆಗೆ ಅನೇಕ ಅರಸು ಮನೆತನಗಳು ಈ ಪ್ರದೇಶದ ಮೇಲೆ ಪ್ರಭುತ್ವವನ್ನು ಸಾಧಿಸಲು ಪ್ರಯತ್ನಿಸಿದವು. ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿದ ಅರಸು ಮನೆತನಗಳನ್ನು ಕುರಿತು ಅಭ್ಯಸಿಸಲಾಗಿದೆ.

ಮೌರ್ಯರು(ಕ್ರಿ.ಪೂ. ೩ನೆಯ ಶತಮಾನ),[೨೨] ಶಾತವಾಹನರು(ಕ್ರಿ.ಪೂ. ೧ರಿಂದ ಕ್ರಿ.ಶ. ೩ನೆಯ ಶತಮಾನ)[೨೩] ಕುರಿತು ಮಾಹಿತಿಗಳ ಕೊರತೆಯಿದೆ. ಶಾತವಾಹನರ ಕಾಲದಲ್ಲಿ ಮಸ್ಕಿ ಪ್ರಮುಖ ನಗರವಾಗಿದ್ದು, ಆಳ್ವಿಕೆಯ ಬದಲು ಸ್ಥಳವನ್ನು ಗುರುತಿಸಬಹುದಾಗಿದೆ. ವಾಕಾಟಕರು ಮತ್ತು ಚುಟುಗಳು (ಕ್ರಿ.ಶ. ೩ನೆಯ ಶತಮಾನ)[೨೪] ಅರಸರ ಆಳ್ವಿಕೆ ಈ ಪ್ರದೇಶದಲ್ಲಿ ಕಂಡುಬರುವುದಿಲ್ಲ. ಸೂರ್ಯನಾಥ್ ಕಾಮತ್ ಅವರು ಆ ಮನೆತನಗಳು ಇಲ್ಲಿ ಆಳಿದವೆಂದು ಹೇಳುತ್ತಾರಾದರೂ ಯಾವುದೇ ಬಗೆಯ ಕುರುಹುಗಳು ಲಭ್ಯವಿಲ್ಲ. ಕಂಚಿಯ ಪಲ್ಲವರು ಮತ್ತು ಬಾದಾಮಿ ಚಾಲುಕ್ಯರು(ಕ್ರಿ.ಶ ೬-೮ನೆಯ ಶತಮಾನವರೆಗೆ),[೨೫] ರಾಷ್ಟ್ರಕೂಟರು(ಕ್ರಿ.ಶ. ೭-೮ ರಿಂದ ಕ್ರಿ.ಶ. ೧೦ನೆಯ ಶತಮಾನದವರೆಗೆ),[೨೬] ಕಲ್ಯಾಣ ಚಾಲುಕ್ಯರು(ಕ್ರಿ.ಶ. ೧೦ರಿಂದ ೧೨ನೆಯ ಶತಮಾನದವರೆಗೆ),[೨೭] ಕಲಚೂರಿಗಳು(ಕ್ರಿ.ಶ. ೧೧೭೦ರಿಂದ ೧೧೮೭ರವರೆಗೆ), [೨೮] ಚೋಳರು(ಕ್ರಿ.ಶ.೯೭೦ರಿಂದ ೧೧೩೫),[೨೯] ಹೊಯ್ಸಳರು(ಕ್ರಿ.ಶ. ೧೧೩೧ರಿಂದ ೧೧೯೦),[೩೦] ವಾರಂಗಲ್ಲಿನ ಕಾಕತೀಯರು(ಕ್ರಿ.ಶ.೧೨೯೦-೯೪),[೩೧] ಸೇವುಣರು(ಕ್ರಿ.ಶ. ೧೧೯೧ ರಿಂದ ೧೨೩೨),[೩೨] ವಿಜಯನಗರ(ಕ್ರಿ.ಶ.೧೩೫೦-೧೫೬೫),[೩೩] ಬಹಮನಿ(ಕ್ರಿ.ಶ. ೧೩೪೭-೧೪೮೯),[೩೪] ಬಿಜಾಪುರದ ಆದಿಲ್‌ಶಾಹಿಗಳು(ಕ್ರಿ.ಶ.೧೪೮೯-೧೬೯೦),[೩೫] ಮೊಗಲರು(೧೬೯೦-೧೭೦೭)[೩೬] ಹಾಗೂ ಹೈದರಾಬಾದ್ ನಿಜಾಮರು(೧೭೨೪-೧೯೪೮)[೩೭] ಹಾಗೆಯೇ ಕರಡಿಕಲ್ಲು ಕದಂಬರು (ಕ್ರಿ.ಶ. ೧೦೬೬-೧೨೧೫)[೩೮] ಸಾಲಗುಂದೆಯ ಸಿಂಧರು (ಕ್ರಿ.ಶ. ೧೦೨೧ರಿಂದ ೧೧೫೪)[೩೯] ಹಾಗೂ ಮೊರಟದ ಹೈಹಯರು(ಕ್ರಿ.ಶ. ೧೦೪೦-೧೨೧೮)[೪೦] ಮುಂತಾದ ಅರಸು ಮನೆತನಗಳು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ವಿಜಯನಗರರೋತ್ತರ ಕಾಲದಲ್ಲಿ ಗುಡಗುಂಟಿ, ಗುಂತಗೋಳ,

ಕ್ಯಾದಿಗ್ಗೇರಿ, ಗಲಗ, ಜಾಲಹಳ್ಳಿ, ಮುಂಡರಗಿ, ಕರಿಗುಡ್ಡ, ಅರಕೇರಿ, ರಾಮದುರ್ಗ ಮತ್ತು ದೇವದುರ್ಗ ಗಳಲ್ಲಿ ಸಂಸ್ಥಾನಿಕರ ಆಳ್ವಿಕೆ ಕಂಡುಬರುತ್ತದೆ. ಇವರು ತಮ್ಮ ಅಸ್ತಿತ್ವಕ್ಕಾಗಿ ಆದಿಲ್‌ಶಾಹಿ, ಮೊಗಲರು ಹಾಗೂ ನಿಜಾಮರ ಕಾಲದಲ್ಲಿ ಹೋರಾಟ ಮಾಡಬೇಕಾಯಿತು. ಈ ರಾಜಕೀಯ ಸ್ಥಿತ್ಯಂತರಗಳು ಅಧೀನನನ್ನು ಸಾರ್ವಭೌಮನನ್ನಾಗಿ, ಸಾರ್ವಭೌಮನನ್ನು ಸಾಮಂತನನ್ನಾಗಿ ಮಾಡುವ ಸಾಧ್ಯತೆಗಳಿಗೆ ಅವಕಾಶ ತೆರೆಯುತ್ತವೆ.

## ೨.೬. ಉಪಸಂಹಾರ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ರಾಜಪ್ರಭುತ್ವ ವ್ಯವಸ್ಥೆ ಪೂರ್ವದ ಸನ್ನಿವೇಶ ಕುತೂಹಲಕಾರಿಯಾಗಿದೆ. ಇಂತಹ ಸಂಗತಿಗಳನ್ನು ಮೈಗೂಡಿಸಿಕೊಂಡಿದ್ದ ರಾಯಚೂರು ಪದ ನಿಷ್ಪತ್ತಿ ಯನ್ನು "ಮೊಲವು ನಾಯಿಯನ್ನು ಅಟ್ಟಿಸಿಕೊಂಡು" ಹೋದ ಐತಿಹ್ಯದ ಜೊತೆಗೆ ಪ್ರಾಕೃತಿಕ ಲಕ್ಷಣಗಳ ಆಧಾರದ ಮೇಲೂ ರಾಯಚೂರು ಪದ ನಿಷ್ಪತ್ತಿ ತಿಳಿಯಲು ಪ್ರಯತ್ನಿಸಲಾಗಿದೆ. ತೆಲುಗು ಭಾಷೆ ಪ್ರಭಾವ ಈ ಪದ ನಿಷ್ಪತ್ತಿಯಲ್ಲಿ ಎದ್ದು ಕಾಣಿಸುತ್ತದೆ. ಶಾಸನಗಳಲ್ಲಿ ರಾಚೂರು, ರಾಚೂರಿ, ರೈಚೂರು, ರಯಿಚುರು, ರಾಯಿಚೂರು ಎಂಬ ಉಲ್ಲೇಖಗಳು ಕಂಡುಬರುತ್ತವೆ. ತೆಲುಗಿನ ಜೊತೆಗೆ ಉರ್ದು ಭಾಷೆಯ ಪ್ರಭಾವವೂ ಜನಸಾಮಾನ್ಯರು ರಾಯಚೂರನ್ನು ರೈಚೂರು ಎಂದು ಕರೆಯುವಲ್ಲಿ ಕಾರ್ಯನಿರ್ವಹಿಸಿದೆ.

ದೋ-ಅಬ್ ಪದ ಜಲಸಂಪತ್ತನ್ನು ಸೂಚಿಸುತ್ತದೆ. ಈ ಮುಂಚೆ ನದಿಬಯಲು ಪ್ರದೇಶಗಳನ್ನು ಮೆಸಪಟೋಮಿಯ ಮತ್ತು ಎಡೆದೊರೆನಾಡು ಎಂದು ಕರೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಇವು ನದಿಗಳನ್ನು ಸೂಚಿಸುವುದೇ ಹೆಚ್ಚು. ರಾಯಚೂರು ದೋ-ಅಬ್ ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದ ಬಯಲು ಪ್ರದೇಶವಾಗಿದೆ. ಮೆಸಪಟೋಮಿಯ ಎಂಬುದು ಗ್ರೀಕ್ ಪದವಾದರೆ. ಎಡೆದೊರೆ ಎಂಬುದು ಕನ್ನಡ ಪದವಾಗಿದೆ. ದೋ-ಅಬ್ ಎಂಬುದು ಪರ್ಶಿಯನ್ ಮತ್ತು ಉರ್ದು ಭಾಷೆಗಳ ಸಂಯೋಜಿತ ಪದವಾಗಿದೆ. ಎರಡು ನದಿಗಳ ಮಧ್ಯದ ಪ್ರದೇಶ ಎಂಬರ್ಥವನ್ನು ನೀಡುತ್ತದೆ. ಭಾರತದಲ್ಲಿ ಗಂಗಾ-ಯಮುನಾ ದೋ-ಅಬ್, ಪಂಜಾಬ್ ದೋ-ಅಬ್ ಹಾಗೂ ರಾಯಚೂರು ದೋ-ಅಬ್‌ಗಳು ಪ್ರಮುಖವಾಗಿವೆ. ಕರ್ನಾಟಕದ ಸಂದರ್ಭದಲ್ಲಿ ಸಗರನಾಡು ದೋ-ಅಬ್, ರಾಯಚೂರು ದೋ-ಅಬ್, ಬೀಳಗಿ ದೋ-ಅಬ್, ಕೂಡಲಸಂಗಮ ದೋ-ಅಬ್ ಹಾಗೂ ಮೈಸೂರು ದೋ-ಅಬ್‌ಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ರಾಯಚೂರು ದೋ-ಅಬ್ ಪ್ರದೇಶ ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ಅವಶೇಷಗಳು ಮಹತ್ವ ಪೂರ್ಣವಾಗಿವೆ. ಹಳೆಯ ಶಿಲಾಯುಗದಿಂದ ಹಿಡಿದು ಇತಿಹಾಸದ ಆರಂಭ ಕಾಲದವರೆಗಿನ ಅನೇಕ ಅವಶೇಷಗಳು ಇಲ್ಲಿ ಬಾಳಿದ ಮಾನವನ ಬದುಕಿನ ಬದಲಾವಣೆಗಳನ್ನು ಕುರಿತು ತಿಳಿಸುತ್ತವೆ. ಪ್ರತಿಯೊಂದು ಕಾಲಘಟ್ಟ ಪರಿವರ್ತನೆಯನ್ನು ಸೂಚಿಸುತ್ತದೆ. ಇಲ್ಲಿನ ಅವಶೇಷಗಳಷ್ಟೇ ಪ್ರಮುಖವಾದ ಕುರುಹುಗಳೆಂದರೆ; ಪ್ರಾಗಿತಿಹಾಸ ಕಾಲದ ಚಿತ್ರಕಲೆ ನೆಲೆಗಳು ಮುಖ್ಯವಾಗಿವೆ. ಇವು ಈ ಪ್ರದೇಶದ ಜನ ಜೀವನದ ಭಾಗವಾಗಿ ಗುರುತಿಸಿಕೊಂಡಿದ್ದ ಬೇಟೆ ಸಂಸ್ಕೃತಿ, ತಾಮ್ರ, ಕಬ್ಬಿಣದ ಬಳಕೆಯಿಂದ ಪಶುಪಾಲನೆ ಮತ್ತು ಕೃಷಿ, ಗ್ರಾಮೀಣ ಮತ್ತು ನಗರ ಸಂಸ್ಕೃತಿ, ಮತ್ತು ಅಗತ್ಯ ಮೂಲಭೂತ ವಾಸದ ನೆಲೆಗಳು ಇಲ್ಲಿನ ಜನಜೀವನದ ವಾಸ್ತವ ಚರಿತ್ರೆಯನ್ನು ಕಟ್ಟಲು ಸಹಕಾರಿಯಾಗಿವೆ. ಭೂಗರ್ಭದಲ್ಲಿ ಅಡಗಿದ್ದ ಅವಶೇಷಗಳಾದ ಕಲ್ಲಿನ ಕೊಡಲಿ, ಕಲ್ಲಿನ ಆಯುಧ, ಕಲ್ಲಿನ ಚಾಕು, ಚೂರಿ, ಬೈರಿಗೆ,

ಕುರುಪಿ ಮುಂತಾದವು, ಹಾಗೂ ಚಿತ್ರಕಲೆ ನೆಲೆಗಳಲ್ಲಿ ಕಂಡು ಬರುವ ಗೂಳಿ, ಕುದುರೆ, ಜಿಂಕೆ, ಆನೆ, ಎತ್ತು, ಎಮ್ಮೆ, ಕೋಣ, ಹುಲಿ ಮತ್ತು ಮನುಷ್ಯ ಮೊದಲಾದ ಚಿತ್ರಗಳು ರಾಜ್ಯವ್ಯವಸ್ಥೆ ಪೂರ್ವ ಸನ್ನಿವೇಶದ ಜನಚರಿತ್ರೆಯನ್ನು ತಿಳಿಸುತ್ತವೆ. ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದಲ್ಲಿನ ಫಲವತ್ತಾದ ಭೂಮಿ, ಖನಿಜ ಸಂಪನ್ಮೂಲ ಮತ್ತು ನೈಸರ್ಗಿಕ ಸಂಪನ್ಮೂಲಗಳು ಮಾನವನನ್ನು ಈ ಪ್ರದೇಶದಲ್ಲಿ ನೆಲೆಗೊಳ್ಳುವಂತೆ ಮಾಡಿವೆ. ಇಲ್ಲಿನ ಬೆಟ್ಟಗುಡ್ಡಗಳು ಜನವಸತಿ ಕೇಂದ್ರಗಳಾಗಿ ಮಾರ್ಪಟ್ಟಿದ್ದವು. ಅಪಾರವಾದ ಜಲಸಂಪತ್ತು ಇತ್ತು. ಕೃಷಿ ಚಟುವಟಿಕೆಗಳಿಂದಾಗಿ ಹೆಚ್ಚುವರಿ ಉತ್ಪಾದನೆಗೆ ಕಾರಣವಾಗಿ, ವ್ಯಾಪಾರ-ವಾಣಿಜ್ಯ ಸಂಬಂಧಗಳನ್ನು ಹೊಂದುವಂತೆ ಮಾಡಿತು. ಈ ಮೂಲಕ ವ್ಯಾಪಾರ ಕೇಂದ್ರವಾಗಿ, ವ್ಯಾಪಾರ ಮಾರ್ಗಗಳ ಆಯಕಟ್ಟಿನ ಸ್ಥಳವಾಗಿ ಗುರುತಿಸಿಕೊಂಡಿತ್ತು. ಇಲ್ಲಿ ಕಂಡುಬರುವ ಅವಶೇಷಗಳು, ಚಿತ್ರಕಲೆ ನೆಲೆಗಳು, ಬೆಲೆಬಾಳುವ ಸಂಪತ್ತಿನ ಕುರುಹುಗಳು, ನಾಣ್ಯಗಳ ಚಲಾವಣೆ ಮುಂತಾದವು ಜನಜೀವನದ ಬದಲಾವಣೆಯನ್ನು ಸೂಚಿಸುತ್ತದೆ. ಇದು ಮುಂದೆ ಸಾಂಸ್ಕೃತಿಕವಾಗಿ, ಸಾಮಾಜಿಕ, ಆರ್ಥಿಕ, ಸಂಬಂಧಗಳ ಹಿನ್ನೆಲೆಯಲ್ಲಿ ರಾಜಕೀಯ ಪ್ರಭಾವಕ್ಕೆ ಒಳಗಾಯಿತು, ರಾಜಕೀಯ ಸ್ಥಿತ್ಯಂತರವೂ ಉಂಟಾಯಿತು. ಈ ರೀತಿ ಎರಡು ನದಿಗಳ ರಕ್ಷಣೆಯಿಂದ ಫಲವತ್ತಾದ ಭೂಮಿಯನ್ನು ಹೊಂದಿ ದೇಶೀಯ ಮತ್ತು ಅನ್ಯದೇಶಿಯರನ್ನು ಆಕರ್ಷಿಸಿದ ಪ್ರದೇಶವಾಗಿ ರೂಪುಗೊಂಡಿತು. ನಂತರದಲ್ಲಿ ವಿವಿಧ ಅರಸು ಮನೆತನಗಳ ನಡುವಿನ ರಣರಂಗವಾಗಿ ಮಾರ್ಪಟ್ಟು ಸದಾ ಸ್ಪರ್ಧಾ ಕೇಂದ್ರವಾಗಿ ಕಾಣಿಸಿಕೊಂಡಿತು. ಸಾರ್ವಭೌಮರು, ಸಾಮಂತರು ಮತ್ತು ಸಂಸ್ಥಾನಿಕರು ಈ ಪ್ರದೇಶದ ಹೋರಾಟದಲ್ಲಿ ಭಾಗವಹಿಸಿದ ಅರಸು ಮನೆತನಗಳಾಗಿವೆ.

### ಟಿಪ್ಪಣಿಗಳು

೧. ನವಶಿಲಾಯುಗದ ಜನರು ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದರು. ಆ ಆಯುಧಗಳು ಕಾವೇರಿ, ಕೃಷ್ಣಾ ಮತ್ತು ತುಂಗಭದ್ರಾ ಬಯಲು ಪ್ರದೇಶಗಳಲ್ಲಿ ಉದ್ದನೆಯ, ಅರ್ಧಚಂದ್ರಾಕೃತಿ ಮತ್ತು ತ್ರಿಕೋನಾಕೃತಿಯಲ್ಲಿ ಹರಿತವಾದ ಚಕ್ಕೆಗಳ ರೂಪದಲ್ಲಿ ದೊರೆತಿವೆ. ಸಣ್ಣ ಗಾತ್ರದ ಆಯುಧಗಳು ರಾಯಚೂರು ದೋ-ಅಬ್ ಪ್ರದೇಶದಲ್ಲಿ ದೊರಕುವುದು ಕಂಡುಬರುತ್ತದೆ. ಹಾಗಾಗಿ ರಾಯಚೂರು ಕಲ್ಲಿನ ಚೂರುಗಳಿಂದ ಕೂಡಿದ ಸ್ಥಳವಾಗಿರಬೇಕೆಂದು ತಿಳಿಯಬೇಕಾಗಿದೆ(ಅ. ಸುಂದರ, ೧೯೭೧, ಇತಿಹಾಸ ಪೂರ್ವ ಕರ್ನಾಟಕ, ಐಬಿಎಚ್ ಪ್ರಕಾಶನ, ಬೆಂಗಳೂರು, ಪುಟ ೬೪-೬೭).

೨. ಕ್ರಿಪೂ. ೧೦೦೦-ಕ್ರಿಶ. ೨೦೦ ಕಾಲಾವಧಿಯಲ್ಲಿ ರಾಯಚೂರು ದೋ-ಅಬ್ ಪ್ರದೇಶ ಬೇರೆ ಬೇರೆ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರ ಜೊತೆಗೆ ವ್ಯಾಪಾರ ಮಾರ್ಗಗಳನ್ನು ಈ ಪ್ರದೇಶದ ಮೂಲಕ ಗುರುತಿಸಿಕೊಂಡಿರುವುದು ಕಂಡು ಬರುತ್ತದೆ. ವರ್ತಮಾನದಲ್ಲಿ ಜನತೆ ಹತ್ತಿರದ ದಾರಿಗಳನ್ನು ಕಂಡುಕೊಂಡಂತೆ ಪ್ರಾಚೀನ ಕಾಲದಲ್ಲಿ ತಾವು ನಡೆದಾಡುವ ಮಾರ್ಗಗಳ ಬಗ್ಗೆ ಸಂಪೂರ್ಣ ಮಾಹಿತಿ ಇರುತ್ತಿರಲ್ಲಿಲ್ಲ. ಅಂದು ಕಾಡು ಅಧಿಕವಾಗಿತ್ತು. ಮಹಾರಾಷ್ಟ್ರದಿಂದ ಕಾವೇರಿ ಬಯಲು ಪ್ರದೇಶಕ್ಕೆ ಸಂಪರ್ಕ ಕಲ್ಪಿಸುವ ಮಾರ್ಗ ರಾಯಚೂರು, ವಿಜಯನಗರ ಹಾದು ಹರಿಹರ, ಮೈಸೂರು ಸೀಮೆ ಮೂಲಕ ಕಾವೇರಿ ಬಯಲು ತಲುಪುತ್ತಿತ್ತು. ಕೃಷ್ಣಾ ಮತ್ತು ತುಂಗಭದ್ರಾ ನದಿಗಳು ಈ ಪ್ರದೇಶವನ್ನು ವ್ಯಾಪಾರ ಕೇಂದ್ರವನ್ನಾಗಿ ಸೃಷ್ಟಿಸಿವೆ. ದೇಶ ವಿದೇಶಗಳಿಂದಲೂ ಈ ಪ್ರದೇಶ ವ್ಯಾಪಾರ ಸಂಬಂಧ ಹೊಂದಿತ್ತು. ಮೋತಿಚಂದ್ರ(ಮೂಲ), ೧೯೯೬, ಸಾರ್ಥವಾಹ, ಪಾಟೀಲ್ ಎಚ್.ಎಸ್(ಅನು), ಸಾಹಿತ್ಯ ಅಕಾಡೆಮಿ, ದೆಹಲಿ, ಪುಟ ೩೫-೩೬.

೩. ರಾಚೂರು ಎಂಬ ಪದ ಚಕ್ಕೆಕಲ್ಲುಗಳನ್ನು ಹೋಲುತ್ತದೆ. ಇದನ್ನು ತೆಲುಗು-ಕನ್ನಡ ನಿಘಂಟಿನಿಂದ ತಿಳಿಯಬಹುದಾಗಿದೆ. ರಾ ಅಂದರೆ ರಾಯಿ. ಇದು ತೆಲುಗಿನಲ್ಲಿ ಕಲ್ಲು ಎಂದಾಗುತ್ತದೆ. ಚೂರೂ

ಎಂದರೆ ಚೂರು, ತುಂಡು ಹೋಳು ಎಂಬುದಾಗಿದೆ. ಇವನ್ನು ಒಟ್ಟುಗೂಡಿಸಿದಾಗ ರಾಚೂರು ಪದ ತೆಲುಗಿನ ಪ್ರಭಾವದಿಂದ ಮೂಡಿರುವುದು ತಿಳಿಯುತ್ತದೆ(ಪಾಣ್ಯಂ ರಾಮಶೇಷ ಶಾಸ್ತ್ರಿ, ೨೦೦೫, ತೆಲುಗು-ಕನ್ನಡ ನಿಘಂಟು, ಸಾಹಿತ್ಯ ಅಕಾಡೆಮಿ, ದೆಹಲಿ, ಪುಟ ೩೬೩, ೩೬೯ ಮತ್ತು ೧೧೨).

೪. ಈ ಶಾಸನವನ್ನು ಕಾಕತೀಯ ರುದ್ರದೇವನ ಕಾಲದಲ್ಲಿ ಹಾಕಿಸಲಾಗಿದೆ. ಗೋನಗನ್ನಯ್ಯರೆಡ್ಡಿ ಎಂಬುವವನು ರಾಯಚೂರು ಪಟ್ಟಣದಿಂದ ಆಡಳಿತ ನಡೆಸುತ್ತಿದ್ದನು. ಪ್ರಜೆಗಳ ರಕ್ಷಣೆಗಾಗಿ ರಾಯಚೂರು ಕೋಟೆಯನ್ನು ಕಟ್ಟಿಸಿದನು. ಇದು ಈ ಪ್ರದೇಶದಲ್ಲಿ ದೊರೆತ ಕಾಕತೀಯರ ಏಕೈಕ ಶಾಸನವಾಗಿದೆ. ಇದನ್ನು ಕ್ರಿ.ಶ. ೧೨೯೪ರಲ್ಲಿ ಕೆತ್ತಿಸಿದ ಬಗ್ಗೆ ತಿಳಿದುಬರುತ್ತದೆ. ಈ ದೊರೆಗಳು ತೆಲುಗು ಮೂಲದವರಾದ್ದರಿಂದ 'ರಾಚೂರಿ' ಎಂದು ಬಳಸಿರುವುದು ಕಂಡುಬರುತ್ತದೆ. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೨೯-೩೦, ಶಾಸನ-೪೫).

೫. ಈ ಶಾಸನವನ್ನು ಕ್ರಿ.ಶ. ೧೫೨೧ರಲ್ಲಿ ಚೀಕಲಪರ್ವಿಯಲ್ಲಿ ಕೃಷ್ಣದೇವರಾಯ ಹೊರಡಿಸಿರುವನು. ಇದು ರಾಚೂರು, ಆಲಂಪೂರ, ಮಾನವಿ, ಹಾನಗಲ್ಲು ಮತ್ತು ಮಾಗಡೆ ದುರ್ಗಗಳನ್ನು ಗೆದ್ದುಕೊಂಡ ಬಗ್ಗೆ ತಿಳಿಸುತ್ತದೆ. ಇಲ್ಲಿ 'ರಾಚೂರು' ಎಂದೇ ಹೆಸರಿಸಲಾಗಿದೆ. ರಾಯಚೂರು ಪ್ರದೇಶದ ಸ್ಥಳೀಯರು 'ರಾಚೂರು' ಎಂದೇ ಕರೆಯುತ್ತಿದ್ದರು. ಅದು ಈಗಲೂ ಉಳಿದು ಬಂದಿದೆ.

೬. ೧೭ನೆಯ ಶತಮಾನದ ಮಟಮಾರಿ ಮತ್ತು ಗುಂಜಳ್ಳಿ ಶಾಸನಗಳಲ್ಲಿ ರಾಯಚೂರು ಪದ ಕ್ರಮವಾಗಿ ರಯಿಚುರು, ರಾಯಿಚೂರು ಎಂದಿದೆ. ರಾಯಚೂರು ಪದದ ಉಲ್ಲೇಖಗಳ ಮೂಲಕ ಈ ಪದದ ರೂಪ ಸ್ಪಷ್ಟವಾಗುವಲ್ಲಿ ಸಹಕಾರಿಯಾಗಿದೆ.

೭. ಎರಡು ನದಿಗಳ ನಡುವಣ ಪ್ರದೇಶವನ್ನು ಗ್ರೀಕ್ ಭಾಷೆಯಲ್ಲಿ ಮೆಸಪಟೋಮಿಯ ಎಂದು ಕರೆಯಲಾಗುತ್ತದೆ. ಪುರಾತನ ಗ್ರೀಕರು ಈ ಶಬ್ದವನ್ನು ಸೃಷ್ಟಿಸಿರುವಂತೆ ಕಂಡುಬರುತ್ತದೆ. ಮಹಾದೇವ(ಅನು), ೨೦೧೦, ಸರ್ವಮಂಗಳ(ಮೂಲ), "ಮೆಸಪಟೋಮಿಯಾ ನಾಗರಿಕತೆ ಹುಟ್ಟು ಹಾಗೂ ಬೆಳವಣಿಗೆ" ಮೋಹನ್‌ಕೃಷ್ಣ ರೈ ಕೆ(ಸಂ), "ಏಷ್ಯಾ: ಚರಿತ್ರೆ ವಿವಿಧ ಆಯಾಮಗಳು" ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ ೧, ಇದೇ ಅರ್ಥವನ್ನು ಚಂದ್ರಶೇಖರ್ ಎಸ್, ೧೯೯೫, ಇತಿಹಾಸ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೯ರಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಬಹುದಾಗಿದೆ.

೮. ಎಡೆದೊರೆ ಎಂಬ ಪದದ ಅರ್ಥವನ್ನು ಕನ್ನಡ ರತ್ನಕೋಶದಿಂದ ಪಡೆಯಲಾಗಿದೆ. ಎಡೆ+ ತೊರೆ ಎರಡು ಪ್ರತ್ಯೇಕ ಶಬ್ದಗಳಾಗಿವೆ. ಕರ್ನಾಟಕದಲ್ಲಿ ಈ ಪದದ ಉಲ್ಲೇಖ ಕಂಡುಬರುತ್ತದೆ(ಕನ್ನಡ ರತ್ನಕೋಶ(ಪರಿಷ್ಕೃತ), ೨೦೦೯, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪುಟ ೩೯ರಲ್ಲಿ ೨ನೆಯ ಅರ್ಥ ಮತ್ತು ಪುಟ ೧೨೮ರಲ್ಲಿ ೨ನೆಯ ಅರ್ಥವನ್ನು ಈ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ). ಒಂದು ಸಾಮ್ರಾಜ್ಯದ ಅಥವಾ ರಾಷ್ಟ್ರದ ಆಡಳಿತವನ್ನು ತೃಪ್ತಿಕರವಾಗಿಯೂ, ಆಡಳಿತಾತ್ಮಕ ಲೋಪ-ದೋಷಗಳು ಬಾರದಂತೆ ನಿರ್ವಹಿಸಲು ಒಂದು ಸಾಮ್ರಾಜ್ಯವನ್ನು ಶ್ರೇಣೀಕೃತವಾಗಿ ವಿಭಜಿಸಿಕೊಂಡು ಆಡಳಿತವನ್ನು ನಿರ್ವಹಿಸುತ್ತಿದ್ದುದು ಇತಿಹಾಸದಿಂದ ತಿಳಿದು ಬರುವ ವಿಷಯವೇ ಆಗಿದೆ. ಪ್ರಾಚೀನ ಇತಿಹಾಸ ಮತ್ತು ಮಧ್ಯಕಾಲಿನ ಇತಿಹಾಸದಲ್ಲಿ ರಾಜ್ಯವನ್ನು ಸಮರ್ಪಕವಾಗಿ ವಿಭಜಿಸಿ ಆಡಳಿತ ನಿರ್ವಹಣೆಯಲ್ಲಿ ಒಂದು ಹೊಸ ಆಯಾಮವನ್ನು ಅಂದಿನ ಆಡಳಿತಗಾರರು ಸೃಷ್ಟಿಸಿ ಕೊಟ್ಟಿದ್ದಾರೆಂದರೆ ತಪ್ಪಾಗಲಾರದು. ಪ್ರಮುಖವಾಗಿ ಮಧ್ಯಕಾಲೀನ ಇತಿಹಾಸ ಕಾಲದ ಆಡಳಿತ ನಿರ್ವಹಣೆಯನ್ನು ಪರಿಶೀಲಿಸಿದಾಗ, ರಾಜ್ಯವನ್ನು ನಾಡು, ಮಂಡಲ, ವಿಷಯ, ಸೀಮೆ, ವೇಂಟೆ, ಚಾವಡಿ, ವಳಿತ, ಸ್ಥಳ, ನಗರ, ಗ್ರಾಮ, ಹಳ್ಳಿ ಮುಂತಾಗಿ ನಿರ್ದಿಷ್ಟ ಶ್ರೇಣೀಕೃತ ವಿಭಾಗಗಳನ್ನು ವಿಭಜಿಸಿ ರಾಜ್ಯವನ್ನು

ಪರಿಪಾಲಿಸಿರುವುದು ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಈ ವ್ಯವಸ್ಥೆಯನ್ನು ಎಲ್ಲಾ ಅರಸು ಮನೆತನದವರು ನಡೆಯಿಸಿಕೊಂಡು ಬಂದಿದ್ದರೂ ಅದು ಕಾಲದಿಂದ ಕಾಲಕ್ಕೆ ಮತ್ತು ಒಂದು ಅರಸುಮನೆತನದಿಂದ ಮತ್ತೊಂದು ಅರಸುಮನೆತನಕ್ಕೆ ಸಾಕಷ್ಟು ರೂಪಾಂತರಗೊಳ್ಳುತ್ತಲೇ ಬಂದಿರುವುದು ಗಮನಾರ್ಹ. ಆಡಳಿತ ವಿಭಾಗ ಅಥವಾ ಭೌಗೋಳಿಕ ವಿಭಾಗಗಳು ಕಾಲಾನುಕ್ರಮದಲ್ಲಿ ವ್ಯಾಪ್ತಿ, ಪದರೂಪ ಮತ್ತು ನಾಮರೂಪಗಳಲ್ಲಿ ಕೆಲವೊಂದು ಸಣ್ಣ ಪುಟ್ಟ ಮಾರ್ಪಾಟುಗಳು ಆಗುತ್ತಿದ್ದವು. ಈ ಮಾತು ಎಡೆತೊರೆನಾಡು ಪದಕ್ಕೂ ಅನ್ವಯವಾಗುತ್ತದೆ. ಎಡೆತೊರೆನಾಡು ಎಡ(ಡೆ) ತೊ(ದೊ)ರೆ+ನಾಡು ಎಂಬ ಪದಗಳಿಂದ ಕೂಡಿದೆ. ಎಡ ಎಂದರೆ ಎಡೆಯಲ್ಲಿರುವ ಸ್ಥಳವೆಂದೂ ಎಡತೊರೆ, ಎಡದೊರೆ ಎಂದರೆ ಎರಡು ತೊರೆಗಳ ನಡುವಿನ ಪ್ರದೇಶವೆಂದೂ ಎಡ ಎಂದರೆ ಎಡಗಡೆ ಇರುವುದು ಎಂಬುದಾಗಿಯೂ ಅರ್ಥೈಸಬಹುದಾಗಿದೆ. ಈ ಉದಾಹರಣೆಯಲ್ಲಿ ರಾಜ್ಯದ ಎಡಗಡೆ ಇರುವ ನಾಡು ಎಂದೂ  ನದಿಯ ಅಥವಾ ತೊರೆಯ ಎಡಭಾಗದಲ್ಲಿರುವ ನಾಡು ಎಂದೂ ಅಭಿಪ್ರಾಯ ಪಡಲಾಗಿದೆ(ಸಿ.ಎಸ್. ವಾಸುದೇವನ್ ೧೯೯೭: ೧೫೭-೧೬೦).

ಎಡೆದೊರೆ ಪದವನ್ನು ಎರಡು+ತೊರೆ ಅಥವಾ ಪಿರಿದು+ತೊರೆ>ಪೆರ್ದೊರೆ>ಎರ್ದೊರೆ> ಎಡದೊರೆ ಎಂದು ವಿಭಜಿಸುವುದು ಸೂಕ್ತವಲ್ಲ. ಎರಡು+ತೊರೆ ಇರ್ದೊರೆಯಾಗಿ ಮತ್ತು ಪೆರ್ದೊರೆ ಎಂಬುದು ಹೆದ್ದೊರೆಯಾಗಿ ಬದಲಾವಣೆ ಹೊಂದುತ್ತದೆ. ಆದ್ದರಿಂದ ಎಡೆಯ+ತೊರೆ>ಎಡೆದೊರೆ ಎಂದು ವಿಭಜಿಸುವುದೇ ಸರಿಯಾದ ಕ್ರಮವಾಗಿದೆ. ಇಲ್ಲಿ 'ತೊರೆ' ಪದದ ಅರ್ಥ ಸ್ಪಷ್ಟವಿದ್ದು, ಎಡೆ ಅಥವಾ ಎಡೆಯ ಎಂಬುದಕ್ಕೆ ಸ್ಥಳ, ದಂಡೆ, ಹತ್ತಿರ, ಕುರುಬ, ಮಧ್ಯ ಮೊದಲಾದ ಅರ್ಥಗಳಿವೆ. ಇತರ ದ್ರಾವಿಡ ಭಾಷೆಗಳಲ್ಲಿ ಎಡೆ ಪದ ಇಡೈ(ತಮಿಳು), ಇಡೆ(ತುಳು, ಮಲೆಯಾಳು, ಎಡೆ-ಎಡ(ಕನ್ನಡ-ತೆಲಗು) ಎಂದು ಬಳಕೆಯಾಗಿದೆ. ಇವು ಮೇಲಿನ ಅರ್ಥಗಳಲ್ಲಿ ಬಳಕೆಯಾಗಿವೆ. ಆದ್ದರಿಂದ ಎಡೆಯ ಪದಕ್ಕೆ ದಂಡೆ, ಹತ್ತಿರ, ಸ್ಥಾನ ಎಂದು ಅರ್ಥ ಹಚ್ಚುವುದೇ ಸರಿಯಾದ ಕ್ರಮ ಎನಿಸುತ್ತದೆ (ಚನ್ನಬಸವ ಹಿರೇಮಠ, ೨೦೦೦, ಎಡದೊರೆನಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪುಟ೧೨).

ಈ ಇಬ್ಬರು ವಿದ್ವಾಂಸರು ಎಡದೊರೆ ಪದದ ಅರ್ಥ ನೀಡಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಸಿ.ಎಸ್. ವಾಸುದೇವನ್ ಅವರು 'ತೊರೆ' ಪದದ ಅರ್ಥವನ್ನು ಸ್ಪಷ್ಟವಾಗಿ ನೀಡುತ್ತಾರೆ. ಆದರೆ 'ಎಡ' ಪದದ ಅರ್ಥವನ್ನು ಸ್ಥಳವೆಂದು ಹೇಳಿ ಎರಡು ನದಿಗಳ ನಡುವಿನ ಪ್ರದೇಶವೆಂದು ತಿಳಿಸುತ್ತಾರೆ. ಚನ್ನಬಸವ ಹಿರೇಮಠ ಅವರು ಕೂಡಾ 'ತೊರೆ'ಯ ಪದವನ್ನು ಬಿಡಿಸುತ್ತಾರೆ. ಆದರೆ ಎಡೆಯ ಪದಕ್ಕೆ ದಂಡೆ, ಹತ್ತಿರ, ಸ್ಥಾನ ಎಂದು ಹೇಳುತ್ತಾ, ಇದೇ ಸರಿಯೆಂದು ವಾದಿಸಿದ್ದಾರೆ. ಈ ಇಬ್ಬರು ವಿದ್ವಾಂಸರು ಬಿಡಿಸಿದ 'ತೊರೆ' ಪದದ ಅರ್ಥ ಸಮಂಜಸವಾಗಿದೆ. ಅಲ್ಲದೆ "ಎಡೆ" ಪದದ ಅರ್ಥವೂ ನಿಚ್ಚಳವಾಗಿರುವುದು ಕಂಡುಬರುತ್ತದೆ. ಆದರೆ ಎಡೆಯ ಪದಕ್ಕೆ ಸಂವಾದಿಯಾಗಿ ದಂಡೆಯ ಬದಲಾಗಿ 'ನಡುವೆ' ಪದದ ಮೂಲಕ ಪ್ರಯತ್ನಿಸಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ೨೦೦೯ರಲ್ಲಿ ಪ್ರಕಟಿಸಿದ ಕನ್ನಡ ರತ್ನಕೋಶ(ಪರಿಷ್ಕೃತ)ದಲ್ಲಿ 'ಎಡೆದೊರೆ' ಅರ್ಥವನ್ನು ಹೀಗೆ ಗಮನಿಸಬಹುದು. 'ಎಡೆ' ಎಂದರೆ ಸ್ಥಳ, ನಡುವೆ, ಆಸ್ಪದ, ಹತ್ತಿರ, ನೈವೇದ್ಯ, ಊಟ, ಸುಲಿ ಎಂಬರ್ಥಗಳಿವೆ. 'ತೊರೆ' ಎಂದರೆ ಹೊಳೆ, ಬಿಡು, ತ್ಯಜಿಸು ಎಂಬರ್ಥಗಳಿವೆ. ಇಲ್ಲಿನ ಶಬ್ದಾರ್ಥಗಳನ್ನು ಗಮನಿಸಿದಾಗ ಎಡೆದೊರೆ ಎಂದರೆ ಎಡೆಯ ಪದವನ್ನು ದಂಡೆ ಎನ್ನುವುದಕ್ಕೆ ಸಂವಾದಿಯಾಗಿ ನಡುವೆ ಎಂಬ ಪದವನ್ನು ಬಳಸಿಕೊಂಡರೆ ಇಲ್ಲಿ ಎರಡು ಎಂಬುದು ಗೋಚರವಾಗುತ್ತದೆ. ಹಾಗಾಗಿ ಎರಡು ನದಿಗಳ ನಡುವಿನ ಪ್ರದೇಶವನ್ನು ಎಡೆದೊರೆ ನಾಡು ಎಂದು ಕರೆಯುವುದು ಸೂಕ್ತವಾಗಿದೆ.

೯. ಎಡೆದೊರೆ ನಾಡಿನ ಉಲ್ಲೇಖ ಕ್ರಿ.ಶ. ೮೩೭ರ ಕೆಸರಬಾವಿ ಶಾಸನದಲ್ಲಿ ಕಂಡುಬರುತ್ತದೆ. ಎಡದೊರೆ ನಾಡಿನ ವ್ಯಾಪ್ತಿಯನ್ನು ಸ್ಥೂಲವಾಗಿ ಇಂದಿನ ರಾಯಚೂರು, ಕೊಪ್ಪಳ ಮತ್ತು ಸುರಪುರ, ಶಹಾಪುರ

ತಾಲೂಕಿನ ವ್ಯಾಪ್ತಿಯನ್ನು ಹೊಂದಿದೆ. ಆದರೆ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಕೆಸರಬಾವಿಯ ಶಾಸನದಲ್ಲಿ 'ಎಡದೊರೆ ನಾಡು' ಎಂದು ಉಲ್ಲೇಖಗೊಂಡಿದೆ. ಈ ಪ್ರದೇಶ ಎಡದೊರೆ ನಾಡಿನ ವ್ಯಾಪ್ತಿಗೆ ಸೇರಿತ್ತೇ ಇಲ್ಲವೆ ಎಂಬುದನ್ನು ತಿಳಿದು ಬರುವುದಿಲ್ಲ. ಕೆಸರಬಾವಿಯ ಶಾಸನದ ಉಲ್ಲೇಖವನ್ನು ಗಮನಿಸಿದರೂ ಎಡೆದೊರೆ ನಾಡಿಗೆ ಸೇರದಿರುವುದನ್ನು ಚರ್ಚಿಸದಿರುವುದು ಗಮನಿಸಬಹುದು. ಈ ಅಂಶವನ್ನು ಗಮನಿಸಿದಾಗ ಎಡೆದೊರೆ ಎಂಬ ಉಲ್ಲೇಖ ನದಿಗಳ ಹತ್ತಿರ ಪ್ರದೇಶದಲ್ಲಿರುವ ಸ್ಥಳಗಳಿಗೆ ಈ ಹೆಸರು ಕಂಡುಬರುವುದು ಸಾಮಾನ್ಯ ಸಂಗತಿಯಾಗಿದೆ ಎಂದೆನಿಸುತ್ತದೆ (ಚನ್ನಬಸವ ಹಿರೇಮಠ, ೨೦೦೮, ಸತ್ಯದಹಾದಿ-೧, ಭಂಡಾರ ಪ್ರಕಾಶನ, ಮಸ್ಕಿ, ಪುಟ ೧೪).

೧೦. ಎಡೆನಾಡಿನ ಮೊದಲ ಉಲ್ಲೇಖ ಬಸವನಪುರದ ಕ್ರಿ.ಶ.೭-೮ನೆಯ ಶತಮಾನದ ತಾಮ್ರ ಪಟ ಶಾಸನದಲ್ಲಿ ಕಂಡುಬರುತ್ತದೆ. ಇದು ಮೈಸೂರು ಭಾಗದಲ್ಲಿ ಭಾಷಿಕ ದೃಷ್ಟಿಯಿಂದ ಎಡತೊರೆ (ಎಡದೊರೆ ಪದವನ್ನು ಗಮನಿಸುವುದು ಅಗತ್ಯ. ಎಂಟನೆಯ ಶತಮಾನದ ತಾಮ್ರಪಟ ಶಾಸನದಲ್ಲಿ "ಎಡತೊರೆ ವಿಷಯ" ಎಂದು ಉಲ್ಲೇಖತವಾಗಿದೆ. ನಂತರದ ಕಾಲಘಟ್ಟದಲ್ಲಿ ಎಡತೊರೆ ನಾಡು ಎಡೆನಾಡಾಗಿ ಮಾರ್ಪಟ್ಟಿದ್ದು ೯ನೆಯ ಶತಮಾನದ ತರುವಾಯ ಎಡದೊರೆ ನಾಡಾಗಿ ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಈ ಭಾಗ ಕಾವೇರಿ ಮತ್ತು ಕಪಿಲಾ ನದಿಗಳ ನಡುವಿನ ಪ್ರದೇಶದಲ್ಲಿ ಗುರುತಿಸಿಕೊಂಡಿದೆ(ವಾಸುದೇವನ್ ಸಿ.ಎಸ್ ೧೯೯೭, ಎಡೆನಾಡು ಒಂದು ಆಡಳಿತಾಂಗ ವಿಭಾಗ: ಒಂದು ಅಧ್ಯಯನ, ಇತಿಹಾಸ ದರ್ಶನ ೧೨, ಕರ್ನಾಟಕ ಇತಿಹಾಸ ಆಕಾಡೆಮಿ, ಬೆಂಗಳೂರು, ಪುಟ ೧೫೭-೧೫೯).

೧೧. ಈ ವಿಷಯವನ್ನು ಕುರಿತು ಎಡೆದೊರೆ ನಾಡಿನ ಅತ್ಯಂತ ಪ್ರಾಚೀನ ಉಲ್ಲೇಖ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕಂಡುಬರುತ್ತದೆ. ಅದು ಮಾನವಿ ತಾಲೂಕಿನ ಭೋಗಾವತಿ ಶಾಸನದಲ್ಲಿದೆ. ಈ ಶಾಸನವನ್ನು ಕ್ರಿ.ಶ. ೮೯೧-೮೯೨ರಲ್ಲಿ ಹಾಕಿಸಲಾಗಿದೆ. ಈ ಪ್ರದೇಶದಲ್ಲಿ ಈ ಶಾಸನದ ಮೂಲಕ ಎಡೆದೊರೆ ನಾಡು ಎಂದು ಕರೆಯಲು ಆರಂಭಿಸಲಾಯಿತು(ದೇವರಕೊಂಡಾರೆಡ್ಡಿ(ಸಂ), ೨೦೦೩, ಕ.ವಿ.ವಿ.ಶಾ.ಸಂ-೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕ.ವಿ.ಹಂ, ಪುಟ ೨೪೨ ಮತ್ತು ಚನ್ನಬಸವ ಹಿರೇಮಠ, ೨೦೦೦, ಎಡದೊರೆ ನಾಡು ಪ್ರಸಾರಾಂಗ, ಕವಿಹಂ, ಪುಟ ೧).

೧೨. ಗಿರಿರಾಜ ಹೊಸಮನಿ, ೧೯೮೬, ಲಿಂಗಸೂಗೂರು ತಾಲೂಕು ದರ್ಶನ, ಐಬಿಹೆಚ್ ಪ್ರಕಾಶನ, ಬೆಂಗಳೂರು, ಪುಟ ೧೬

೧೩. ಸುಂದರ ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ಪುಟ ೮.

೧೪. ಅದೇ, ಪುಟ ೧೦.

೧೫. ಅದೇ, ಪುಟ ೧೧.

೧೬. ಅದೇ, ಪುಟ ೧೧.

೧೭. ಮಹೇಶ, ೨೦೦೬, ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೭ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ).

೧೮. ಅದೇ, ಪುಟ ೧೮.

೧೯. ಅಮರೇಶ ಆಲ್ಕೋಡ, ೨೦೧೧, ಅಲ್ಕೋಡ ಒಂದು ಪುರಾತತ್ವ ನೆಲೆ: ಹೊಸ ಶೋಧ, ಸುದ್ದಿಮೂಲ ದೀಪಾವಳಿ ವಿಶೇಷಾಂಕ-೨೦೧೧, ರಾಯಚೂರು, ಪುಟ ೩೪-೩೫

೨೦. ಚಂದ್ರಶೇಖರ ಎಚ್, ೨೦೧೦, ದೇವದುರ್ಗ ತಾಲೂಕಿನ ಎರಡು ಪ್ರಾಗೈತಿಹಾಸಿಕ ನೆಲೆಗಳು, ವೀರಹನುಮಾನ(ಸಂ), ದೇವದುರ್ಗ ತಾಲೂಕು ದರ್ಶನ, ರಾಯಚೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ಪುಟ ೫.

೨೧. ಚಿತ್ರಗಾರ ಎಚ್.ಎನ್., ೧೯೯೯, ರಾಯಚೂರು ಜಿಲ್ಲೆಯ ಐತಿಹಾಸಿಕ ನೆಲೆಗಳು, ರಾಯಚೂರು ೫ನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮಾವೇಶ, "ಸ್ಮರಣ ಸಂಚಿಕೆ, ಲಿಂಗಸೂಗೂರು, ಪುಟ ೮-೯.

೨೨. ಅಮರೇಶ ಯತಗಲ್(ಸಂ), ೨೦೧೦, ದೋ-ಅಬ್ ರಾಯಚೂರು ಇತಿಹಾಸ, ರಾಯಚೂರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು, ಪುಟ ೨.

೨೩. ಅದೇ, ಪುಟ ೩.

೨೪. ಚಿತ್ರಗಾರ, ೧೯೯೯, ಪೂರ್ವೋಕ್ತ ಪುಟ ೯.

೨೫. ಅಮರೇಶ ಯತಗಲ್, ೨೦೧೦, ಪೂರ್ವೋಕ್ತ, ಪುಟ ೩.

೨೬. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೫೮೮.

೨೭. ಅದೇ, ಪುಟ ೫೮೪-೫೮೭.

೨೮. ಅದೇ, ಪುಟ ೫೯೬-೫೯೯.

೨೯. ಅದೇ, ಪುಟ ೫೯೫.

೩೦. ಅದೇ, ಪುಟ ೫೮೮.

೩೧. ಅದೇ, ಪುಟ ೫೮೮-೫೯೩.

೩೨. ಅದೇ, ಪುಟ ೫೯೭-೬೦೧.

೩೩. ಅದೇ, ಪುಟ ೬೦೧-೬೦೨.

೩೪. ಅಮರೇಶ ಆಲ್ಕೋಡ, ೨೦೧೧, ಪೂರ್ವೋಕ್ತ, ಪುಟ ೩೪-೩೫.

೩೫. ಶಿವತಾರಕ್ ಕೆ.ಬಿ, ೨೦೦೧, ಪೂರ್ವೋಕ್ತ, ಪುಟ ೬೦೦.

೩೬. ಅದೇ, ಪುಟ ೫೮೮-೫೯೫.

೩೭. ಅದೇ, ಪುಟ ೫೯೪.

೩೮. ಅದೇ, ಪುಟ ೫೯೭-೬೦೦.

೩೯. ಅಮರೇಶ ಯತಗಲ್(ಸಂ), ೨೦೧೦, ಪೂರ್ವೋಕ್ತ, ಪುಟ ೨.

೪೦. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪುಟ ೬೦೧.

೪೧. ಅದೇ, ಪುಟ. ೫೮೬-೬೦೧.

೪೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಲಿಂಗಸೂಗೂರು-೨೯, ಮಸ್ಕಿ: ಕ್ರಿ.ಪೂ. ೩ನೆಯ ಶತಮಾನ, ಪುಟ ೧೬೧-೧೬೨.

೪೩. ಪಂಚಮುಖಿ ಆರ್.ಎಸ್., ೨೦೦೮, ಕರ್ನಾಟಕ ಇತಿಹಾಸ-೧, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ಪುಟ ೭೩.

೪೪. ಸೂರ್ಯನಾಥ ಕಾಮತ್, ೨೦೦೬, ತ್ರಿಭುವನ ಸ್ಕೂಲ್ ಅಟ್ಲಾಸ್-ಕರ್ನಾಟಕ, ಪ್ರೋಟಾನ್ ಸೊಲ್ಯೂಷನ್ಸ್ ಲಿಮಿಟೆಡ್, ಬೆಂಗಳೂರು, ಪುಟ ೬೮.

೪೫. ಶರ್ಮ ಆರ್.ಎಸ್., ೨೦೧೦, ಪ್ರಾಚೀನ ಭಾರತ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ ೨೪೦-೪೧.

೪೬. ದೇವರಕೊಂಡಾರೆಡ್ಡಿ(ಸಂ),೨೦೦೩,ಪೂರ್ವೋಕ್ತ,ರಾಯಚೂರು-೪೮, ಕಲಮಲ-ಕ್ರಿ.ಶ.೯೨೦, ಪುಟ ೩೨.

೪೭. ಅದೇ, ಸಿಂಧನೂರು-೪೯, ಬೆಳಗುರ್ಕಿ, ಕ್ರಿ.ಶ. ೯೯೨, ಪುಟ ೪೧೯

೪೮. ಅದೇ, ದೇವದುರ್ಗ-೫, ಗಬ್ಬೂರು-ಕ್ರಿ.ಶ. ೧೧೭೦, ಪುಟ ೫೬.

೪೯. ನಾಗರಾಜರಾವ್, ೨೦೦೦, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಎ.ವಿ. ನರಸಿಂಹ ಮೂರ್ತಿ(ಸಂ), ಭಾರತೀಯ ವಿದ್ಯಾಭವನ, ಬೆಂಗಳೂರು, ಪುಟ ೨೫೨.

೫೦. ಮೃತ್ಯುಂಜಯ ಹೊರಕೇರಿ, ೨೦೦೫, ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪುಟ ೨.

೫೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೪೫, ರಾಯಚೂರು-ಕ್ರಿ.ಶ. ೧೨೯೪, ಪುಟ ೨೯-೩೦.

೫೨. ಅದೇ, ಲಿಂಗಸೂಗೂರು-೫, ಕರಡಕಲ್-ಕ್ರಿ.ಶ. ೧೧೯೧, ಪುಟ ೧೩೦-೧೩೧

೫೩. ವಿಶ್ವನಾಥ(ಅನು), ೨೦೦೧, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಎ.ವಿ.ನರಸಿಂಹ ಮೂರ್ತಿ(ಸಂ), ಭಾರತೀಯ ವಿದ್ಯಾಭವನ, ಬೆಂಗಳೂರು, ಪುಟ ೩೮೪-೮೫.

೫೪. ಶ್ರೀನಿವಾಸರಾವ್, ೧೯೫೬, ರಾಯಚೂರು ಇತಿಹಾಸ, ಕರ್ನಾಟಕ ಸಂಘ ರಾಯಚೂರು, ಪುಟ ೮.

೫೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೨೩, ರಾಯಚೂರು: ಕ್ರಿ.ಶ. ೧೫೭೦, ಪುಟ ೧೯.

೫೬. ಅದೇ, ಲಿಂಗಸೂಗೂರು-೧೪, ಜಲದುರ್ಗ: ಕ್ರಿ.ಶ. ೧೬೯೯-೧೭೦೦, ಪುಟ ೧೪೮.

೫೭. ರಾಮಣ್ಣ ಹವಳೆ, ೨೦೧೦, ಹೈದರಾಬಾದ್ ಸಂಸ್ಥಾನ ವಿಮೋಚನೆಯಲ್ಲಿ ರಾಯಚೂರು ಜಿಲ್ಲೆಯ ಹೋರಾಟ, ರಾಯಚೂರು ಜಿಲ್ಲಾ ಸ್ವಾತಂತ್ರ ಹೋರಾಟಗಾರರ ಹಾಗೂ ಉತ್ತರಾಧಿಕಾರಿಗಳ ಸಂಘ, ರಾಯಚೂರು, ಪುಟ ೩-೪.

೫೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೧, ಲಿಂಗಸೂಗೂರು: ಕ್ರಿ.ಶ. ೧೧೨೪, ಪುಟ ೧೨೩.

೫೯. ಅದೇ, ಸಿಂಧನೂರು-೧೨ ಮುಕ್ಕುಂದಿ: ಕ್ರಿ.ಶ. ೧೦೨೧, ಪುಟ ೩೬೮.

೬೦. ಅದೇ, ಮಾನ್ವಿ-೧೫, ಮಾನ್ವಿ: ಕ್ರಿ.ಶ. ೧೦೫೨, ಪುಟ ೨೩೭.

□

ಅಧ್ಯಾಯ ಮೂರು

# ರಾಯಚೂರು ದೋ-ಅಬ್ ಪ್ರದೇಶಕ್ಕಾಗಿ ವಿವಿಧ ಅರಸುಮನೆತನಗಳ ನಡುವೆ ನಡೆದ ಯುದ್ಧಗಳು: ವಿಶ್ಲೇಷಣೆ(ಕ್ರಿಪೂ. ೩೨೩ - ಕ್ರಿಶ. ೧೯ನೆಯ ಶತಮಾನ)

---

## ೩.೧.

ಯುದ್ಧವನ್ನು ಸಮರ, ಕದನ, ಕಾಳಗ, ಹೋರಾಟ ಮತ್ತು ಜಗಳ ಎಂಬ ಅರ್ಥಗಳಿಂದ ಕರೆಯಲಾಗುತ್ತದೆ. ಯುದ್ಧ ಚತುರೋಪಾಯಗಳಲ್ಲಿ ಒಂದಾಗಿದೆ. ಯುದ್ಧ ಎಂಬ ಪದವನ್ನು ಪ್ರಸ್ತುತ ಅಧ್ಯಯನದಲ್ಲಿ ಹೋರಾಟ ಎಂದು ಬಳಸಲಾಗಿದೆ. ಪ್ರತಿಯೊಬ್ಬರೂ ಮೇಲುಗೈ ಸಾಧಿಸುವ ಉದ್ದೇಶದಿಂದ ಪ್ರಾಗೈತಿಹಾಸಿಕ ಕಾಲದಿಂದಲೂ ಹೋರಾಟ ಮಾಡಿರುವುದು ಚರಿತ್ರೆಯಲ್ಲಿ ಕಂಡುಬರುತ್ತದೆ. ಮನುಷ್ಯ ತನಗೆ ಅಗತ್ಯವಿರುವುದನ್ನು ಪಡೆದುಕೊಳ್ಳಲು ಅನುಸರಿಸಿದ ಮಾರ್ಗವೇ ಹೋರಾಟವಾಗಿದೆ. ಅನ್ನ, ನೀರು, ವಸತಿ, ಬಟ್ಟೆ, ಸಂಪತ್ತು, ರಾಜ್ಯ, ಭೂಮಿ ಮುಂತಾದ ಜೀವನದ ಮೂಲಭೂತ ಅಗತ್ಯಗಳನ್ನು ಪಡೆಯಲು ಪ್ರತಿಯೊಂದು ಜೀವಿ ತನ್ನ ಯೋಗ್ಯತಾನುಸಾರ ಹೋರಾಟ ಮಾಡಿರುವುದನ್ನು ಗಮನಿಸಬಹುದಾಗಿದೆ. ಆರಂಭದಲ್ಲಿ ಆಹಾರಕ್ಕಾಗಿ ನಡೆದ ಮಾನವನ ಹೋರಾಟ ನಂತರ ಸ್ಪರ್ಧೆಯಾಗಿ ಪರಸ್ಪರ ವಿರೋಧಿ ಬಣಗಳಾಗಿ ಅಧಿಕಾರ ಸ್ಥಾಪನೆಗಾಗಿ ಹೋರಾಡಿರುವುದು ಚರಿತ್ರೆ ಬರವಣಿಗೆಗಳಿಂದ ತಿಳಿದುಬರುತ್ತದೆ. ಈ ಬಗೆಯಲ್ಲಿ ಹೋರಾಟ ನಡೆಯಲು ರಾಜ್ಯ ನಿರ್ಮಾಣ ಪ್ರಕ್ರಿಯೆಯೂ ಕಾರಣವಾಗಿದೆ. ರಾಜ್ಯವೊಂದು ರಚನೆಯಾದಾಗ ನಿರ್ದಿಷ್ಟ ಪ್ರದೇಶದಲ್ಲಿ ನೆಲೆಸಿರುವ ಜನರನ್ನು ಆಳುವ ಸಾರ್ವಭೌಮ ಶಕ್ತಿಯಾಗಿರುತ್ತದೆ. ಅಲ್ಲಿ ಆಳ್ವಿಕೆಯನ್ನು ಪ್ರಭುತ್ವದ ಮೂಲಕ ನಡೆಸಲಾಗುತ್ತದೆ. ಪ್ರಭುತ್ವವನ್ನು ಹೊಂದಿರುವ ಕೆಲವರು ಮಾತ್ರ ಅಧಿಕಾರವನ್ನು ಚಲಾಯಿಸಲು ಹಕ್ಕುವುಳ್ಳವರಾಗಿರುತ್ತಾರೆ. ರಾಜ್ಯವೊಂದು ತನ್ನ ಅಧಿಕಾರದ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳಲು ಹೋರಾಟ ಮಾಡಬೇಕಾಯಿತು. ಇದರಿಂದ ಅನೇಕ ಅರಸುಮನೆತನಗಳು ತಮ್ಮ ಪ್ರಾಬಲ್ಯವನ್ನು ಹೆಚ್ಚು ಮಾಡಿಕೊಳ್ಳಲು ಪ್ರಯತ್ನಿಸಿ ರುವುದನ್ನು ಚರಿತ್ರೆಯಿಂದ ಗಮನಿಸಬಹುದು. ಅಧಿಕಾರ ಸ್ಥಾಪನೆಯ ದಾಹ ಹೊಂದಿರುವ ಅನೇಕ ಅರಸು ಮನೆತನಗಳನ್ನು ಹೋರಾಟಕ್ಕೆ ಅಣಿ ಮಾಡಿರುವ ಪ್ರದೇಶಗಳಲ್ಲಿ ರಾಯಚೂರು ದೋ-ಅಬ್ ಪ್ರದೇಶವೂ ಒಂದಾಗಿದೆ.

ಪ್ರಾಚೀನ ಭಾರತದಲ್ಲಿ ಕ್ರಿಪೂ. ಆರು ಅಥವಾ ಐದನೆಯ ಶತಮಾನದಲ್ಲಿ ರಾಜ್ಯ ವ್ಯವಸ್ಥೆಗಳು ಬೆಳೆದು ಬರಲು ಪ್ರಾರಂಭಿಸಿದ್ದವು. ಕ್ರಿಪೂ. ಮೂರನೆಯ ಶತಮಾನದಲ್ಲಿ ರಾಜಪ್ರಭುತ್ವದ ರಾಜ್ಯ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಅನೇಕ ರಾಜ್ಯಗಳು ರಾಜಮನೆತನಗಳ ಚರಿತ್ರೆಯಾಗಿ ರೂಪುಗೊಂಡಾಗ ಪರಸ್ಪರ ಕಾದಾಟದಲ್ಲಿ ತೊಡಗಿ ಒಂದನ್ನೊಂದು ಆಕ್ರಮಿಸಲು ಪ್ರಯತ್ನಿಸುತ್ತಿದ್ದವು. ಕಾದಾಟಕ್ಕೆ ಕಾರಣ– ಒಂದು ಅಧಿಕಾರ ಸ್ಥಾಪನೆ, ಇನ್ನೊಂದು ರಾಜ್ಯಾದಾಯವನ್ನು ಹೆಚ್ಚಿಸುವುದಾಗಿತ್ತು. ಅಧಿಕ ಪ್ರಮಾಣದಲ್ಲಿ ರಾಜ್ಯಾದಾಯ ತಂದುಕೊಡುವ ಫಲವತ್ತಾದ ಕೃಷಿ ಭೂಮಿ, ನದಿ ಬಯಲು ಪ್ರದೇಶ, ಬೆಲೆಬಾಳುವ ಚಿನ್ನ, ತಾಮ್ರ, ಕಬ್ಬಿಣದ ಅದಿರು ಮುಂತಾದ ಖನಿಜ ನಿಕ್ಷೇಪಗಳಿಂದ ಕೂಡಿದ ಸಂಪದ್ಭರಿತವಾದಂಥ ಪ್ರದೇಶಗಳನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಳ್ಳುವ, ಅವುಗಳ

ಮೇಲೆ ತಮ್ಮ ಪ್ರಭುತ್ವ ಸಾಧಿಸುವ ಮಹತ್ವಾಕಾಂಕ್ಷೆ ಹೊಂದಿರುವುದು ಗೋಚರಿಸುತ್ತದೆ. ಅಂಥ ಪ್ರದೇಶಗಳು ಭಾರತದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಅವು ರಾಜಕೀಯ ಸ್ಥಿತ್ಯಂತರಗಳಿಗೆ ಕಾರಣವಾಗಿ ಪ್ರತಿಷ್ಠಿತ ಕೇಂದ್ರಗಳಾಗಿಯೂ ಕಂಡುಬರುತ್ತವೆ. ದಕ್ಷಿಣ ಭಾರತದಲ್ಲಿ ರಾಯಚೂರು ದೋ-ಅಬ್ ಪ್ರದೇಶ ಪ್ರಮುಖವಾದುದಾಗಿದೆ. ಈ ಪ್ರದೇಶಕ್ಕಾಗಿ ಅನೇಕ ಅರಸು ಮನೆತನಗಳು ಹೋರಾಟ ಮಾಡಿರುವುದನ್ನು ಗಮನಿಸಬಹುದಾಗಿದೆ.

ರಾಯಚೂರು ದೋ-ಅಬ್ ಪ್ರದೇಶ ಮಗಧ ಮತ್ತು ಕನೋಜ್ ಹಾಗೂ ದಕ್ಷಿಣ ರಾಜ್ಯಗಳಂತೆ ಎರಡು ನದಿಗಳ ಬಯಲು ಪ್ರದೇಶವಾಗಿದೆ. ಕೃಷ್ಣಾ ಮತ್ತು ತುಂಗಭದ್ರ ನದಿಗಳು ಈ ಪ್ರದೇಶದ ರಕ್ಷಣಾ ಕವಚವಾಗಿವೆ. ಈ ಪ್ರದೇಶದಲ್ಲಿ ಸುಮಾರು ೬೧ ಯುದ್ಧಗಳು ನಡೆದಿರುವುದಾಗಿ ತಿಳಿದುಬರುತ್ತದೆ. ಒಂದು ಪ್ರದೇಶ ಪ್ರಧಾನ ಭೂಮಿಕೆಯಲ್ಲಿ ಗುರುತಿಸಿಕೊಳ್ಳಬೇಕಾದರೆ ಎರಡು ಪ್ರಮುಖ ಅಂಶಗಳು ಸಹಕಾರಿಯಾಗಿರುವುದನ್ನು ಗಮನಿಸಬಹುದು. ಒಂದು, ಭೌಗೋಳಿಕ ಸನ್ನಿವೇಶ, ಇನ್ನೊಂದು ಆರ್ಥಿಕತೆಯ ಲಕ್ಷಣಗಳನ್ನು ಹೊಂದಿರಬೇಕು. ಇಂತಹ ಲಕ್ಷಣಗಳನ್ನು ಹೊಂದಿದ ಈ ಪ್ರದೇಶದ ಬಗೆಗೆ ಗಮನ ಹರಿಸುವ ಪ್ರಯತ್ನ ಮಾಡಲಾಗಿದೆ.

ರಾಯಚೂರು ದೋ-ಅಬ್ ಪ್ರದೇಶ ಭೌಗೋಳಿಕವಾಗಿ ಕೃಷ್ಣಾ ಮತ್ತು ತುಂಗಭದ್ರಾ ನದಿಗಳನ್ನು ಗಡಿಗಳಾಗಿ ಪಡೆದಿದೆ. ಇದು ಅನೇಕ ಬೆಟ್ಟ-ಗುಡ್ಡಗಳು, ಹಳ್ಳ-ಕೊಳ್ಳ, ಕೆರೆ-ಕಟ್ಟೆಗಳಿಂದ ಆವೃತ್ತವಾಗಿದ್ದು, ಜನ ವಸತಿ ಕೇಂದ್ರವಾಗಿದೆ. ಅನೇಕ ಜೀವಜಾಲಗಳ ಜೊತೆ ಜೊತೆಯಲ್ಲಿ ಕೃಷಿ, ಪಶುಪಾಲನೆಯ ಪ್ರಮುಖ ಕೇಂದ್ರವಾಗಿ ಗುರುತಿಸಿಕೊಂಡಿದೆ. ಅನೇಕ ಕೋಟೆ ಕೊತ್ತಲಗಳಿಂದ ಕೂಡಿ ರಾಜಕೀಯ ಹೋರಾಟದ ಪ್ರಧಾನ ಕೇಂದ್ರವಾಗಿ ಕಂಡುಬರುತ್ತದೆ. ಜನಜೀವನಕ್ಕೆ ಯೋಗ್ಯವಾದ ಸ್ಥಳವಾಗಿ, ಮಾನವನ ಬದುಕಿಗೆ ಉತ್ತಮವಾದ ಭೌಗೋಳಿಕತೆಯನ್ನು ಈ ಪ್ರದೇಶ ಸಾಧಿಸಿತ್ತು.

ಯಾವುದೇ ಒಂದು ಪ್ರದೇಶದ ಆರ್ಥಿಕ ಸ್ಥಿತಿಗತಿ ಅದರ ಮಹತ್ವವನ್ನು ಹೆಚ್ಚಿಸುತ್ತದೆ. ಇಲ್ಲಿನ ಉತ್ತಮ ಆರ್ಥಿಕತೆಯ ಮೂಲ ಫಲವತ್ತಾದ ಕೃಷಿ ಯೋಗ್ಯ ಭೂಮಿಯಾಗಿದೆ. ಫಲವತ್ತಾದ ಭೂಮಿ ಬೇರೆಡೆ ಇದ್ದರೂ ಸಹ ಇಲ್ಲಿ ಅಳವಡಿಸಿಕೊಂಡಿರುವ ಕೃಷಿ ಪದ್ಧತಿ ಅವುಗಳಿಗಿಂತ ಭಿನ್ನವಾಗಿತ್ತೆನ್ನಬಹುದು. ವಾಣಿಜ್ಯ ಬೆಳೆಗಳಾದ ಹತ್ತಿ, ಕಬ್ಬು, ಎಣ್ಣೆಕಾಳು ಬೆಳೆಗಳು, ಭತ್ತ ಮುಂತಾದವನ್ನು ಬೆಳೆಯಲಾಗುತ್ತಿತ್ತು. ಈ ಬೆಳೆಗಳನ್ನು ಬೇರೆ ಪ್ರದೇಶಗಳಲ್ಲಿ ಬೆಳೆಯುತ್ತಿತ್ತಾದರೂ ಇಲ್ಲಿ ಅಧಿಕ ಪ್ರಮಾಣದಲ್ಲಿ ಉತ್ಪಾದನೆ ಯಾಗುತ್ತಿತ್ತು. ಇಷ್ಟಲ್ಲದೆ ಚಿನ್ನ, ತಾಮ್ರ ಮುಂತಾದ ಅದಿರು ಲಭಿಸುತ್ತಿತ್ತು. ಚಿನ್ನ ಹೆಚ್ಚಿನ ಪ್ರಮಾಣದಲ್ಲಿ ದೊರೆಯುವ ಪ್ರದೇಶ ಇದಾಗಿದೆ. ಇದರ ಜೊತೆಗೆ ತಾಮ್ರದ ನಿಕ್ಷೇಪ ಕಲ್ಲೂರಿನಲ್ಲಿದೆ. ಇಲ್ಲಿ ಕಂಡುಬರುವ ಕುಲುಮೆಗಳು ಆಯುಧಗಳನ್ನು ತಯಾರಿಸಲು ಬಳಸಲಾಗುತ್ತಿತ್ತು. ಗಂಗಾ ಬಯಲಿನಲ್ಲಿ ದೊರೆತಿರುವ ಆಯುಧಗಳಿಗೂ ಇಲ್ಲಿ ಲಭಿಸಿರುವ ಅಸ್ತ್ರಗಳಿಗೂ ಪರಸ್ಪರ ಹೋಲಿಕೆ ಇದೆ. ಇದು ಅರಸುಮನೆತನಗಳ ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿ ಬಳಸುವ ಲೋಹವಾಗಿತ್ತು. ಹಾಗೆಯೇ ವಜ್ರದ ನಿಕ್ಷೇಪವೂ ಇಲ್ಲಿ ಗಮನ ಸೆಳೆದಿದ್ದು, ಪ್ರಧಾನ ಆರ್ಥಿಕ ನೆಲೆಯಾಗಿ ರೂಪುಗೊಂಡಿದೆ.

ಭಾರತದ ಸಂದರ್ಭದಲ್ಲಿ ಭೌಗೋಳಿಕ ಸನ್ನಿವೇಶ ಮತ್ತು ಆರ್ಥಿಕ ನೆಲೆಯ ಮೂಲಕ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡ ಗಂಗಾ-ಯಮುನಾ ದೋ-ಅಬ್ ಪ್ರದೇಶ ಮುಖ್ಯವಾದುದು. ದಕ್ಷಿಣದ ತುದಿಯಲ್ಲಿರುವ ಕಾವೇರಿ, ಪೆನ್ನಾರ್ ಮತ್ತು ವೇಲಾರ್ ನದಿಗಳ ಬಯಲು ಪ್ರದೇಶದಲ್ಲಿ

ಪಲ್ಲವ, ಚೋಳ ಹಾಗೂ ಪಾಂಡ್ಯರ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಈ ಪ್ರದೇಶಗಳಿಗಾಗಿ ಕರ್ನಾಟಕದ ಅರಸರು ಹೋರಾಟ ಮಾಡಿದ ಅನೇಕ ಸಂಗತಿಗಳು ಕಂಡುಬರುತ್ತವೆ. ವ್ಯಾಪಾರ ವಾಣಿಜ್ಯ ಕೇಂದ್ರವಾಗಿ ರೋಮ್‌ನೊಂದಿಗೆ ಸಂಬಂಧ ಹೊಂದಿರುವುದನ್ನು ಗಮನಿಸಬಹುದಾಗಿದೆ. ಇದರಂತೆ ಗಂಗಾ-ಯಮುನಾ ದೋ-ಅಬ್ ಪ್ರದೇಶದಲ್ಲಿ ನಾಲ್ಕು ದಿಕ್ಕಿನಿಂದಲೂ ಆರ್ಥಿಕ ಚಟುವಟಿಕೆಗಳು ನಡೆಯುತ್ತಿದ್ದವು. ವ್ಯಾಪಾರ-ವಾಣಿಜ್ಯ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಮಗಧ ರಾಜ್ಯ ಅನೇಕ ಜನಪದಗಳನ್ನು ಸದೆಬಡೆದು ಏಕರಾಜ್ಯವನ್ನು ಸ್ಥಾಪಿಸುವ ಪ್ರಧಾನ ಕೇಂದ್ರವಾಗಿತ್ತು. ಮಗಧ, ಗಂಗಾ-ಯಮುನಾ ದೋ-ಅಬ್ ಪ್ರದೇಶ, ರಾಯಚೂರು ದೋ-ಅಬ್ ಪ್ರದೇಶ ಹಾಗೂ ದಕ್ಷಿಣ ನದಿ ಬಯಲು ಪ್ರದೇಶಗಳು ಕೃಷಿಯ ಮೂಲಕ ರೂಪುಗೊಂಡ ಆರ್ಥಿಕ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಇಲ್ಲಿ ಕಂಡುಬರುವ ಕೃಷಿ ಕ್ಷೇತ್ರದ ಹೆಚ್ಚುವರಿ ಉತ್ಪಾದನೆ ಈ ಪ್ರದೇಶವನ್ನು ಅಭಿವೃದ್ಧಿಯತ್ತ ಕೊಂಡೊಯ್ದಿತು. ಇದು ರಾಜಕೀಯ ಚಟುವಟಿಗಳು ಗರಿಗೆದರುವಂತೆ ಮಾಡಿತು. ಅಲ್ಲದೆ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಉಂಟಾದವು. ಈ ಪರಿವರ್ತನೆಯ ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶವನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಾಯ ರಾಯಚೂರು ದೋ-ಅಬ್ ಪ್ರದೇಶಕ್ಕಾಗಿ ನಡೆದ ಯುದ್ಧಗಳಿಗೆ ಕಾರಣವಾದ ಅಂಶಗಳನ್ನು ಕುರಿತು ಮೊದಲನೆಯ ಭಾಗದಲ್ಲಿ ವಿವರಿಸಲಾಗಿದೆ. ಯುದ್ಧಗಳ ಸ್ವರೂಪವನ್ನು ಕುರಿತು ಎರಡನೆಯ ಭಾಗದಲ್ಲಿ ಚರ್ಚಿಸಲಾಗಿದೆ. ಈ ಭಾಗದಲ್ಲಿ ಮೌರ್ಯರಿಂದ ಹಿಡಿದು ನಿಜಾಮರ ಕಾಲದವರೆಗೆ ನಡೆದ ಯುದ್ಧಗಳ ಸ್ವರೂಪ ಕುರಿತಿದೆ. ಮೂರನೆಯ ಭಾಗದಲ್ಲಿ ಈ ಯುದ್ಧಗಳಿಂದಾದ ಪರಿಣಾಮಗಳನ್ನು ತಲಸ್ಪರ್ಶಿಯಾಗಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

ಈ ಮೂರನೆಯ ಭಾಗದಲ್ಲಿ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ಆರ್ಥಿಕತೆಗೆ ಸಂಬಂಧಿಸಿದಂತೆ ಕೃಷಿ ವ್ಯವಸ್ಥೆಯನ್ನು ಕೃಷಿ ಭೂಮಿ ವಿಸ್ತರಣೆಯ ಸ್ವರೂಪ, ಹೆಚ್ಚುವರಿ ಉತ್ಪಾದನೆಗಾಗಿ ನೀರಾವರಿ ವ್ಯವಸ್ಥೆ, ಇದರಿಂದ ಉಂಟಾದ ದಾನ ಪ್ರಕ್ರಿಯೆಯ ಕುರಿತು ವಿಶ್ಲೇಷಿಸುತ್ತಾ, ಭೂಮಾಲಿಕ ವರ್ಗದ ಉದಯ ಮತ್ತು ಊಳಿಗಮಾನ್ಯ ವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದೆ. ಇದರೊಂದಿಗೆ ಕುಶಲಕರ್ಮಿಗಳ ವೃತ್ತಿ ಬದುಕನ್ನು ವಿವರಿಸಲಾಗಿದೆ. ಅಲ್ಲದೆ ತೆರಿಗೆಗಳ ಬಗ್ಗೆ ಅಭ್ಯಸಿಸುತ್ತಾ, ಈ ಪ್ರದೇಶದೊಂದಿಗೆ ಹೊಂದಿರುವ ವರ್ತಕರು ಮತ್ತು ವ್ಯಾಪಾರ ಸಂಬಂಧಗಳನ್ನು ಕುರಿತು ಗಂಭೀರವಾಗಿ ಚರ್ಚಿಸಲಾಗಿದೆ.

ಮೊದಲನೆಯ ಭಾಗದಲ್ಲಿ ಆರ್ಥಿಕತೆಗೆ ಸಂಬಂಧಿಸಿದಂತೆ ಕೃಷಿ ವ್ಯವಸ್ಥೆಯಲ್ಲಿ ಕೃಷಿ ಭೂಮಿ ವಿಸ್ತರಣೆ, ನೀರಾವರಿ, ಕೈಗಾರಿಕೆಗಳು, ಕುಶಲಕರ್ಮಿಗಳು, ಕೃಷಿ ಕೂಲಿಕಾರರು, ಭೂಮಾಪನ ಪದ್ಧತಿ, ತೆರಿಗೆಗಳನ್ನು ಕುರಿತು ವಿವರಿಸಲಾಗಿದೆ. ಮುಂದುವರೆದು ದಾನ ಪ್ರಕ್ರಿಯೆ, ಅದರಿಂದುಂಟಾದ ಭೂಮಾಲಿಕತ್ವ, ಊಳಿಗಮಾನ್ಯತೆ ಮುಂತಾದವನ್ನು ಕುರಿತು ವಿಶ್ಲೇಷಿಸಲಾಗಿದೆ. ಹೆಚ್ಚುವರಿ ಉತ್ಪಾದನೆಯಿಂದ ಉಂಟಾದ ಆರ್ಥಿಕ ಚಟುವಟಿಕೆಗಳು ನಗರೀಕರಣವನ್ನು ಸೃಷ್ಟಿ ಮಾಡಿದುದು, ಇದರ ಹುಟ್ಟು, ಬೆಳವಣಿಗೆ ಮತ್ತು ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಈ ಮೂಲಕ ವರ್ತಕ ಮತ್ತು ವ್ಯಾಪಾರ ಸಂಬಂಧದಲ್ಲಿ ಉಂಟಾದ ಸಾಮಾಜಿಕ ವ್ಯವಸ್ಥೆಯಲ್ಲಿನ ಬದಲಾವಣೆಯನ್ನು ಕುರಿತು ವಿವರಿಸಲಾಗಿದೆ.

ಎರಡನೆಯ ಭಾಗದಲ್ಲಿ ಜಾತಿ ಪದ್ಧತಿ, ಶಿಕ್ಷಣ, ಮಹಿಳೆಯ ಸ್ಥಾನಮಾನಗಳನ್ನು ಬಹುಪತ್ನಿತ್ವ, ಸತಿ ಪದ್ಧತಿ, ದೇವದಾಸಿ ಪದ್ಧತಿ ಕುರಿತು ಚರ್ಚಿಸುವುದರ ಜೊತೆಗೆ ವೈಚಾರಿಕ ಸಾಹಿತ್ಯದ ಪ್ರಭಾವ ಮುಂತಾದವನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಧಾರ್ಮಿಕತೆಯನ್ನು ಈ ಪ್ರದೇಶದಲ್ಲಿ ಪ್ರಭಾವ ಬೀರಿರುವ ಮತ್ತು ರಾಜಕೀಯವಾಗಿ ರಾಜಾಶ್ರಯ ಪಡೆದಿರುವ ಬೌದ್ಧ, ಜೈನ, ವೈಷ್ಣವ, ಶೈವ, ಕಾಳಾಮುಖ ಮತಗಳು, ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳನ್ನು ಕುರಿತು ಅವಲೋಕಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಸ್ಮಾರಕಗಳನ್ನು ಇಲ್ಲಿ ಪ್ರಭುತ್ವದ ಸ್ಮಾರಕಗಳು, ಪ್ರಜೆಗಳ ಸ್ಮಾರಕಗಳೆಂಬ ಎರಡು ಅಂಶಗಳ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಲಾಗಿದೆ. ಈ ರೀತಿ ಈ ಅಧ್ಯಾಯವನ್ನು ಭಾಗಗಳನ್ನಾಗಿ ವಿಂಗಡಿಸಿಕೊಂಡು ಜನಚರಿತ್ರೆ ಕಟ್ಟುವ ಪ್ರಯತ್ನ ಮಾಡಲಾಗಿದೆ.

## ೩.೨. ರಾಯಚೂರು ದೋ-ಅಬ್ ಪ್ರದೇಶಕ್ಕಾಗಿ ನಡೆದ ಯುದ್ಧಗಳಿಗೆ ಕಾರಣವಾದ ಅಂಶಗಳು

ರಾಯಚೂರು ದೋ-ಅಬ್ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಇಲ್ಲಿ ನಡೆದಿರುವ ಹೋರಾಟಗಳಿಗೆ ಕಾರಣಗಳನ್ನು ಗುರುತಿಸಲಾಗಿದೆ. ಅದಕ್ಕೂ ಪೂರ್ವದಲ್ಲಿ ಯುದ್ಧಗಳಿಗೆ ಕಾರಣವಾದ ಚಾರಿತ್ರಿಕ ಘಟನೆಗಳನ್ನು ಕುರಿತು ವಿವಿಧ ಅಧ್ಯಯನಕಾರರು ಗುರುತಿಸಿದ ಕ್ರಮವನ್ನು ಪರಿಶೀಲಿಸಲಾಗಿದೆ.

"ಸಂಘರ್ಷಗಳಲ್ಲಿ ಪಡೆದ ಸಂಪತ್ತು, ವಿಶೇಷವಾಗಿ ಗೋವುಗಳು, ಯೋಧರ ಮತ್ತು ಪುರೋಹಿತರ ಗಳಿಕೆಗಳೇ ಯುದ್ಧಗಳಿಗೆ ಕಾರಣ"ವೆಂದು ಆರ್.ಎಸ್.ಶರ್ಮ ಹೇಳುತ್ತಾರೆ(ಶರ್ಮ ೨೦೦೯:೧೩). "ರಾಜಮನೆತನಗಳ ನಡುವಿನ ಮತ್ಸರ, ಮನೆತನದ ಆಂತರಿಕ ಭಿನ್ನಾಭಿಪ್ರಾಯಗಳು, ಅರಸ ಮತ್ತು ಸಾಮಂತರ ನಡುವೆ ಉಂಟಾದ ತಪ್ಪು ಗ್ರಹಿಕೆಗಳು ಹಾಗೂ ಅಧಿಕಾರಿಗಳ ದೌರ್ಜನ್ಯದ ವಿರುದ್ಧ ಪ್ರತಿಭಟನೆ ಮಾಡುವುದಾಗಿದೆ" ಎಂದು ಶೇಷಾಶಾಸ್ತ್ರಿ ಅಭಿಪ್ರಾಯ ಪಡುತ್ತಾರೆ(ಶೇಷಾಶಾಸ್ತ್ರಿ ೧೯೮೨: ೧೬೦). "ರಾಜಕೀಯ ಪ್ರಭುತ್ವಕ್ಕಾಗಿ, ವೈಯಕ್ತಿಕ ಪ್ರತಿಷ್ಠೆಗಾಗಿ ಯುದ್ಧಗಳು ನಡೆಯುತ್ತಿದ್ದವು" ಎಂದು ಬಿ. ಷೇಕ್‌ಅಲಿಯವರು ಹೇಳುತ್ತಾರೆ(ಷೇಕ್‌ಅಲಿ ೧೯೯೭: ೩). ಅರಸರ ಸಾಮ್ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷೆಯು ಯುದ್ಧಕ್ಕೆ ಮೂಲಭೂತ ಕಾರಣವೆಂದು ಎಸ್.ವೈ. ಸೋಮಶೇಖರ್ ಅವರು ಅಭಿಪ್ರಾಯಪಟ್ಟಿದ್ದಾರೆ(ಸೋಮಶೇಖರ್ ೨೦೦೯: ೧೪). ಅಲ್ಲದೆ ಉತ್ತರಾಧಿಕಾರತ್ವ, ಕಪ್ಪದ ಕಾರಣ, ಸ್ವಜಾತಿ ಕಾರಣ, ಸಿದ್ಧಾಯ, ಉಂಬಳಿ ಪಡೆಯಲು, ಹೆಚ್ಚಿನ ಬಿರುದುಗಳ ಬಗೆಗಿನ ದುರಾಸೆ ಹಾಗೂ ತುರುಗಳು ಮುಂತಾದವು ಪ್ರಮುಖ ಕಾರಣವಾಗಿದ್ದವೆಂದು ಗುರುತಿಸಲಾಗಿದೆ. ಹೆಣ್ಣು, ಹೊನ್ನು, ಮಣ್ಣು(ಭೂಮಿ), ಹೆಸರು ಮತ್ತು ಬಿರುದು, ಶರಣಾಗತರ ರಕ್ಷಣೆ, ಬಂಧು ಮಿತ್ರರಿಗಾಗಿ, ಮದ ಅಥವಾ ಅಹಂಕಾರದಿಂದಾಗಿ ಹಾಗೂ ಸಂಪತ್ತಿಗಾಗಿ ಹೋರಾಡಿರುವುದು ಕಂಡುಬರುತ್ತದೆ (ಪ್ರಭಾಕರರಾವ್ ೨೦೦೬: ೪೬-೫೪). ಹೋರಾಟ ಎಂಬುದು ಮಾನವ ತನ್ನ ವೈಯಕ್ತಿಕ ಪ್ರತಿಷ್ಠೆ, ಅನುಕೂಲತೆಗಳನ್ನು ಹೆಚ್ಚಿಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲವಾಗಿದೆ. ಒಟ್ಟಾರೆ ಈ ಬಗೆಯ ರಾಜಕೀಯ ಹೋರಾಟಗಳಿಗೆ ಮೂಲ ಕಾರಣ ರಾಜ್ಯವ್ಯವಸ್ಥೆಯೇ ಆಗಿದೆ. ಸಂಪತ್ತು ಮತ್ತು ಪ್ರತಿಷ್ಠೆಗಳ ಸಂಕೇತವಾಗಿಯೂ ಹೋರಾಟ ಕಾಣಿಸಿಕೊಂಡಿದೆ. ಬಲ ಮತ್ತು ಸಂಪತ್ತುಗಳಿಂದ ಪ್ರತಿಷ್ಠೆ ಹೆಚ್ಚಾಗುತ್ತದೆ.

ಪ್ರಸ್ತುತ ರಾಯಚೂರು ದೋ-ಅಬ್ ಪ್ರದೇಶದ ವಿವಿಧ ಅರಸು ಮನೆತನಗಳು ತಮ್ಮ ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷೆಯಿಂದ ರಾಜಕೀಯ ಸ್ಥಿತ್ಯಂತರಕ್ಕೆ ಒಳಪಡಬೇಕಾಯಿತು ಎಂಬುದು ಮೇಲ್ನೋಟಕ್ಕೆ ಕಂಡು ಬಂದರೂ ಆಂತರಿಕವಾಗಿ ಅವು ಸಂಪತ್ತಿನ ವ್ಯಾಮೋಹದಿಂದ, ಸಂಪತ್ತು

ಕ್ರೋಡೀಕರಣದ ಮೂಲಕ ಆರ್ಥಿಕ ಭದ್ರತೆ ಹೊಂದುವುದಾಗಿತ್ತು. ಯಾವುದೇ ಪ್ರದೇಶ ಪ್ರಾಮುಖ್ಯತೆ ಪಡೆಯಬೇಕಾದರೆ ಸ್ಥಳೀಯ ಸಂಪನ್ಮೂಲಗಳು ಹೇರಳವಾಗಿ ಇರುವುದರ ಜೊತೆಗೆ ಇತರೆ ಪ್ರದೇಶ ಗಳೊಂದಿಗೆ ಸಂಬಂಧ ಹೊಂದಿರುವುದೂ ಪೂರಕವಾಗಿರುತ್ತದೆ.

ವರ್ತಮಾನದಲ್ಲಿ ಬೆಂಗಳೂರು, ಮುಂಬೈ, ದೆಹಲಿ ಮುಂತಾದ ನಗರಗಳು ಅಧಿಕಾರ ಕೇಂದ್ರಿತ ನೆಲೆಗಳಾಗಿ ಗಮನ ಸೆಳೆದಂತೆ ರಾಯಚೂರು ದೋ-ಅಬ್ ಪ್ರದೇಶ ಕೂಡ ಪ್ರಾಚೀನ, ಮಧ್ಯಕಾಲೀನ ಮತ್ತು ಆಧುನಿಕ ಕಾಲಘಟ್ಟಗಳಲ್ಲಿ ವಿವಿಧ ಅರಸುಮನೆತನಗಳ ಅಧಿಕಾರ ಸ್ಥಾಪನೆಯ ಹಿನ್ನೆಲೆಯಲ್ಲಿ ನಿರಂತರ ಹೋರಾಟದ ಕೇಂದ್ರಬಿಂದುವಾಗಿ ರೂಪುಗೊಂಡಿತ್ತು. ಇದರಿಂದ ರಾಜಕೀಯ ಸ್ಥಿತ್ಯಂತರ ನಡೆದು ಸದಾ ಹೋರಾಟದ ಕೇಂದ್ರವಾಗಿ ನಿರ್ಮಾಣವಾಗುವಂಥ ಅಗತ್ಯವಾದ ಕಾರಣಗಳನ್ನು ರಾಯಚೂರು ದೋ-ಅಬ್ ಪ್ರದೇಶ ಹೊಂದಿತ್ತು ಎಂಬುದು ತಿಳಿದುಬರುತ್ತದೆ.

### ೩.೨.೧. ಆರ್ಥಿಕತೆ

ಈ ಪ್ರದೇಶದ ಆರ್ಥಿಕ ಪ್ರಾಬಲ್ಯತೆಗೆ ಫಲವತ್ತಾದ ಭೂಮಿ ಮತ್ತು ಕೃಷಿಯಲ್ಲಿನ ಹೆಚ್ಚುವರಿ ಉತ್ಪಾದನೆ ಕಾರಣವಾಯಿತು. ಗಣಿಗಾರಿಕೆ, ವ್ಯಾಪಾರ, ವಾಣಿಜ್ಯ ಸಂಬಂಧ, ನಗರಗಳ ಬೆಳವಣಿಗೆ ಹಾಗೂ ಆರ್ಥಿಕ ಚಟುವಟಿಕೆಗಳಿಂದಾಗಿ ಆದಾಯದ ಕೇಂದ್ರವಾಗಿ ಗುರುತಿಸಿಕೊಂಡಿತು.

### ೩.೨.೧.೧. ಫಲವತ್ತಾದ ಭೂಮಿ

ದಖ್ಖನ್ ಪ್ರಸ್ಥಭೂಮಿಯ ಭೂಭಾಗವಾದ ಈ ಪ್ರದೇಶ ಅತ್ಯಂತ ಫಲವತ್ತಾದ ಭೂಮಿಯನ್ನು ಹೊಂದಿದ್ದು, ಕೃಷಿಗೆ ಯೋಗ್ಯವಾಗಿದೆ. ಈ ಭೂಮಿಯನ್ನು ಶಾಸನಗಳಲ್ಲಿ ಕರಿನೆಲ, ಕಪ್ಪು ನೆಲವೆಂದು ಉಲ್ಲೇಖಿಸಲಾಗಿದೆ. ಇಲ್ಲಿ ಹರಿಯುತ್ತಿರುವ ನದಿಗಳು, ಕೆರೆಗಳು, ಹಳ್ಳಗಳು, ಬಾವಿಗಳು ಮತ್ತು ಏತಬಾವಿಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಂಡು ಕೃಷಿ ಚಟುವಟಿಕೆಯನ್ನು ನಡೆಸಲಾಗುತ್ತಿತ್ತು. ಈ ಚಟುವಟಿಕೆಯಲ್ಲಿ ಜನಸಾಮಾನ್ಯರ ಪಾಲು ಅಧಿಕವಾಗಿದ್ದಿತು. ಕೃಷಿ ಚಟುವಟಿಕೆಯಿಂದ ಅಧಿಕ ಪ್ರಮಾಣದಲ್ಲಿ ಭೂಕಂದಾಯ ಸಂಗ್ರಹವಾಗುತ್ತಿತ್ತು. ಈ ಪ್ರದೇಶದಲ್ಲಿ ಹತ್ತಿ, ಭತ್ತ, ಕಬ್ಬು, ಜೋಳ, ಗೋಧಿ, ಎಣ್ಣೆಕಾಳು ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಇಲ್ಲಿನ ಕಪ್ಪು ಭೂಮಿ, ನೀರಾವರಿ ವ್ಯವಸ್ಥೆ, ಭೂಕಂದಾಯ, ಬೆಳೆಯುವ ಬೆಳೆಗಳು ವಿವಿಧ ಅರಸು ಮನೆತನಗಳ ಆಕಾಂಕ್ಷೆಯನ್ನು ಹೆಚ್ಚಿಸಿದವು. ಅನೇಕ ಅರಸರು ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸುವ ಪ್ರಯತ್ನ ಮಾಡಿದರಾದರೂ ಅದು ಕೈಗೂಡದೆ ಕೇವಲ ಹೋರಾಟಕ್ಕೆ ಅಣಿಗೊಳ್ಳುವ ಕಾರಣವಾಗಿ ರೂಪುಗೊಂಡಿತು.

### ೩.೨.೧.೨. ಗಣಿಗಾರಿಕೆ

ಸದ್ಯದ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆ ಗಣಿಗಾರಿಕೆಯ ಮೂಲಕ ಚೀನಾ, ಇಂಡೋನೇಶಿಯಾ, ಜಪಾನ್, ಅಮೆರಿಕಾದಂತಹ ರಾಷ್ಟ್ರಗಳಿಗೆ ಪರಿಚಿತವಾಗಿದೆ. ಇದರಂತೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಚಿನ್ನದ ಗಣಿಗಾರಿಕೆ ನಡೆದಿತ್ತೆಂಬ ಸಂಗತಿ ಕುತೂಹಲ ಮೂಡಿಸುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ ಗಣಿಗಳೆ ರಾಜಭಂಡಾರದ ಮೂಲವಾಗಿತ್ತು. ಸುಭದ್ರ ಭಂಡಾರವಿದ್ದರೆ ಮಾತ್ರ ರಾಜ್ಯದ ಆರ್ಥಿಕ ಸ್ಥಿತಿ ಸದೃಢವಾಗಿರುತ್ತದೆಂದೂ ದಕ್ಷಿಣ ಪಥದಲ್ಲಿ ಚಿನ್ನ ದೊರೆಯುವ ಬಗ್ಗೆ ಸೂಚಿಸಿರುವುದು ಕಂಡುಬರುತ್ತದೆ. ಆದರೆ ಮೌರ್ಯರ ಕಾಲಘಟ್ಟಕ್ಕಿಂತ ಪೂರ್ವದಲ್ಲಿ ಅಂದರೆ ಸಿಂಧೂ

ನಾಗರಿಕತೆಯ ಕಾಲಘಟ್ಟದಲ್ಲಿ ಇಲ್ಲಿನ ಹಟ್ಟಿ ಚಿನ್ನದ ಗಣಿಯಿಂದ ಸಿಂಧೂ ನಾಗರಿಕತೆಯ ನಗರಗಳಿಗೆ ಚಿನ್ನವನ್ನು ರಫ್ತು ಮಾಡಲಾಗುತ್ತಿತ್ತೆಂದು ತಿಳಿದುಬರುತ್ತದೆ(ರಾವ್ ೧೯೯೪: ೧೦೦-೧೧೫). ಅಲ್ಲದೆ ಹಟ್ಟಿ ಚಿನ್ನದ ಗಣಿಯಿಂದ ತೆಗೆದ ಬಂಗಾರವನ್ನು ಮೌರ್ಯರ ರಾಜಧಾನಿ ಪಾಟಲಿಪುತ್ರಕ್ಕೆ ರವಾನೆಯಾಗುತ್ತಿತ್ತು. ಇದನ್ನು ನಾಣ್ಯಗಳ ತಯಾರಿಕೆಯಲ್ಲಿ ಬಳಸುತ್ತಿದ್ದರು. ಮೌರ್ಯರ ಕಾಲದಿಂದಲೂ 'ಸಮೃದ್ಧ ಚಿನ್ನ' ದೊರೆಯುವ ಅದಿರಿನ ಪ್ರದೇಶವಾಗಿ ಹಟ್ಟಿ ಪ್ರಸಿದ್ಧಿ ಪಡೆಯುತ್ತಾ ಬಂದದ್ದು ವಾಸ್ತವ ಸಂಗತಿ ಎನ್ನಲಾಗಿದೆ (ತೆಲಗಾವಿ ೨೦೦೪: ೨೯). ಇದಲ್ಲದೆ ಲಿಂಗಸೂಗೂರು ತಾಲೂಕಿನ ಜಲದುರ್ಗದ ಕ್ರಿಶ. ೧೧ನೆಯ ಶತಮಾನದ ಶಾಸನದಲ್ಲಿ 'ಹೊನ್ನಕಣಿ' ಎಂಬ ಉಲ್ಲೇಖ ಕಂಡುಬರುತ್ತದೆ. ಇದೂ ಸಹ ಹಟ್ಟಿ ಚಿನ್ನದ ಗಣಿಯನ್ನೆ ಸೂಚಿಸುತ್ತದೆ(ದೇವರಕೊಂಡಾರೆಡ್ಡಿ ೨೦೦೩: ೧೪೬). ಪ್ರಸ್ತುತ ಸಂದರ್ಭದಲ್ಲಿ ಹಟ್ಟಿ ಚಿನ್ನದ ಗಣಿ ಏಷ್ಯಾದಲ್ಲಿಯೆ ಅತಿ ಹೆಚ್ಚು ಚಿನ್ನ ಉತ್ಪಾದಿಸುವ ಗಣಿಯೆಂದು ಪ್ರಸಿದ್ಧಿ ಪಡೆದಿದೆ. ಇಲ್ಲಿನ ಚಿನ್ನವನ್ನು ಭೂ ಮತ್ತು ಜಲಮಾರ್ಗಗಳ ಮೂಲಕ ಕಳಿಸಲಾಗುತ್ತಿತ್ತು. ಇದರಂತೆ ಇನ್ನೂ ಅನೇಕ ನೈಸರ್ಗಿಕ ಸಂಪನ್ಮೂಲಗಳನ್ನು ಈ ಪ್ರದೇಶ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ.

### ೩.೨.೧.೩. ವ್ಯಾಪಾರ-ವಾಣಿಜ್ಯ ಸಂಬಂಧ

ಈ ಪ್ರದೇಶ ದೇಶ-ವಿದೇಶ ಮತ್ತು ಸ್ಥಳೀಯ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ವ್ಯಾಪಾರ ಭೂ ಮತ್ತು ಜಲ ಮಾರ್ಗಗಳ ಮೂಲಕ ನಡೆದಿರುವುದು ಕಂಡುಬರುತ್ತದೆ. ದಕ್ಷಿಣದಿಂದ ಚಿನ್ನ ಹಾಗೂ ರತ್ನಗಳು ಒದಗುತ್ತಿದ್ದ ಕಾರಣವಾಗಿ ಉತ್ತರ ಭಾರತದಲ್ಲೂ ದಕ್ಷಿಣದ ಮಾರ್ಗ ಅಥವಾ ದಕ್ಷಿಣಾಪಥ ಮಹತ್ವದ್ದಾಯಿತು(ಶರ್ಮ ೨೦೧೦: ೧೭೭). ಉತ್ತರ ಮತ್ತು ದಕ್ಷಿಣಗಳನ್ನು ಬೆಸೆಯುವಲ್ಲಿ ವ್ಯಾಪಾರಸ್ಥರು ಪ್ರಮುಖ ಪಾತ್ರ ವಹಿಸಿದರು. ರಾಯಚೂರು ರೈಲ್ವೆ ನಿಲ್ದಾಣ ಮತ್ತು ಲಿಂಗಸೂಗೂರು ತಾಲೂಕಿನ ಮಸ್ಕಿಯಲ್ಲಿ ಪಂಚ್‌ಮಾರ್ಕ್ ಮಾಡಿದ ನಾಣ್ಯಗಳು ದೊರೆತಿವೆ (ನರಸಿಂಹಮೂರ್ತಿ ೨೦೦೩: ೪೪-೪೬). ಈ ನಾಣ್ಯಗಳನ್ನು ಮುದ್ರಿಸಿ ಚಲಾವಣೆಗೆ ತಂದಿರುವುದನ್ನು ಗಮನಿಸಿದರೆ ಅಂದಿನ ಜನಕ್ಕೆ ತಂತ್ರಜ್ಞಾನದ ಬಗ್ಗೆ ತಿಳಿವಳಿಕೆ ಇತ್ತೆಂಬುದು ತಿಳಿದುಬರುತ್ತದೆ. ಈ ಬಗೆಯಲ್ಲಿ ಗುರುತಿಸಿಕೊಂಡಿರುವ ವ್ಯಾಪಾರ ವಾಣಿಜ್ಯ ಸಂಬಂಧಗಳು ವ್ಯಾಪಾರಸ್ಥರನ್ನು ಇನ್ನಷ್ಟು ಬಲಗೊಳಿಸಿತು. ವ್ಯಾಪಾರಿಗಳು ರಾಜಕೀಯ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಪ್ರಭುತ್ವದಲ್ಲಿ ಪ್ರಮುಖ ಸ್ಥಾನಮಾನಗಳನ್ನು ಹೊಂದಿದ್ದರು. ಪ್ರತ್ಯೇಕವಾಗಿ ಸಭೆ ಸಮಾರಂಭಗಳನ್ನು ನಡೆಸುವಷ್ಟು ವ್ಯಾಪಾರಿ ಸಂಘಗಳು ಬಲವಾಗಿದ್ದವು. ಈ ಪ್ರದೇಶದಲ್ಲಿ ವ್ಯಾಪಾರ ಅಧಿಕ ಲಾಭದಾಯಕವಾಗಿದ್ದಿತು. ಇದು ಯುದ್ಧಗಳಿಗೆ ಕಾರಣವಾಗಿ ಪರಿಣಮಿಸಿತ್ತು.

### ೩.೨.೧.೪. ಆದಾಯ ಕೇಂದ್ರ

ಗಂಗಾ-ಯಮುನಾ ಬಯಲು ಪ್ರದೇಶದಂತೆ ಇದು ಕೂಡಾ ಹೆಚ್ಚಿನ ಆದಾಯವನ್ನು ತಂದುಕೊಡುವ ಸ್ಥಳವಾಗಿತ್ತು. ಕೃಷಿ ಮುಖ್ಯ ಉದ್ಯೋಗವಾಗಿದ್ದು, ಈ ಮೂಲಕ ಆರ್ಥಿಕ ಚಟುವಟಿಕೆಗಳು ಗಮನಾರ್ಹವಾಗಿ ಬೆಳೆದವು. ಕೃಷಿಯಲ್ಲಿನ ಹೆಚ್ಚುವರಿ ಉತ್ಪಾದನೆ ಅಧಿಕ ಆದಾಯ ನೀಡುವಂತಿತ್ತು. ಇದು ಯುದ್ಧಗಳಿಗೆ ಕಾರಣವಾಯಿತು.

### ೩.೨.೧.೫. ನಗರಗಳ ಬೆಳವಣಿಗೆ

ಈ ಪ್ರದೇಶದ ಹೆಚ್ಚುವರಿ ಕೃಷಿ ಉತ್ಪಾದನೆಯಿಂದ ಆರ್ಥಿಕ ಚಟುವಟಿಕೆಗಳು ಅಧಿಕಗೊಂಡವು. ಇವು ಪರಸ್ಪರ ಕೊಡುಕೊಳ್ಳುವಿಕೆಯ ಮೂಲಕ ದೊಡ್ಡ ಪ್ರಮಾಣದಲ್ಲಿ ಬೆಳೆದವು. ಭೂ ಆಧಾರಿತ

ಅರ್ಥ ವ್ಯವಸ್ಥೆ, ಪೇಟೆ–ಪಟ್ಟಣಗಳು ಕಾಣಿಸಿಕೊಳ್ಳಲು ಪ್ರಮುಖ ಕಾರಣವಾಯಿತು. ಈ ಹೆಚ್ಚುವರಿ ಉತ್ಪಾದನೆ ವ್ಯಾಪಾರ-ವಾಣಿಜ್ಯ, ಮಾರುಕಟ್ಟೆ, ವರ್ತಕ ಸಂಘಗಳು, ಸಾರಿಗೆ ಮುಂತಾದವು ಹುಟ್ಟಿಕೊಳ್ಳುವುದಕ್ಕೆ ಕಾರಣವಾಯಿತು. ಈ ಮೂಲಕ ಹಳ್ಳಿಗಳು ಪಟ್ಟಣಗಳಾದವು, ಪಟ್ಟಣಗಳು ಪ್ರಮುಖ ನಗರಗಳಾದವು. ರಾಯಚೂರು, ಕಲ್ಲೂರು, ಮಾನ್ವಿ, ಗಬ್ಬೂರು, ಮುಕ್ಕುಂದ, ಸಾಲಗುಂದ, ಮಸ್ಕಿ, ಬಳಗಾನೂರು, ಕವಿತಾಳ, ಮುದಗಲ್ಲು, ಕರಡಕಲ್ ಮುಂತಾದವು ಪಟ್ಟಣಗಳಾಗಿದ್ದವು. ಈ ನಗರೀಕರಣ ಯುದ್ಧಗಳಿಗೆ ಕಾರಣವಾಯಿತು.

### ೩.೨.೧.೬. ಆರ್ಥಿಕ ಚಟುವಟಿಕೆಗಳು

ಇಲ್ಲಿ ಕೃಷಿ ಪ್ರಮುಖ ಆರ್ಥಿಕ ಮೂಲವಾದರೆ ಕೃಷಿ ಆಧಾರಿತ ಉತ್ಪನ್ನಗಳು ಆರ್ಥಿಕ ಸ್ಥಿತಿಗತಿಯನ್ನು ಹೆಚ್ಚಿಸುವಂತೆ ಮಾಡಿವೆ. ಕೃಷಿಯ ಸುತ್ತಲೂ ಕುಶಲಕರ್ಮಿಗಳು ತಮ್ಮ ಕೆಲಸಗಳಿಂದಾಗಿ ಸ್ವಲ್ಪಮಟ್ಟಿಗೆ ಆರ್ಥಿಕ ಬದಲಾವಣೆಯನ್ನು ಕಂಡು ವೃತ್ತಿಸಂಘಗಳನ್ನು ಸ್ಥಾಪಿಸಿಕೊಂಡರು. ಇದರಿಂದ ವ್ಯಾಪಾರ-ವಾಣಿಜ್ಯ, ಮಾರುಕಟ್ಟೆ, ಸಾರಿಗೆ ಮುಂತಾದ ಆರ್ಥಿಕ ಚಟುವಟಿಕೆಗಳು ಹೆಚ್ಚಿರುವುದು ಕಂಡುಬರುತ್ತದೆ.

### ೩.೨.೧.೭. ಹಣದ ಲೂಟಿ

ಮಹಮ್ಮದ ಘಜ್ನಿ ಮತ್ತು ಮಹಮ್ಮದ್ ಘೋರಿ ಭಾರತದ ಸಂಪತ್ತನ್ನು ಲೂಟಿ ಮಾಡಲು ದಾಳಿ ಮಾಡಿದಂತೆ, ಎಲ್ಲ ಅರಸುಮನೆತನಗಳು ಈ ಪ್ರದೇಶದ ಮೇಲೆ ದಾಳಿ ಮಾಡಿದವು. ಸುರಪುರ ಸಂಸ್ಥಾನವಂತೂ ಎಲ್ಲ ಕಾಲದಲ್ಲೂ ದಾಳಿ ಮಾಡಿ ಹಣ ಲೂಟಿ ಮಾಡಿ ಖಜಾನೆ ತುಂಬಿಸುತ್ತಿತ್ತು. ಸಂಪತ್ತಿನ ಕೇಂದ್ರವಾಗಿರುವ ಈ ಪ್ರದೇಶ ಲೂಟಿಗೆ ಕಾರಣವಾಗಿದೆ.

### ೩.೨.೨. ಸಾಮಾಜಿಕತೆ

ಕೃಷ್ಣಾ ಮತ್ತು ತುಂಗಭದ್ರಾ ನದಿಗಳಿಂದಾಗಿ ಈ ಪ್ರದೇಶ ಜನಜೀವನಕ್ಕೆ ಯೋಗ್ಯವಾದ ಪ್ರಮುಖ ಪ್ರದೇಶವಾಗಿ ಗುರುತಿಸಿಕೊಂಡಿದೆ. ಇಲ್ಲಿನ ಭೌಗೋಳಿಕ ಸನ್ನಿವೇಶದ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆ ಏಣಿ–ಶ್ರೇಣಿಯಿಂದ ಕೂಡಿದೆ. ಸಾಮಾಜಿಕ ಅನಿಷ್ಟ ಪದ್ಧತಿಗಳಾದ ಜೀತ ಪದ್ಧತಿ, ಬಿಟ್ಟಿ ಪದ್ಧತಿ, ದೇವದಾಸಿ, ಬಹುಪತ್ನಿತ್ವ ಮುಂತಾದವು ಅಸ್ತಿತ್ವದಲ್ಲಿದ್ದವು. ಊಳಿಗಮಾನ್ಯ ವ್ಯವಸ್ಥೆ, ವೈವಾಹಿಕ ಸಂಬಂಧಗಳು, ಪಶುಪಾಲನೆ, ಸ್ತ್ರೀ ವ್ಯಾಮೋಹದ ಮೂಲಕ ಬಲಾಢ್ಯ ಮೇಲ್ವರ್ಗಗಳು ಸಮಾಜದ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

### ೩.೨.೨.೧. ಭೌಗೋಳಿಕ ಸನ್ನಿವೇಶ

ಯಾವುದೇ ಪ್ರದೇಶ ಮಹತ್ವದ ಕೇಂದ್ರವಾಗಿ ಗುರುತಿಸಿಕೊಳ್ಳುವಲ್ಲಿ ಭೌಗೋಳಿಕ ಸನ್ನಿವೇಶ ಬಹುಮುಖ್ಯ ಪಾತ್ರ ವಹಿಸುತ್ತದೆ. ಹಾಗೆಯೆ ಈ ಪ್ರದೇಶ ತನ್ನ ಎಡ-ಬಲಕ್ಕೆ ಕೃಷ್ಣಾ ಮತ್ತು ತುಂಗಭದ್ರಾ ನದಿಗಳನ್ನು ಹೊಂದಿ ಜನವಸತಿಗೆ ಯೋಗ್ಯವಾಗಿದೆ. ಮನುಷ್ಯನ ಮೂಲಭೂತ ಅಗತ್ಯವಾದ ನೀರು ಹೇರಳವಾಗಿದೆ. ಅನೇಕ ಬೆಟ್ಟ ಗುಡ್ಡಗಳು, ಅನ್ಯ ಪ್ರದೇಶಗಳೊಂದಿಗೆ ಸಾರಿಗೆ ಸಂಪರ್ಕ, ಆದಾಯವನ್ನು ತರುವ ಕೃಷಿ ಯೋಗ್ಯ ಭೂಮಿ, ಅರಣ್ಯ ಸಂಪತ್ತು, ವಾಯುಗುಣ, ಗಡಿ ಮೇರೆಗಳು, ಪ್ರಾಕೃತಿಕ ಲಕ್ಷಣಗಳು, ಜೀವ ವೈವಿಧ್ಯತೆ, ನೈಸರ್ಗಿಕ ಸಂಪತ್ತು, ವ್ಯಾಪಾರ ಸಂಬಂಧಗಳನ್ನು ಹೇರಳವಾಗಿ ಹೆಚ್ಚಿಸಿದ್ದವು.

### ೩.೨.೨.೨. ಆಯಕಟ್ಟಿನ ಪ್ರದೇಶ

ರಾಯಚೂರು ದೋ-ಅಬ್ ತನ್ನ ಎಡಬಲಗಳಲ್ಲಿ ಹರಿಯುತ್ತಿರುವ ನದಿಗಳಿಂದ ಆಯಕಟ್ಟಿನ ಪ್ರದೇಶವಾಗಿದೆ. ಇಲ್ಲಿನ ಬೆಟ್ಟಗುಡ್ಡಗಳು ಜನವಸತಿಗೆ ಮತ್ತು ಕೋಟೆಕೊತ್ತಲಗಳ ರಚನೆಗೆ ಸೂಕ್ತವಾಗಿತ್ತು, ಜಲದುರ್ಗವಾಗಿ ಮಾರ್ಪಟ್ಟಿತ್ತು. ಇಲ್ಲಿನ ಬಹುತೇಕ ಕೋಟೆಗಳು ಬೆಟ್ಟಗುಡ್ಡಗಳಲ್ಲಿದ್ದು, ನಿಸರ್ಗ ನಿರ್ಮಿತ ರಕ್ಷಣೆ ಒದಗಿಸಿತ್ತು.

### ೩.೨.೨.೩. ಊಳಿಗಮಾನ್ಯ ವ್ಯವಸ್ಥೆ

ಈ ಪ್ರದೇಶ ಊಳಿಗಮಾನ್ಯ ವ್ಯವಸ್ಥೆಯ ಕೇಂದ್ರಬಿಂದುವಾಗಿತ್ತು. ಆಳರಸರು, ಸಾಮಂತರು, ಮತ್ತು ಸಂಸ್ಥಾನಿಕರು ಮುಂತಾದ ಆಡಳಿತಾಧಿಕಾರಿಗಳು ಊಳಿಗಮಾನ್ಯ ವ್ಯವಸ್ಥೆಯ ರೂವಾರಿಗಳಾಗಿದ್ದರು. ಭೂಮಿಯೆ ಇಲ್ಲಿ ಪ್ರಧಾನವಾಗಿದ್ದು, ಭೂಒಡೆಯರು ತಮ್ಮ ಭೂಮಿಯನ್ನು ವರ್ಷಕ್ಕೆ ಇಂತಿಷ್ಟು ರಕಮು, ಗುತ್ತಿಗೆ, ಪಾಲಿಗೆ ನೀಡುವ ಮುಂತಾದ ಪದ್ಧತಿಗಳ ಮೂಲಕ ಭೂಮಿಯನ್ನು ಉಳುಮೆ ಮಾಡಲು ಇತರೆ ರೂತಾಪಿ ಜನರಿಗೆ ನೀಡಲಾಗುತ್ತಿತ್ತು. ಇದು ಊಳಿಗಮಾನ್ಯ ವ್ಯವಸ್ಥೆಯನ್ನು ಕಾಣುವಂತೆ ಮಾಡಿತು. ಇಲ್ಲಿನ ಬಹುಪಾಲು ಭೂಮಿ ಕೆಲವೆ ಭೂ ಹಿಡುವಳಿದಾರರಿಗೆ ಸೇರಿತ್ತು.

### ೩.೨.೨.೪. ವೈವಾಹಿಕ ಸಂಬಂಧಗಳು

ಹೋರಾಟದ ಮೂಲಕ ಗೆಲ್ಲಲು ಸಾಧ್ಯವಿಲ್ಲದಾಗ ವೈವಾಹಿಕ ಸಂಬಂಧದ ಮಾರ್ಗವನ್ನು ಅನುಸರಿಸಿರುವುದು ಚೋಳ-ಕಲ್ಯಾಣ ಚಾಲುಕ್ಯರು ಮತ್ತು ಸಂಸ್ಥಾನಿಕರ ಸಂದರ್ಭದಲ್ಲಿ ಕಂಡುಬರುತ್ತದೆ. ಇದು ಗೆಲುವು ಮುಖ್ಯ ಎಂಬ ನೀತಿ ಅನುಸರಣೆಯಾಗಿದ್ದನ್ನು ಸೂಚಿಸುತ್ತದೆ. ವೈವಾಹಿಕ ಸಂಬಂಧಗಳು ಮಾನವೀಯ ಸಂಬಂಧದಿಂದ ಹೊರತಾದ ಅಧಿಕಾರ ಪಡೆಯುವ ಸಂಕಲ್ಪಕ್ಕೆ ಬಲಿಯಾಗಿರುವುದನ್ನು ಗಮನಿಸಬಹುದು.

### ೩.೨.೨.೫. ಪಶುಪಾಲನೆ

ಇದು ಭೌಗೋಳಿಕವಾಗಿ ತಗ್ಗು ದಿನ್ನೆಗಳಿಂದ ಕೂಡಿದೆ. ಉತ್ತಮ ಹುಲ್ಲು, ಬೆಳೆಗಳನ್ನು ಬೆಳೆಯುವುದರ ಮೂಲಕ ಪಶುಪಾಲನೆಗೆ ಅತ್ಯುತ್ತಮ ಪರಿಸರವಾಗಿದೆ. ಒಂದು ರಾಜ್ಯಕ್ಕೆ ಸೇರಿದ ಪಶುಗಳನ್ನು ಉದ್ದೇಶಪೂರ್ವಕವಾಗಿ ಓಡಿಸಿಕೊಂಡು ಹೋಗಿ ತಮ್ಮ ರಾಜ್ಯಗಳಿಗೆ ಸೇರಿಸಿಕೊಳ್ಳಲಾಗುತ್ತಿತ್ತು. ಈ ಮೂಲಕವೆ ರಾಜ್ಯದ ಸಂಪತ್ತನ್ನು ಹೆಚ್ಚಿಸಿಕೊಳ್ಳಲಾಗುತ್ತಿತ್ತು. ಪಶುಪಾಲನೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿತ್ತು. ಹೇರಳವಾಗಿರುವ ಗೋಸಂಪತ್ತನ್ನು ವಶಪಡಿಸಿಕೊಳ್ಳಲಾಗುತ್ತಿತ್ತು. ಇದಕ್ಕೆ ಕ್ಯಾದಿಗ್ಗೇರಿ, ಅರಕೇರಿ, ದೇವದುರ್ಗ, ರಾಯಚೂರು ಮುಂತಾದ ಸ್ಥಳಗಳಲ್ಲಿರುವ ವೀರಗಲ್ಲುಗಳು ಸಾಕ್ಷಿಯಾಗಿವೆ.

### ೩.೨.೨.೬. ಸ್ತ್ರೀ ವ್ಯಾಮೋಹ

ಸ್ತ್ರೀ ವ್ಯಾಮೋಹದಿಂದಾಗಿ ಸೌಂದರ್ಯವನ್ನು ನೆಪವಾಗಿಟ್ಟು ಕಾದಾಡಿರುವ ಸನ್ನಿವೇಶವೊಂದು ನಿರೂಪಣೆಯಾಗಿದೆ. ಆದರೆ ಇಲ್ಲಿ ಹೆಣ್ಣು ಕೇವಲ ನೆಪವಾಗಿದ್ದು ಭೂಮಿಯೇ ಪ್ರಧಾನವಾಗಿತ್ತು. ಇದಕ್ಕೆ ಉದಾಹರಣೆಯಾಗಿ ಹೆಣ್ಣಿಗಾಗಿ ಒಂದನೆಯ ದೇವರಾಯ ಮತ್ತು ಫಿರೋಜ್‌ಶಹರ ಮಧ್ಯ ಮುದಗಲ್‌ನಲ್ಲಿ ಯುದ್ಧ ನಡೆದುದನ್ನು ಗಮನಿಸಬಹುದು. ಪರಸ್ತ್ರೀಗಾಗಿ ಯುದ್ಧ ಮಾಡಿದ ಸಂದರ್ಭ ಒದಗಿತು. ರಾಜ್ಯದ ಮೇಲೆ ದಾಳಿ ನಡೆಯಲು ಹೆಣ್ಣು ಕೂಡ ಕಾರಣವಾಗಿರುವುದು ಕಂಡುಬರುತ್ತದೆ.

### ೩.೨.೨.೭. ಸಾಲಕ್ಕಾಗಿ

ಕೊಟ್ಟ ಸಾಲವನ್ನು ತೀರಿಸಲಾರದಕ್ಕೆ ದಾಳಿ ಮಾಡಿದ ಸಂದರ್ಭಗಳು ಕಂಡುಬರುತ್ತವೆ. ಈ ಬಗೆಯ ಸನ್ನಿವೇಶವನ್ನು ಸುರಪುರ ಮತ್ತು ಗುಡಗುಂಟಿ ಸಂಸ್ಥಾನಗಳಲ್ಲಿ ಕಾಣಬಹುದು. ಗುಡಗುಂಟಿ ಸುರಪುರದಿಂದ ಯಾವುದೋ ಕಾರಣಕ್ಕೆ ಸಾಲವನ್ನು ಪಡೆದಿತ್ತು. ಕಾರಣಾಂತರಗಳಿಂದ ಹಿಂದಿರುಗಿಸಲು ಆಗಿರಲಿಲ್ಲ. ಇದನ್ನೇ ನೆಪವಾಗಿಟ್ಟುಕೊಂಡು ಗುಡಗುಂಟಿ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ. ಸುರಪುರ ಸಂಸ್ಥಾನಕ್ಕೆ ತನ್ನ ಪ್ರಾಬಲ್ಯ ಹೆಚ್ಚಿಸಿಕೊಳ್ಳಬೇಕೆಂಬ ಆಕಾಂಕ್ಷೆಯೂ ಮುಖ್ಯವಾಗಿತ್ತು.

### ೩.೨.೩. ರಾಜಕೀಯ

ಈ ಪ್ರದೇಶದ ಮೇಲೆ ರಾಜಕೀಯ ಅಧಿಕಾರ ಸ್ಥಾಪಿಸಲು ಅನೇಕ ಅರಸುಮನೆತನಗಳು ಪ್ರಯತ್ನಿಸಿರುವುದು ಕಂಡುಬರುತ್ತದೆ. ಅಧಿಕಾರ ದಾಹದಿಂದ ಸ್ಥಳೀಯ ಸನ್ನಿವೇಶದ ಲಾಭ ಪಡೆದು ಸಾರ್ವಭೌಮತ್ವ ಸಾಧಿಸಲು ಆಕ್ರಮಣಕಾರಿ ನೀತಿಯನ್ನು ಅನುಸರಿಸಲಾಯಿತು. ಆ ಮೂಲಕ ರಾಜ್ಯದ ಗಡಿ ಸ್ಥಾಪನೆ, ಭದ್ರತೆ ಜೊತೆಗೆ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲಾಯಿತು. ಪರಸ್ಪರ ಸೇಡು, ಕಪ್ಪಕಾಣಿಕೆ, ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದನ್ನು ಗುರುತಿಸಬಹುದಾಗಿದೆ.

### ೩.೨.೩.೧. ಸ್ಥಳೀಯ ಸನ್ನಿವೇಶ

ಮೌರ್ಯರಿಂದ ಹಿಡಿದು ನಿಜಾಮರ ಆಳ್ವಿಕೆಯ ಕಾಲದವರೆಗೂ ಯಾವುದೇ ಅರಸುಮನೆತನ ಈ ಪ್ರದೇಶದಲ್ಲಿ ರಾಜ್ಯವನ್ನು ಕಟ್ಟಿ ರಾಜಧಾನಿಯನ್ನಾಗಿ ಮಾಡಿಕೊಳ್ಳಲಿಲ್ಲ. ಸಾಮಂತರು, ದಂಡನಾಯಕರು, ಜಹಗೀರ್‌ದಾರರ ಮೂಲಕ ಆಡಳಿತ ಜರುಗುತ್ತಿದ್ದು, ಫ್ಯೂಡಲ್ ವ್ಯವಸ್ಥೆಯ ತಾಣವಾಗಿತ್ತು. ಸಂಸ್ಥಾನಿಕರು ಅಸ್ತಿತ್ವಕ್ಕೆ ಬಂದರೂ ಸ್ವತಂತ್ರರಾಗಿರಲಿಲ್ಲ. ಸದಾ ಆತಂಕದಲ್ಲಿ ರಾಜ್ಯ ನಡೆಸುತ್ತ ಪ್ರಬಲ ರಾಜ್ಯವನ್ನು ಕಟ್ಟಲಾಗಲಿಲ್ಲ. ಹಾಗಾಗಿ ದಿಕ್ಕು-ದೆಸೆಯಿಲ್ಲದ ಈ ಪ್ರದೇಶದ ಮೇಲೆ ವಿವಿಧ ಅರಸುಮನೆತನಗಳು ಅಧಿಕಾರ ಸ್ಥಾಪನೆ ಮಾಡಲು ಪ್ರಯತ್ನಿಸಿದವು. ಆದರೂ ಯಾವೊಬ್ಬ ಅರಸ ಕೂಡ ಇಡೀ ಪ್ರದೇಶವನ್ನು ಬಲವಾದ ರಾಜ್ಯವನ್ನಾಗಿ ಮಾಡಿಕೊಳ್ಳಲಿಲ್ಲ.

### ೩.೨.೩.೨. ರಾಜಕೀಯ ಸ್ಥಿತ್ಯಂತರ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ನಡೆದ ನಿರಂತರ ಹೋರಾಟ ಒಂದು ಅರಸು ಮನೆತನದಿಂದ ಇನ್ನೊಂದಕ್ಕೆ ಭಿನ್ನವಾಗಿರುತ್ತಿತ್ತು. ಪರಸ್ಪರ ಕಾದಾಟ ಎಲ್ಲರ ಮನಸ್ಸನ್ನು ಈ ಪ್ರದೇಶದ ಕಡೆಗೆ ನಡೆಸುವಂತಿತ್ತು.

### ೩.೨.೩.೩. ಸಾರ್ವಭೌಮತ್ವ

ಈ ಪ್ರದೇಶದಲ್ಲಿ ಎಲ್ಲವೂ ತನ್ನ ಸಾರ್ವಭೌಮತ್ವದಲ್ಲಿ ಇರಬೇಕೆಂಬ ಮಹತ್ವಾಕಾಂಕ್ಷೆಯಿಂದ ಹೋರಾಡಿದ ಅರಸರಲ್ಲಿ ಕಲ್ಯಾಣ ಚಾಲುಕ್ಯರು, ವಿಜಯನಗರ ಮತ್ತು ಬಹಮನಿ ಹಾಗೂ ನಿಜಾಮರು ಪ್ರಮುಖರಾಗಿದ್ದು, ಅಧಿಕಾರ ಸ್ಥಾಪನೆ ಮಾಡುವ ಇರಾದೆ ಹೊಂದಿದ್ದರು. ಹೀಗಾಗಿ ಸಾರ್ವಭೌಮತ್ವದ ಉಳಿವಿಗಾಗಿ ಪರಸ್ಪರ ಹೋರಾಡುವ ಅನಿವಾರ್ಯತೆ ಸೃಷ್ಟಿಯಾಗುತ್ತಿತ್ತು. ಇಲ್ಲಿ ಆಳ್ವಿಕೆ ಮಾಡಿದ ಎಲ್ಲ ಅರಸುಮನೆತನಗಳು ತಮ್ಮ ಸಾರ್ವಭೌಮತ್ವ ಸಾಧಿಸಲು ಪ್ರಯತ್ನಿಸಿವೆ.

### ೩.೨.೩.೪. ಆಕ್ರಮಣಕಾರ ನೀತಿ

ಕೃಷಿ, ಕೈಗಾರಿಕೆ ಮತ್ತು ಕುಶಲಕರ್ಮಿಗಳಿಂದ ಕೂಡಿದ ಈ ಪ್ರದೇಶ ಹೆಚ್ಚುವರಿ ಉತ್ಪಾದನೆಯನ್ನು ಹೊಂದಿತ್ತು. ಇದರಿಂದ ಆರ್ಥಿಕ ಚಟುವಟಿಕೆಗಳು ಗರಿಗೆದರಿದವು. ಇವು ವಿವಿಧ ಅರಸರ ಗಮನ ಸೆಳೆದು ಅವರ ಆಕ್ರಮಣಕಾರಿ ನೀತಿಗೆ ಬಲಿಯಾದವು. ಗಳಿಕೆಗಿಂತ ಲಭ್ಯವಿದ್ದದ್ದನ್ನು ದೋಚುವುದೇ ಇವರ ಕಾರ್ಯ ಸ್ವರೂಪವಾಗಿತ್ತು.

### ೩.೨.೩.೫. ಕೋಟೆ-ಕೊತ್ತಲುಗಳು

ಕೋಟೆ-ಕೊತ್ತಲಗಳು ಈ ಪ್ರದೇಶದ ಆರ್ಥಿಕ ಸಾಮರ್ಥ್ಯ ಹಾಗೂ ಪ್ರಬಲ ಅರಸರ ಆಳ್ವಿಕೆಯ ಗುರುತಾಗಿವೆ. ಬಹುತೇಕ ಯುದ್ಧಗಳು ಬಲವಾದ ಕೋಟೆ-ಕೊತ್ತಲಗಳನ್ನು ವಶಪಡಿಸಿಕೊಳ್ಳಬೇಕೆಂಬ ಆಕಾಂಕ್ಷೆಯಿಂದ ನಡೆದಿರುವುದು ಕಂಡುಬರುತ್ತದೆ.

### ೩.೨.೩.೬. ಭದ್ರತೆ

ರಾಜ್ಯವೊಂದು ಪ್ರಬಲವಾಗಿರಬೇಕಾದರೆ ಸೇನೆ ಮತ್ತು ಆರ್ಥಿಕ ಭದ್ರತೆ ಬಹುಮುಖ್ಯವಾಗಿರಬೇಕು. ತನ್ನ ರಾಜ್ಯದ ಹಿತಾಸಕ್ತಿಗೆ ಧಕ್ಕೆಯೊದಗದಂತೆ ಪ್ರಾಬಲ್ಯ ಸಾಧಿಸಲು ಪ್ರಯತ್ನಿಸುವುದು ಭದ್ರತೆ ಕಲ್ಪನೆಯ ಮುಖ್ಯ ಆಶಯವಾಗಿದೆ. ಇಲ್ಲಿನ ವಿಜಯನಗರ ಮತ್ತು ಬಹಮನಿಗಳ ಹೋರಾಟ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇಲ್ಲಿನ ಆರ್ಥಿಕ ಚಟುವಟಿಕೆಗಳ ಮೇಲೆ ಪ್ರಾಬಲ್ಯ ಸಾಧಿಸಿ ಎಲ್ಲರನ್ನು ಅಧೀನದಲ್ಲಿಟ್ಟುಕೊಂಡು ಅನ್ಯರ ಪ್ರವೇಶಕ್ಕೆ ಅವಕಾಶ ಸಿಗದಂತೆ ಮಾಡುವುದೆ ರಾಜ್ಯದ ಭದ್ರತೆಯಾಗಿದೆ. ಇದಕ್ಕಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಭದ್ರತೆ ಮಾಡಿಕೊಳ್ಳಲಾಗಿತ್ತು.

### ೩.೨.೩.೭. ಗಡಿ ಸ್ಥಾಪನೆ

ಈ ಕಲ್ಪನೆಯನ್ನು ಪಲ್ಲವರ ಕಾಲದಿಂದ ಹಿಡಿದು ನಿಜಾಮನ ಕಾಲದವರೆಗೂ ಗಮನಿಸಬಹುದು. ಪಲ್ಲವರು ತಮ್ಮ ರಾಜ್ಯದ ಗಡಿಯನ್ನು ಉತ್ತರ ಕೃಷ್ಣಾ ನದಿಯನ್ನಾಗಿಸಬೇಕೆಂದು ಹೋರಾಡಿರುವುದು ಕಂಡುಬರುತ್ತದೆ. ಕೆಲವರು ಕೃಷ್ಣಾ ನದಿಯನ್ನು ಗಡಿಯಾಗಿರಬೇಕೆಂದರೆ, ಇನ್ನೂ ಕೆಲವರು ತುಂಗಭದ್ರಾ ನದಿಯೇ ತಮ್ಮ ಗಡಿಯಾಗಿರಬೇಕೆಂದು ಹೋರಾಟ ಮಾಡಿರುವುದು ಕಂಡುಬರುತ್ತದೆ. ಈ ಪ್ರದೇಶದ ಈ ಎರಡು ನದಿಗಳು ಅನೇಕ ಅರಸು ಮನೆತನಗಳಿಗೆ ಗಡಿಗಳಾಗಿ ನಿರ್ಮಾಣಗೊಂಡಿದ್ದವು.

### ೩.೨.೩.೮. ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವುದು

ಈ ಪ್ರದೇಶದಲ್ಲಿ ಪ್ರಾಬಲ್ಯ ಸಾಧಿಸಬೇಕೆಂದು ಪ್ರಯತ್ನಿಸಿದ ಅರಸುಮನೆತನಗಳಲ್ಲಿ ಕಲ್ಯಾಣ ಚಾಲುಕ್ಯರು, ವಿಜಯನಗರ-ಬಹಮನಿ ಹಾಗೂ ಸಂಸ್ಥಾನಿಕರು ಪ್ರಮುಖವಾಗಿ ಕಂಡುಬರುತ್ತಾರೆ. ಪರಸ್ಪರರು ಪ್ರಭುತ್ವ ಜನಸಾಮಾನ್ಯರನ್ನು ತನ್ನಿಂದ ದೂರವಿಡುತ್ತ ಕೆಲವೇ ವರ್ಗದ ಜನರ ಪ್ರಾಬಲ್ಯ ಅಧಿಕವಾಗಿ ಮೆರೆಯಲು ಅವಕಾಶ ಒದಗಿಸಿತ್ತು.

### ೩.೨.೩.೯. ಕಪ್ಪದ ಕಾರಣ

ಅಧೀನ ಪ್ರದೇಶಗಳು ತಮ್ಮನ್ನು ಆಳುವ ವರ್ಗಕ್ಕೆ ವಾರ್ಷಿಕವಾಗಿ ಸಲ್ಲಿಸುತ್ತಿದ್ದ ನಿಗದಿತ ಮೊತ್ತವೆ ಈ ಕಪ್ಪದ ಕಲ್ಪನೆಯಾಗಿದೆ. ಈ ಕಾರಣಕ್ಕಾಗಿಯೇ ಅನೇಕ ಅರಸುಮನೆತನಗಳು ಹೋರಾಡಿರುವುದು ಕಂಡುಬರುತ್ತದೆ. ನಿಗದಿತ ಸಮಯದಲ್ಲಿ ಕಪ್ಪಕಾಣಿಕೆ ಸಲ್ಲಿಸದಿದ್ದರೆ ದಾಳಿ ಮಾಡಲಾಗುತ್ತಿತ್ತು.

### ೩.೨.೩.೧೦. ಸೇಡು

ಯಾವುದೋ ಕಾರಣದಿಂದ ವಿವಿಧ ಅರಸರು ತಮ್ಮ ಸೇಡನ್ನು ತೀರಿಸಿಕೊಳ್ಳಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಇಂತಹ ಸನ್ನಿವೇಶವನ್ನು ಚೋಳರು ಮತ್ತು ಕಲ್ಯಾಣ ಚಾಲುಕ್ಯರು ಸೋಲು-ಗೆಲುವುಗಳ ಸೇಡಿಗಾಗಿ ಹೋರಾಟ ಮಾಡುವುದನ್ನು ಗುರಿಯಾಗಿಸಿಕೊಂಡಿದ್ದರು. ವಿಜಯನಗರ-ಬಹಮನಿಗಳು ಪರಸ್ಪರ ಕಚ್ಚಾಟ ಸೇಡು ಮನೋಭಾವದಿಂದ ಕೂಡಿರುವುದನ್ನು ಗಮನಿಸಬಹುದಾಗಿದೆ.

### ೩.೨.೩.೧೧. ಒಪ್ಪಂದಗಳ ಉಲ್ಲಂಘನೆ

ಚರಿತ್ರೆಯಲ್ಲಿ ಯುದ್ಧಗಳು ನಡೆದು ಒಪ್ಪಂದಗಳಿಗೆ ಬರುವುದು ಒಂದು ಪ್ರಕ್ರಿಯೆಯಾಗಿದೆ. ಈ ಒಪ್ಪಂದಗಳು ಷರತ್ತುಗಳನ್ನು ಹೊಂದಿರುತ್ತವೆ. ಅವು ಸಂದರ್ಭಕ್ಕನುಗುಣವಾಗಿ ಭಿನ್ನವಾಗಿರುತ್ತವೆ. ವಿಜಯನಗರ ಮತ್ತು ಬಹಮನಿಗಳ ಕಾಲದಲ್ಲಿ ರಾಯಚೂರು ದೋ-ಅಬ್ ಪ್ರದೇಶಕ್ಕಾಗಿ ಪರಸ್ಪರ ಕಾದಾಡಿ ಸೋಲು ಅಥವಾ ಸಮಬಲ ಸಾಧಿಸಿದಾಗ ಒಪ್ಪಂದಗಳಿಗೆ ಬಂದಿರುವುದು ಹೆಚ್ಚಾಗಿ ಕಂಡುಬರುತ್ತದೆ. ಗಡಿ ನಿರ್ಧಾರ, ಪ್ರದೇಶಗಳ ಹಂಚಿಕೆ ಮುಂತಾದ ವಿಷಯಗಳಲ್ಲಿ ಒಪ್ಪಂದಗಳ ಉಲ್ಲಂಘನೆ ಮಾಡಿರುವುದು ಗೋಚರಿಸುತ್ತದೆ. ಇಡೀ ರಾಯಚೂರು ದೋ-ಅಬ್ ಪ್ರದೇಶ ಒಬ್ಬರ ಅಧೀನದಲ್ಲಿರುವುದು ವಿರಳವಾಗಿತ್ತು. ಕೆಲವು ಭಾಗ ವಿಜಯನಗರದವರಿಗೆ ಸೇರಿದರೆ, ಇನ್ನೂ ಕೆಲವು ಭಾಗ ಬಹಮನಿಗಳಿಗೆ ಸೇರಿರುತ್ತಿತ್ತು. ಈ ಸಂದರ್ಭದಲ್ಲಿ ಪರಸ್ಪರರು ಒಪ್ಪಂದಗಳನ್ನು ಉಲ್ಲಂಘನೆ ಮಾಡಿರುವುದು ಸಾಮಾನ್ಯವಾಗಿತ್ತು. ಇದು ಯುದ್ಧಕ್ಕೆ ಕಾರಣ.

### ೩.೨.೩.೧೨. ಬಲ ಪ್ರದರ್ಶನ

ರಾಜಕೀಯ ಕಾರಣಗಳಿಂದ ಅರಸರ ಅಧೀನತೆ ಒಪ್ಪಬೇಕೆಂಬ ಒತ್ತಾಸೆ, ಒತ್ತಡ ಮತ್ತು ಸಾಮರ್ಥ್ಯ ಪ್ರದರ್ಶನ ಮಾಡುತ್ತಿದ್ದುದು ಪ್ರಮುಖವಾಗಿ ಕಂಡುಬರುತ್ತದೆ. ಪರಸ್ಪರ ಕದನಗಳು ಕ್ಷುಲ್ಲಕ ಕಾರಣಕ್ಕಾಗಿ ವಿರೋಧಿಗಳ ಮುಂದೆ ತಮ್ಮ ಸಾಮರ್ಥ್ಯ ಪ್ರದರ್ಶನ ಮಾಡಲಾಗುತ್ತಿತ್ತು. ಸೈನಿಕರ ಪ್ರಮಾಣ ಮತ್ತು ಅದರ ವಿವಿಧ ವಿಭಾಗಗಳು ಅಲ್ಲದೆ ಆರ್ಥಿಕ ಸದೃಢತೆಯನ್ನು ಇದರೊಂದಿಗೆ ಬಿಂಬಿತವಾಗುತ್ತಿದ್ದುದು ಕಂಡುಬರುತ್ತದೆ.

### ೩.೨.೩.೧೩. ಅಧಿಕಾರ ಪುನರ್‌ಸ್ಥಾಪಿಸಲು

ಈ ಪ್ರಕ್ರಿಯೆ ವಿಜಯನಗರ - ಬಹಮನಿ ಅರಸರ ನಡುವೆ ಹೆಚ್ಚು ನಡೆದಿರುವುದು ತಿಳಿದುಬರುತ್ತದೆ. ಒಮ್ಮೆ ವಿಜಯನಗರದವರು ಪ್ರಾಬಲ್ಯ ಸಾಧಿಸಿ ಅಧಿಕಾರ ಸ್ಥಾಪಿಸಿದ್ದರೆ, ಇನ್ನೊಮ್ಮೆ ಬಹಮನಿ ಅಧಿಕಾರ ಸ್ಥಾಪಿಸಲು ಪ್ರಯತ್ನಿಸುತ್ತಿದ್ದರು. ಇವೆರಡು ಅರಸುಮನೆತನಗಳಿಗೆ ಈ ಪ್ರದೇಶ ನಿರ್ಣಾಯಕ ಕೇಂದ್ರವೂ ಮಹತ್ವದ ಸ್ಥಳವೂ ಆಗಿತ್ತು. ತಮ್ಮ ಅಧಿಕಾರ ಸ್ಥಾಪಿಸಲು ಮರು ಹೋರಾಟ ಮಾಡುವಲ್ಲಿ ಅಧಿಕಾರ ವ್ಯಾಮೋಹ ಪ್ರೇರೇಪಣೆ ನೀಡುತ್ತಿದ್ದುದು ಗೋಚರಿಸುತ್ತದೆ.

### ೩.೨.೩.೧೪. ಅಸ್ತಿತ್ವಕ್ಕಾಗಿ

ದೊಡ್ಡ ದೊಡ್ಡ ರಾಜ್ಯಗಳ ಪ್ರಭಾವಕ್ಕೆ ಸಿಲುಕಿದ ಸಣ್ಣ ಪುಟ್ಟ ಅರಸು ಮನೆತನಗಳು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡಬೇಕಿತ್ತು. ಈ ಪ್ರದೇಶದಲ್ಲಿನ ಸಂಸ್ಥಾನಿಕರು ಬಿಜಾಪುರ ಆದಿಲ್‌ಶಾಹಿ, ಮೊಗಲರು ಮತ್ತು ನಿಜಾಮರ ಕಾಲದಲ್ಲಿ ತಮ್ಮ ರಾಜ್ಯದ ವಿಸ್ತರಣೆಯ ಬದಲಾಗಿ, ಇರುವ ರಾಜ್ಯದಲ್ಲಿಯೇ ಅಸ್ತಿತ್ವ ಉಳಿಸಿಕೊಳ್ಳಲು ಪ್ರಯತ್ನ ಮಾಡಲಾಯಿತು. ಈ ಮೂರು ಮನೆತನಗಳು ಪ್ರಭಾವಶಾಲಿಗಳಾಗಿದ್ದು,

ಅಧೀನ ಸಂಸ್ಥಾನಗಳನ್ನು ಮಾನ್ಯ ಮಾಡುವಲ್ಲಿ ತಮ್ಮ ಅಸ್ತಿತ್ವವೂ ಅಡಗಿತ್ತು. ಹಾಗಾಗಿ ಪ್ರತಿಯೊಂದು ಅರಸುಮನೆತನವೂ ಈ ನಿಟ್ಟಿನಲ್ಲಿ ಪ್ರಯತ್ನಿಸಿರುವುದನ್ನು ಗಮನಿಸಬಹುದಾಗಿದೆ.

**೩.೨.೩.೧೫. ರಾಜ್ಯ ವಿಸ್ತರಣೆ**

ಪಲ್ಲವ, ಚೋಳ ಹಾಗೂ ಬಹಮನಿ ಸುಲ್ತಾನರು ಈ ಪ್ರದೇಶವನ್ನು ವಶಪಡಿಸಿಕೊಳ್ಳುವ ಮೂಲಕ ತಮ್ಮ ರಾಜ್ಯವಿಸ್ತರಣೆ ಮಾಡಿದಂತೆ ಕಂಡುಬರುತ್ತದೆ. ದಕ್ಷಿಣದ ರಾಜ್ಯಗಳು ತಮ್ಮ ಮೇರೆಯನ್ನು ತುಂಗಭದ್ರೆಯ ಉತ್ತರಕ್ಕೆ ಇರಬೇಕೆಂದು ಆಕಾಂಕ್ಷೆ ಹೊಂದಿದ್ದವು. ಯುದ್ಧಾಕಾಂಕ್ಷಿ ಅರಸರು ರಾಜ್ಯ ಬಲಪಡಿಸುವ ನೆಪದಲ್ಲಿ ರಾಜ್ಯ ವಿಸ್ತರಣೆ ಮಾಡಲು ಪ್ರಯತ್ನಿಸಿದ್ದು ತಮ್ಮ ಅರಸ ಪ್ರತಿಷ್ಠೆಯ ಭಾಗವಾಗಿತ್ತು.

**೩.೨.೪. ಧಾರ್ಮಿಕತೆ**

ರಾಜ ಪ್ರಭುತ್ವವನ್ನು ಧರ್ಮದ ಚೌಕಟ್ಟಿನಲ್ಲಿಯೇ ಸಾಗುವಂತೆ ಮಾಡುವುದು ಇದರ ಮುಖ್ಯ ಸಾಧನವಾಗಿತ್ತು. ಇದು ಎಲ್ಲವನ್ನು ತನ್ನ ಒಳಗು ಮಾಡಿಕೊಂಡು ಧಾರ್ಮಿಕ ನೀತಿಯನ್ನು ಅಸ್ತಿತ್ವಕ್ಕೆ ತರುವಂತೆ ಮಾಡಿತು.

**೩.೨.೪.೧. ಮತ ಧರ್ಮಗಳ ಪ್ರಭಾವ**

ಈ ಪ್ರದೇಶ ವೈದಿಕ,ಬೌದ್ಧ, ಜೈನ, ಶೈವ, ವೈಷ್ಣವ, ಕಾಳಾಮುಖ ಮತಗಳ ಹಾಗೂ ಇಸ್ಲಾಂ ಮತ್ತು ಕ್ರಿಶ್ಚಿಯನ್ ಧರ್ಮಗಳ ಪ್ರಭಾವಕ್ಕೆ ಒಳಗಾದ ಬಗ್ಗೆ ತಿಳಿದುಬರುತ್ತದೆ. ವೈದಿಕ ವಿರೋಧಿ ನೆಲೆಯಲ್ಲಿ ಬೌದ್ಧ ಮತ್ತು ಜೈನ ಮತಗಳ ಪ್ರಭಾವವಿದೆ. ಬೌದ್ಧಧರ್ಮ ಉತ್ತರ ಭಾರತದಲ್ಲಿ ಹೆಚ್ಚು ಪ್ರಭಾವವನ್ನು ಹೊಂದಿತ್ತು. ಇದರ ಪ್ರಭಾವ ಈ ಪ್ರದೇಶದಲ್ಲಿ ಮೌರ್ಯ ಅರಸ ಅಶೋಕ ಮಸ್ಕಿಯಲ್ಲಿ ಶಾಸನ ಹಾಕಿಸುವ ಮೂಲಕ ರಾಜಾಶ್ರಯ ನೀಡಿರುವುದು ಬೆಳಕಿಗೆ ಬಂದಿತು. ಇದಕ್ಕೂ ಪೂರ್ವದಲ್ಲಿ ವ್ಯಾಪಾರಿಗಳ ಮೂಲಕ ಪ್ರಚಾರಗೊಂಡಿತ್ತು. ಜೈನಮತ ಕರ್ನಾಟಕದಲ್ಲಿ ರಾಜಾಶ್ರಯದಿಂದಾಗಿ ಹೆಚ್ಚಿನ ಪ್ರಚಾರ ಪಡೆಯಿತು. ಇಲ್ಲಿಯೂ ಜೈನಮತ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿತು. ಇದೇ ಕಾಲಘಟ್ಟದಲ್ಲಿ ಶೈವ ಮತ್ತು ವೈಷ್ಣವ ಮತಗಳು ತೀವ್ರವಾಗಿ ಪ್ರಚಾರಕ್ಕೆ ಬಂದವು. ಈ ಪ್ರದೇಶದಲ್ಲಿ ಶೈವಮತ ಲಿಂಗಾಯತರ ಮತವಾಗಿ ವಚನ ಸಾಹಿತ್ಯದ ಮೂಲಕ ಪ್ರಸಿದ್ಧಿ ಪಡೆದರೆ, ವೈಷ್ಣವ ಮತ ಬ್ರಾಹ್ಮಣರ ಮತವಾಗಿ ಅಗ್ರಹಾರ, ಬ್ರಹ್ಮಪುರಿಗಳ ಸ್ಥಾಪನೆಯ ಜೊತೆಗೆ ದಾಸ ಸಾಹಿತ್ಯದ ಮೂಲಕ ಪ್ರಸಿದ್ಧಿಗೆ ಬಂದಿರುವುದನ್ನು ಗಮನಿಸಬಹುದು. ಇಸ್ಲಾಂ ಮತ್ತು ಕ್ರಿಶ್ಚಿಯನ್ ಧರ್ಮಗಳ ಪ್ರಭಾವವೂ ಇದ್ದಿತು. ಕ್ರಿಶ್ಚಿಯನ್ ಧರ್ಮವು ಮತಾಂತರ ಮಾಡುವ ಕಾರ್ಯದಲ್ಲಿ ತೊಡಗಿತ್ತು. ಈ ಮತಧರ್ಮಗಳಿಗೆ ರಾಜಾಶ್ರಯ ಸಿಕ್ಕಿತ್ತು. ಪ್ರಾದೇಶಿಕ ಪ್ರಾಮುಖ್ಯತೆ ಪಡೆದ ಈ ಮತಧರ್ಮಗಳು ತಮ್ಮ ಪ್ರಭಾವವನ್ನು ಬೀರಿದವು. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅನೇಕ ಪ್ರತಿಷ್ಠಿತ ಅರಸುಮನೆತನಗಳು ಹೋರಾಟ ಮಾಡಲು ಈ ಮೇಲಿನ ಕಾರಣಗಳು ಪ್ರಮುಖವಾಗಿವೆ.

## ೩.೩. ಯುದ್ಧಗಳ ಸ್ವರೂಪ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಸುಮಾರು ಒಂದು ನೂರು ಯುದ್ಧಗಳು ನಡೆದಿರಬಹುದು. ಆದರೆ ಸದ್ಯ ೬೧ ಯುದ್ಧಗಳು ನಡೆದಿರುವ ಬಗ್ಗೆ ತಿಳಿದುಬರುತ್ತದೆ. ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸುಮಾರು ೨೩ ಶತಮಾನಗಳ ಕಾಲ ನಿರಂತರವಾಗಿ ಯುದ್ಧಗಳು ನಡೆದಿವೆ.

ಈ ಯುದ್ಧಗಳು ಬಹುತೇಕವಾಗಿ ರಾಜ್ಯ ವಿಸ್ತರಣೆ ಮತ್ತು ಅಸ್ತಿತ್ವಕ್ಕಾಗಿ ನಡೆದಿರುವುದಾಗಿ ತಿಳಿದುಬರುತ್ತದೆ. ಈ ಹೋರಾಟದ ಸ್ವರೂಪವು ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ನೆಲೆಗಟ್ಟಿನಿಂದ ಕೂಡಿತ್ತು. ಸುಮಾರು ೬೧ ಯುದ್ಧಗಳು ಭಾರಿ ಪ್ರಮಾಣದಲ್ಲಿ ನಡೆದಿರುವುದು ವಿಶೇಷವೇ ಆಗಿದೆ. ಈ ಯದ್ಧಗಳು  ಈ ಪ್ರದೇಶದಲ್ಲಿ ಪರಿಣಾಮ ಬೀರಿರುವುದನ್ನು ಗಮನಿಸಬಹುದಾಗಿದೆ.

ಷ. ಶೆಟ್ಟರ್, ಡಿ.ಡಿ. ಕೊಸಾಂಬಿ, ಆರ್.ಎಸ್. ಶರ್ಮ, ಮಂಜಪ್ಪ ಮಸಗಲಿ, ಮಂಜುನಾಥ ಕೆ, ಸೂರ್ಯನಾಥ ಕಾಮತ್, ಬಿ. ಷೇಕ್ ಅಲಿ, ಕಪಟರಾಳ ಕೃಷ್ಣರಾಯ, ಬಿ. ಕೃಷ್ಣಮಾಚಾರ್ಯ, ದೇವರಕೊಂಡಾರೆಡ್ಡಿ, ವಿಜಯ್ ಪೂಣಚ್ಚ ತಂಬಂಡ, ನರಸಿಂಹಮೂರ್ತಿ, ನಾಗರಾಜರಾವ್, ಜಿ.ಎಸ್. ದೀಕ್ಷಿತ್, ಸದಾನಂದ ಕನವಳ್ಳಿ, ಚನ್ನಬಸಪ್ಪ ಎಸ್. ಪಾಟೀಲ್, ಎ. ರಾಘವೇಂದ್ರರಾವ್, ಬಾಲಸುಬ್ರಹ್ಮಣ್ಯ, ಟಿ.ಎಸ್. ಕೃಷ್ಣಮೂರ್ತಿ, ಶ್ರೀನಿವಾಸರಾವ್, ಎಸ್.ಬಿ. ಕೋಡದ, ಕೃಷ್ಣ ಕೊಲ್ಹಾರ ಕುಲಕರ್ಣಿ, ಡಿ.ವಿ. ಪರಮಶಿವಮೂರ್ತಿ, ತಾಳ್ತಜೆ ವಸಂತಕುಮಾರ, ಬಾ.ರಾ. ಗೋಪಾಲ್, ಲಕ್ಷ್ಮಣ್ ತೆಲಗಾವಿ, ಯಾಸೀನ್ ಖುದ್ದೂಸಿ, ಎಚ್.ಎಲ್. ನಾಗೇಗೌಡ, ವಾಸುದೇವ ಬಡಿಗೇರ, ಮುಜಾಮಿಲ್‌ಖಾನ್, ಶಿವಣ್ಣ, ಧ್ರುವನಾರಾಯಣ, ಶ್ಯಾಮಭಟ್, ವಿಶ್ವನಾಥ, ನಾಗರಾಜ ಎಚ್.ಎಂ., ಎಸ್.ಎಸ್. ಭೂಸರೆಡ್ಡಿ, ರಾ.ಗು. ಜೋಶಿ, ಇ.ಎಂ.ಎಸ್. ನಂಬೂದಿರಿಪ್ಪಾಡ್, ಕೆ. ಅಂತೋನವ, ಜಿ. ಬೊಂಗಾರ್ಡ್-ಲೆವಿನ್, ಎಸ್.ವೈ. ಸೋಮಶೇಖರ, ಚನ್ನಬಸವ ಹಿರೇಮಠ, ಮಹೇಶ ಗಬ್ಬೂರು, ಅಮರೇಶ ಯತಗಲ್, ರಾಮಣ್ಣ ಹವಳೆ ಇನ್ನೂ ಮುಂತಾದ ಅಧ್ಯಯನಕಾರರ ಬರಹಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಯುದ್ಧಗಳನ್ನು ಸ್ಥೂಲವಾಗಿ ಯಾರಿಂದ ಯಾರಿಗೆ, ಯಾವಾಗ, ಎಲ್ಲಿ ಯುದ್ಧ ನಡೆಯಿತು ಎಂಬುದನ್ನು ಗುರುತಿಸಲಾಗಿದೆ.

**ಮೌರ್ಯ ಅರಸ ಅಶೋಕನ ಕಾರ್ಯಾಚರಣೆ(ಕ್ರಿಪೂ. ೩ನೆಯ ಶತಮಾನ)**

ಮೌರ್ಯ ಅರಸ ಅಶೋಕನ ಕಾಲದಿಂದ ಈ ಪ್ರದೇಶದ ಚರಿತ್ರೆ ಆರಂಭವಾಗುತ್ತದೆ. ಇವನು ಈ ಪ್ರದೇಶದ ಮೇಲೆ ಸೈನಿಕ ಕಾರ್ಯಾಚರಣೆಯನ್ನು ಮಾಡಿ ಕರ್ನಾಟಕದ ಅಲ್ಲಲ್ಲಿ ಶಾಸನಗಳನ್ನು ಹಾಕಿಸಿದ್ದು, ಮಸ್ಕಿಯಲ್ಲಿಯೂ ಶಾಸನ ಹೊರಡಿಸಿರುವುದು ಕಂಡುಬರುತ್ತದೆ.[೧] ಶಾತವಾಹನರ ಕಾಲದಲ್ಲಿ ಮಸ್ಕಿ ನಗರ ಸಂಸ್ಕೃತಿಯ ಕೇಂದ್ರವಾಗಿತ್ತೆಂದು[೨] ಉಲ್ಲೇಖ ದೊರೆಯುತ್ತದೆಯೇ ಹೊರತು, ಶಾತವಾಹನರ ಕುರಿತು ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ವಾಕಾಟಕರು ಮತ್ತು ಚುಟುಗಳನ್ನು ಕುರಿತು ಸೂರ್ಯನಾಥ ಕಾಮತ್ ಅವರು ಉಲ್ಲೇಖಿಸುತ್ತಾರೆ.[೩] ಆದರೆ ಅವರಿಗೆ ಸಂಬಂಧಿಸಿದ ಕುರುಹುಗಳು ಲಭ್ಯವಿಲ್ಲ.

**ಪಲ್ಲಲೂರು ಯುದ್ಧ(೬೦೦-೬೩೦):** ಬಾದಾಮಿ ಚಾಲುಕ್ಯ ಅರಸ ಎರಡನೆಯ ಪುಲಿಕೇಶಿ ಮತ್ತು ಕಂಚಿ ಪಲ್ಲವರ ಅರಸ ಒಂದನೆಯ ಮಹೇಂದ್ರವರ್ಮರ ನಡುವೆ ಕ್ರಿ.ಶ. ೬೦೦-೬೩೦ರ ಕಾಲಾವಧಿಯಲ್ಲಿ "ಪಲ್ಲಲೂರು"ನಲ್ಲಿ ಯುದ್ಧ ನಡೆಯಿತು.[೪] ಈ ಯುದ್ಧದಲ್ಲಿ ಪುಲಿಕೇಶಿಗೆ ಗೆಲುವಾಯಿತು.

**ರಾಷ್ಟ್ರಕೂಟ ಅರಸ ಮೂರನೆಯ ಗೋವಿಂದ ಮತ್ತು ದಕ್ಷಿಣ ಒಕ್ಕೂಟ ಯುದ್ಧ(೮೦೨):** ರಾಷ್ಟ್ರಕೂಟ ಅರಸ ಮೂರನೆಯ ಗೋವಿಂದ ಮತ್ತು ಪಲ್ಲವ, ಪಾಂಡ್ಯ, ಕೇರಳ ಮತ್ತು ಗಂಗರನ್ನೊಳಗೊಂಡ ದಕ್ಷಿಣ ಒಕ್ಕೂಟದ ನಡುವೆ ತುಂಗಭದ್ರ ನದಿ ದಂಡೆಯ ಮೇಲೆ ಕ್ರಿ.ಶ. ೮೦೨ರಲ್ಲಿ ಯುದ್ಧ ನಡೆಯಿತು.[೫] ಈ ದಂಗೆಯಲ್ಲಿ ದಕ್ಷಿಣ ಒಕ್ಕೂಟಕ್ಕೆ ಹಿನ್ನೆಡೆಯಾಯಿತು.

**ಕಿಸುಕಾಡು-೭೦ರ ಆಕ್ರಮಣ(೯೭೩-೯೯೭):** ಕ್ರಿ.ಶ. ೯೭೩-೯೯೭ರಲ್ಲಿ ಕಲ್ಯಾಣ ಚಾಲುಕ್ಯ ಅರಸ ಎರಡನೆಯ ತೈಲಪ ಕಿಸುಕಾಡು-೭೦ರಲ್ಲಿ ಅಧಿಕಾರವನ್ನು ಸ್ಥಾಪಿಸಿದನು. ಕಿಸುಕಾಡು-೭೦ನ್ನು

ಲಿಂಗಸೂಗೂರು ಎಂದು ಗುರುತಿಸಲಾಗಿದೆ. ೨ನೆಯ ತೈಲಪನ ಅಧೀನರಾಗಿ ಕದಂಬ ಆರ್ಯವರ್ಮ ಹಾಗೂ ಆದಿತ್ಯವರ್ಮರು ಲಿಂಗಸೂಗೂರಿನಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.[೬]

**ಲಿಂಗಸೂಗೂರು ಯುದ್ಧ(೯೯೭-೧೦೦೮):** ಕ್ರಿ.ಶ. ೯೯೭-೧೦೦೮ರಲ್ಲಿ ನಡೆದ ಲಿಂಗಸೂಗೂರು ಯುದ್ಧದಲ್ಲಿ ಕಲ್ಯಾಣ ಚಾಲುಕ್ಯ ಅರಸ ಸತ್ಯಾಶ್ರಯ ಹಾಗೂ ಚೋಳ ಅರಸ ರಾಜೇಂದ್ರಚೋಳ ಭಾಗವಹಿಸಿದ್ದರು.[೭] ಚೋಳ ಅರಸ ಪ್ರಾಬಲ್ಯ ಸಾಧಿಸಿದ.

**ಮಸ್ಕಿ ಯುದ್ಧ(೧೦೧೫-೧೯):** ಚೋಳ ಅರಸ ರಾಜೇಂದ್ರ ಚೋಳ ಮತ್ತೊಮ್ಮೆ ಕಲ್ಯಾಣ ಚಾಲುಕ್ಯ ಅರಸ ಎರಡನೆಯ ಜಯಸಿಂಹನ ವಿರುದ್ಧ ಯುದ್ಧ ಮಾಡಿದ. ಈ ಯುದ್ಧ ಕ್ರಿ.ಶ. ೧೦೧೫-೧೯ರಲ್ಲಿ ಮಸ್ಕಿಯಲ್ಲಿ ನಡೆಯಿತು.[೮] ಎರಡನೆಯ ಜಯಸಿಂಹ ಸೋತು ಗೆದ್ದನು.

**ಕೊಪ್ಪರ ಯುದ್ಧ(೧೦೫೪):** ಕ್ರಿ.ಶ. ೧೦೫೪ರಲ್ಲಿ ಕಲ್ಯಾಣ ಚಾಲುಕ್ಯ ಅರಸ ಒಂದನೆಯ ಸೋಮೇಶ್ವರ ಮತ್ತು ಚೋಳ ಅರಸ ಒಂದನೆಯ ರಾಜಾಧಿರಾಜನ ನಡುವೆ ಕೊಪ್ಪರದಲ್ಲಿ ಯುದ್ಧವಾಯಿತು.[೯] ಒಂದನೆಯ ಸೋಮೇಶ್ವರ ಪಲಾಯನ ಮಾಡಿದನು.

**ಚಂದನಕೇರಿ ಮತ್ತು ಕಂಚಿ ಯುದ್ಧ(೧೦೫೮):** ಕ್ರಿ.ಶ. ೧೦೫೮ರಲ್ಲಿ ಒಂದನೆಯ ಸೋಮೇಶ್ವರ ಮತ್ತು ಚೋಳ ಅರಸ ಎರಡನೆಯ ರಾಜೇಂದ್ರ ಚೋಳರ ನಡುವೆ ಚಂದನಕೇರಿ ಮತ್ತು ಕಂಚಿಯಲ್ಲಿ ಯುದ್ಧ ನಡೆಯಿತು.[೧೦] ಸೋಲು ಗೆಲುವಿನ ಬಗ್ಗೆ ಸ್ಪಷ್ಟತೆಯಿಲ್ಲ.

**ಕರಡಿಕಲ್ ಯುದ್ಧ(೧೦೬೮-೬೯):** ಕಲ್ಯಾಣ ಚಾಲುಕ್ಯ ಅರಸ ಎರಡನೆಯ ಸೋಮೇಶ್ವರ ಮತ್ತು ಚೋಳ ಅರಸ ವೀರರಾಜೇಂದ್ರ ಚೋಳ ಈ ಯುದ್ಧದಲ್ಲಿ ಭಾಗವಹಿಸಿದ್ದು ಕ್ರಿ.ಶ. ೧೦೬೮-೬೯ರಲ್ಲಿ ನಡೆಯಿತು.[೧೧] ಎರಡನೆಯ ಸೋಮೇಶ್ವರ ಗೆದ್ದನು.

**ರಾಚನೂರು ಯುದ್ಧ(೧೧೩೧-೩೫):** ಹೊಯ್ಸಳರಸ ವಿಷ್ಣುವರ್ಧನ ಕ್ರಿ.ಶ. ೧೧೩೧-೩೫ರಲ್ಲಿ ರಾಯಚೂರು ಯುದ್ಧದಲ್ಲಿ ಕಲ್ಯಾಣ ಚಾಲುಕ್ಯ ಅರಸ ೬ನೆಯ ವಿಕ್ರಮಾದಿತ್ಯನ ಸಾಮಂತ ಸಿಂಧ ಪ್ರಭು ಎರಡನೆಯ ಅಚುಗಿಯೊಂದಿಗೆ ಹೋರಾಡಿದನು.[೧೨] ಹೊಯ್ಸಳ ಅರಸನಿಗೆ ಸೋಲಾಯಿತು.

**ಲಿಂಗಸೂಗೂರು ಯುದ್ಧ(೧೧೮೬-೮೭):** ಕ್ರಿ.ಶ. ೧೧೮೬-೮೭ರಲ್ಲಿ ಕಿಸುಕಾಡುನಾಡು ಎಂದು ಗುರುತಿಸಿಕೊಂಡಿದ್ದ ಲಿಂಗಸೂಗೂರು ಮೇಲೆ ಸೇವುಣ ಅರಸ ೫ನೆಯ ಭಿಲ್ಲಮನು ಆಕ್ರಮಣ ಮಾಡಿದನು.[೧೩] ಈ ಸಂದರ್ಭದಲ್ಲಿ ಕಲ್ಯಾಣ ಚಾಲುಕ್ಯರಸ ನಾಲ್ಕನೆಯ ಸೋಮೇಶ್ವರನು ಇವನಿಂದ ಸೋಲನುಭವಿಸಿದನು.

**ಮಲ್ಲಟ ಯುದ್ಧ(೧೧೯೦):** ಈ ಯುದ್ಧ ಕ್ರಿ.ಶ. ೧೧೯೦ರಲ್ಲಿ ಮಲ್ಲಟದಲ್ಲಿ ನಡೆಯಿತು. ಈ ಯುದ್ಧದಲ್ಲಿ ಹೊಯ್ಸಳರಸ ಎರಡನೆಯ ಬಲ್ಲಾಳ ಮತ್ತು ಸೇವುಣರ ಸಾಮಂತರಾದ ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರು ಭಾಗವಹಿಸಿದ್ದರು.[೧೪] ಬಲ್ಲಾಳನ ದಾಳಿಗೆ ಸಾಮಂತರು ಹೆದರಲಿಲ್ಲ ಎಂಬುದು ಕಂಡುಬರುತ್ತದೆ.

**ಸಿರವಾರ ಯುದ್ಧ(೧೧೯೬):** ಈ ಯುದ್ಧ ಕ್ರಿ.ಶ. ೧೧೯೬ರಲ್ಲಿ ನಡೆಯಿತು. ಕಲ್ಯಾಣ ಚಾಲುಕ್ಯರ ಸಾಮಂತ ಮೊರಟದ ಮಲ್ಲರಸ ಹಾಗೂ ಸೇವುಣರ ಭಿಲ್ಲಮನ ದಂಡನಾಯಕ ಸಾಹಣಿಬ್ರಹ್ಮ

ಮತ್ತು ಕೊಡೆಯ ಹಂದಿಗರಸರು ಈ ಸಿರವಾರ ಯುದ್ಧದಲ್ಲಿ ಸೆಣಸಾಡಿದರು.[೧೫] ಮೊರಟದ ಸಾಮಂತನಿಗೆ ಸೋಲಾಯಿತು.

**ಕೂಡಲಸಂಗಮ ಯುದ್ಧ(೧೧೯೫):** ಸೇವುಣರ ಜೈತುಗಿ ಹಾಗೂ ಕಾಕತೀಯ ಮಹಾದೇವರ ನಡುವೆ ಕ್ರಿ.ಶ.೧೧೯೫ರಲ್ಲಿ ಕೃಷ್ಣಾ-ತುಂಗಭದ್ರ ನದಿಗಳ ಸಂಗಮ ಕೂಡಲಸಂಗಮದಲ್ಲಿ ಯುದ್ಧ ನಡೆಯಿತು.[೧೬] ಸೇವುಣ ಜೈತುಗಿಗೆ ಗೆಲುವು ದೊರೆಯಿತು.

**ರಾಯಚೂರು ಆಕ್ರಮಣ(೧೨೯೪):** ಕಾಕತೀಯ ಪ್ರತಾಪರುದ್ರ ಕ್ರಿ.ಶ. ೧೨೯೪ರಲ್ಲಿ ರಾಯಚೂರನ್ನು ಆಕ್ರಮಣ ಮಾಡಿದನು.[೧೭]

**ರಾಯಚೂರು ಮೇಲೆ ದಾಳಿ(೧೩೫೦):** ಬಹಮನಿ ರಾಜ್ಯ ಸ್ಥಾಪಕ ಅಲ್ಲಾವುದ್ದೀನ್ ಬಹಮನಿಶಾ ಮತ್ತು ವಾರಂಗಲ್ ಕಾಪಯ ನಾಯಕರ ನಡುವೆ ಈ ಯುದ್ಧ ನಡೆಯಿತು. ಈ ಯುದ್ಧ ರಾಯಚೂರಿನಲ್ಲಿ ಕ್ರಿ.ಶ. ೧೩೫೦ರಲ್ಲಿ ನಡೆಯಿತೆಂದು ತಿಳಿದುಬರುತ್ತದೆ.[೧೮] ಬಹಮನ್‌ಶಾ ಪ್ರಾಬಲ್ಯ ಸಾಧಿಸಿದನು.

**ರಾಯಚೂರು ದೋ-ಅಬ್ ಯುದ್ಧ(೧೩೬೨):** ಈ ಯುದ್ಧ ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ಸುಲ್ತಾನ ಒಂದನೆಯ ಮಹಮ್ಮದಶಹರ ನಡುವೆ ಕ್ರಿ.ಶ. ೧೩೬೨ರಲ್ಲಿ ರಾಯಚೂರನಲ್ಲಿ ನಡೆಯಿತು.[೧೯] ಈ ಯುದ್ಧದಲ್ಲಿ ಯಾರಿಗೂ ಗೆಲುವಾಗಲಿಲ್ಲ. ಆದರೆ ಮಹಮ್ಮದ್‌ಶಾನ ಪ್ರಾಬಲ್ಯ ಸಾಧಿಸಿದ ಬಗ್ಗೆ ತಿಳಿದುಬರುತ್ತದೆ.

**ಮುದಗಲ್ ಯುದ್ಧ(೧೩೬೬):** ವಿಜಯನಗರದ ಒಂದನೆಯ ಬುಕ್ಕ ಹಾಗೂ ಬಹಮನಿ ಸುಲ್ತಾನ ಒಂದನೆಯ ಮಹಮ್ಮದ್‌ಶಹರ ನಡುವೆ ಕ್ರಿ.ಶ. ೧೩೬೬ರಲ್ಲಿ ಮುದಗಲ್‌ನಲ್ಲಿ ಯುದ್ಧವಾಯಿತು.[೨೦] ಬುಕ್ಕನು ಒಪ್ಪಂದಕ್ಕೆ ಬರಬೇಕಾಯಿತು.

**ಆದೋನಿ ಯುದ್ಧ-೧(೧೩೬೬-೬೭):** ಬಹಮನಿ ಸುಲ್ತಾನ ಒಂದನೆಯ ಮಹಮ್ಮದ್‌ಶಹ ಹಾಗೂ ವಿಜಯನಗರದ ಒಂದನೆಯ ಬುಕ್ಕನ ನಡುವೆ ಕ್ರಿ.ಶ. ೧೩೬೬-೬೭ರಲ್ಲಿ ಆದೋನಿಯಲ್ಲಿ ಈ ಯುದ್ಧ ನಡೆಯಿತೆಂದು ತಿಳಿದುಬರುತ್ತದೆ.[೨೧] ಮಹಮ್ಮದ್ ಶಾನಿಗೆ ಗೆಲುವಾಯಿತು.

**ಆದೋನಿ ಯುದ್ಧ-೨ (೧೩೭೫-೭೬):** ಬಹಮನಿ ಸುಲ್ತಾನಶಾಹನ ಮಗ ಮುಜಾಹಿದ್‌ಶಹ ಮತ್ತು ಒಂದನೆಯ ಬುಕ್ಕನ ನಡುವೆ ಕ್ರಿ.ಶ. ೧೩೭೫-೭೬ರಲ್ಲಿ ಆದೋನಿ ಯುದ್ಧವಾಯಿತು.[೨೨] ಬಹಮನಿಗೆ ಜಯ ಸಿಕ್ಕಿತು.

**ರಾಯಚೂರು ದೋ-ಅಬ್ ಮೇಲೆ ದಾಳಿ(೧೩೭೮):** ಬಹಮನಿ ಸುಲ್ತಾನರ ರಾಜಕೀಯ ಅಸ್ಥಿರತೆಯ ಹಿನ್ನೆಲೆಯಲ್ಲಿ ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ರಾಜ್ಯದ ಅಧೀನದಲ್ಲಿದ್ದ ರಾಯಚೂರು ದೋ-ಅಬ್ ಮೇಲೆ ಕ್ರಿ.ಶ. ೧೩೭೮ರಲ್ಲಿ ದಾಳಿ ಮಾಡಿದನು. ಬಹಮನಿ ಸುಲ್ತಾನ ಎರಡನೆಯ ಮಹಮ್ಮದ್‌ಶಹ ಆಗತಾನೆ ಅಧಿಕಾರಕ್ಕೆ ಬಂದಿದ್ದನು.[೨೩] ಬುಕ್ಕನು ಈ ಪ್ರದೇಶವನ್ನು ಗೆದ್ದು ಮತ್ತೆ ಬಹಮನಿಗೆ ಒಪ್ಪಿಸುತ್ತಾನೆ.

**ಭಾನೂರು ಮತ್ತು ಮಸರಕಲ್ ಯುದ್ಧ(೧೩೯೮):** ಇದು ವಿಜಯನಗರದ ಎರಡನೆಯ ಹರಿಹರ ಮತ್ತು ಬಹಮನಿ ಸುಲ್ತಾನ ಫಿರೋಜ್‌ಶಹರ ನಡುವೆ ಕ್ರಿ.ಶ.೧೩೯೮ರಲ್ಲಿ ಭಾನೂರು ಮತ್ತು ಮಸರಕಲ್‌ಗಳಲ್ಲಿ ಯುದ್ಧ ನಡೆದ ಬಗ್ಗೆ ತಿಳಿದುಬರುತ್ತದೆ.[೨೪] ಫಿರೋಜ್‌ಶಹನಿಗೆ ಗೆಲುವು ಸಿಕ್ಕಿತು.

**ಸ್ತ್ರೀ "ವ್ಯಾಮೋಹ"ಕ್ಕಾಗಿ ಮುದಗಲ್ ಯುದ್ಧ(೧೪೦೬-೦೭):** ವಿಜಯನಗರದ ಒಂದನೆಯ ದೇವರಾಯ ಮತ್ತು ಬಹಮನಿ ಸುಲ್ತಾನ ಫಿರೋಜ್‌ಶಹರ ನಡುವೆ ಕ್ರಿ.ಶ.೧೪೦೬-೦೭ರಲ್ಲಿ ಮುದಗಲ್‌ನಲ್ಲಿ ಯುದ್ಧವಾಯಿತು.[೨೫] ಒಂದನೆಯ ದೇವರಾಯನಿಗೆ ಸೋಲಾಯಿತು.

**ಮಾನವಿ ಯುದ್ಧ (೧೪೦೬-೦೭):** ಬಹಮನಿ ಸುಲ್ತಾನ ಫಿರೋಜ್‌ಶಾಹ ಮತ್ತು ಮಾನ್ವಿ ಕೋಟೆಯ ದಂಡನಾಯಕನ(ಹೆಸರು ತಿಳಿದು ಬರುವುದಿಲ್ಲ) ನಡುವೆ ಕ್ರಿ.ಶ. ೧೪೦೬-೦೭ರಲ್ಲಿ ಮಾನ್ವಿಯಲ್ಲಿ ಯುದ್ಧ ನಡೆದಿರುವುದಾಗಿ ತಿಳಿದುಬರುತ್ತದೆ.[೨೬] ಫಿರೋಜ್‌ಶಾಹನಿಗೆ ಗೆಲುವಾಯಿತು.

**ರಾಯಚೂರು ದೋ-ಅಬ್‌ನಲ್ಲಿ ಅಧಿಕಾರ ಸ್ಥಾಪನೆಗಾಗಿ ಯುದ್ಧ(೧೪೧೭-೧೯):** ವಿಜಯನಗರದ ಒಂದನೆಯ ದೇವರಾಯ ಮತ್ತು ಬಹಮನಿ ಸುಲ್ತಾನ ಫಿರೋಜ್‌ಶಹರ ನಡುವೆ ಕ್ರಿ.ಶ. ೧೪೧೭-೧೯ರವರೆಗೆ ಆಂಧ್ರಪ್ರದೇಶದ ನಲ್ಗೊಂಡ-ಪನಗಲ್ ಕೋಟೆಗಳಲ್ಲಿ ಮುಖಾಮುಖಿಯಾದ ಬಗ್ಗೆ ತಿಳಿದುಬರುತ್ತದೆ.[೨೭] ಒಂದನೆಯ ದೇವರಾಯನು ಗೆದ್ದನು.

**ಮುದಗಲ್ ಯುದ್ಧ(೧೪೩೫):** ಬಹಮನಿ ಸುಲ್ತಾನ ಎರಡನೆಯ ಅಲ್ಲಾವುದ್ದೀನ್ ಮತ್ತು ವಿಜಯನಗರದ ಎರಡನೆಯ ದೇವರಾಯರ ನಡುವೆ ಕ್ರಿ.ಶ. ೧೪೩೫ರಲ್ಲಿ ಮುದಗಲ್‌ನಲ್ಲಿ ಯುದ್ಧವಾಯಿತು.[೨೮] ಎರಡನೆಯ ದೇವರಾಯನಿಗೆ ಗೆಲುವಾಯಿತು.

**ಮುದಗಲ್‌ನಲ್ಲಿ ಮೂರು ಯುದ್ಧಗಳು(ಕ್ರಿ.ಶ.೧೪೪೩):** ಎರಡನೆಯ ದೇವರಾಯ ಮತ್ತು ಬಹಮನಿಯ ಎರಡನೆಯ ಅಲ್ಲಾವುದ್ದೀನ ನಡುವೆ ಕ್ರಿ.ಶ.೧೪೪೩ರಲ್ಲಿ ಮೂರು ಯುದ್ಧಗಳು ನಡೆದುದು ತಿಳಿದುಬರುತ್ತದೆ.[೨೯] ಎರಡನೆಯ ದೇವರಾಯನಿಗೆ ಯಶಸ್ಸು ದೊರೆಯಿತು.

**ರಾಯಚೂರು ದೋ-ಅಬ್‌ನ ಮೇಲಿನ ಹಿಡಿತಕ್ಕಾಗಿ ಯುದ್ಧ(೧೪೮೫-೯೦):** ವಿಜಯನಗರದ ಸಾಳುವ ನರಸಿಂಹ ಮತ್ತು ಬಿಜಾಪುರದ ಯೂಸುಫ್ ಆದಿಲ್‌ಶಾಹಿ ನಡುವೆ ಕ್ರಿ.ಶ. ೧೪೮೫-೯೦ರಲ್ಲಿ ರಾಯಚೂರನಲ್ಲಿ ಯುದ್ಧವಾಯಿತು.[೩೦] ವಿಜಯನಗರ ಪ್ರಾಬಲ್ಯ ಸಾಧಿಸಿತು.

**ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ(೧೪೯೦-೯೧):** ಬಿಜಾಪುರದ ಯೂಸುಫ್ ಆದಿಲ್‌ಶಾಹಿ ಹಾಗೂ ವಿಜಯನಗರ ನರಸನಾಯಕನ ಒಕ್ಕೂಟದ(ಬರೀದ್‌ಶಾಹಿಯ ಕಾಸಿಂ ಬರೀದ್ ಮತ್ತು ಕೊಂಕಣದ ದೊರೆ ಬಹಾದ್ದೂರ್ ಗಿಲಾನಿ ಹಾಗೂ ನರಸನಾಯಕರು ಸೇರಿ ಮಾಡಿಕೊಂಡಿದ್ದ ಒಕ್ಕೂಟ) ನಡುವೆ ಕ್ರಿ.ಶ. ೧೪೯೦-೯೧ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ ನಡೆಯಿತು.[೩೧] ಇಲ್ಲಿ ನರಸನಾಯಕನಿಗೆ ಗೆಲುವಾಯಿತು.

**ಮಾನವಿ ಯುದ್ಧ (೧೪೯೨-೯೩):** ಈ ಯುದ್ಧ ಕ್ರಿ.ಶ. ೧೪೯೨-೯೩ರಲ್ಲಿ ಬಿಜಾಪುರದ ಯೂಸುಫ್ ಆದಿಲ್‌ಶಾಹಿ ಹಾಗೂ ವಿಜಯನಗರದ ನರಸನಾಯಕನ ನಡುವೆ ಮಾನ್ವಿಯಲ್ಲಿ ನಡೆಯಿತೆಂದು ತಿಳಿದುಬರುತ್ತದೆ.[೩೨] ಆದಿಲ್‌ಶಾಹಿಗಳು ಗೆದ್ದರು.

049159

**ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ(೧೫೦೩-೦೯):** ಬಿಜಾಪುರದ ಯೂಸುಫ್ ಆದಿಲ್‌ಶಾಹಿಯ ನಿರ್ದೇಶನದಂತೆ ಬಹಮನಿ ಸುಲ್ತಾನ ಮಹಮ್ಮದ್‌ಶಹ ರಾಯಚೂರು ಮತ್ತು ಮುದಗಲ್‌ಗಳ ಮೇಲೆ ಕ್ರಿ.ಶ. ೧೫೦೩ರಲ್ಲಿ ದಾಳಿ ಮಾಡಿದನು. ಈ ಯುದ್ಧದಲ್ಲಿ ಈ ಕೋಟೆಗಳಲ್ಲಿನ ಮುಖ್ಯಸ್ಥರು ಹೋರಾಟ ಮಾಡಿರಬೇಕೆಂದು ತಿಳಿದುಬರುತ್ತದೆ. ತುಳುವ ನರಸಿಂಹ ಆದೋನಿ ಕೋಟೆಯನ್ನು ಮುತ್ತಿಗೆ ಹಾಕಿದ್ದನೆಂದು ತಿಳಿದುಬರುತ್ತದೆ.[೩೩] ಆದಿಲ್‌ಶಾಹಿಗಳ ಪ್ರಾಬಲ್ಯ ಹೆಚ್ಚಿತು.

**ರಾಯಚೂರು ಯುದ್ಧ(೧೫೧೨):** ವಿಜಯನಗರದ ಕೃಷ್ಣದೇವರಾಯ ಹಾಗೂ ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಾಹಿಯ ನಡುವೆ ಕ್ರಿ.ಶ. ೧೫೧೨ರಲ್ಲಿ ರಾಯಚೂರಿನಲ್ಲಿ ಯುದ್ಧವಾಯಿತು. ಈ ಯುದ್ಧದಲ್ಲಿ ಇಸ್ಮಾಯಿಲ್ ಆದಿಲ್‌ಶಾಹನ ದಂಡನಾಯಕ ಕಮಾಲಖಾನನು ನೇತೃತ್ವ ವಹಿಸಿದ್ದನು.[೩೪] ವಿಜಯನಗರ ಅಧಿಪತ್ಯ ಸಾಧಿಸಿತು.

**ಬಿಜಾಪುರ ಆದಿಲ್‌ಶಾಹಿಗಳ ವಶದಲ್ಲಿ ರಾಯಚೂರು(೧೫೧೩-೧೫):** ಈ ಯುದ್ಧ ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಾಹಿ ಮತ್ತು ವಿಜಯನಗರದ ಕೃಷ್ಣದೇವರಾಯ ನೇಮಿಸಿದ ಇಲ್ಲಿನ ಕೋಟೆಯ ಮುಖ್ಯಸ್ಥರ ನಡುವೆ ಕ್ರಿ.ಶ. ೧೫೧೩ರಲ್ಲಿ ರಾಯಚೂರಿನಲ್ಲಿ ಯುದ್ಧ ಮಾಡಿರಬೇಕೆಂದು ತಿಳಿದುಬರುತ್ತದೆ.[೩೫] ಕೃಷ್ಣದೇವರಾಯ ಈ ಪ್ರದೇಶವನ್ನು ವಶಪಡಿಸಿಕೊಂಡನು.

**ರಾಯಚೂರು ಮೇಲೆ ದಾಳಿ(೧೫೧೫):** ಬಿಜಾಪುರ ಆದಿಲ್‌ಶಾಹಿ ಸಾಮಂತರಾದ ಮಲ್ಲೂಖಾನ ಮತ್ತು ಇತರರು ರಾಯಚೂರು ಕೋಟೆಯನ್ನು ಆಳುತ್ತಿದ್ದಾಗ ಕೃಷ್ಣದೇವರಾಯ ಕ್ರಿ.ಶ.೧೫೧೫ರಲ್ಲಿ ರಾಯಚೂರು ಕೋಟೆ ಮೇಲೆ ದಾಳಿ ಮಾಡಿದ.[೩೬] ಈ ದಾಳಿಯಲ್ಲಿ ರಾಯಚೂರು ವಿಜಯನಗರದ ವಶವಾಯಿತು.

**ಬಿಜಾಪುರ ಆದಿಲ್‌ಶಾಹಿಗಳ ವಶದಲ್ಲಿ ರಾಯಚೂರು(೧೫೧೬-೧೯):** ಕ್ರಿ.ಶ. ೧೫೧೫ರಲ್ಲಿ ಕೃಷ್ಣದೇವರಾಯ ಒರಿಸ್ಸಾ ಪ್ರದೇಶದಲ್ಲಿ ಆದಿಲ್‌ಶಾಹನು ಕ್ರಿ.ಶ. ೧೫೧೬-೧೯ರ ಅವಧಿಯಲ್ಲಿ ರಾಯಚೂರು ಮೇಲೆ ಪ್ರತಿದಾಳಿ ಮಾಡಿ ರಾಯಚೂರು ಕೋಟೆಯನ್ನು ಆದಿಲ್‌ಶಾಹಿಗಳು ವಶಪಡಿಸಿಕೊಂಡಿರುವುದು ಕಂಡುಬರುತ್ತದೆ.[೩೭]

**ಗಬ್ಬೂರು ಯುದ್ಧ ಮತ್ತು ರಾಯಚೂರು ಕೋಟೆ ಮುತ್ತಿಗೆ(೧೫೨೧):** ಈ ಯುದ್ಧ ನಿರ್ಣಾಯಕ ವಾದದ್ದು. ವಿಜಯನಗರದ ಕೃಷ್ಣದೇವರಾಯ ಮತ್ತು ಬಿಜಾಪುರ ಇಸ್ಮಾಯಿಲ್ ಆದಿಲ್‌ಶಾಹಿಗಳ ನಡುವೆ ಕ್ರಿ.ಶ. ೧೫೨೧ರಲ್ಲಿ ಗಬ್ಬೂರು ಮತ್ತು ರಾಯಚೂರು ಕೋಟೆಯಲ್ಲಿ ದೊಡ್ಡ ಪ್ರಮಾಣದ ಯುದ್ಧವಾಯಿತೆಂದು ತಿಳಿದುಬರುತ್ತದೆ.[೩೮] ವಿಜಯನಗರದ ಕೃಷ್ಣದೇವರಾಯನಿಗೆ ಗೆಲುವಾಯಿತು.

**ಬಿಜಾಪುರ ಯುದ್ಧ(೧೫೨೨):** ವಿಜಯನಗರದ ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲಶಾಹಿಗಳ ನಡುವೆ ಕ್ರಿ.ಶ. ೧೫೨೨ರಲ್ಲಿ ಬಿಜಾಪುರದಲ್ಲಿ ನಡೆಯಿತು.[೩೯] ಸೋತ ಪ್ರದೇಶವನ್ನು ಮರಳಿಕೊಡಲು ಕೇಳಿದ ಕರಾರಿಗೆ ಬದ್ಧರಾಗದೆ ಇದ್ದುದಕ್ಕೆ ಈ ಯುದ್ಧವನ್ನು ಎದುರಿಸಬೇಕಾಯಿತು. ಬಿಜಾಪುರದ ಆದಿಲ್‌ಶಾಹಿಗೆ ಸೋಲಾಯಿತು.

**ರಾಯಚೂರು ಮತ್ತು ಮುದಗಲ್ ಕೋಟೆಗಳಿಗಾಗಿ ಯುದ್ಧ(೧೫೩೦):** ವಿಜಯನಗರದಲ್ಲಿ ಕೃಷ್ಣದೇವರಾಯನ ನಂತರ ಅಚ್ಯುತರಾಯ ಅಧಿಕಾರಕ್ಕೆ ಬಂದಾಗ ಅಂತಃಕಲಹಗಳು ನಡೆದಿದ್ದವು. ಇಂತಹ ಸಮಯದ ಅವಕಾಶವನ್ನು ಪಡೆದ ಬಿಜಾಪುರದ ಇಸ್ಮಾಯಿಲ್ ಆದಿಲಶಾಹನು ಕ್ರಿ.ಶ. ೧೫೩೦ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ ಮಾಡಿ ವಶಪಡಿಸಿಕೊಂಡನು.[೪೦]

**ವಿಜಯನಗರದ ವಶದಲ್ಲಿ ರಾಯಚೂರು ದೋ-ಅಬ್(೧೫೩೫):** ಬಿಜಾಪುರದ ಇಸ್ಮಾಯಿಲ್ ಆದಿಲಶಾಹನು ಅನುಸರಿಸಿದ ನೀತಿಯನ್ನೇ ಇವನ ಮರಣದ ನಂತರ ಅನುಸರಿಸಲಾಯಿತು. ವಿಜಯನಗರದ ಅಚ್ಯುತರಾಯ ಕ್ರಿ.ಶ. ೧೫೩೫ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳ ಮೇಲೆ ಯುದ್ಧ ಮಾಡಿ ವಶಪಡಿಸಿಕೊಂಡನು.[೪೧] ಬಿಜಾಪುರದಲ್ಲಿ ಇಸ್ಮಾಯಿಲ್‌ನ ಎರಡನೆಯ ಮಗ

ಒಂದನೆಯ ಇಬ್ರಾಹಿಂ ಆದಿಲ್‌ಶಾಹನು ಕ್ರಿ.ಶ. ೧೫೩೫ರಲ್ಲಿ ಅಧಿಕಾರಕ್ಕೆ ಬಂದಾಗ ಅಂತಃಕಲಹ ಉಂಟಾಗಿತ್ತು.

**ಆದೋನಿ ಯುದ್ಧ(೧೫೪೩):** ಈ ಯುದ್ಧ ಬಿಜಾಪುರದ ಇಬ್ರಾಹಿಂ ಆದಿಲ್‌ಶಹ ಹಾಗೂ ಬರ್ಹಾನ್ ನಿಜಾಂಶಹ, ವಿಜಯನಗರದ ರಾಮರಾಯ ಮತ್ತು ಗೋಲ್ಕೊಂಡಾದ ಸುಲ್ತಾನ ಕುತುಬ್‌ಶಹರ ಒಕ್ಕೂಟದ ನಡುವೆ ಕ್ರಿ.ಶ. ೧೫೪೩ರಲ್ಲಿ ಆದೋನಿಯಲ್ಲಿ ನಡೆಯಿತು.[೪೨] ರಾಯಚೂರು ಮತ್ತು ಮುದಗಲ್ ಕೋಟೆಗಳು ರಾಮರಾಯನ ವಶವಾದವು.

**ರಾಯಚೂರು ಮತ್ತು ಮುದಗಲ್ ಯುದ್ಧ(೧೫೫೦):** ಬಿಜಾಪುರದ ಇಬ್ರಾಹಿಂ ಆದಿಲಶಾಹಿಯ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳದ ಅಹಮ್ಮದ ನಗರ ನಿಜಾಮ್‌ಶಹ ರಾಮರಾಯನ ಸಹಾಯ ಕೋರಿದ. ಅದರ ಪ್ರಕಾರ ರಾಮರಾಯ ರಾಯಚೂರು ಮತ್ತು ಮುದಗಲ್‌ಗಳ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು. ಈ ಯುದ್ಧ ಕ್ರಿ.ಶ. ೧೫೫೦ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ನಡೆಯಿತು.[೪೩]

**ಬಿಜಾಪುರದ ವಶದಲ್ಲಿ ರಾಯಚೂರು ದೋ-ಅಬ್(೧೫೫೨–೫೪):** ಬಿಜಾಪುರದ ಇಬ್ರಾಹಿಂ ಆದಿಲಶಾಹಿ ಮತ್ತು ವಿಜಯನಗರದ ರಾಮರಾಯನ ನಡುವೆ ಕ್ರಿ.ಶ. ೧೫೫೨–೫೪ರಲ್ಲಿ ರಾಯಚೂರು ದೋ-ಅಬ್‌ನಲ್ಲಿ ಯುದ್ಧ ನಡೆದಿರಬೇಕು. ಏಕೆಂದರೆ ಈ ಕಾಲಾವಧಿಯಲ್ಲಿ ರಾಯಚೂರು ದೋ-ಅಬ್ ಬಿಜಾಪುರದ ವಶದಲ್ಲಿತ್ತೆಂದು ತಿಳಿದುಬರುತ್ತದೆ.[೪೪]

**ಬಿಜಾಪುರದ ಪರವಾಗಿ ಅಹಮ್ಮದ್ ನಗರದೊಂದಿಗೆ ಯುದ್ಧ (೧೫೫೮):** ಬಿಜಾಪುರದ ಆದಿಲಶಾಹಿ ಅಪ್ರಾಪ್ತನಾಗಿದ್ದನು. ಇವನು ರಾಮರಾಯನ ಸಹಾಯ ಕೋರಿದ್ದಕ್ಕಾಗಿ ಬಿಜಾಪುರ ಪರವಾಗಿ ಕ್ರಿ.ಶ. ೧೫೫೮ರಲ್ಲಿ ಅಹಮ್ಮದ್‌ನಗರದ ನಿಜಾಮಶಹನ ವಿರುದ್ಧ ಬಿಜಾಪುರದಲ್ಲಿ ಯುದ್ಧ ನಡೆಯಿತೆಂದು ಗೊತ್ತಾಗುತ್ತದೆ.[೪೫] ರಾಮರಾಯನಿಗೆ ಇದರಿಂದ ಯಶಸ್ಸು ಸಿಕ್ಕಿತು.

**ಬಯ್ಯಾಪುರ ಯುದ್ಧ(೧೫೬೫):** ಈ ಯುದ್ಧ ವಿಜಯನಗರದ ಮತ್ತು ನಾಲ್ಕು ಶಾಹಿ ಸುಲ್ತಾನರಾದ ನಿಜಾಮಶಾಹಿ, ಕುತುಬ್‌ಶಾಹಿ, ಬರೀದ್‌ಶಾಹಿ ಮತ್ತು ಬಿಜಾಪುರದ ಆದಿಲಶಾಹಿಗಳ ಒಕ್ಕೂಟದ ನಡುವೆ ಕ್ರಿ.ಶ. ೧೫೬೫ರಲ್ಲಿ ಬಯ್ಯಾಪುರ-ಭೋಗಾಪುರದಲ್ಲಿ ಯುದ್ಧವಾದ ಬಗ್ಗೆ ತಿಳಿದುಬರುತ್ತದೆ.[೪೬] ಈ ಯುದ್ಧದಲ್ಲಿ ಶಾಹಿ ಸುಲ್ತಾನರಿಗೆ ಗೆಲುವಾಯಿತು.

**ಸಿಂಧನೂರಿನಲ್ಲಿ ಸಂಘರ್ಷ(೧೬೩೮–೩೯):** ಬಿಜಾಪುರದ ಮಹಮ್ಮದ್ ಆದಿಲಶಾಹನು ಅಧಿಕಾರ ದಲ್ಲಿದ್ದಾಗ ಅವನ ಅಮೀರರಲ್ಲಿ ನಡೆದ ಸಂಘರ್ಷ ಇದಾಗಿದೆ. ಇದು ಸಿದ್ದಿಅಂಬರ ಮತ್ತು ರಣದುಲ್ಲಾಖಾನನ ಆಪ್ತ ಅಫಜಲಖಾನನ ನಡುವೆ ಕ್ರಿ.ಶ. ೧೬೩೮–೩೯ರಲ್ಲಿ ಸಿಂಧನೂರಿನಲ್ಲಿ ನಡೆಯಿತೆಂದು ತಿಳಿದುಬರುತ್ತದೆ.[೪೭] ಸಿದ್ಧಿಅಂಬರನು ಶರಣಾದನು.

**ದೇವದುರ್ಗದ ಮೇಲೆ ದಾಳಿ(೧೬೪೮):** ರಾಜ್ಯವನ್ನು ಹದ್ದುಬಸ್ತಿನಲ್ಲಿಡಲೆಂದು ಬಿಜಾಪುರ ಮಹಮ್ಮದ ಆದಿಲಶಾಹನ ದಂಡನಾಯಕ ಮುಸ್ತಾಫಖಾನನು ಕ್ರಿ.ಶ. ೧೬೪೮ರಲ್ಲಿ ದೇವದುರ್ಗದ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು.[೪೮] ಇವನ ವಿರುದ್ಧ ಯಾರು ಹೋರಾಡಿದರೆಂಬುದು ತಿಳಿದುಬರುವುದಿಲ್ಲ.

**ರಾಯಚೂರು ಕೋಟೆ ಮುತ್ತಿಗೆ(೧೬೭೦–೮೩):** ಬಿಜಾಪುರದ ಎರಡನೆಯ ಅಲಿ ಆದಿಲಶಾಹ ಮತ್ತು ಸಿದ್ದಿ ಜೋಹರ ಸಲಾಬತಖಾನರ ನಡುವೆ ಕ್ರಿ.ಶ. ೧೬೭೦–೮೩ರಲ್ಲಿ ನಡೆದ ಮುತ್ತಿಗೆ ಇದಾಗಿದೆ.

ರಾಯಚೂರು ಕೋಟೆಯನ್ನು ವಶಪಡಿಸಿಕೊಳ್ಳುವುದರ ಮೂಲಕ ತಮ್ಮ ಪ್ರಾಬಲ್ಯ ಹೆಚ್ಚಿಸಿಕೊಂಡರು. ಜೊತೆಗೆ ರಾಯಚೂರು ಕೋಟೆಗೆ ಆಕಾಖುಸ್ರೋ ಎಂಬುವನನ್ನು ಕಿಲ್ಲೇದಾರನನ್ನಾಗಿ ನೇಮಿಸಲಾಯಿತು.[೪೯]

**ರಾಯಚೂರು ದೋ-ಅಬ್‌ನ ಮೇಲೆ ದಾಳಿ(೧೬೬೫-೬೬):** ರಾಜ್ಯ ರಕ್ಷಣೆ ಮತ್ತು ರಾಜ್ಯ ವ್ಯವಸ್ಥೆಯನ್ನು ಸರಿಪಡಿಸಲೆಂದು ಬಿಜಾಪುರದ ಇಮ್ಮಡಿ ಅಲಿ ಆದಿಲ್‌ಶಹನು ಕ್ರಿ.ಶ. ೧೬೬೫-೬೬ರಲ್ಲಿ ರಾಯಚೂರು ದೋ-ಅಬ್‌ನ ಮೇಲೆ ದಾಳಿ ಮಾಡಿದನು.[೫೦] ಈ ಸಂದರ್ಭದಲ್ಲಿ ಇವನ ವಿರುದ್ಧ ಯಾರು ಹೋರಾಡಿದರೆಂಬುದು ತಿಳಿದುಬರುವುದಿಲ್ಲ. ಸಾರ್ವಭೌಮರಾಗಿದ್ದ ಆದಿಲಶಾಹಿಗಳು ಈ ಪ್ರದೇಶದ ಮೇಲೆ ನಿಗಾ ಇಟ್ಟಿರುವುದು ಕಂಡುಬರುತ್ತದೆ.

**ದೇವದುರ್ಗದ ಮೇಲೆ ಕನಕಗಿರಿ ನಾಯಕರ ದಾಳಿ(೧೬೭೪):** ಬಿಜಾಪುರದ ಆದಿಲಶಾಹಿಗಳ ಮೇಲಿನ ಸೇಡಿಗಾಗಿ ಸರದಾರರಲ್ಲಿ ಬಣವಾಗಿ ಗುರುತಿಸಿಕೊಂಡಿದ್ದ ಪಠಾಣರ ಪಕ್ಷವನ್ನು ಸೇರಿ ದೇವದುರ್ಗದ ಕಿಲ್ಲೆಯ ಮೇಲೆ ಕನಕಗಿರಿಯ ಇಮ್ಮಡಿ ಉಡಚನಾಯಕ ದಾಳಿ ಮಾಡಿ ಕ್ರಿ.ಶ. ೧೬೭೪ರಲ್ಲಿ ವಶಪಡಿಸಿಕೊಂಡನು.[೫೧] ಈ ಸಂದರ್ಭದಲ್ಲಿ ಇಲ್ಲಿನ ಆಡಳಿತದ ಮುಖ್ಯಸ್ಥರು ಯಾರಾಗಿದ್ದರೆಂಬುದು ತಿಳಿದುಬರುವುದಿಲ್ಲ.

**ಸಿಂಧನೂರಿನಲ್ಲಿ ದಂಗೆ(೧೬೮೩-೮೪):** ಅಜೀಜ ಅಂಬರಖಾನ ಹಾಗೂ ಬಿಜಾಪುರದ ಸಿಕಂದರ ಆದಿಲಶಾಹನ ಆಪ್ತ ಮಾಸೂದಖಾನನ ನಡುವೆ ಕ್ರಿ.ಶ. ೧೬೮೩-೮೪ರಲ್ಲಿ ಸಿಂಧನೂರಿನಲ್ಲಿ ಸಂಘರ್ಷ ನಡೆಯಿತು.[೫೨] ಈ ದಂಗೆಯನ್ನು ಆಪ್ತ ಮಾಸೂದಖಾನನು ಸದೆಬಡೆದನೆಂದು ತಿಳಿದುಬರುತ್ತದೆ.

**ರಾಯಚೂರು ಕೋಟೆ ಮೊಗಲರ ವಶ(೧೬೯೦):** ಮೊಗಲ ಸುಲ್ತಾನ ಔರಂಗಜೇಬನು ಬಿಜಾಪುರದಲ್ಲಿ ಸಿಕಂದರ ಆದಿಲಶಾಹನು ಅಧಿಕಾರದಲ್ಲಿದ್ದಾಗ ಕ್ರಿ.ಶ. ೧೬೯೦ರಲ್ಲಿ ರಾಯಚೂರು ಕೋಟೆಯ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು.[೫೩] ಮೊಗಲರ ವಿರುದ್ಧ ಹೋರಾಡಿದವರ ಮಾಹಿತಿಯಿಲ್ಲ.

**ವೀರಗೋಟ ಯುದ್ಧ(೧೭೦೫):** ಸುರಪುರದ ಪೀತಾಂಬರಿ ಬಹಿರಿ ಪಿಡ್ಡನಾಯಕ ಹಾಗೂ ದೇವದುರ್ಗ ಸಂಸ್ಥಾನಿಕ ವಾಸುದೇವ ನಾಯಕನ ನಡುವೆ ಕ್ರಿ.ಶ. ೧೭೦೫ರಲ್ಲಿ ತಿಂಥಿಣಿಬ್ರಿಡ್ಜ್ ಹತ್ತಿರ ವೀರಗೋಟನಲ್ಲಿ ಯುದ್ಧ ನಡೆಯಿತು.[೫೪] ಮೊಗಲರಿಗೆ ಬೆಂಬಲಿಸಿದ ವಾಸುದೇವನಾಯಕ ಸೋಲನುಭವಿಸಿದನು.

**ಮುದಗಲ್ ಯುದ್ಧ(೧೭೩೭):** ಮುದಗಲ್‌ನಲ್ಲಿನ ಲೊದ್ದಪ್ಪರೆಡ್ಡಿ ಹಾಗೂ ಆನೆಗುಂದಿಯ ಅರಸ ತಿರುಮಲರಾಯನ ನಡುವೆ ಕ್ರಿ.ಶ. ೧೭೩೭ರಲ್ಲಿ ಮುದಗಲ್‌ನಲ್ಲಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಮುದಗಲ್‌ನ ಲೊದ್ದಪ್ಪರೆಡ್ಡಿಯ ಪರವಾಗಿ ಹೈದರಾಬಾದ್ ನಿಜಾಮ ಮತ್ತು ಸುರಪುರದ ಇಮ್ಮಡಿ ಪಾಮನಾಯಕ ಮುಂತಾದವರು ಭಾಗವಹಿಸಿದ್ದರೆಂದು ತಿಳಿದುಬರುತ್ತದೆ.[೫೫] ಮುದಗಲ್‌ನ ಲೊದ್ದಪ್ಪರೆಡ್ಡಿಗೆ ಗೆಲುವಾಯಿತು.

**ಕ್ಯಾದಿಗ್ಗೇರಿ ಕಾಳಗ(೧೭೩೭-೧೭೭೧):** ಈ ಯುದ್ದ ಆರಂಭದಲ್ಲಿ ದೇವದುರ್ಗದ ಕಿಲಚನಾಯಕ ಮತ್ತು ಕ್ಯಾದಿಗ್ಗೇರಿಯ ಸಂಸ್ಥಾನಿಕರ ನಡುವೆ ನಡೆಯಿತು. ಆದರೆ ಕ್ಯಾದಿಗ್ಗೇರಿಯ ಮನವಿಯ ಮೇರೆಗೆ

ಸುರಪುರದ ರಾಘವ ಪಾಮನಾಯಕ ಕ್ಯಾದಿಗ್ಗೇರಿಯ ಪರವಾಗಿ ದೇವದುರ್ಗದ ವಿರುದ್ಧ ಹೋರಾಡಿದನು.[೫೬] ದೇವದುರ್ಗದ ಕಿಲಚನಾಯಕನಿಗೆ ಸೋಲಾಯಿತು.

**ದೇವದುರ್ಗದಲ್ಲಿ ನಿಜಾಮ ಮತ್ತು ಮಾಧವರಾಯನ ಸೈನ್ಯ(೧೭೬೬-೬೭):** ಸುರಪುರದ ಮೇಲೆ ದಾಳಿ ಮಾಡುವ ಸಲುವಾಗಿ ಹೈದರಾಬಾದ್ ನಿಜಾಮ ಮತ್ತು ಮಾಧರಾಯ ತಮ್ಮ ಸೈನ್ಯವನ್ನು ದೇವದುರ್ಗದಲ್ಲಿ ಜಮಾ ಮಾಡಿ ಕ್ರಿ.ಶ. ೧೭೬೬-೬೭ರಲ್ಲಿ ಸುರಪುರದ ಮೇಲೆ ದಾಳಿ ಮಾಡಿರುವುದಾಗಿ ತಿಳಿದುಬರುತ್ತದೆ.[೫೭]

**ಗುಡಗುಂಟಿಯಲ್ಲಿ ಕಾಳಗ(೧೭೮೯):** ಈ ಕಾಳಗ ಸುರಪುರ ಸಂಸ್ಥಾನದ ಇಮ್ಮಡಿ ವೆಂಕಟಪ್ಪನಾಯಕ ಹಾಗೂ ಮರಾಠ ಪರಶುರಾಮ ಭಾವು ಪಟವರ್ಧನ ಮತ್ತು ಬಾಪು ಗೋಖಲೆ ಅವರ ನಡುವೆ ಕ್ರಿ.ಶ. ೧೭೮೯ರಲ್ಲಿ ಗುಡಗುಂಟಿಯಲ್ಲಿ ಕಾಳಗ ನಡೆಯಿತು.[೫೮] ಸುರಪುರ ಗೆದ್ದಿತು.

**ಗುಡಗುಂಟಿಯ ಮೇಲೆ ಸುರಪುರದ ದಾಳಿ(೧೭೯೫):** ಗುಡಗುಂಟಿ ಸಂಸ್ಥಾನಿಕರು ಸುರಪುರ ಸಂಸ್ಥಾನಿಕರಲ್ಲಿ ಪಡೆದ ಸಾಲವನ್ನು ಹಿಂದಿರುಗಿಸಲಾರದಕ್ಕೆ ಸುರಪುರದವರು ಕ್ರಿ.ಶ.೧೭೯೫ರಲ್ಲಿ ಗುಡಗುಂಟಿ ಸಂಸ್ಥಾನದ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡರು.[೫೯]

**ಸಮಕಾಲೀನ ಸಂಸ್ಥಾನಗಳ ಮೇಲೆ ಸುರಪುರ ದಾಳಿ(೧೭೯೭):** ರಾಯಚೂರು ದೋ-ಅಬ್ ಪ್ರದೇಶದ ಕರಿಗುಡ್ಡ, ಚಂದನಕೇರಿ, ಅರಕೇರಿ, ಕೊತ್ತದೊಡ್ಡಿ, ಕ್ಯಾದಿಗ್ಗೇರಿ, ಗಲಗ, ಗಬ್ಬೂರು, ರಾಮದುರ್ಗ, ಮೊಸರಕಲ್, ಮಲದಕಲ್ ಹಾಗೂ ಜಾಲಹಳ್ಳಿ ಸಂಸ್ಥಾನಗಳ ಮೇಲೆ ಸುರಪುರ ಸಂಸ್ಥಾನಿಕನಾದ ಇಮ್ಮಡಿ ವೆಂಕಟಪ್ಪನಾಯಕನು ಕ್ರಿ.ಶ. ೧೭೯೭ರಲ್ಲಿ ದಾಳಿ ಮಾಡಿ ಖಜಾನೆಯನ್ನು ತುಂಬಿಸಿಕೊಂಡನೆಂದು ತಿಳಿದುಬರುತ್ತದೆ.[೬೦]

**ದೇವದುರ್ಗದ ಮೇಲೆ ಸುರಪುರದ ದಾಳಿ(೧೭೯೭-೯೮):** ಈ ಯುದ್ಧ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಮತ್ತು ದೇವದುರ್ಗದ ಕೊಳ್ಳಿರಂಗಪ್ಪನಾಯಕನ ನಡುವೆ ಕ್ರಿ.ಶ. ೧೭೯೭-೯೮ರಲ್ಲಿ ದೇವದುರ್ಗದಲ್ಲಿ ನಡೆಯಿತು.[೬೧] ದೇವದುರ್ಗಕ್ಕೆ ಸೋಲಾಯಿತು.

**ಗುಡಗುಂಟಿಯ ಮೇಲೆ ಸುರಪುರದ ದಾಳಿ(೧೮೦೦):** ಈ ದಾಳಿಯಲ್ಲಿ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ಮತ್ತು ಗುಡಗುಂಟಿ ಸಂಸ್ಥಾನಿಕರ ನಡುವೆ ಕ್ರಿ.ಶ. ೧೮೦೦ರಲ್ಲಿ ಗುಡಗುಂಟಿಯಲ್ಲಿ ಕಾಳಗ ಜರುಗಿತು. ಉಮಲೂಟಿ, ಜವಳಗೇರಿ ನಾಡಗೌಡರ ಮಧ್ಯಸ್ತಿಕೆಯಲ್ಲಿ ಸಮಸ್ಯೆ ಬಗೆ ಹರಿಯಿತೆಂದು ತಿಳಿದುಬರುತ್ತದೆ.[೬೨]

**ಧೋಂಡಿಯಾ ವಾಘ್ ಮತ್ತು ಬ್ರಿಟಿಶರ ನಡುವೆ ಕಾಳಗ(೧೮೦೦):** ಬ್ರಿಟಿಶರ ವಿರುದ್ಧ ಜನಪರವಾದ ಧ್ವನಿಯೆತ್ತಿ ಹೋರಾಟದಲ್ಲಿ ತೊಡಗಿದ್ದ ಧೋಂಡಿಯಾ ವಾಘನ ದಂಗೆಗಳನ್ನು ದಮನ ಮಾಡಲು ಬ್ರಿಟಿಶರು ಪ್ರಯತ್ನಿಸಿದರು. ಕೊನೆಗೆ ರಾಯಚೂರು ದೋ-ಅಬ್‌ನ ಕೆಂಗಲ್(ಕೋಮಗಲ್) ಎಂಬಲ್ಲಿ ಕ್ರಿ.ಶ. ೧೮೦೦ರಲ್ಲಿ ಧೋಂಡಿಯಾ ವಾಘ ಹಾಗೂ ಬ್ರಿಟಿಶರ ನಡುವೆ ಕಾಳಗ ನಡೆಯಿತು.[೬೩] ಧೋಂಡಿಯಾ ವಾಘನು ಮರಣ ಹೊಂದಿದನು.

**ದೇವದುರ್ಗದ ಮೇಲೆ ದಾಳಿ(೧೮೪೦):** ಸುರಪುರದ ರಾಜಾಕೃಷ್ಣಪ್ಪನಾಯಕನ ಮಲತಮ್ಮ ಹಣಮಪ್ಪನಾಯಕ ಅಧಿಕಾರ ಸಿಗಲಿಲ್ಲವೆಂಬ ಕಾರಣಕ್ಕಾಗಿ ದೇವದುರ್ಗದ ಮೇಲೆ ಕ್ರಿ.ಶ. ೧೮೪೦ರಲ್ಲಿ ದಾಳಿ ಮಾಡಿ ಹಣವನ್ನು ದೋಚಿಕೊಂಡು ಹೋದನೆಂದು ತಿಳಿದುಬರುತ್ತದೆ.[೬೪]

ಈ ಪ್ರದೇಶದ ಸುಮಾರು ೬೧ ಯುದ್ಧಗಳೆಲ್ಲ ಅಧಿಕಾರ ಕೇಂದ್ರಿತವಾಗಿದ್ದು, ಈ ಸಂದರ್ಭಗಳಲ್ಲಿ ಅನಿರೀಕ್ಷಿತ ಮಟ್ಟದಲ್ಲಿ ಸಂಪತ್ತನ್ನು ಲೂಟಿ ಮಾಡಲು ಪ್ರಯತ್ನಿಸಲಾಯಿತು. ಆದರೆ ಈ ಯುದ್ಧಗಳು ಜನಸಾಮಾನ್ಯರಿಗೆ ಮುಳುವಾಗಿ ಪರಿಣಮಿಸಿದ್ದವೆಂದೇ ಹೇಳಬೇಕಾಗುತ್ತದೆ. ಈ ಮೇಲಿನಂತೆ ಯುದ್ಧಗಳು ಬಹುತೇಕವಾಗಿ ಆರ್ಥಿಕ ಮತ್ತು ರಾಜಕೀಯ ಹಿನ್ನೆಲೆಯಿಂದ ನಡೆದಿದ್ದರೂ ಅಧ್ಯಯನದ ದೃಷ್ಟಿಯಿಂದ ಅವನ್ನು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಯುದ್ಧಗಳೆಂದು ಗುರುತಿಸಿಕೊಳ್ಳಲಾಗಿದೆ. ಇವನ್ನು ಸಂಕ್ಷಿಪ್ತವಾಗಿ ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

### ೩.೩.೧. ಆರ್ಥಿಕ ಯುದ್ಧಗಳು

ಈ ಪ್ರದೇಶ ಫಲವತ್ತಾದ ಭೂಮಿಯನ್ನು ಹೊಂದಿ ಹೆಚ್ಚುವರಿ ಉತ್ಪಾದನೆಯನ್ನು, ಚಿನ್ನದ ಗಣಿಗಾರಿಕೆಯನ್ನು, ವ್ಯಾಪಾರ-ವಾಣಿಜ್ಯ ಸಂಬಂಧಗಳನ್ನೂ ಹೊಂದಿ ಪರಸ್ಪರ ವಿನಿಮಯ ಕೇಂದ್ರವಾಗಿ ಗುರುತಿಸಿಕೊಂಡು ಆದಾಯದ ಕೇಂದ್ರವಾಗಿ ಬೆಳೆಯಿತು. ಮಸ್ಕಿ, ಬಳಗಾನೂರು, ರಾಯಚೂರು, ಮುದಗಲ್, ಕರಡಿಕಲ್ಲು, ಕಲ್ಲೂರು, ಗಬ್ಬೂರು ಮುಂತಾದ ಗ್ರಾಮಗಳು ಪೇಟೆ ಪಟ್ಟಣಗಳಾಗಿ ಪರಿವರ್ತನೆಗೊಂಡವು. ಈ ಬಗೆಯ ಅರ್ಥವ್ಯವಸ್ಥೆಯ ಪರಿಣಾಮಕಾರಿ ಬೆಳವಣಿಗೆ ಸಂಘರ್ಷಕ್ಕೆ ಎಡೆಮಾಡಿಕೊಟ್ಟಿತು.

### ೩.೩.೧.೧. ಫಲವತ್ತಾದ ಭೂಮಿಗಾಗಿ ಹೋರಾಟ

ನಾಗರಿಕತೆ ಹುಟ್ಟು ಬೆಳವಣಿಗೆಗೆ ನದಿ ಬಯಲು ಪ್ರದೇಶದ ಫಲವತ್ತಾದ ಭೂಮಿ ಕಾರಣವಾಗಿದೆ. ರಾಜಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಸ್ಥಿತ್ಯಂತರಕ್ಕೂ ಕಾರಣವಾಗಿದೆ. ಜಾಗತಿಕವಾಗಿ ಮೆಸಪಟೋಮಿಯಾ, ಚೀನಾ, ಈಜಿಪ್ಟ್ ನಾಗರಿಕತೆಗಳು ನದಿಬಯಲು ಪ್ರದೇಶದ ಫಲವತ್ತಾದ ಭೂಮಿಯಲ್ಲಿ ಹುಟ್ಟಿ ಬೆಳೆದಿವೆ. ಯುಫ್ರಟಿಸ್ ಮತ್ತು ಟೈಗ್ರಿಸ್ ನದಿ ಬಯಲು ಪ್ರದೇಶಗಳ ಮೇಲೆ ಅಧಿಕಾರ ಸ್ಥಾಪಿಸಲು ಬೆಬಿಲೋನಿಯ ಮತ್ತು ಅಸಿರಿಯಾಗಳ ನಡುವೆ ದೀರ್ಘ ಹೋರಾಟ ನಡೆದಿರುವುದನ್ನು ಗಮನಿಸಬಹುದಾಗಿದೆ. ಇದು ಮೆಸಪಟೋಮಿಯ ನಾಗರಿಕತೆಯ ಭೂ ಭಾಗದಲ್ಲಿ ಕಂಡುಬರುವ ಸನ್ನಿವೇಶವಾಗಿದೆ.[೬] ಅಲ್ಲದೆ ಚೀನಿ ನಾಗರಿಕತೆಯೂ ಸಹ ಯಾಂಗ್ಟ್ಸಜೆ ಮತ್ತು ಸಿಕಿಯಾಂಗ್ ಎಂಬ ನದಿಗಳ ಬಯಲು ಪ್ರದೇಶವಾಗಿದೆ. ಇಲ್ಲಿಯೂ ಸಹ ಕ್ಸಿಮಾ, ಶಾಂಗ್, ಚೌ ಮತ್ತು ಚಿನ್ ಅರಸುಮನೆತನಗಳು ಅಧಿಕಾರಕ್ಕಾಗಿ ಹೋರಾಟ ನಡೆಸಿರುವುದು ಕಂಡುಬರುತ್ತದೆ.[೭] ನೈಲ್ ನದಿಯ ಕೊಡುಗೆಯಾದ ಈಜಿಪ್ಟ್ ನಾಗರಿಕತೆಯಲ್ಲಿಯೂ ಅರಸೊತ್ತಿಗೆ ಪದ್ಧತಿ ಅಸ್ತಿತ್ವದಲ್ಲಿದ್ದಿತು.[೮]

ಭಾರತದ ಉತ್ತರ ಮತ್ತು ವಾಯುವ್ಯ ಪ್ರದೇಶಗಳಲ್ಲಿ ಸಿಂಧೂ, ರಾವಿ, ಜೀಲಂ, ಬಿಯಾಸ್, ಚಿನಾಬ್ ಮತ್ತು ಸಟ್ಲೆಜ ದೋ-ಅಬ್ ಪ್ರದೇಶಗಳ ಫಲವತ್ತಾದ ಭೂಮಿಯಿಂದಾಗಿ ಪರ್ಶಿಯನ್ನರು, ಅಂಬಿ ಮತ್ತು ಪುರೂರವರ ಮಧ್ಯ ಹೋರಾಟ ನಡೆದ್ದದ್ದು ಕಂಡುಬರುತ್ತದೆ. ಬಲಿಷ್ಠನಾಗಿದ್ದ ಪುರೂರವನನ್ನು ಅಂಬಿ ಸೋಲಿಸಲು ಅಲೆಕ್ಸಾಂಡರ್‌ನಿಗೆ ಆಹ್ವಾನ ನೀಡಿದ್ದು ಜೀಲಂ ನದಿಯ ತೀರದಲ್ಲಿನ ಪ್ರಮುಖ ಘಟನೆಯಾಗಿದೆ.[೬೮] ಇಲ್ಲಿ ಶುಂಗರು, ಕಣ್ವರು, ಇಂಡೋ-ಗ್ರೀಕರು, ಶಕರು, ಪಾರ್ಥಿಯನ್ನರು ಹಾಗೂ ಕುಶಾನರು ಅಧಿಕಾರ ಸ್ಥಾಪಿಸಲು ಹೋರಾಟ ಮಾಡಿರುವುದು ಕಂಡುಬರುತ್ತದೆ.[೬೯] ಗಂಗಾ-ಯಮುನಾ ದೋ-ಅಬ್, ಯಮುನಾ-ನರ್ಮದಾ ನದಿಬಯಲು ಪ್ರದೇಶಗಳಲ್ಲಿ ಹದಿನಾರು ಮಹಾಜನಪದಗಳು, ಒಂಬತ್ತು ಗಣರಾಜ್ಯಗಳು ಫಲವತ್ತಾದ ಭೂಮಿಯ

ಮೇಲೆ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿದವು. ನಂತರದಲ್ಲಿ ಗಂಗಾ–ಯಮುನಾ ದೋಅಬ್‌ನಿಂದ ನರ್ಮದಾ ನದಿಬಯಲು ಪ್ರದೇಶದವರೆಗೆ ಮಗಧ, ನಂದರು, ಮೌರ್ಯರು, ಗುಪ್ತರು, ವಲ್ಲಭಿಯ ಮೈತ್ರಕರು, ಸ್ಥಾನೇಶ್ವರದ–ವರ್ಧನರು, ಕನೂಜಿನ ಮೌಖರಿಗಳು, ಮಾಳ್ವದ ಯಶೋವರ್ಮನೂ, ಕಾಶ್ಮೀರದ ಕಾರ್ಕೋಟಕರು, ಕಾಮರೂಪದ ವರ್ಮರು, ಬಂಗಾಳದ ಗೌಡಪಾದರು, ಓರಿಸ್ಸಾದ ಕೇಸರಿ, ಕಳಿಂಗದ ಗಂಗರು, ಬೀರಾರಿನ ವಾಕಾಟಕರು ಮುಂತಾದ ಅರಸುಮನೆತನಗಳು[೭೦] ಹೋರಾಟ ಮಾಡಿವೆ. ಮಧ್ಯ ಭಾರತದ ನರ್ಮದೆಯಿಂದ ಗೋದಾವರಿ ನದಿ ಬಯಲು ಪ್ರದೇಶದಲ್ಲಿ ಚೇದಿ ರಾಜ್ಯದ ಕಲಚೂರಿ, ಚಂದೇಲ, ಗಣಪತಿ, ಯಾದವ, ಬಘೇಲ, ಪಾರಮಾರ ಮುಂತಾದ ಅರಸುಮನೆತನಗಳು ಇಲ್ಲಿನ ಭೂಮಿಗಾಗಿ ಹೋರಾಟ ಮಾಡಿದವು.[೭೧]

ದಕ್ಷಿಣ ಭಾರತದಲ್ಲಿ ಗೋದಾವರಿ–ಕೃಷ್ಣಾ ದೊ–ಅಬ್, ಭೀಮಾ–ಕೃಷ್ಣ ದೋ–ಅಬ್, ದಕ್ಷಿಣದಲ್ಲಿ ಕಾವೇರಿ ಮತ್ತು ಪಾಲಾರ ನದಿಬಯಲು ಪ್ರದೇಶಗಳ ಭೂಮಿಯ ಮೇಲೆ ಅಧಿಕಾರ ಸ್ಥಾಪಿಸಲು ಹೋರಾಟಗಳು ನಡೆದವು. ಅವುಗಳಲ್ಲಿ ಮೌರ್ಯರು, ಶಾತವಾಹನರು, ವಾಕಟಕರು, ಚುಟುಗಳು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಚೋಳರು ಕಲಚೂರಿಗಳು, ಯಾದವರು, ಕಾಕತೀಯರು, ಹೊಯ್ಸಳರು, ವಿಜಯನಗರ, ಬಹಮನಿ, ಬಿಜಾಪುರ ಆದಿಲ್‌ಶಾಹಿಗಳು, ಮೊಗಲರು, ಸಾಮಂತರು, ಸಂಸ್ಥಾನಿಕರು, ಹೈದರಾಬಾದ್ ನಿಜಾಮರು ಹಾಗೂ ಬ್ರಿಟಿಶರು ಮುಂತಾದ ಅರಸು ಮನೆತನಗಳು ಸೇರಿವೆ.

ದಕ್ಷಿಣದಲ್ಲಿನ ಕಾವೇರಿ–ಪಾಲಾರ್ ನದಿ ಬಯಲು ಪ್ರದೇಶದಲ್ಲಿ ತಂಜಾವೂರಿನ ಚೋಳರು, ಕಂಚಿಯ ಪಲ್ಲವರು, ಮಧುರೈ ಪಾಂಡ್ಯರು, ಕೇರಳದ ಚೇರರು ಮುಂತಾದ ವಿವಿಧ ಅರಸು ಮನೆತನಗಳು ಹೋರಾಟ ಮಾಡಿರುವುದು ಕಂಡುಬರುತ್ತದೆ. ಇಡೀ ಭಾರತದಲ್ಲಿ ಫಲವತ್ತಾದ ಭೂಮಿ ವಶಪಡಿಸಿಕೊಳ್ಳಲು ಮಾಡಿದ ಹೋರಾಟದಂತೆ ರಾಯಚೂರು ದೋ–ಅಬ್ ಪ್ರದೇಶದಲ್ಲೂ ಫಲವತ್ತಾದ ಭೂಮಿ ವಶಪಡಿಸಿಕೊಳ್ಳಲು ಹೋರಾಟ ನಡೆದಿರುವುದು ಕಂಡುಬರುತ್ತದೆ. ಫಲವತ್ತಾದ ಭೂಮಿಗಾಗಿ ನಡೆದ ಹೋರಾಟದ ಸ್ವರೂಪವನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಮೌರ್ಯ ಅರಸ ಅಶೋಕ ಮೊದಲಿಗೆ ಸೈನಿಕ ಕಾರ್ಯಾಚರಣೆ ನಡೆಸಿರುವುದು ಕಂಡುಬರುತ್ತದೆ. ನಂತರ ಬಾದಾಮಿ ಚಾಲುಕ್ಯ ಅರಸ ಇಮ್ಮಡಿ ಪುಲಿಕೇಶಿ ಮತ್ತು ಕಂಚಿ ಪಲ್ಲವರ ಅರಸ ಒಂದನೆಯ ಮಹೇಂದ್ರವರ್ಮರ ನಡುವೆ ಕ್ರಿ.ಶ. ೬೦೦–೬೩೦ರ ಅವಧಿಯಲ್ಲಿ ಪಲ್ಲಲೂರಿನಲ್ಲಿ ಯುದ್ಧ ನಡೆಯಿತು. ಈ ಯುದ್ಧವನ್ನು ಪುಲಿಕೇಶಿ ಗೆಲ್ಲುವ ಮೂಲಕ ಈ ಎರಡು ಮನೆತನಗಳ ನಡುವೆ ವಂಶಪಾರಂಪರ್ಯದ ಘರ್ಷಣೆ ಆರಂಭವಾಯಿತೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹ ಮತ್ತು ಚೋಳರಸ ರಾಜೇಂದ್ರ ಚೋಳರ ಮಧ್ಯೆ ಕ್ರಿ.ಶ. ೧೦೧೫–೧೯ರಲ್ಲಿ ಮಸ್ಕಿಯಲ್ಲಿ ಯುದ್ಧ ನಡೆದು ಆರ್ಥಿಕ ಪ್ರಧಾನ ಪ್ರದೇಶದ ಮೇಲೆ ಹಿಡಿತ ಸಾಧಿಸಲು ದೇವಗಿರಿ ಯಾದವರು ಮತ್ತು ವಾರಂಗಲ್ ಕಾಕತೀಯರು ಹೋರಾಡಿರುವುದನ್ನು ಗಮನಿಸಬಹುದಾಗಿದೆ. ಕ್ರಿ.ಶ. ೧೨೯೪ರಲ್ಲಿ ಕಾಕತೀಯರು ರಾಯಚೂರು ಮತ್ತು ಮಾನ್ವಿ ಕೋಟೆಗಳನ್ನು ವಶಪಡಿಸಿಕೊಂಡಿರುವುದು ತಿಳಿದುಬರುತ್ತದೆ. ಬಹಮನಿ ಸುಲ್ತಾನ ಮುಜಾಹಿದ್‌ಶಹ ಮತ್ತು ವಿಜಯನಗರ ಅರಸ ಒಂದನೆಯ ಬುಕ್ಕರ ನಡುವೆ ಕ್ರಿ.ಶ. ೧೩೭೫–೭೬ರಲ್ಲಿ ಆದೋನಿಯಲ್ಲಿ ಯುದ್ಧ ನಡೆಯಿತು. ಇದರಂತೆ ಕ್ರಿ.ಶ. ೧೩೯೮ರಲ್ಲಿ ಭಾನೂರು

ಮತ್ತು ಮಸರಕಲ್‌ನಲ್ಲಿ ವಿಜಯನಗರದ ಅರಸ ಎರಡನೆಯ ಹರಿಹರ ಮತ್ತು ಬಹಮನಿ ಸುಲ್ತಾನ ಫಿರೋಜ್‌ಶಹರ ನಡುವೆ ಯುದ್ಧ ನಡೆಯಿತು. ಕ್ರಿ.ಶ. ೧೪೧೭-೧೯ರ ಕಾಲಾವಧಿಯಲ್ಲಿ ವಿಜಯನಗರದ ಒಂದನೆಯ ದೇವರಾಯ ಬಹಮನಿ ಸುಲ್ತಾನನ ವಿರುದ್ಧ ದಾಳಿ ಮಾಡಿ ಗೆದ್ದು ಅಧಿಕಾರ ಸ್ಥಾಪಿಸಿದ. ಸಂಗಮವಂಶದ ಅವನತಿಯ ನಂತರ ಈ ಪ್ರದೇಶವನ್ನು ವಿಜಯನಗರದ ಅಧೀನಕ್ಕೊಳಪಡಿಸಿಕೊಳ್ಳಲು ಸಾಳುವ ನರಸಿಂಹನು ಬಹಮನಿ ಸುಲ್ತಾನರ ದಂಗೆಯನ್ನು ದಮನಗೊಳಿಸಿ ರಾಯಚೂರು ಮತ್ತು ಮುದಗಲ್ ಕೋಟೆಗಳನ್ನು ಕ್ರಿ.ಶ. ೧೪೮೫-೯೦ರ ಕಾಲಾವಧಿಯಲ್ಲಿ ಯುದ್ಧ ನಡೆಸಿ ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ. ಕೃಷ್ಣದೇವರಾಯ ಕ್ರಿ.ಶ. ೧೫೧೨ರಲ್ಲಿ ಬಿಜಾಪುರ ಆದಿಲಶಾಹಿ ಯೂಸುಫ್ ಆದಿಲ್‌ಶಾಹಿಯೊಡನೆ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ ಮಾಡಿ ತನ್ನ ಅಧೀನಕ್ಕೆ ಸೇರಿಸಿಕೊಂಡನೆಂದು ತಿಳಿದುಬರುತ್ತದೆ. ಆತ ಮುಂದುವರೆದು ಆದಿಲ್‌ಶಾಹಿಗಳನ್ನು ಹತ್ತಿಕ್ಕಲು ಬಹುದೊಡ್ಡ ಸಿದ್ಧತೆ ಮಾಡಿಕೊಂಡು ಗಬ್ಬೂರು ಮತ್ತು ರಾಯಚೂರು ಕೋಟೆಗಳಿಗೆ ೧೫೨೧ರಲ್ಲಿ ಮುತ್ತಿಗೆ ಹಾಕಿದ. ಬಹುತೇಕ ಅಧ್ಯಯನಗಳು ರಾಯಚೂರು ಕೋಟೆ ಮುತ್ತಿಗೆಯನ್ನು ಕ್ರಿ.ಶ. ೧೫೨೦ರಲ್ಲಿಯೇ ನಡೆದದ್ದೆಂದು ಬಿಂಬಿಸಿವೆ. ಆದರೆ ಇತ್ತೀಚೆಗೆ ದೊರೆತ ಚೀಕಲಪರ್ವಿ ಮತ್ತು ಆಲಂಪೂರದ ಶಾಸನಗಳ ಆಧಾರದ ಮೇಲೆ ಈ ಯುದ್ಧ ಕ್ರಿ.ಶ. ೧೫೨೧ರಲ್ಲಿ ನಡೆದಿದ್ದೆಂದು ಗುರುತಿಸಲಾಗಿದೆ. ಈ ಪ್ರದೇಶ ವಿಜಯನಗರದ ಅಧೀನದಲ್ಲಿ ಉಳಿಯಬೇಕು, ಅಲ್ಲದೆ ಬಿಜಾಪುರ ವಿಜಯನಗರದ ಗೊಡವೆಗೆ ಬಾರದಂತೆ ಮಾಡಲು ಕ್ರಿ.ಶ. ೧೫೨೨ರಲ್ಲಿ ಬಿಜಾಪುರದ ಮೇಲೆ ಮುತ್ತಿಗೆ ಹಾಕಿದ.

ಕ್ರಿ.ಶ. ೧೫೩೫ರಲ್ಲಿ ಅಚ್ಯುತರಾಯ ಮುದಗಲ್ ಮೇಲೆ ದಾಳಿಮಾಡಿ ಅದನ್ನು ವಶಪಡಿಸಿಕೊಂಡ. ಆದರೆ ಇದು ಕ್ರಿ.ಶ.೧೫೫೨-೫೪ರ ಕಾಲಾವಧಿಯಲ್ಲಿ ಪುನಃ ಬಿಜಾಪುರಕ್ಕೆ ಸೇರಿತು. ಇದಕ್ಕೂ ಮುಂಚೆ ರಾಮರಾಯನಿಗೆ ಕ್ರಿ.ಶ. ೧೫೫೦ರಲ್ಲಿ ನೀಡಲಾಗಿತ್ತು. ೧೫೫೭ರಲ್ಲಿ ಆದಿಲ್‌ಶಾಹಿ ರಾಮರಾಯನಿಗೆ ರಾಯಚೂರು-ಮುದಗಲ್ ಕೋಟೆಗಳನ್ನು ನೀಡಿರುವುದು ಗಮನಿಸಬಹುದಾಗಿದೆ. ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ ವಿಜಯನಗರ ಮತ್ತು ನಾಲ್ಕು ಶಾಹಿಮನೆತನಗಳ ನಡುವೆ ಲಿಂಗಸೂಗೂರು ತಾಲೂಕಿನ ಬಯ್ಯಾಪುರ-ಭೋಗಾಪುರ ಗ್ರಾಮಗಳಲ್ಲಿ ನಡೆದಿದೆ. ಇದನ್ನು ಇದುವರೆಗೆ ತಾಳಿಕೋಟೆ ಯುದ್ಧ, ರಕ್ಕಸಗಿ- ತಂಗಡಗಿ ಯುದ್ಧವೆಂದು ಕರೆಯಲಾಗುತ್ತಿತ್ತು. ವಾಸ್ತವವಾಗಿ ಲಿಂಗಸೂಗೂರು ತಾಲೂಕಿನ ಬಯ್ಯಾಪುರ-ಭೋಗಾಪುರಗಳಲ್ಲಿ ಈ ಯುದ್ಧ ನಡೆದದ್ದು ಗಮನಾರ್ಹ. ಹಾಗಾಗಿ ಬಯ್ಯಾಪುರ ಯುದ್ಧವೆಂದು ಕರೆಯುವುದು ಸೂಕ್ತ. ರಾಜ್ಯ ವ್ಯವಸ್ಥೆಯ ಭದ್ರತೆಯಲ್ಲಿ ಉಂಟಾಗಿದ್ದ ಏರು-ಪೇರನ್ನು ಗಮನಿಸಿದ ಬಿಜಾಪುರದ ಇಮ್ಮಡಿ ಅಲಿ ಆದಿಲ್‌ಶಾಹ ರಾಯಚೂರು ಮೇಲೆ ದಾಳಿ ಮಾಡಿ ವ್ಯವಸ್ಥೆಯನ್ನು ಸರಿಪಡಿಸಿದನೆಂದು ತಿಳಿದುಬರುತ್ತದೆ.

### ೩.೩.೧.೨. ಗಣಿಗಾರಿಕೆ

ಈ ಪ್ರದೇಶದಲ್ಲಿ ಖನಿಜ ಸಂಪನ್ಮೂಲಗಳ ನಿಕ್ಷೇಪಗಳು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತವೆ. ಈ ಚಿನ್ನದ ಗಣಿಗಾರಿಕೆ ಬಗ್ಗೆ ಮೂರು ಹಂತಗಳಲ್ಲಿ ಉಲ್ಲೇಖ ಕಂಡುಬರುವುದು. ಮೊದಲನೆಯ ಹಂತದಲ್ಲಿ ಸಿಂಧೂ ನಾಗರಿಕತೆಯ ನಗರಗಳಾದ ಲೋಥಲ್ ಮತ್ತು ಹರಪ್ಪಾ ನಗರಗಳಿಗೆ ಹಟ್ಟಿ ಚಿನ್ನದ ಗಣಿಯಿಂದ ಚಿನ್ನ ರಫ್ತು ಆಗುತ್ತಿತ್ತೆಂದು ತಿಳಿದುಬರುತ್ತದೆ.[೨] ಎರಡನೆಯ ಹಂತದಲ್ಲಿ ಮೌರ್ಯರ ಕಾಲದಲ್ಲಿ ರಾಜಧಾನಿ ಪಾಟಲಿಪುತ್ರಕ್ಕೆ ಹಟ್ಟಿ ಚಿನ್ನದ ಗಣಿಯಿಂದ ಚಿನ್ನ ನೇರವಾಗಿ ರಫ್ತಾಗುತ್ತಿತ್ತೆಂದು

ತಿಳಿದುಬರುತ್ತದೆ.[೭೩] ಮೂರನೆಯ ಹಂತದಲ್ಲಿ ಕ್ರಿ.ಶ. ೧೮೭೪ರಲ್ಲಿ ರಾಬರ್ಟ್ ಬ್ರೂಸ್ ಫ್ರೂಟ್ ಹಾಗೂ ೧೯೩೫ರಲ್ಲಿ ಕ್ಯಾಪ್ಟನ್ ಲಿಯೋನಾರ್ಡ್‌ಮನ್ ಇಲ್ಲಿನ ಪ್ರಾಚೀನ ಚಿನ್ನದ ಗಣಿಗಳನ್ನು ಪತ್ತೆಹಚ್ಚಿದ್ದಾರೆ.[೭೪] ಈಗಲೂ ಹಟ್ಟಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಗಣಿಗಾರಿಕೆ ನಡೆಯುತ್ತಿರುವುದು ಗಮನಾರ್ಹ.

ಇಲ್ಲಿನ ಚಿನ್ನದ ಗಣಿಗಾರಿಕೆ ಮೌರ್ಯರ ಕಾಲಾವಧಿಯಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿತ್ತು. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ ಗಣಿಗಳು, ಬಂಗಾರವೇ ರಾಜಭಂಡಾರದ ಮೂಲವಾಗಿದ್ದು, ದಕ್ಷಿಣಾ ಪಥದಲ್ಲಿ ಚಿನ್ನ ದೊರೆಯುವ ಬಗ್ಗೆ ಸೂಚಿಸಿರುವುದು ಕಂಡುಬರುತ್ತದೆ. ಗಣಿಗಾರಿಕೆ ಮತ್ತು ಬಂಗಾರದ ವಿಭಾಗಗಳನ್ನು ಪ್ರತ್ಯೇಕ ತೆರೆಯಲಾಗಿತ್ತು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಕ್ಯಾಪ್ಟನ್ ಲಿಯೋನಾರ್ಡ್ ಮನ್ ಮೌರ್ಯರ ದಕ್ಷಿಣದ ರಾಜಧಾನಿ ಸುವರ್ಣಗಿರಿ ಮಸ್ಕಿಯೇ ಆಗಿರಬೇಕೆಂದು ಹೇಳುತ್ತಾನೆ.[೭೫] ಇನ್ನೂ ಕೆಲವು ಅಧ್ಯಯನಕಾರರು ಮಸ್ಕಿಯೇ ಸುವರ್ಣಗಿರಿಯಾಗಿರಬೇಕೆಂದು ಊಹಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಇಂದಿನ ಮಸ್ಕಿಯೇ ಮೌರ್ಯರ ದಕ್ಷಿಣದ ರಾಜಧಾನಿ ಸುವರ್ಣಗಿರಿ ಆಗಿತ್ತು ಎಂಬುದಕ್ಕೆ ಹಲವು ಸುಳಿವುಗಳು ಕಂಡುಬರುತ್ತವೆ. ಅವುಗಳ ಆಧಾರದ ಮೇಲೆ ಮಸ್ಕಿಯೇ ಸುವರ್ಣಗಿರಿ ಎಂದು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

ಮೌರ್ಯರ ನಾಲ್ಕು ಪ್ರಾಂತ್ಯಗಳಲ್ಲಿ ಸುವರ್ಣಗಿರಿ[೭೬] ಒಂದಾಗಿತ್ತು. ಇದರ ರಾಜಧಾನಿ ಕೇಂದ್ರ ಯಾವುದಾಗಿತ್ತು ಎಂಬುದು ಬಹುಚರ್ಚಿತ ವಿಷಯವಾಗಿದೆ. ಮೇಲಾಗಿ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು ಸುವರ್ಣಗಿರಿ ಯಾವುದಾಗಿತ್ತು ಎನ್ನುವುದಕ್ಕೆ ಭಿನ್ನಾಭಿಪ್ರಾಯ ವ್ಯಕ್ತಪಡಿಸಿವೆ.

ಸನ್ನತಿಯೆ ಸುವರ್ಣಗಿರಿಯಾಗಿತ್ತೆಂದು ಎಚ್. ಕೃಷ್ಣಶಾಸ್ತ್ರಿ, ಹುಲ್ಷ್, ಎಚ್.ಎಸ್. ಥೊಸಾರ್ ಮತ್ತು ಲಕ್ಷ್ಮಣ್ ತೆಲಗಾವಿ ತಿಳಿಸುತ್ತಾರೆ.[೭೭] ಅಲ್ಲದೆ ಕನಕಗಿರಿ ಸುವರ್ಣಗಿರಿಯಾಗಿತ್ತೆಂದು ಇ.ಹುಲ್ಷ್, ಜಯತೀರ್ಥ ರಾಜಪುರೋಹಿತ ಮುಂತಾದವರು ತಿಳಿಸುತ್ತಾರೆ.[೭೮] ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಎರ್ರಗುಡಿಯ ಸಮೀಪದ ಜೊನ್ನಗಿರಿಯೇ ಅಂದಿನ ಸುವರ್ಣಗಿರಿಯೆಂದು ಸಿ.ಆರ್. ಕೃಷ್ಣಮಾಚಾರ್ಯ, ಸಿ.ಆರ್. ನಾರಾಯಣರಾವ್ ಮತ್ತು ಡಿ.ಸಿ. ಸರ್ಕಾರ್ ಮುಂತಾದವರ ಅಭಿಪ್ರಾಯ ವಾಗಿದೆ.[೭೯] ಮಸ್ಕಿಯೇ ಸುವರ್ಣಗಿರಿಯಾಗಿತ್ತೆಂದು ಯಾಜ್‌ದಾನಿ, ಲಿಯೋನಾರ್ಡ್‌ಮನ್,[೮೦] ವಸು ಎಂ.ವಿ.[೮೧] ಮುಂತಾದವರ ಅಭಿಪ್ರಾಯವಾಗಿದೆ. ಸನ್ನತಿಯನ್ನೂ ಸುವರ್ಣಗಿರಿ ಎಂಬ ಪದ ನಿಷ್ಪತ್ತಿಯಿಂದ ಗುರುತಿಸಲಾಗಿದೆ.[೮೨] ಕನಕಗಿರಿ ಕೂಡ ಕನಕ ಮುನಿಯೊಬ್ಬ ತನ್ನ ತಪಸ್ಸಿನ ಮೂಲಕ ಚಿನ್ನದ ಮಳೆ ತರಿಸಿದ ಕಾರಣ ಕನಕಗಿರಿಯಾಯಿತೆಂದು ಐತಿಹ್ಯದಿಂದ ತಿಳಿದುಬರುತ್ತದೆ.[೮೩] ಎರ್ರಗುಡಿ ಬಳಿಯ ಜೊನ್ನಗಿರಿಯನ್ನು ಅಲ್ಲಿರುವ ಶಾಸನಗಳ ಹಿನ್ನೆಲೆಯಲ್ಲಿ ಸುವರ್ಣಗಿರಿ ಎಂದು ಗುರುತಿಸಲಾಗಿದೆ. ಆದರೆ ಎರ್ರಗುಡಿಯಲ್ಲಿರುವ ಶಾಸನಗಳ ಪಾಠಗಳು ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರ, ನಿಟ್ಟೂರು ಶಾಸನಗಳನ್ನು ಹೋಲುತ್ತವೆ.[೮೪] ಈ ಹಿನ್ನೆಲೆಯಲ್ಲಿ ಸನ್ನತಿ, ಕನಕಗಿರಿ, ಜೊನ್ನಗಿರಿಗಳು ಮೌರ್ಯರ ದಕ್ಷಿಣ ರಾಜಧಾನಿ ಕೇಂದ್ರಗಳಲ್ಲವೆಂದು ಊಹಿಸಬಹುದಾಗಿದೆ.

ಮಸ್ಕಿಯೇ ಸುವರ್ಣಗಿರಿಯಾಗಿತ್ತು ಎಂಬುದಕ್ಕೆ ಬಲವಾದ ಕಾರಣಗಳಿವೆ. ಅವುಗಳಲ್ಲಿ ಚಿನ್ನದ ಗಣಿಗಾರಿಕೆ ಮುಖ್ಯವಾಗಿದೆ. ಈ ಪ್ರದೇಶ ಸುಮಾರು ೨೦೦-೩೦೦ಕ್ಕೆ ಹೆಚ್ಚು ಪ್ರಾಚೀನ ಚಿನ್ನದ ಗಣಿಗಳನ್ನು ಹೊಂದಿದೆ. ಚಿನ್ನದ ವ್ಯಾಮೋಹ ಹೊಂದಿದ್ದ ಮೌರ್ಯ ಅರಸ ಅಶೋಕ ಕರ್ನಾಟಕದಲ್ಲಿ

ಬಹುಮಟ್ಟಿಗೆ ಚಿನ್ನದ ನಿಕ್ಷೇಪಗಳಿರುವ ಪ್ರದೇಶಗಳಲ್ಲಿ ಶಾಸನಗಳನ್ನು ಹೊರಡಿಸಿದ್ದಾನೆ.[೮೫] ಮಸ್ಕಿ ನಗರಸಂಸ್ಕೃತಿ ಕೇಂದ್ರ, ಬೌದ್ಧ ಕೇಂದ್ರ, ಜನವಸತಿ ಕೇಂದ್ರವಾಗಿತ್ತು. ಎಲ್ಲದಕ್ಕೂ ಮುಖ್ಯವಾಗಿ ಮಸ್ಕಿ ರಾಷ್ಟ್ರೀಯ ಹೆದ್ದಾರಿಯಲ್ಲಿತ್ತು. ದೇಶ ವಿದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಅನೇಕ ವಾಣಿಜ್ಯ-ವ್ಯಾಪಾರ ಮಾರ್ಗಗಳನ್ನು ಹೊಂದಿತ್ತು.[೮೬] ಕರ್ನಾಟಕಾಂಧ್ರ ಪ್ರದೇಶಗಳಲ್ಲಿ ಕಂಡುಬರುವ ಶಾಸನ ಪ್ರದೇಶಗಳ ಮಧ್ಯಭಾಗದಲ್ಲಿತ್ತು. ಆಯಕಟ್ಟಿನ ಪ್ರದೇಶವಾಗಿ ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದಲ್ಲಿತ್ತು. ಹೀಗೆ ವಿವಿಧ ರೀತಿಯಲ್ಲಿ ಮಸ್ಕಿ ರಾಜಧಾನಿಯ ಎಲ್ಲ ಲಕ್ಷಣಗಳನ್ನು ಹೊಂದಿತ್ತು. ಹಾಗಾಗಿ ಇಂತಹ ಆಯಕಟ್ಟಿನ ಸ್ಥಳವನ್ನು ತನ್ನ ದಕ್ಷಿಣದ ರಾಜಧಾನಿಯನ್ನಾಗಿ ಮಾಡಿಕೊಂಡಿರುವ ಸಾಧ್ಯತೆ ಹೆಚ್ಚಾಗಿದೆ. ಅಲ್ಲದೆ ಅಶೋಕನು ತನ್ನ ರಾಜ್ಯ ವಿಸ್ತರಣೆಯನ್ನು ಕರ್ನಾಟಕದ ಚಿತ್ರದುರ್ಗ ಜಿಲ್ಲೆಗೆ ಸೀಮಿತವಾಗಿಸಿಕೊಂಡಿದ್ದನು.[೮೭] ದಕ್ಷಿಣದ ರಾಜ್ಯಗಳಾದ ಚೋಳ, ಚೇರ ಮತ್ತು ಪಾಂಡ್ಯರ ರಾಜ್ಯಗಳು ಬಲಿಷ್ಠವಾಗಿದ್ದಿರಬೇಕು. ಹಾಗಾಗಿ ಅಶೋಕನು ದಕ್ಷಿಣದ ರಾಜ್ಯಗಳ ಮೇಲೆ ಹಿಡಿತ ಸಾಧಿಸಲಾಗಲಿಲ್ಲ. ಈ ಮನೆತನಗಳ ಪ್ರಭಾವ ಕರ್ನಾಟಕದಲ್ಲಿತ್ತೆಂದು ಹೇಳಬೇಕಾಗುತ್ತದೆ. ಮೇಲಾಗಿ ಕೋಲಾರ ಚಿನ್ನದ ಗಣಿ ಇವರ ಅಧೀನದಲ್ಲಿದ್ದಿತು. ಈ ಗಣಿಯ ಮೂಲಕ ಈ ದ್ರಾವಿಡ ಅರಸುಮನೆತನಗಳು ಬಂಗಾರವನ್ನು ಪಡೆದುಕೊಳ್ಳುತ್ತಿದ್ದವು. ದಕ್ಷಿಣದಲ್ಲಿ ಪ್ರಬಲರೆನಿಸಿದ್ದ ಆದಿಪಾಂಡ್ಯರು ತಮ್ಮ ದುಂಡಾಕಾರದ ಬಂಗಾರದ ನಾಣ್ಯಗಳನ್ನು ಠಂಕಿಸುತ್ತಿದ್ದುದು, ಕೋಲಾರದ ಗಣಿಯಿಂದ ಪಡೆದ ಬಂಗಾರದಿಂದಲೇ ಎಂಬುದಾಗಿ ತಿಳಿದು ಬರುತ್ತದೆ.[೮೮]

ಅಶೋಕನ ಸಮಕಾಲೀನ ದಕ್ಷಿಣದ ಆದಿ ಪಾಂಡ್ಯರು ಬಲಿಷ್ಠರಾಗಿದ್ದು, ಅವರು ರಾಯಚೂರು ದೋ-ಅಬ್ ಪ್ರದೇಶವನ್ನು ವಶಪಡಿಸಿಕೊಳ್ಳಬಹುದು. ಇದರಿಂದ ರಾಜ್ಯದ ಖಜಾನೆಗೆ ಧಕ್ಕೆಯುಂಟಾ ಗುತ್ತದೆಯೆಂದು ಭಾವಿಸಿದ ಅಶೋಕ ಆಯಕಟ್ಟಿನ ಸ್ಥಳವಾದ ಮಸ್ಕಿಯನ್ನು ಸುವರ್ಣಗಿರಿಯ ರಾಜಧಾನಿಯನ್ನಾಗಿ ಮಾಡಿಕೊಂಡನು. ಅಲ್ಲದೆ ಇದರಿಂದ ಹಟ್ಟಿ ಚಿನ್ನದ ಗಣಿಯನ್ನು ತನ್ನ ಅಧೀನದಲ್ಲಿ ಉಳಿಸಿಕೊಳ್ಳಬೇಕೆಂದು ಗಡಿಭದ್ರತಾ ಠಾಣ್ಯಗಳನ್ನು ನಿರ್ಮಿಸಿದನು. ಚಿತ್ರದುರ್ಗದಲ್ಲಿ ಬ್ರಹ್ಮಗಿರಿ, ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರ, ಬಳ್ಳಾರಿಯಲ್ಲಿ ಉದೇಗೋಳ ಮತ್ತು ನಿಟ್ಟೂರು, ಕೊಪ್ಪಳದಲ್ಲಿ ಪಾಲ್ಕಿಗುಂಡ ಮತ್ತು ಗವಿಮಠ, ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಎರ್ರಗುಡಿ ಹಾಗೂ ಗುಲ್ಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಶಾಸನಗಳನ್ನು ಹೊರಡಿಸುವುದರ ಮೂಲಕ ಠಾಣ್ಯಗಳನ್ನು ಸ್ಥಾಪಿಸಿದನು.[೮೯] ಇವುಗಳ ಮಧ್ಯದಲ್ಲಿದ್ದ ಮಸ್ಕಿ ಮೌರ್ಯರ ದಕ್ಷಿಣ ಪ್ರಾಂತ್ಯ ಸುವರ್ಣಗಿರಿಯ ರಾಜಧಾನಿಯಾಗಿತ್ತೆಂದು ಹೇಳಬಹು ದಾಗಿದೆ. ಬಹುದೊಡ್ಡ ಪ್ರಮಾಣದ ಚಿನ್ನದ ಗಣಿಗಳು ಅಶೋಕನ ಗಮನ ಸೆಳೆದವು. ಅಶೋಕ ಆರ್ಥಿಕವಾಗಿ ಸಾಮ್ರಾಜ್ಯವನ್ನು ಬಲಿಷ್ಠಗೊಳಿಸಲು ಈ ಪ್ರದೇಶ ಪ್ರಧಾನವಾದದ್ದಾಗಿದೆ ಎಂದು ಭಾವಿಸಿ ಸುವರ್ಣಗಿರಿಯ ರಾಜಧಾನಿಯನ್ನು ಮಸ್ಕಿಯನ್ನಾಗಿ ಮಾಡಿಕೊಂಡಿದ್ದನೆಂದು ಹೇಳಬಹುದಾಗಿದೆ.

**೩.೩.೧.೩. ವ್ಯಾಪಾರ-ವಾಣಿಜ್ಯ ಸಂಬಂಧ**

ಈ ಪ್ರದೇಶ ವ್ಯಾಪಾರ-ವಾಣಿಜ್ಯ ಸಂಬಂಧಗಳನ್ನು ಬೇರೆ ಬೇರೆ ಪ್ರದೇಶಗಳೊಂದಿಗೆ ಬೆಳೆಸಿ ಕೊಂಡಿದ್ದ ಪರಿಣಾಮ ವರ್ತಕರ ಮೇಲೆ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಆರ್ಥಿಕ ಕೇಂದ್ರವಾದ ಈ ಪ್ರದೇಶದಲ್ಲಿ ಹಲವು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ.

ಕಲ್ಯಾಣ ಚಾಲುಕ್ಯ ಅರಸ ಎರಡನೆಯ ತೈಲಪನ ಮಗ ಸತ್ಯಾಶ್ರಯ ಮತ್ತು ಚೋಳರಸ ರಾಜೇಂದ್ರ ಚೋಳನ ನಡುವೆ ಲಿಂಗಸೂಗೂರಿನಲ್ಲಿ ಯುದ್ಧ(೯೯೭-೧೦೦೮) ನಡೆಯಿತು. ಕ್ರಿಶ. ೧೦೧೫-೧೯ರಲ್ಲಿ ಚೋಳರಸ ರಾಜೇಂದ್ರ ಚೋಳ ಮತ್ತು ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹರ ನಡುವೆ ಮಸ್ಕಿಯಲ್ಲಿ ಯುದ್ಧವಾಯಿತು. ಕೂಡಲಸಂಗಮ ಯುದ್ಧ ಕ್ರಿಶ. ೧೧೯೫ರಲ್ಲಿ ಸೇವುಣರ ಜೈತುಗಿ ಮತ್ತು ಕಾಕತೀಯ ಅರಸ ಮಹಾದೇವರ ನಡುವೆ ಕೃಷ್ಣಾ ಮತ್ತು ತುಂಗಭದ್ರ ನದಿಗಳ ಸಂಗಮ ಸ್ಥಳದಲ್ಲಿ ನಡೆಯಿತೆಂದು ತಿಳಿದುಬರುತ್ತದೆ. ಕ್ರಿಶ. ೧೨೯೪ರಲ್ಲಿ ಕಾಕತೀಯ ಅರಸ ಪ್ರತಾಪರುದ್ರನು ಸೇವುಣರಸ ರಾಮಚಂದ್ರನ ಅಧೀನದಲ್ಲಿದ್ದ ರಾಯಚೂರನ್ನು ವಶಪಡಿಸಿ ಕೊಂಡನು. ಕ್ರಿಶ. ೧೩೬೬ರಲ್ಲಿ ವಿಜಯನಗರದ ಅರಸ ಒಂದನೆಯ ಬುಕ್ಕ ಮತ್ತು ಬಹಮನಿ ಸುಲ್ತಾನ ಒಂದನೆಯ ಮಹಮ್ಮದ್‌ಶಹರ ನಡುವೆ ಮುದಗಲ್‌ನಲ್ಲಿ ಯುದ್ಧ ನಡೆಯಿತು. ವಿಜಯನಗರದ ಅರಸ ಬುಕ್ಕ ಮತ್ತು ಬಹಮನಿ ಸುಲ್ತಾನ ಇಮ್ಮಡಿ ಮಹಮ್ಮದಶಾಹರ ನಡುವೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕ್ರಿಶ. ೧೩೭೮ರಲ್ಲಿ ಯುದ್ಧ ನಡೆಯಿತೆಂದು ತಿಳಿದುಬರುತ್ತದೆ. ಕ್ರಿಶ.೧೩೯೮ರಲ್ಲಿ ದೇವದುರ್ಗ ತಾಲೂಕಿನ ಭಾನೂರು ಮತ್ತು ಮಸರಕಲ್‌ಗಳಲ್ಲಿ ವಿಜಯನಗರದ ಎರಡನೆಯ ಹರಿಹರ ಮತ್ತು ಬಹಮನಿ ಸುಲ್ತಾನ ಫಿರೋಜ್‌ಶಹರ ನಡುವೆ ಯುದ್ಧ ಜರುಗಿತು. ಕ್ರಿಶ. ೧೫೧೩-೧೫ರ ಕಾಲಾವಧಿಯಲ್ಲಿ ರಾಯಚೂರು ದೋ-ಅಬ್ ಪ್ರದೇಶ ಬಿಜಾಪುರ ಆದಿಲಶಾಹಿಗಳ ರಾಜ್ಯಕ್ಕೆ ಸೇರುತ್ತದೆ. ಯುದ್ಧ ನಡೆದ ಬಗ್ಗೆ ಅಷ್ಟಾಗಿ ಮಾಹಿತಿ ಇಲ್ಲ. ಆದರೆ ಮಲಿಯಾಬಾದ್(೯)-೧೫೧೩ರ ಶಾಸನ ಮತ್ತು ರಾಯಚೂರು(೧೭)-೧೫೧೩ರ ಏಕಮಿನಾರ್ ಮಸೀದಿಯಲ್ಲಿರುವ ಶಾಸನಗಳು ಈ ಪ್ರದೇಶ ಬಿಜಾಪುರದ ವಶದಲ್ಲಿತ್ತೆಂಬ ಮಾಹಿತಿಯನ್ನು ಸ್ಪಷ್ಟಪಡಿಸುತ್ತವೆ. ಕ್ರಿಶ.೧೫೨೧ರಲ್ಲಿ ವಿಜಯನಗರದ ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲಶಾಹಿ ಮಧ್ಯ ಗಬ್ಬೂರು ಮತ್ತು ರಾಯಚೂರುಗಳಲ್ಲಿ ಬಹುದೊಡ್ಡ ಯುದ್ಧವಾಯಿತು. ಈ ಯುದ್ಧಕ್ಕೆ ಪೋರ್ಚುಗೀಸರು ವಿಜಯನಗರದೊಂದಿಗೆ ಹೊಂದಿರುವ ವ್ಯಾಪಾರ ಸಂಬಂಧ ಕಾರಣ. ಕ್ರಿಶ. ೧೬೬೫-೬೬ರಲ್ಲಿ ಬಿಜಾಪುರದ ಇಮ್ಮಡಿ ಅಲಿ ಆದಿಲ್‌ಶಹನು ರಾಜ್ಯವ್ಯವಸ್ಥೆಯ ಭದ್ರತೆಗಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ದಾಳಿ ಮಾಡಿದನೆಂದು ತಿಳಿದುಬರುತ್ತದೆ. ಕ್ರಿಶ. ೧೬೯೦ರಲ್ಲಿ ಮೊಗಲ್ ಸುಲ್ತಾನ ಔರಂಗಜೇಬನು ಬಿಜಾಪುರದ ಆದಿಲಶಾಹಿ ಸಿಕಂದರ ಆದಿಲ್‌ಶಹನ ರಾಯಚೂರು ಕೋಟೆಯ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು.

### ೩.೩.೧.೪. ಆದಾಯ ಕೇಂದ್ರ

ಭೂಮಿ ಇಲ್ಲಿ ಪ್ರಧಾನವಾಗಿದ್ದು, ಹೆಚ್ಚುವರಿ ಉತ್ಪಾದನೆಯ ಮೂಲಕ ಆರ್ಥಿಕ ಚಟುವಟಿಕೆಗಳು ಸೃಷ್ಟಿಯಾದವು. ಪ್ರಮುಖ ಆರ್ಥಿಕ ಪ್ರದೇಶವಾಗಿ ಗುರುತಿಸಿಕೊಂಡಿತು. ಇದರಿಂದ ವಿವಿಧ ಅರಸು ಮನೆತನಗಳ ನಡುವೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ನಡೆದ ಯುದ್ಧಗಳೆಲ್ಲವೂ ಈ ಪ್ರದೇಶದ ಆದಾಯವನ್ನು ಕೇಂದ್ರೀಕರಿಸಿತ್ತು.

### ೩.೩.೧.೫. ನಗರಗಳ ಬೆಳವಣಿಗೆ

ಫಲವತ್ತಾದ ಭೂಮಿ ಹೆಚ್ಚುವರಿ ಉತ್ಪಾದನೆಗೆ ಕಾರಣವಾದ ಹಿನ್ನೆಲೆಯಲ್ಲಿ ವರ್ತಕರ ಪ್ರಭಾವ, ವೃತ್ತಿ ಸಂಘಗಳ ಬೆಳವಣಿಗೆ, ಸಣ್ಣ ಪುಟ್ಟ ಗ್ರಾಮಗಳು ಪಟ್ಟಣ ಮತ್ತು ನಗರಗಳ ಸ್ವರೂಪವನ್ನು

ಪಡೆದವು. ಈ ನಾಗರಿಕತೆಯ ಪರಿಣಾಮವಾಗಿ ಆರ್ಥಿಕತೆಯಲ್ಲಿ ತೀವ್ರವಾದ ಬದಲಾವಣೆ ಕಂಡುಬಂದಿತು. ಪಟ್ಟಣ ಮತ್ತು ನಗರಗಳಾಗಿ ಗುರುತಿಸಿಕೊಂಡ ಪ್ರದೇಶಗಳ ಮೇಲೆ ಅನೇಕ ಯುದ್ಧಗಳು ನಡೆದವು.

ಮೌರ್ಯ ಅರಸ ಅಶೋಕನು ನಗರ ಸಂಸ್ಕೃತಿಯನ್ನು ಹೊಂದಿದ್ದ ಮಸ್ಕಿಯ ಮೇಲೆ ಸೈನಿಕ ಕಾರ್ಯಾಚರಣೆ ನಡೆಸಿ, ಆ ನಂತರ ಶಾಸನ ಹೊರಡಿಸಿದನು.[೧೦] ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಸ್ಕಿ ರಾಜಧಾನಿ ಕೇಂದ್ರವಾಗಿತ್ತು. ಹಾಗಾಗಿ ಚೋಳರಸ ರಾಜೇಂದ್ರ ಚೋಳನು ಕಲ್ಯಾಣ ಚಾಲುಕ್ಯರಸ ಇಮ್ಮಡಿ ಜಯಸಿಂಹನ ನಡುವೆ ಯುದ್ಧವಾಯಿತು.[೧೧] ರಾಯಚೂರು ಪಟ್ಟಣವಾಗಿದ್ದದ್ದನ್ನು ಗಮನಿಸಿದ ಕಾಕತೀಯ ಅರಸ ಪ್ರತಾಪರುದ್ರನು ಕ್ರಿ.ಶ. ೧೨೯೪ರಲ್ಲಿ ರಾಯಚೂರು ಮೇಲೆ ದಾಳಿ ಮಾಡಿ ವಶಪಡಿಸಿಕೊಂಡನು. ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ಸುಲ್ತಾನ ಮಹಮ್ಮದ್ ಶಹರ ನಡುವೆ ಕ್ರಿ.ಶ. ೧೩೬೭ರಲ್ಲಿ ರಾಯಚೂರಿನಲ್ಲಿ ಯುದ್ಧ ನಡೆದಿರುವುದಾಗಿ ತಿಳಿದುಬರುತ್ತದೆ. ಹಾಗೆಯೇ ಕ್ರಿ.ಶ. ೧೩೬೬ರಲ್ಲಿ ಒಂದನೆಯ ಬುಕ್ಕ ಮತ್ತು ಒಂದನೆಯ ಮಹಮ್ಮದಶಹರ ನಡುವೆ ಮುದಗಲ್‌ನಲ್ಲಿ ಯುದ್ಧ ನಡೆಯಿತೆಂದು ತಿಳಿದುಬರುತ್ತದೆ. ಕ್ರಿ.ಶ. ೧೩೭೮ರಲ್ಲಿ ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿಸುಲ್ತಾನ ಎರಡನೆಯ ಮಹಮ್ಮದ್‌ಶಹರ ನಡುವೆ ರಾಯಚೂರಿನಲ್ಲಿ ಯುದ್ಧವಾಯಿತು. ಕ್ರಿ.ಶ. ೧೪೩೫ರಲ್ಲಿ ಬಹಮನಿಸುಲ್ತಾನ ಎರಡನೆಯ ಅಲ್ಲಾವುದ್ದೀನ ಮತ್ತು ವಿಜಯನಗರದ ಎರಡನೆಯ ದೇವರಾಯನ ನಡುವೆ ಮುದಗಲ್‌ನಲ್ಲಿ ಯುದ್ಧ ನಡೆಯಿತು. ಬಿಜಾಪುರದ ಯೂಸುಫ್ ಆದಿಲ್‌ಶಾಹಿ ನಿರ್ದೇಶನದಂತೆ ಬಹಮನಿಸುಲ್ತಾನ ಮಹಮ್ಮದ್‌ಶಹನ ಕ್ರಿ.ಶ. ೧೫೦೩-೦೯ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳನ್ನು ವಶಪಡಿಸಿಕೊಂಡನು. ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಾಹಿಯ ನಡುವೆ ಕ್ರಿ.ಶ. ೧೫೧೨ರಲ್ಲಿ ರಾಯಚೂರಿನಲ್ಲಿ ಯುದ್ಧ ನಡೆದದ್ದು ಕಂಡುಬರುತ್ತದೆ. ವಿಜಯನಗರ ಕ್ರಿ.ಶ. ೧೫೧೨ರಲ್ಲಿ ರಾಯಚೂರನ್ನು ವಶಪಡಿಸಿಕೊಂಡರೂ, ೧೫೧೨ರ ನಂತರದ ಕಾಲಾವಧಿಯಲ್ಲಿ ರಾಯಚೂರು, ಬಿಜಾಪುರದ ವಶಕ್ಕೆ ಹೋಗುತ್ತದೆ. ರಾಯಚೂರು ಕೋಟೆ ಮುತ್ತಿಗೆ ಕ್ರಿಶ. ೧೫೨೧ರಲ್ಲಿ ಹಾಕಲಾಯಿತು. ಈ ಸಂದರ್ಭದಲ್ಲಿ ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಹ ಮತ್ತು ಕೃಷ್ಣದೇವರಾಯನ ನಡುವೆ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಸೋಲನುಭವಿಸಿದ ಬಿಜಾಪುರ ಆದಿಲ್‌ಶಾಹಿಗಳ ದಂಡನಾಯಕ ರಾಯಚೂರನ್ನು ಮರಳಿ ಬಿಜಾಪುರಕ್ಕೆ ನೀಡಬೇಕೆಂದು ಮನವಿ ಮಾಡಿದನು. ಅದಕ್ಕೆ ಪೂರಕವಾಗಿ ವಿಜಯನಗರ ಒಂದು ಕರಾರನ್ನು ಹಾಕಿತು. ಅದು ಪಾದಕ್ಕೆ ಬೀಳುವುದು. ಇದಕ್ಕೂ ಒಪ್ಪದ ಬಿಜಾಪುರದ ಆದಿಲ್‌ಶಾಹಿಗಳು ಕ್ರಿ.ಶ. ೧೫೨೨ರಲ್ಲಿ ಕೃಷ್ಣದೇವರಾಯನಿಂದ ಬಿಜಾಪುರದ ಮೇಲೆ ಮುತ್ತಿಗೆ ಹಾಕಿಸಿಕೊಳ್ಳುವಂತಾಯಿತು. ಕ್ರಿ.ಶ. ೧೫೫೦ರಲ್ಲಿ ರಾಮರಾಯನು ರಾಯಚೂರು-ಮುದಗಲ್ ಕೋಟೆಗಳನ್ನು ವಶಪಡಿಸಿಕೊಂಡನು. ಬಿಜಾಪುರ ಇಬ್ರಾಹಿಂ ಆದಿಲ್‌ಶಹನು ಎದುರಾಳಿಯಾಗಿದ್ದನು. ೧೫೫೦ರ ನಂತರ ರಾಯಚೂರು ದೋ-ಅಬ್ ಬಿಜಾಪುರಕ್ಕೆ ಸೇರಿತ್ತು. ಆದರೆ ರಕ್ಷಣೆಯ ಹಿನ್ನೆಲೆಯಲ್ಲಿ ರಾಮರಾಯನಿಗೆ ಕ್ರಿ.ಶ. ೧೫೫೮ರಲ್ಲಿ ಬಿಜಾಪುರದ ಆದಿಲ್‌ಶಹನು ರಾಯಚೂರು ಮತ್ತು ಮುದಗಲ್ ಕೋಟೆಗಳನ್ನು ನೀಡುವನು. ದೆಹಲಿ ಸುಲ್ತಾನ ಮೊಗಲ ದೊರೆ ಔರಂಗಜೇಬನು ಕ್ರಿ.ಶ. ೧೬೯೦ರಲ್ಲಿ ರಾಯಚೂರು ಕೋಟೆಯನ್ನು ಮುತ್ತಿದನು. ಈ ಯುದ್ಧದಲ್ಲಿ ಔರಂಗಜೇಬನ ವಿರುದ್ಧ ವಿಜಾಪುರದ

ಸಿಕಂದರ ಆದಿಲ್‌ಶಹನು ಹೋರಾಡಿರಬೇಕು. ಆದರೂ ಔರಂಗಜೇಬನು ಗೆದ್ದನು. ಇವೆಲ್ಲ ನಗರಗಳ ಬೆಳವಣಿಗೆಯಿಂದಾಗಿ ನಡೆದ ಯುದ್ಧಗಳಾಗಿವೆ. ರಾಯಚೂರು ಮತ್ತು ಮುದಗಲ್‌ಗಳು ಪ್ರಮುಖ ನಗರಗಳಾಗಿ ಗುರುತಿಸಿಕೊಂಡಿದ್ದವು.

**೩.೩.೧.೬. ಆರ್ಥಿಕ ಚಟುವಟಿಕೆಗಳು**

ಇಲ್ಲಿ ಫಲವತ್ತಾದ ಭೂಮಿ, ಗಣಿಗಾರಿಕೆ, ವ್ಯಾಪಾರ-ವಾಣಿಜ್ಯ ಸಂಬಂಧಗಳು, ನಗರಗಳ ಬೆಳವಣಿಗೆ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಿ ಈ ಪ್ರದೇಶ ಪ್ರಸಿದ್ಧಿಯನ್ನು ಪಡೆದಿತ್ತು. ಈ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ರಾಜಕೀಯವಾಗಿ ನಡೆದಿರುವ ಯುದ್ಧಗಳೆಲ್ಲವೂ ಇಲ್ಲಿನ ಆರ್ಥಿಕ ಚಟುವಟಿಕೆಯ ಮೇಲೆ ನಡೆದಿರುವುದಾಗಿ ತಿಳಿದುಬರುತ್ತದೆ.

**೩.೩.೧.೭. ಹಣದ ಲೂಟಿಗಾಗಿ**

ರಾಜ್ಯದ ಖಜಾನೆಯನ್ನು ಕಾಲಕಾಲಕ್ಕೆ ಭರ್ತಿಗೊಳಿಸಿಕೊಳ್ಳುವ ಹಿನ್ನೆಲೆಯಲ್ಲಿ ಬಹುತೇಕ ಯುದ್ಧಗಳು ನಡೆದಿವೆ. ದಿಢೀರನೆ ದಾಳಿ ಮಾಡಿ ಸಂಪತ್ತನ್ನು ವಶಪಡಿಸಿಕೊಳ್ಳುವ ಅವು ದೀರ್ಘ ಹೋರಾಟ ಗಳಾಗಿರಲಿಲ್ಲ. ಮಸ್ಕಿಯಲ್ಲಿ ಕ್ರಿ.ಶ. ೧೦೧೫-೧೯ರಲ್ಲಿ ಚೋಳರಸ ರಾಜೇಂದ್ರ ಚೋಳ ಮತ್ತು ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹರ ನಡುವೆ ನಡೆದ ಯುದ್ಧ, ಮಲ್ಲಟದಲ್ಲಿ ಕ್ರಿ.ಶ. ೧೧೯೦ರಲ್ಲಿ ಸಾಮಂತರಾದ ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರ ಮೇಲೆ ನಡೆದ ಹೊಯ್ಸಳರಸ ಎರಡನೆಯ ಬಲ್ಲಾಳನ ದಾಳಿ, ವಿಜಯನಗರ, ಬಹಮನಿ ಮತ್ತು ಬಿಜಾಪುರ ಆದಿಲ್‌ಶಾಹಿಗಳ ನಡುವೆ ನಡೆದ ಯುದ್ಧಗಳು, ಗುಡಗುಂಟಿ ಸಂಸ್ಥಾನದ ಮೇಲೆ ಕ್ರಿ.ಶ. ೧೭೫೫ರಲ್ಲಿ ಸುರಪುರದ ಸಂಸ್ಥಾನಿಕರು ಮಾಡಿದ ದಾಳಿ ಹಾಗೂ ಸುರಪುರ ಸಂಸ್ಥಾನದ ಸಮಕಾಲೀನವಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕಂಡುಬರುವ ಸಂಸ್ಥಾನಗಳ ಮೇಲೆ ಕ್ರಿ.ಶ. ೧೭೭೭ರಲ್ಲಿ ಸುರಪುರದವರು ಮಾಡಿದ ದಾಳಿ ಸಂಪೂರ್ಣವಾಗಿ ಹಣದ ಲೂಟಿಯ ಉದ್ದೇಶವನ್ನೇ ಹೊಂದಿ ರುವುದನ್ನು ಗಮನಿಸಬಹುದು. ಒಟ್ಟಾರೆ ಆರ್ಥಿಕತೆಯ ಹಿನ್ನೆಲೆಯಲ್ಲಿ ಹಲವಾರು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ.

**೩.೩.೨. ಸಾಮಾಜಿಕ ಯುದ್ಧಗಳು**

ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಕೇಂದ್ರವಾಗಿತ್ತು. ಇಲ್ಲಿನ ಜನಸಂಖ್ಯೆಯ ಹೆಚ್ಚಳ ಸಾಮಾಜಿಕ ನಿಯಮಗಳಿಗೆ, ಕಟ್ಟುಪಾಡುಗಳ ಹೇರಿಕೆಗೆ ಕಾರಣವಾಯಿತು. ಕೆಳಜಾತಿ ಸಮುದಾಯಗಳು ಭಗವಂತನ ಪಾದಗಳಿಂದ ಹುಟ್ಟಿದವರೆಂಬ ಕಟ್ಟುಕತೆಗೆ ಒತ್ತುಕೊಟ್ಟು ಸಾಮಾಜಿಕವಾಗಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದರು. ಕೆಳಸ್ತರದ ಕಡೆಗಣಿಸಲ್ಪಟ್ಟ ಕೆಳಜಾತಿವರ್ಗ ಸಮುದಾಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ತುಳಿತಕ್ಕೊಳಪಡಬೇಕಾಯಿತು. ಸಾಮಂತ ಪದ್ಧತಿ, ಭೂದಾನ ಪ್ರಕ್ರಿಯೆಯಿಂದ ಸೃಷ್ಟಿಯಾದ ಹೊಸ ಭೂಮಾಲಿಕ ವರ್ಗದಿಂದ ಜೀತಪದ್ಧತಿ, ಬಿಟ್ಟಿಪದ್ಧತಿ, ಮಹಿಳೆಯರ ಬದುಕು, ಇದರಿಂದ ಗುಲಾಮಗಿರಿ ವ್ಯವಸ್ಥೆಗೆ ಸಿಲುಕಬೇಕಾಯಿತು. ಜಹಗೀರ್‌ದಾರರ ಭೂಮಿಯಲ್ಲಿ ಕೆಳವರ್ಗದ ಜನತೆ ದುಡಿಯಬೇಕಿತ್ತು. ಇದರ ಪ್ರಧಾನ ಲಕ್ಷಣವಾಗಿ ಜೀತಗಾರಿಕೆ ರೂಪ ಪಡೆದುಕೊಂಡಿತು. ಭೂಮಿಯಲ್ಲಿ

ದುಡಿಯುವ ಬಹುಸಂಖ್ಯಾತರಾದ ಕೆಳವರ್ಗದ ಸಮುದಾಯಗಳು ಜಹಗೀರ್‌ದಾರ ವ್ಯವಸ್ಥೆಗೆ ಬಲಿಯಾದರು. ಗ್ರಾಮದ ಪ್ರಮುಖ ಬೀದಿಯಲ್ಲಿ ಪ್ರವೇಶ ನಿಷೇಧಿತವಾಗಿತ್ತು. ಹೊಸದಾಗಿ ಮದುವೆಯಾದ ಮದುಮಕ್ಕಳು ಸಾಂಪ್ರದಾಯಿಕವಾಗಿ ಗ್ರಾಮದ ಪ್ರಮುಖ ಬೀದಿಯಲ್ಲಿ ಬಂಡಿಯಲ್ಲಿ ತೆರಳುವ ಅವಕಾಶ ಇರಲಿಲ್ಲ. ಒಂದು ವೇಳೆ ಪ್ರವೇಶ ಮಾಡಿದರೆ ಅಂಥವರಿಗೆ ದಂಡ ವಿಧಿಸಲಾಗುತ್ತಿತ್ತು ಎಂದು ಕರಡಕಲ್(ಕ್ರಿ.ಶ. ೧೧೭೮)ರ ಶಾಸನದಿಂದ ತಿಳಿದುಬರುತ್ತದೆ (ದೇವರಕೊಂಡಾರೆಡ್ಡಿ ೨೦೦೩: ೧೩೫). ಹೀಗೆ ಸಾಮಾಜಿಕ ವ್ಯವಸ್ಥೆಯ ಮೇಲೆ ಯಜಮಾನಿಕೆಯನ್ನು ಸ್ಥಾಪಿಸಲು, ಪ್ರಭುತ್ವದ ಪ್ರಭಾವವನ್ನು ಬೀರಿರುವುದು ಕಂಡುಬರುತ್ತದೆ.

### ೩.೩.೨.೧. ಭೌಗೋಳಿಕ ಸನ್ನಿವೇಶ

ಯಾವುದೇ ಒಂದು ಪ್ರದೇಶದ ಚರಿತ್ರೆಗೆ ಬಹುಮುಖ್ಯವಾಗಿ ಆ ಪ್ರದೇಶದ ಭೌಗೋಳಿಕ ಸನ್ನಿವೇಶ ಕಾರಣವಾಗುತ್ತದೆ. ಹಾಗೆಯೇ ಇಲ್ಲಿನ ಭೌಗೋಳಿಕತೆ ಕೃಷ್ಣಾ ಮತ್ತು ತುಂಗಭದ್ರ ನದಿಗಳಿಂದ ಆವೃತ್ತವಾಗಿದ್ದು, ಜನವಸತಿಕೇಂದ್ರವಾಗಿ, ಫಲವತ್ತಾದ ಭೂಮಿಯ ಮೂಲಕ ಪ್ರಮುಖವಾಗಿ ಗುರುತಿಸಿಕೊಂಡಿತು. ಅಲ್ಲದೆ ಅನೇಕ ಖನಿಜ ಸಂಪತ್ತು, ಅದು ಹೊಂದಿರುವ ಸಂಪರ್ಕ ಮುಂತಾದ ಅಂಶಗಳೆಲ್ಲವೂ ಸಾಮಾಜಿಕ ಬೆಳವಣಿಗೆಗೆ ಮಹತ್ವದ್ದಾಗಿತ್ತು. ಭೌಗೋಳಿಕ ಸನ್ನಿವೇಶದ ಪ್ರಭಾವದಿಂದಾಗಿ ತಮ್ಮ ಯಜಮಾನಿಕೆಯನ್ನು ಸಾಧಿಸಲು ಅನೇಕ ಅರಸು ಮನೆತನಗಳು ಹೋರಾಟ ಮಾಡಿರುವುದು ಚರಿತ್ರೆ ಬರವಣಿಗೆಗಳಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಬಹುತೇಕವಾಗಿ ಆರ್ಥಿಕ ಮತ್ತು ರಾಜಕೀಯಕ್ಕೆ ಸಂಬಂಧಿಸಿದಂತೆ ನಡೆದ ಯುದ್ಧಗಳೆಲ್ಲವೂ ಇಲ್ಲಿನ ಭೌಗೋಳಿಕ ಸನ್ನಿವೇಶದ ಹಿನ್ನೆಲೆ ಯಲ್ಲಿಯೇ ನಡೆದಿರುವುದು ಕಂಡುಬರುತ್ತದೆ. ಇದು ಸಾಮಾಜಿಕ ವ್ಯವಸ್ಥೆಯನ್ನು ಹಿಡಿತದಲ್ಲಿರಿಸಿಕೊಂಡು ಯಜಮಾನಿಕೆಯನ್ನು ಸಾಧಿಸುವುದೇ ಆಗಿತ್ತು. ಧಾರ್ಮಿಕ ಪ್ರಭುತ್ವ ಮತ್ತು ರಾಜಪ್ರಭುತ್ವಗಳೆರಡೂ ಭೌಗೋಳಿಕ ಸನ್ನಿವೇಶವನ್ನು ತಮ್ಮ ಹಿತಕ್ಕೆ ಬಳಸಿಕೊಂಡಿರುವುದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ರಾಜಕೀಯ ಯುದ್ಧಗಳನ್ನು ಗಮನಿಸಬಹುದು.

### ೩.೩.೨.೨. ಆಯಕಟ್ಟಿನ ಪ್ರದೇಶ

ಈ ಪ್ರದೇಶ ಕೃಷ್ಣಾ ಮತ್ತು ತುಂಗಭದ್ರ ನದಿಗಳನ್ನು ಹೊಂದಿ, ಉತ್ತಮವಾದ ಭೌಗೋಳಿಕ ಸನ್ನಿವೇಶವನ್ನು ಹೊಂದಿ, ಬಲವಾದ ಬೆಟ್ಟ ಗುಡ್ಡಗಳ ಮೂಲಕ ಗುರುತಿಸಿಕೊಂಡ ಪ್ರದೇಶವಾಗಿತ್ತು. ರಾಯಚೂರು, ಮುದಗಲ್, ಗಬ್ಬೂರು, ಗುಡಗುಂಟಿ, ಜಲದುರ್ಗ, ಮಸ್ಕಿ, ಮುಕ್ಕುಂದಿ ಮತ್ತು ಮಾನ್ವಿ ಕೋಟೆ ಪ್ರದೇಶಗಳನ್ನು ಹೊಂದಿ ಆಕರ್ಷಿತವಾಗಿತ್ತು. ಇಂತಹ ಪ್ರದೇಶದ ಮೇಲೆ ಅಧಿಕಾರವನ್ನು ಸ್ಥಾಪಿಸಬೇಕೆಂಬ ಆಕಾಂಕ್ಷೆ ಹೊಂದಿದ್ದ ವಿವಿಧ ಅರಸುಮನೆತನಗಳು ಈ ಪ್ರದೇಶಕ್ಕಾಗಿ ಇಲ್ಲಿ ಹೋರಾಟ ಮಾಡಿರುವುದು ಚರಿತ್ರೆ ಬರವಣಿಗೆಯಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ನಡೆದ ಆರ್ಥಿಕ ಮತ್ತು ರಾಜಕೀಯ ಯುದ್ಧಗಳನ್ನು ಗಮನಿಸಬಹುದಾಗಿದೆ.

### ೩.೩.೨.೩. ಊಳಿಗಮಾನ್ಯ ವ್ಯವಸ್ಥೆ

ಸಾಮಂತ ಪದ್ಧತಿ ಈ ಪ್ರದೇಶದ ಚುಕ್ಕಾಣಿಯನ್ನು ಹಿಡಿದಿತ್ತು. ಇಲ್ಲಿನ ಸಾಮಂತರು ಸಾರ್ವಭೌಮ ರಾಗಲೂ ಪ್ರಯತ್ನಿಸಲಿಲ್ಲ, ಬದಲಾಗಿ ಅಧೀನತೆಯನ್ನು ಒಪ್ಪಿಕೊಂಡೇ ಕಾಲ ನೂಕಲಾಯಿತೆಂದೆ ಹೇಳಬಹುದು. ಈ ಅಂಶದೊಂದಿಗೆ ಆರ್ಥಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ನಡೆದ ಯುದ್ಧಗಳನ್ನು

ಅನ್ವಯಿಸಿಕೊಳ್ಳಬೇಕಾಗುತ್ತದೆ. ಈ ವ್ಯವಸ್ಥೆ ಸಾಮಾಜಿಕ ವ್ಯವಸ್ಥೆಯನ್ನು ಹಿಡಿತದಲ್ಲಿರಿಸಿಕೊಂಡು ಪ್ರಭುತ್ವದ ಪರವಾಗಿ ಕಾರ್ಯನಿರ್ವಹಿಸಿದ್ದು ಕಾಣಬಹುದಾಗಿದೆ. ಉಂಳಿಗಮಾನ್ಯ ವ್ಯವಸ್ಥೆ ಸಾಮಾಜಿಕ ವ್ಯವಸ್ಥೆಯ ಭಾಗವಾಗಿದೆ. ಪರಸ್ಪರ ಸಾಮಂತರು ಯುದ್ಧ ಮಾಡದಿದ್ದರೂ ಜಹಗೀರ್‌ದಾರರನ್ನು ಸಿದ್ಧಪಡಿಸಿ, ಅಮರನಾಯಕರನ್ನು ನೇಮಿಸಿ ಅಧೀನರನ್ನು ನೇಮಕಗೊಳಿಸಿ ಆಳ್ವಿಕೆ ಮಾಡಲಾಗುತ್ತಿತ್ತು. ಭೂಮಿಯನ್ನು ಉಳುಮೆ ಮಾಡಲು ಇತರ ರೈತಾಪಿ ವರ್ಗಗಳಿಗೆ ನೀಡಲಾಗುತ್ತಿತ್ತು. ಭೂಮಿಯನ್ನು ರಕಮು, ಪಾಲಿಗೆ, ಗುತ್ತಿಗೆ ನೀಡುವ ಪದ್ಧತಿಯನ್ನು ಕಾಣಬಹುದಾಗಿದೆ.

### ೩.೩.೨.೪. ವೈವಾಹಿಕ ಸಂಬಂಧಗಳು

ಬಹು ಪ್ರತಿಷ್ಠಿತ ಪ್ರದೇಶಗಳ ಮೇಲೆ ಅಧಿಕಾರ ಸ್ಥಾಪಿಸಲು ಬಳಸಿಕೊಂಡ ಮಾರ್ಗವೇ ವೈವಾಹಿಕ ಸಂಬಂಧವಾಗಿದೆ. ಇವು ಕೆಲವು ಸಲ ಯುದ್ಧಾನಂತರದಲ್ಲಿ ನಡೆದರೆ, ಮತ್ತೆ ಕೆಲವು ಸಲ ಈ ಸಂಬಂಧ ಬೆಳೆಸಿದ ನಂತರ ಅದೇ ಮನೆತನದ ಜೊತೆ ಯುದ್ಧಗಳು ನಡೆದಿರುವುದನ್ನು ಚರಿತ್ರೆ ಬರವಣಿಗೆಯಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಅಧಿಕಾರ ಸ್ಥಾಪನೆಗಾಗಿ ನಡೆದ ಯುದ್ಧಗಳನ್ನು ಕುರಿತು ತಿಳಿದುಕೊಳ್ಳುವ ಯತ್ನ ಇಲ್ಲಿ ಮಾಡಲಾಗಿದೆ.

ಕ್ರಿ.ಶ. ೧೦೬೮-೬೯ರಲ್ಲಿ ಚಾಲುಕ್ಯರಸ ಎರಡನೆಯ ಸೋಮೇಶ್ವರನೊಡನೆ ಸಹೋದರ ಆರನೆಯ ವಿಕ್ರಮಾದಿತ್ಯನು ಅಧಿಕಾರಕ್ಕಾಗಿ ಯುದ್ಧ ಮಾಡಿದನು. ಈ ಸಮಯವನ್ನು ಬಳಸಿಕೊಂಡ ಚೋಳರಸ ವೀರರಾಜೇಂದ್ರನು ತನ್ನ ಮಗಳನ್ನು ಆರನೆಯ ವಿಕ್ರಮಾದಿತ್ಯನಿಗೆ ಕೊಟ್ಟು ವೈವಾಹಿಕ ಸಂಬಂಧವನ್ನು ಬೆಳೆಸಿದನು. ಸ್ವಲ್ಪ ಕಾಲಾನಂತರದಲ್ಲಿ ಎರಡನೆಯ ಸೋಮೇಶ್ವರನ ವಿರುದ್ಧ ವೀರರಾಜೇಂದ್ರ ಯುದ್ಧ ಮಾಡಿದನೆಂದು ತಿಳಿದುಬರುತ್ತದೆ. ಈ ಯುದ್ಧ ಕ್ರಿ.ಶ. ೧೦೬೮-೬೯ರಲ್ಲಿ ಕರಡಿಕಲ್‌ನಲ್ಲಿ ನಡೆಯಿತು. ಕ್ರಿ.ಶ. ೧೬೭೪ರಲ್ಲಿ ಕನಕಗಿರಿಯ ಇಮ್ಮಡಿ ಉಡಚನಾಯಕ ದೇವದುರ್ಗದ ಮೇಲೆ ದಾಳಿ ಮಾಡಿದನು. ಇದಕ್ಕೆ ಕಾರಣ ಸುರಪುರ ಸಂಸ್ಥಾನದ ಹಸರಂಗಿ ಪಾಮನಾಯಕನೊಂದಿಗೆ ದೇವದುರ್ಗದ ದೊರೆಗಳು ವೈವಾಹಿಕ ಸಂಬಂಧ ಹೊಂದಿದ್ದುದು ಕಾರಣವಾಗಿದೆ. ಅಸ್ತಿತ್ವಕ್ಕಾಗಿ ಹೋರಾಟ ಮಾಡುವ ಸಂದರ್ಭದಲ್ಲಿ ಒದಗಿ ಬಂದ ಅವಕಾಶವನ್ನು ಬಳಸಿಕೊಂಡ ದೇವದುರ್ಗದ ವಾಸುದೇವ ನಾಯಕನು ಮೊಗಲ ಅರಸ ಔರಂಗಜೇಬನ ಬೆಂಬಲವಾಗಿ ಸುರಪುರದ ಪಿಡ್ಡನಾಯಕನ ವಿರುದ್ಧ ಕ್ರಿ.ಶ. ೧೭೦೫ರಲ್ಲಿ ದೇವದುರ್ಗ ತಾಲೂಕಿನ ವೀರಗೋಟ ಬಳಿ ಯುದ್ಧ ಮಾಡಿರುವ ಬಗ್ಗೆ ತಿಳಿದುಬರುತ್ತದೆ. ಕ್ಯಾದಿಗ್ಗೇರಿ ಕಾಳಗ ಕ್ರಿ.ಶ. ೧೭೨೭-೧೭೭೧ರ ಕಾಲಾವಧಿಯಲ್ಲಿ ದೇವದುರ್ಗದ ಕಿಲಚನಾಯಕ ಕ್ಯಾದಿಗ್ಗೇರಿಯ ಮೇಲೆ ದಾಳಿ ಮಾಡಿದ. ದಾಳಿಯನ್ನು ಎದುರಿಸಲಾಗದ ಕ್ಯಾದಿಗ್ಗೇರಿ ಸಂಸ್ಥಾನಿಕರು ವೈವಾಹಿಕ ಸಂಬಂಧವನ್ನು ಹೊಂದಿರುವ ಸುರಪುರದವರ ಸಹಾಯದಿಂದ ದೇವದುರ್ಗವನ್ನು ಎದುರಿಸಿದರೆಂದು ತಿಳಿದುಬರುತ್ತದೆ. ರಾಯಚೂರು ದೋ-ಅಬ್ ಪ್ರದೇಶದಲ್ಲಿರುವ ಸಂಸ್ಥಾನಿಕರಾದ ದೇವದುರ್ಗ, ಕ್ಯಾದಿಗ್ಗೇರಿ, ಅರಕೇರಿ, ಗಲಗ, ಜಾಲಹಳ್ಳಿ, ಚಂದನಕೇರಿ, ಕರಿಗುಡ್ಡ ಮುಂತಾದ ಸಮಕಾಲೀನ ಸಂಸ್ಥಾನಗಳೊಂದಿಗೆ ವೈವಾಹಿಕ ಸಂಬಂಧ ಹೊಂದಿದ್ದರೂ ನಿರಂತರವಾಗಿ ಆಗಾಗ ಸುರಪುರ ಸಂಸ್ಥಾನ ದಾಳಿ ಮಾಡುತ್ತಿತ್ತು. ಹಾಗೆಯೇ ಕ್ರಿ.ಶ. ೧೭೬೭-೯೮ರಲ್ಲಿ ಸುರಪುರದ ಇಮ್ಮಡಿ ವೆಂಕಟಪ್ಪನಾಯಕ ದೇವದುರ್ಗದ ಕೊಳ್ಳಿರಂಗಪ್ಪನಾಯಕನ ಮೇಲೆ ದಾಳಿ ಮಾಡಿದ್ದಲ್ಲದೆ ಕ್ರಿ.ಶ. ೧೮೦೧ರಲ್ಲಿ ಗುಡಗುಂಟಿಯ ಮೇಲೆಯೂ ದಾಳಿ ಮಾಡಿದನೆಂದು ತಿಳಿದುಬರುತ್ತದೆ.

### ೩.೩.೨.೫. ಪಶುಪಾಲನೆ

ಚರಿತ್ರೆಯುದ್ದಕ್ಕೂ ಕೃಷಿಯ ಜೊತೆ ಜೊತೆಗೆ ಬೆಳೆದುಬಂದದ್ದು ಪಶುಪಾಲನೆ. ಇದು ಜೀವನೋಪಾಯಕ್ಕೆ ಅಳವಡಿಸಿಕೊಂಡ ಒಂದು ಕ್ರಮ. ಸಾಮಾಜಿಕ ವ್ಯವಸ್ಥೆಯಲ್ಲಿ ಇದು ಬಹುಮುಖ್ಯ ಕಸುಬಾಗಿತ್ತು. ಬ್ರಹ್ಮಪುರಿ, ಅಗ್ರಹಾರ, ಘಟಿಕಸ್ಥಾನಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪಶುಪಾಲನೆ ಇದ್ದಿತು. ಹಾಗೆಯೇ ಅಧಿಕಾರಿಶಾಹಿ ವರ್ಗವೂ ಪಶುಪಾಲನೆಯಲ್ಲಿ ತೊಡಗಿಸಿಕೊಂಡಿತ್ತು. ಕಳ್ಳಕಾಕರ ವಿರೋಧಿ ಬಣಗಳ ಭಯವಿತ್ತು. ಕೆಲವು ಸಲ ಇಡೀ ಪಶುಗಳ ಗುಂಪನ್ನು ಓಡಿಸಿಕೊಂಡು ಹೋಗಲಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ಪರಸ್ಪರ ಹೋರಾಟಗಳು ನಡೆಯುತ್ತಿದ್ದವು. ಹೆಚ್ಚಾಗಿ ಪಶುಪಾಲನೆ ಮಾಡುತ್ತಿರುವ ವ್ಯಕ್ತಿಗಳು ನೇರನೇರ ಕಾದಾಡುತ್ತಿದ್ದರು. ಈ ಕಾರಣಕ್ಕಾಗಿ ನಡೆದ ಯುದ್ಧಗಳ ಸಂಖ್ಯೆ ಅಪಾರವಾಗಿವೆ. ಈ ಪ್ರದೇಶದಲ್ಲಿ ದೊರೆಯುವ ತುರುಗೋಳ್ ವೀರಗಲ್ಲುಗಳು ಪಶುಪಾಲನೆಯನ್ನು ಸೂಚಿಸುತ್ತವೆ. ಅನೇಕ ತುರುಗೋಳ್ ವೀರಗಲ್ಲುಗಳ ಆಧಾರದ ಮೇಲೆ ಪಶುಪಾಲನೆಯ ಹಿನ್ನೆಲೆಯಲ್ಲಿ ಯುದ್ಧಗಳು ನಡೆದಿರಬೇಕೆಂದು ಊಹಿಸಬಹುದಾಗಿದೆ.

### ೩.೩.೨.೬. ಸ್ತ್ರೀ "ವ್ಯಾಮೋಹ"

ಚರಿತ್ರೆಯಲ್ಲಿ ಸ್ತ್ರೀ ವ್ಯಾಮೋಹದಿಂದಾಗಿ ಅಲ್ಲಾವುದ್ದೀನ್ ಖಿಲ್ಜಿ ಚಿತ್ತೂರಿನ ರಾಣಿ ಪದ್ಮಿನಿಯ ಸೌಂದರ್ಯಕ್ಕೆ ಬೆರಗಾಗಿ ಅವಳನ್ನು ಪಡೆಯುವುದಕ್ಕೋಸ್ಕರ ಕ್ರಿ.ಶ. ೧೩೦೨-೦೩ರಲ್ಲಿ ಚಿತ್ತೂರಿನ ಮೇಲೆ ಆಕ್ರಮಣ ಮಾಡಿದನು.[೨] ಇದರಂತೆ ಸ್ತ್ರೀ ವ್ಯಾಮೋಹದಿಂದಾಗಿ ಕೆಲವು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ. ಕ್ರಿ.ಶ. ೯೯೭-೧೦೦೮ರಲ್ಲಿ ಕಲ್ಯಾಣ ಚಾಲುಕ್ಯರ ಸತ್ಯಾಶ್ರಯ ಮತ್ತು ಚೋಳರಸ ರಾಜೇಂದ್ರ ಚೋಳರ ನಡುವೆ ನಡೆದ ಯುದ್ಧದಲ್ಲಿ ಸ್ತ್ರೀಯರ ಕೊಲೆ, ಅತ್ಯಾಚಾರ ನಡೆದಿರುವುದು ತಿಳಿದುಬರುತ್ತದೆ. ಇದರಂತೆ ಕ್ರಿ.ಶ. ೧೩೬೬-೬೭ರಲ್ಲಿ ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ಸುಲ್ತಾನ ಒಂದನೆಯ ಮಹಮ್ಮದ್‌ಶಹರ ನಡುವೆ ನಡೆದ ಆದೋನಿ-೧ ಯುದ್ಧದಲ್ಲಿ ಸ್ತ್ರೀಯರನ್ನು ಕೊಲೆ ಮಾಡಲಾಯಿತು. ಹಾಗೆಯೇ ಕ್ರಿ.ಶ. ೧೩೭೫-೭೬ರಲ್ಲಿ ಬಹಮನಿ ಸುಲ್ತಾನ ಮುಜಾಹಿದ್‌ಶಹ ಹಾಗೂ ವಿಜಯನಗರದ ಒಂದನೆಯ ಬುಕ್ಕನ ನಡುವೆ ನಡೆದ ಆದೋನಿ-೨ ಯುದ್ಧದಲ್ಲಿ ೬೦-೭೦ ಸಾವಿರ ಮಹಿಳೆಯರನ್ನು ಸೆರೆ ಹಿಡಿಯಲಾಯಿತು. ಅಲ್ಲಾವುದ್ದೀನ್ ಖಿಲ್ಜಿಯಂತೆ ವಿಜಯನಗರದ ಒಂದನೆಯ ದೇವರಾಯ ಮುದಗಲ್ಲಿನ ಸುಂದರ ಯುವತಿಯ ಸೌಂದರ್ಯಕ್ಕೆ ಮರುಳಾಗಿ, ಬಹಮನಿಸುಲ್ತಾನ ಫಿರೋಜ್‌ಶಹನೊಡನೆ ಕ್ರಿ.ಶ. ೧೪೦೬-೦೭ರಲ್ಲಿ ಮುದಗಲ್‌ನಲ್ಲಿ ಯುದ್ಧ ಮಾಡಿರುವುದು ತಿಳಿದುಬರುತ್ತದೆ.

### ೩.೩.೨.೭. ಸಾಲಕ್ಕಾಗಿ

ಸಾಮಾಜಿಕ ಸಂಬಂಧಗಳನ್ನು ಲೆಕ್ಕಿಸದೆ, ರಕ್ತ ಸಂಬಂಧವನ್ನು ಪರಿಗಣಿಸದೇ ಯಾವುದೋ ಒಂದು ಸಣ್ಣ ಕಾರಣಕ್ಕಾಗಿ ಸಾಲದ ನೆಪದಲ್ಲಿ ದಾಳಿ ಮಾಡಿರುವ ಸಂದರ್ಭಗಳುಂಟು. ಇದಕ್ಕೆ ಕ್ರಿ.ಶ. ೧೭೯೫ರಲ್ಲಿ ಸುರಪುರ ಸಂಸ್ಥಾನದ ವೆಂಕಟಪ್ಪನಾಯಕನು ೩೦,೦೦೦=೦೦ರೂ.ಗಳ ಸಾಲ ವಾಪಾಸು ನೀಡಲಿಲ್ಲವೆಂಬ ಕಾರಣಕ್ಕಾಗಿ ಗುಡಗುಂಟಿಯ ಸಂಸ್ಥಾನದ ಮೇಲೆ ದಾಳಿ ಮಾಡಲಾಯಿತು. ಈ ರೀತಿಯಾಗಿ ಈ ಪ್ರದೇಶದಲ್ಲಿ ಸಾಮಾಜಿಕತೆಯ ಹಿನ್ನೆಲೆಯಲ್ಲಿ ಯುದ್ಧಗಳು ನಡೆದಿರುವುದು ಕಂಡು ಬರುತ್ತದೆ.

### ೩.೩.೩. ರಾಜಕೀಯ ಯುದ್ಧಗಳು

ಯಾವುದೇ ಅರಸು ಮನೆತನಕ್ಕೆ ತನ್ನ ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳಲು ಬೇಕಾದದ್ದು ರಾಜಕೀಯ ಪ್ರಭಾವ ಅಗತ್ಯವಾಗಿತ್ತು. ಈ ಬಗೆಯ ರಾಜಕಾರಣದ ಮೂಲಕ ರಾಜ್ಯ ವಿಸ್ತರಿಸುವ ಪ್ರಯತ್ನಕ್ಕೆ ಕೈಹಾಕಿರುವುದು ಕಂಡುಬರುತ್ತದೆ. ಬಹುತೇಕವಾಗಿ ಈ ಪ್ರದೇಶದಲ್ಲಿ ನಡೆದ ಯುದ್ಧಗಳೆಲ್ಲವೂ ರಾಜಕೀಯ ಪ್ರೇರಿತವಾಗಿದ್ದವು. ಫಲವತ್ತಾದ ಭೂಮಿಯನ್ನು ಹೊಂದಿ, ಕೃಷಿಯ ಮೂಲಕ ಆದಾಯವನ್ನು ಹೆಚ್ಚಿಸಿಕೊಂಡು ವ್ಯಾಪಾರ ವಾಣಿಜ್ಯದ ಮೂಲಕ ನಗರೀಕರಣದ ಬೆಳವಣಿಗೆಯಿಂದಾಗಿ ಈ ಪ್ರದೇಶ ಪ್ರಭಾವಿಯಾಗಿ ಗುರುತಿಸಿಕೊಂಡಿತು. ಹೇಗಾದರೂ ಮಾಡಿ ಇಲ್ಲಿನ ಆದಾಯವನ್ನು ತಮ್ಮ ರಾಜ್ಯ ಭಂಡಾರಕ್ಕೆ ನೇರವಾಗಿ ಸಾಗಿಸಲು ಅರಸುಮನೆತನಗಳು ಪ್ರಯತ್ನಿಸಿದವು. ಈ ಹಿನ್ನೆಲೆಯಲ್ಲಿ ಹೋರಾಟಗಳನ್ನು ಮಾಡಿದ್ದುಂಟು. ಸ್ಥಳೀಯವಾಗಿ ಅರಾಜಕತೆಯ ಲಾಭವನ್ನು ಪಡೆದು ಯುದ್ಧಗಳನ್ನು ಕೈಗೊಳ್ಳಲಾಗುತ್ತಿತ್ತು. ಏಕೆಂದರೆ ಈ ಪ್ರದೇಶದ ಮೇಲೆ ಸಾರ್ವಭೌಮತ್ವವನ್ನು ಸಾಧಿಸಬೇಕು ಎಂಬ ಧೋರಣೆಯನ್ನು ಹೊಂದಲಾಗಿತ್ತು. ಆಗ ಆ ಅರಸುಮನೆತನಗಳು ಆಕ್ರಮಣಕಾರಿ ನೀತಿಯನ್ನು ಅಳವಡಿಸಿಕೊಂಡವು. ಈ ಪ್ರದೇಶದ ಮಸ್ಕಿ, ರಾಯಚೂರು, ಮುದಗಲ್, ಮಾನ್ವಿ ಮುಂತಾದ ಕೋಟೆಗಳು ಪ್ರಮುಖವಾಗಿ ಗುರುತಿಸಿಕೊಂಡಿದ್ದವು. ಇವುಗಳನ್ನು ಪಡೆಯಲು ಅನೇಕ ಯುದ್ಧಗಳು ನಡೆದವು. ಹಾಗಾಗಿ ರಾಜಕೀಯ ಸ್ಥಿತ್ಯಂತರಕ್ಕೊಳಗಾಯಿತು. ಇಲ್ಲಿ ನಡೆದ ಯುದ್ಧಗಳು ಭದ್ರತೆ, ಗಡಿಸ್ಥಾಪನೆ, ಪ್ರಾಬಲ್ಯ ಹೆಚ್ಚಿಸಿಕೊಳ್ಳುವುದು, ಕಪ್ಪದ ಕಾರಣ, ಸೇಡು, ಒಪ್ಪಂದಗಳ ಉಲ್ಲಂಘನೆ, ಬಲಪ್ರದರ್ಶನ, ಅಧಿಕಾರವನ್ನು ಪುನರ್‌ಸ್ಥಾಪಿಸುವುದು, ಅಸ್ತಿತ್ವಕ್ಕಾಗಿ ಹೋರಾಟ ಹಾಗೂ ರಾಜ್ಯವಿಸ್ತರಣೆ ಎಂಬ ಬಹುಮುಖ್ಯ ಮಹತ್ವಾಕಾಂಕ್ಷೆಯ ಹಿನ್ನೆಲೆ ಪಡೆದಿವೆ. ಈ ಪ್ರದೇಶಕ್ಕಾಗಿ ನಡೆದ ಅನೇಕ ಯುದ್ಧಗಳು ರಾಜಕೀಯ ಸ್ವರೂಪವನ್ನು ಧರಿಸಿರುವುದು ಚರಿತ್ರೆ ಬರವಣಿಗೆಯಿಂದ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ರಾಜಕೀಯ ಸ್ವರೂಪದಿಂದ ಕೂಡಿದ ಯುದ್ಧಗಳನ್ನು ಕುರಿತು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

#### ೩.೩.೩.೧. ಸ್ಥಳೀಯ ಸನ್ನಿವೇಶ

ಈ ಪ್ರದೇಶದಲ್ಲಿ ಪ್ರತಿಷ್ಠಿತ ಯಾವುದೇ ರಾಜ ಮನೆತನಗಳು ನೆಲೆಗೊಳ್ಳಲಿಲ್ಲ. ರಾಜಕೀಯವಾಗಿ ಪರಕೀಯರ ದಾಳಿಗೆ ಸಿಲುಕಿದ್ದೇ ಹೆಚ್ಚು. ಸಣ್ಣ ಪ್ರಮಾಣದ ರಾಜ್ಯವೂ ಸಹ ಅಧಿಕಾರಕ್ಕೆ ಬರಲಿಲ್ಲ. ಇಂತಹ ಸನ್ನಿವೇಶವನ್ನು ಬಳಸಿಕೊಂಡ ವಿವಿಧ ಅರಸುಮನೆತನಗಳು ಈ ಪ್ರದೇಶದ ಮೇಲೆ ದಾಳಿ ಮಾಡಿದವು. ಇಲ್ಲಿ ಆರ್ಥಿಕತೆ, ಸಾಮಾಜಿಕತೆ ಮತ್ತು ರಾಜಕೀಯಕ್ಕೆ ಸಂಬಂಧಿಸಿದಂತೆ ನಡೆದ ಯುದ್ಧಗಳೆಲ್ಲವೂ ಸ್ಥಳೀಯ ಸನ್ನಿವೇಶದ ಹಿನ್ನೆಲೆಯಾಗಿ ಎಂಬುದಾಗಿ ತಿಳಿದುಕೊಳ್ಳಬೇಕಾಗಿದೆ.

#### ೩.೩.೩.೨. ರಾಜಕೀಯ ಸ್ಥಿತ್ಯಂತರ

ಈ ಪ್ರದೇಶ ನಿರಂತರವಾಗಿ ಯುದ್ಧ ಕೇಂದ್ರವಾಗಿತ್ತು. ಈ ಬಗೆಯ ಹೋರಾಟದ ಸ್ವರೂಪ ಒಂದು ಅರಸುಮನೆತನದಿಂದ ಇನ್ನೊಂದು ಅರಸುಮನೆತನಕ್ಕೆ ಭಿನ್ನವಾಗಿರುತ್ತಿತ್ತು. ಪರಸ್ಪರ ಕಾದಾಟ ಎಲ್ಲರ ಗಮನ ಸೆಳೆಯಿತು. ಹಾಗಾಗಿ ಈ ಪ್ರದೇಶವನ್ನು ತಮ್ಮ ಅಧೀನಕ್ಕೊಳಪಡಿಸಬೇಕೆಂದು ಹೋರಾಟದಲ್ಲಿ ತೊಡಗಿಸಿಕೊಂಡಿದ್ದ ಅರಸುಮನೆತನಗಳು ರಾಜಕೀಯ ಸ್ಥಿತ್ಯಂತರಕ್ಕೆ ಒಳಗಾಗ ಬೇಕಾಯಿತು.

ಕ್ರಿ.ಶ. ೧೦೧೫–೧೯ರಲ್ಲಿ ಚೋಳರಸ ರಾಜೇಂದ್ರಚೋಳ ಮತ್ತು ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹರ ನಡುವೆ ಮಸ್ಕಿ ಯುದ್ಧವಾಯಿತು. ಕಲ್ಯಾಣ ಚಾಲುಕ್ಯರಸ ಒಂದನೆಯ ಸೋಮೇಶ್ವರ ಮತ್ತು ಚೋಳರಸ ಒಂದನೆಯ ರಾಜಾಧಿರಾಜರ ನಡುವೆ ಕ್ರಿ.ಶ. ೧೦೫೪ರಲ್ಲಿ ಕೊಪ್ಪರದಲ್ಲಿ ಯುದ್ಧ ನಡೆಯಿತು. ಕ್ರಿ.ಶ. ೧೦೫೮ರಲ್ಲಿ ಚಂದನಕೇರಿ ಮತ್ತು ಕಂಚಿ ಯುದ್ಧ ಕಲ್ಯಾಣ ಚಾಲುಕ್ಯರಸ ಒಂದನೆಯ ಸೋಮೇಶ್ವರ ಮತ್ತು ಚೋಳರಸ ಎರಡನೆಯ ರಾಜೇಂದ್ರರ ನಡುವೆ ನಡೆಯಿತೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೬೮–೬೯ರಲ್ಲಿ ಕರಡಿಕಲ್‌ನಲ್ಲಿ ನಡೆದ ಯುದ್ಧ ಕಲ್ಯಾಣ ಚಾಲುಕ್ಯರಸ ಎರಡನೆಯ ಸೋಮೇಶ್ವರ ಮತ್ತು ಚೋಳರಸ ವೀರರಾಜೇಂದ್ರರ ನಡುವೆ ನಡೆಯಿತೆಂದು ತಿಳಿದುಬರುತ್ತದೆ. ಹೊಯ್ಸಳರಸ ವಿಷ್ಣುವರ್ಧನನು ಕ್ರಿ.ಶ. ೧೧೩೧–೩೫ರಲ್ಲಿ ರಾಯಚೂರು ದೋ–ಅಬ್ ಮೇಲೆ ದಾಳಿಮಾಡಿದನು. ಇದೇ ರಾಚನೂರು ಯುದ್ಧವಾಗಿದೆ. ಇದು ಆರನೆಯ ವಿಕ್ರಮಾದಿತ್ಯನ ಸಾರ್ವಭೌಮತ್ವವನ್ನು ಧಿಕ್ಕರಿಸಿ ಮಾಡಿದ ದಾಳಿಯಾಗಿದೆ. ಈ ದಾಳಿಯನ್ನು ಆರನೆಯ ವಿಕ್ರಮಾದಿತ್ಯನ ಸಾಮಂತ ಸಿಂದ ಪ್ರಭು ೨ನೆಯ ಅಚುಗಿ ಎದುರಿಸಿದನು. ಸೇವುಣರಸ ಐದನೆಯ ಭಿಲ್ಲಮ ಮತ್ತು ಕಲ್ಯಾಣ ಚಾಲುಕ್ಯರಸ ನಾಲ್ಕನೆಯ ಸೋಮೇಶ್ವರ ನಡುವೆ ಕ್ರಿ.ಶ. ೧೧೮೬–೮೭ರಲ್ಲಿ ಕಿಸುಕಾಡು ನಾಡ ಆಕ್ರಮಣ ಯುದ್ಧ ಲಿಂಗಸೂಗೂರಿನಲ್ಲಿ ನಡೆಯಿತೆಂದು ತಿಳಿದುಬರುತ್ತದೆ. ಮಲ್ಲಟದಲ್ಲಿ ಕ್ರಿ.ಶ. ೧೧೯೦ರಲ್ಲಿ ಹೊಯ್ಸಳರಸ ಎರಡನೆಯ ಬಲ್ಲಾಳ ಹಾಗೂ ಸೇವುಣರ ಸಾಮಂತರಾಗಿದ್ದ ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರ ನಡುವೆ ಯುದ್ಧ ನಡೆಯಿತು. ಸಿರವಾರದಲ್ಲಿ ಕ್ರಿ.ಶ. ೧೧೯೬ರಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತ ಮೊರಟದ ಮಲ್ಲರಸ ಹಾಗೂ ಸೇವುಣ ಭಿಲ್ಲಮನ ದಂಡನಾಯಕ ಸಾಹಣಿ ಬ್ರಹ್ಮ ಮತ್ತು ಕೊಡೆಯ ಹಂದಿಗರಸರ ನಡುವೆ ಯುದ್ಧವಾಯಿತು. ಕೃಷ್ಣಾ ಮತ್ತು ತುಂಗಭದ್ರ ನದಿಗಳ ಸಂಗಮ ಸ್ಥಳದಲ್ಲಿ ಕ್ರಿ.ಶ. ೧೧೯೫ರಲ್ಲಿ ಸೇವುಣರ ಜೈತುಗಿ ಮತ್ತು ಕಾಕತೀಯ ಮಹಾದೇವರ ನಡುವೆ ಸಂಘರ್ಷ ನಡೆಯಿತು. ಇದು ಸೇವುಣ ಮತ್ತು ಕಾಕತೀಯರ ನಡುವಿನ ವೈರತ್ವವೇ ಈ ಯುದ್ಧಕ್ಕೆ ಕಾರಣ. ಈ ಸೇಡು ಮುಂದುವರೆದು ಕ್ರಿ.ಶ. ೧೨೯೪ರಲ್ಲಿ ಕಾಕತೀಯ ಅರಸ ಪ್ರತಾಪರುದ್ರ ರಾಯಚೂರನ್ನು ಆಕ್ರಮಣ ಮಾಡಿಕೊಳ್ಳುವುದರ ಮೂಲಕ ಸೇವುಣ ರಾಮಚಂದ್ರನ ಮೇಲಿನ ಸೇಡನ್ನು ತೀರಿಸಿಕೊಂಡನೆಂದೇ ಹೇಳಬಹುದು. ಬಹಮನಿ ರಾಜ್ಯ ಸ್ಥಾಪಕ ಅಲ್ಲಾವುದ್ದೀನ್ ಬಹಮನ್‌ಶಹನಿಂದ ರಾಯಚೂರು ಮೇಲೆ ದಾಳಿ ನಡೆಯಿತು. ಇದು ಅವನ ರಾಜ್ಯ ವಿಸ್ತರಣೆಗಾಗಿ ನಡೆಸಿದ ದಾಳಿ. ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ಸುಲ್ತಾನ ಒಂದನೆಯ ಮಹಮ್ಮದ್‌ಶಹರ ನಡುವೆ ಕ್ರಿ.ಶ. ೧೩೬೭ರಲ್ಲಿ ರಾಯಚೂರಿನಲ್ಲಿ ಯುದ್ಧ ನಡೆಯಿತು. ಮುಂದುವರೆದು ಈ ಇಬ್ಬರ ನಡುವೆ ಮತ್ತೊಮ್ಮೆ ಕ್ರಿ.ಶ. ೧೩೬೬ರಲ್ಲಿ ಮುದಗಲ್‌ನಲ್ಲಿ ಯುದ್ಧವಾಯಿತು. ಮುದಗಲ್‌ನಲ್ಲಿ ಕ್ರಿ.ಶ. ೧೪೦೬–೦೭ರಲ್ಲಿ ವಿಜಯನಗರದ ಒಂದನೆಯ ದೇವರಾಯ ಮತ್ತು ಬಹಮನಿ ಫಿರೋಜ್‌ಶಹರ ನಡುವೆ ಸ್ತ್ರೀ"ವ್ಯಾಮೋಹ"ದ ಕಾರಣದಿಂದ ಯುದ್ಧವಾಯಿತು. ಕ್ರಿ.ಶ. ೧೪೪೩ರಲ್ಲಿ ವಿಜಯನಗರದ ಎರಡನೆಯ ದೇವರಾಯನು ಪದೇ ಪದೇ ಸೋಲಲು ಕಾರಣವೇನೆಂದು ಪರಿಶೀಲಿಸಿ, ಸೈನ್ಯಕ್ಕೆ ಮುಸ್ಲಿಂ ಸೈನಿಕರನ್ನು ಸೇರಿಸಿಕೊಂಡನು. ಆ ಮೂಲಕ ಬಹಮನಿಯರನ್ನು ಎದುರಿಸಲು ಮುದಗಲ್‌ನಲ್ಲಿ ಮೂರು ಯುದ್ಧಗಳನ್ನು ಮಾಡಿದನೆಂದು ತಿಳಿದುಬರುತ್ತದೆ. ಮಾನವಿನಲ್ಲಿ ಕ್ರಿ.ಶ. ೧೪೯೨–೯೩ರಲ್ಲಿ ಬಿಜಾಪುರದ ಯುಸೂಫ್ ಆದಿಲ್‌ಶಾಹಿ ಮತ್ತು ವಿಜಯನಗರದ ನರಸನಾಯಕನ ನಡುವೆ ಯುದ್ಧ

ನಡೆದ ಬಗ್ಗೆ ತಿಳಿದುಬರುತ್ತದೆ. ಗಬ್ಬೂರು ಮತ್ತು ರಾಯಚೂರು ಕೋಟೆ ಮುತ್ತಿಗೆ ಸಂದರ್ಭದಲ್ಲಿ ನಡೆದ ಯುದ್ಧ ವಿಜಯನಗರದ ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಾಹಿಗಳ ನಡುವೆ ನಡೆಯಿತು. ಕ್ರಿ.ಶ. ೧೫೨೧ರಲ್ಲಿ ನಡೆದ ಈ ಯುದ್ಧದಲ್ಲಿ ಅಪಾರವಾದ ಜನರ ಸಾವು-ನೋವು ಉಂಟಾಯಿತು. ಕ್ರಿ.ಶ. ೧೫೨೨ರಲ್ಲಿ ನಡೆದ ಬಿಜಾಪುರ ಯುದ್ಧ, ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ, ಕ್ರಿ.ಶ. ೧೬೭೪ರಲ್ಲಿ ದೇವದುರ್ಗದ ಮೇಲೆ ಕನಕಗಿರಿ ನಾಯಕರ ದಾಳಿ, ಕ್ರಿ.ಶ. ೧೭೦೫ರ ವೀರಗೋಟ ಯುದ್ಧ, ಔರಂಗಜೇಬನಿಂದ ಕ್ರಿ.ಶ. ೧೬೯೦ರಲ್ಲಿ ರಾಯಚೂರು ಕೋಟೆ ವಶ, ಮುದಗಲ್‌ನಲ್ಲಿ ಕ್ರಿ.ಶ. ೧೭೨೭ ರಲ್ಲಿ ಮುದಗಲ್ಲಿನ ಲೊದ್ದಪ್ಪರೆಡ್ಡಿ ಮತ್ತು ಆನೆಗುಂದಿಯ ತಿರುಮಲರಾಯರ ನಡುವೆ ಯುದ್ಧವಾಯಿತು. ಕ್ರಿ.ಶ. ೧೭೯೭-೯೮ರಲ್ಲಿ ದೇವದುರ್ಗದ ಮೇಲೆ ಸುರಪುರದವರು ದಾಳಿ ಮಾಡಿರುವುದು ಕಂಡುಬರುತ್ತದೆ. ಹೀಗೆ ಹಲವು ಯುದ್ಧಗಳು ಇಲ್ಲಿನ ರಾಜಕೀಯ ಸ್ಥಿತ್ಯಂತರಕ್ಕೆ ಕಾರಣವಾದವು. ಇವು ಪ್ರತಿಷ್ಠಿತ, ಪ್ರಮುಖ ಯುದ್ಧಗಳಾಗಿ ಗುರುತಿಸಿಕೊಂಡಿದ್ದವು ಎಂದು ಹೇಳಬಹುದು.

**೩.೩.೩.೩. ಸಾರ್ವಭೌಮತ್ವ**

ಆರ್ಥಿಕತೆ ಪ್ರಧಾನ ನೆಲೆಯಾಗಿ ಗುರುತಿಸಿಕೊಂಡಿರುವ ಈ ಪ್ರದೇಶದ ಮೇಲೆ ಸಾರ್ವಭೌಮತ್ವ ಹೊಂದಲು ಅನೇಕ ರಾಜಮನೆತನಗಳು ಸೆಣಸಾಡಿರುವುದು ಕಂಡುಬರುತ್ತದೆ. ಮೌರ್ಯರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಚೋಳರು, ಕಾಕತೀಯರು, ವಿಜಯನಗರ, ಬಹಮನಿ, ಮೊಗಲರು ಮುಂತಾದವರು ಸಾರ್ವಭೌಮತ್ವ ಸಾಧಿಸಲು ಪ್ರಯತ್ನಿಸಿರುವುದು ಚರಿತ್ರೆ ಬರವಣಿಗೆಯಿಂದ ತಿಳಿದುಬರುತ್ತದೆ. ಮೌರ್ಯ ಅರಸ ಅಶೋಕನು ಇಡೀ ಭಾರತವನ್ನು ಏಕ ಆಡಳಿತ ವ್ಯವಸ್ಥೆಯಲ್ಲಿ ತಂದವನು. ತನ್ನ ಸಾರ್ವಭೌಮತ್ವವನ್ನು ದಕ್ಷಿಣ ಪ್ರಾಂತ್ಯದವರು ಒಪ್ಪಿಕೊಳ್ಳುವಂತೆ ಮಾಡಲು ಮಸ್ಕಿಯನ್ನು ತನ್ನ ದಕ್ಷಿಣದ ರಾಜಧಾನಿಯನ್ನಾಗಿ ಮಾಡಿಕೊಂಡನು. ಆ ಮೂಲಕ ಈ ಪ್ರದೇಶ ಅವನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿರುವುದು ಕಂಡುಬರುತ್ತದೆ. ಈ ಪ್ರದೇಶದ ಮೇಲೆ ಸಾರ್ವಭೌಮತ್ವವನ್ನು ಸಾಧಿಸಿದ್ಧ ಪಲ್ಲವರನ್ನು ವಿರೋಧಿಸಿ ತನ್ನ ಸಾರ್ವಭೌಮತ್ವವನ್ನು ಸಾಧಿಸಲು ಬಾದಾಮಿ ಚಾಲುಕ್ಯ ಅರಸ ಇಮ್ಮಡಿ ಪುಲಿಕೇಶಿ ಪಲ್ಲವರ ರಾಜಧಾನಿ ಕೇಂದ್ರದ ಸಮೀಪವಿರುವ ಪಲ್ಲಲೂರಿನಲ್ಲಿ ಯುದ್ಧ ಮಾಡಿ ಗೆದ್ದು, ರಾಯಚೂರು ದೋ-ಅಬ್‌ನ ಮೇಲೆ ಸಾರ್ವಭೌಮತ್ವ ಸಾಧಿಸಿದನೆಂದು ತಿಳಿದುಬರುತ್ತದೆ. ಇದೇ ರೀತಿಯಲ್ಲಿ ರಾಷ್ಟ್ರಕೂಟರ ಕಾಲಾವಧಿಯಲ್ಲಿ ಮೂರನೆಯ ಗೋವಿಂದನನ್ನು ಎದುರಿಸಲಾಗದೆ ದಕ್ಷಿಣದ ಪಲ್ಲವ, ಪಾಂಡ್ಯ, ಕೇರಳ ಮತ್ತು ಗಂಗರನ್ನೊಳಗೊಂಡ ಈ ಸಂಯುಕ್ತ ಒಕ್ಕೂಟ ಮೂರನೆಯ ಗೋವಿಂದನ ಮೇಲೆ ಎರಗಿದವು. ಇದನ್ನು ತೀಕ್ಷ್ಣವಾಗಿ ಹತ್ತಿಕ್ಕಿದ ಗೋವಿಂದ ಈ ಪ್ರದೇಶದ ಮೇಲೆ ಸಾರ್ವಭೌಮತ್ವವನ್ನು ಸಾಧಿಸುವಲ್ಲಿ ಯಶಸ್ವಿಯಾದನೆಂದು ತಿಳಿದುಬರುತ್ತದೆ.

ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹ ಮತ್ತು ಚೋಳರಸ ರಾಜೇಂದ್ರಚೋಳರು ಈ ಪ್ರದೇಶದ ಮೇಲೆ ಸಾರ್ವಭೌಮತ್ವ ಸಾಧಿಸಲು ಹೋರಾಡಿದರು. ಇಂತಹ ಸಂದರ್ಭಗಳನ್ನು ಎದುರಿಸಲೆಂದೇ ಕಲ್ಯಾಣ ಚಾಲುಕ್ಯರು ಮಸ್ಕಿಯನ್ನು ರಾಜಧಾನಿ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಕ್ರಿ.ಶ. ೧೦೧೫-೧೯ರ ಕಾಲಾವಧಿಯಲ್ಲಿ ಮಸ್ಕಿಯಲ್ಲಿ ಯುದ್ಧ ನಡೆದ ಸಂದರ್ಭದಲ್ಲಿ ಚೋಳರನ್ನು

ಎದುರಿಸಿ ಗೆಲವು ಸಾಧಿಸಲಾಯಿತು. ಇದರ ಸೇಡನ್ನು ತೀರಿಸಿಕೊಳ್ಳಲು, ಈ ಪ್ರದೇಶದ ಮೇಲೆ ಸಾರ್ವಭೌಮತ್ವವನ್ನು ಹೊಂದಲು ಕ್ರಿ.ಶ. ೧೦೬೮–೬೯ರಲ್ಲಿ ಕರಡಿಕಲ್‌ನಲ್ಲಿ ಯುದ್ಧವಾಯಿತು. ಈ ಯುದ್ಧದಲ್ಲಿ ಕಲ್ಯಾಣಚಾಲುಕ್ಯ ಎರಡನೆಯ ಸೋಮೇಶ್ವರನು ಬಲಿಷ್ಠನಾಗಿದ್ದನು. ಇವನ ವಿರುದ್ಧ ತಮ್ಮನಾದ ಆರನೆಯ ವಿಕ್ರಮಾದಿತ್ಯನು ಅಧಿಕಾರಕ್ಕಾಗಿ ಹೋರಾಡಿದನು. ಈ ಸಂದರ್ಭವನ್ನು ಬಳಸಿಕೊಂಡು ಆರನೆಯ ವಿಕ್ರಮಾದಿತ್ಯನಿಗೆ ಚೋಳರಸ ವೀರರಾಜೇಂದ್ರನು ತನ್ನ ಮಗಳನ್ನು ಕೊಟ್ಟು ವೈವಾಹಿಕ ಸಂಬಂಧವನ್ನು ಬೆಳೆಸಿದನು. ಈ ಮೂಲಕ ಈ ಪ್ರದೇಶದ ಮೇಲೆ ಸಾರ್ವಭೌಮತ್ವ ಸಾಧಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೩೧–೩೪ ರಲ್ಲಿ ಕಲ್ಯಾಣ ಚಾಲುಕ್ಯರಸ ಆರನೆಯ ವಿಕ್ರಮಾದಿತ್ಯನ ಸಾರ್ವಭೌಮತ್ವವನ್ನು ಧಿಕ್ಕರಿಸಿ ತಾನೂ ಸಹ ಸಾರ್ವಭೌಮನಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಹೊಯ್ಸಳರಸ ವಿಷ್ಣುವರ್ಧನನು ರಾಯಚೂರು ಮೇಲೆ ದಾಳಿ ಮಾಡಿ ಕೆಲಕಾಲ ತನ್ನ ವಶದಲ್ಲಿಟ್ಟುಕೊಂಡಿದ್ದನೆಂದು ತಿಳಿದುಬರುತ್ತದೆ. ಈ ಸಂಗತಿಯನ್ನು ತಿಳಿದ ಆರನೆಯ ವಿಕ್ರಮಾದಿತ್ಯ ತನ್ನ ಸಾಮಂತ ಸಿಂದ ಮನೆತನದ ಎರಡನೆಯ ಅಚುಗಿಯ ಮೂಲಕ ಮರುವಶಪಡಿಸಿ ಕೊಳ್ಳುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ವಿಷ್ಣುವರ್ಧನನ ನಂತರ ಸಾರ್ವಭೌಮತ್ವ ಸಾಧಿಸಲು ಹೊಯ್ಸಳರ ಎರಡನೆಯ ಬಲ್ಲಾಳನು ರಾಯಚೂರು ದೋ–ಅಬ್‌ನ ಮೇಲೆ ಕ್ರಿ.ಶ. ೧೧೯೦ರಲ್ಲಿ ದಾಳಿ ಮಾಡಿದನು. ಇವನ ವಿರುದ್ಧ ಮಲ್ಲಟದಲ್ಲಿ ಯುದ್ಧವಾಯಿತು. ಇದರಲ್ಲಿ ಸೇವುಣರ ಸಾಮಂತರಾದ ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರು ಎರಡನೆಯ ಬಲ್ಲಾಳನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳದೆ ಈ ಯುದ್ಧದಲ್ಲಿ ಭಾಗವಹಿಸಿದ್ದರೆಂದು ತಿಳಿದುಬರುತ್ತದೆ.

ಕಾಕತೀಯರಿಂದ ಕ್ರಿ.ಶ. ೧೨೯೪ರಲ್ಲಿ ರಾಯಚೂರು ಆಕ್ರಮಣ ನಡೆಯಿತು. ಸೇವುಣ ಮತ್ತು ಕಾಕತೀಯರ ನಡುವಿನ ಸಾರ್ವಭೌಮತ್ವದ ಪ್ರಶ್ನೆಯ ಹಿನ್ನೆಲೆಯಲ್ಲಿ ನಡೆದ ಘಟನೆ ಇದಾಗಿದೆ. ವಿಜಯನಗರದ ಕಾಲಾವಧಿಯಲ್ಲಿ ಈ ಪ್ರದೇಶದ ಮೇಲೆ ಸಾರ್ವಭೌಮತ್ವವನ್ನು ಸಾಧಿಸಲು ದೊಡ್ಡ ಪ್ರಮಾಣದಲ್ಲಿ ಎರಡು ಯುದ್ಧಗಳು ನಡೆದವು. ಕ್ರಿ.ಶ. ೧೫೨೧ರಲ್ಲಿ ಗಬ್ಬೂರು ಮತ್ತು ರಾಯಚೂರು ಕೋಟೆ ಮುತ್ತಿಗೆ ಹಾಗೂ ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ. ಇವು ವಿಜಯನಗರ ಹಾಗೂ ಬಹಮನಿ ಮತ್ತು ಆದಿಲ್‌ಶಾಹಿಗಳ ಸಾರ್ವಭೌಮತ್ವದ ಹಿನ್ನೆಲೆಯಲ್ಲಿ ನಡೆದ ಯುದ್ಧಗಳಾಗಿವೆ. ಅಲ್ಲದೆ ೧೫೨೧ರಲ್ಲಿ ಸಾರ್ವಭೌಮತ್ವವನ್ನು ಧಿಕ್ಕರಿಸಿದ ಕಾರಣಕ್ಕೆ ಕ್ರಿ.ಶ. ೧೫೨೨ರಲ್ಲಿ ಬಿಜಾಪುರ ಮೇಲೆ ದಾಳಿ ಮಾಡಲಾಯಿತು. ಕ್ರಿ.ಶ. ೧೬೯೦ರಲ್ಲಿ ದೆಹಲಿ ಸುಲ್ತಾನನಾದ ಔರಂಗಜೇಬ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡು ತನ್ನ ಸಾರ್ವಭೌಮತ್ವವನ್ನು ಈ ಪ್ರದೇಶದಲ್ಲಿ ಹೊಂದಿದವನಾಗಿದ್ದನು. ಹೀಗೆ ಈ ಪ್ರದೇಶದ ಮೇಲೆ ಸಾರ್ವಭೌಮತ್ವಕ್ಕಾಗಿ ಹೋರಾಟಗಳು ನಡೆದವು. ಈ ಸಮಯದಲ್ಲಿ ವೈವಾಹಿಕ ಸಂಬಂಧಗಳ ಮೂಲಕ ಸಾರ್ವಭೌಮರಾಗಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

### ೩.೩.೩.೪. ಆಕ್ರಮಣಕಾರ ನೀತಿ

ಈ ಪ್ರದೇಶದಲ್ಲಿ ನಡೆದ ಯುದ್ಧಗಳು ಆಕ್ರಮಣಕಾರಿ ಸ್ವರೂಪದಿಂದ ಕೂಡಿದ್ದವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಈ ಪ್ರದೇಶವನ್ನು ತಮ್ಮ ಅಧೀನವಾಗಿಸಿಕೊಳ್ಳಲು ಅನುಸರಿಸಿದ ನೀತಿ ಇದಾಗಿದೆ. ಇಲ್ಲಿ ಯುದ್ಧಗಳನ್ನು ಉಲ್ಲೇಖ ಮಾಡಲು ಪ್ರಯತ್ನಿಸಲಾಗಿದೆ. ಈಗಾಗಲೇ ಹಿಂದಿನ ಸಂದರ್ಭದಲ್ಲಿ ಇವುಗಳ ವಿವರ ನೀಡಲಾಗಿದೆ. ಅದೇ ಯುದ್ಧಗಳು ವಿವಿಧ ಸ್ವರೂಪವನ್ನು ಹೊಂದಿರುವ

ಕಾರಣಕ್ಕಾಗಿ ಅವನ್ನು ಮತ್ತೆ ವಿವರಿಸುವ ಅಗತ್ಯವಿಲ್ಲ. ರಾಷ್ಟ್ರಕೂಟ ಅರಸ ಮೂರನೆಯ ಗೋವಿಂದನ ವಿರುದ್ಧ ಕ್ರಿ.ಶ. ೮೦೨ರಲ್ಲಿ ದಕ್ಷಿಣ ಒಕ್ಕೂಟ ದಿಢೀರನೆ ದಾಳಿ ಮಾಡಿತು. ಅಲ್ಲದೆ ಮಸ್ಕಿ ಯುದ್ಧ ಕ್ರಿ.ಶ. ೧೦೧೫-೧೯ರಲ್ಲಿ ನಡೆದರೆ, ಕೊಪ್ಪರ ಯುದ್ಧ ಕ್ರಿ.ಶ. ೧೦೫೪ರಲ್ಲಿ ನಡೆಯಿತು. ಕಲ್ಯಾಣ ಚಾಲುಕ್ಯರು ಮತ್ತು ಚೋಳರ ನಡುವೆ ಕ್ರಿ.ಶ. ೧೦೫೮ರಲ್ಲಿ ಚಂದನಕೇರಿ ಮತ್ತು ಕಂಚಿ ಯುದ್ಧ ನಡೆಯಿತು. ರಾಚನೂರು ಯುದ್ಧ ಕ್ರಿ.ಶ. ೧೧೩೧-೩೫ರಲ್ಲಿ ಹೊಯ್ಸಳ ವಿಷ್ಣುವರ್ಧನ ಮತ್ತು ಕಲ್ಯಾಣ ಚಾಲುಕ್ಯರ ನಡುವೆ ನಡೆಯಿತು. ಕಿಸುಕಾಡುನಾಡು ಎಂದು ಗುರುತಿಸಿಕೊಂಡಿದ್ದ ಲಿಂಗಸೂಗೂರಿನಲ್ಲಿ ಕ್ರಿ.ಶ. ೧೧೮೬-೮೭ರಲ್ಲಿ ೫ನೆಯ ಭಿಲ್ಲಮ ಮತ್ತು ಒಂದನೆಯ ಸೋಮೇಶ್ವರರ ನಡುವೆ ಯುದ್ಧ ಜರುಗಿತು. ಮಲ್ಲಟ ಯುದ್ಧ ಕ್ರಿ.ಶ. ೧೧೯೦ರಲ್ಲಿ ನಡೆದರೆ, ಕೂಡಲಸಂಗಮ ಯುದ್ಧ ಕ್ರಿ.ಶ. ೧೧೯೫ರಲ್ಲಿ ಜರುಗಿತು. ಸಿರವಾರ ಯುದ್ಧ ಕ್ರಿ.ಶ. ೧೧೯೬ರಲ್ಲಿ ಸಾಮಂತರ ನಡುವೆ ನಡೆದ ಯುದ್ಧವಾಗಿದೆ. ರಾಯಚೂರು ಆಕ್ರಮಣ ಕ್ರಿ.ಶ. ೧೨೯೪ರಲ್ಲಾಯಿತು. ರಾಯಚೂರು ಮೇಲೆ ಕ್ರಿ.ಶ. ೧೩೫೦ರಲ್ಲಿ ಬಹಮನಿ ಸುಲ್ತಾನ ಅಲ್ಲಾವುದ್ದೀನ್ ಬಹಮನಿಶಹ ದಾಳಿ ಮಾಡಿದ. ಮುದಗಲ್‌ನಲ್ಲಿ ನಡೆದ ಕ್ರಿ.ಶ. ೧೩೬೬ರ ಯುದ್ಧ, ಆದೋನಿ ಯುದ್ಧ, ೧. ಕ್ರಿ.ಶ. ೧೩೬೬-೬೭, ಆದೋನಿ ಯುದ್ಧ ೨. ಕ್ರಿ.ಶ. ೧೩೭೫-೭೬ರಲ್ಲಿ ನಡೆದಿರುವುದಾಗಿ ತಿಳಿದುಬರುತ್ತದೆ. ಭಾನೂರು ಮತ್ತು ಮಸರಕಲ್ ಯುದ್ಧ ಕ್ರಿ.ಶ. ೧೩೯೮ರಲ್ಲಿ ನಡೆಯಿತು. ಮುದಗಲ್ ಮತ್ತು ಮಾನ್ವಿಯಲ್ಲಿ ೧೪೦೬-೦೭ ಯುದ್ಧಗಳು ನಡೆದಿರುವುದು ಕಂಡುಬರುತ್ತದೆ. ೧೪೩೫ರ ಮುದಗಲ್ ಯುದ್ಧ, ೧೫೦೩-೦೯ರ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ ನಡೆಯಿತು. ರಾಯಚೂರು ಮೇಲೆ ಕ್ರಿ.ಶ. ೧೫೧೨, ೧೫೧೫, ೧೫೧೬-೧೯, ೧೫೨೧, ೧೫೩೦, ೧೫೬೫, ೧೬೭೦-೮೩, ೧೬೬೫-೬೬ ಮತ್ತು ೧೬೯೦ರಲ್ಲಿ ವಿಜಯನಗರ, ಬಿಜಾಪುರ ಆದಿಲಶಾಹಿಗಳು ಮತ್ತು ಮೊಗಲರು ದಾಳಿ ಮಾಡಿರುವುದು ಕಂಡುಬರುತ್ತದೆ. ಸಿಂಧನೂರಿನ ಮೇಲೆ ಕ್ರಿ.ಶ. ೧೬೩೮-೩೯ರಲ್ಲಿ ದಾಳಿ ಮಾಡಲಾಯಿತು. ಈ ದಾಳಿಯಲ್ಲಿ ಸಿದ್ದಿ ಅಂಬರ ಮತ್ತು ಅಫಜಲಖಾನರು ಪರಸ್ಪರ ಹೋರಾಡಿದರು. ಕ್ರಿ.ಶ. ೧೫೪೩ರಲ್ಲಿ ಆದೋನಿ ಯುದ್ಧ ನಡೆಯಿತು. ೧೬೪೭ರಲ್ಲಿ ದೇವದುರ್ಗದ ವಶ, ರಾಯಚೂರು ಪ್ರದೇಶದಲ್ಲಿ ರಾಜ್ಯವ್ಯವಸ್ಥೆಯ ಭದ್ರತೆಗಾಗಿ ಕ್ರಿ.ಶ. ೧೬೬೫-೬೬ರಲ್ಲಿ ರಾಯಚೂರಿನಲ್ಲಿ ಯುದ್ಧವಾಯಿತು. ಕ್ರಿ.ಶ. ೧೬೮೨-೮೪ರ ಕಾಲಾವಧಿಯಲ್ಲಿ ಅಜೀಜ ಅಂಬರಖಾನ ಮತ್ತು ಮಾಸೂದಖಾನರ ನಡುವೆ ಸಿಂಧನೂರಿನಲ್ಲಿ ಕದನ ನಡೆಯಿತು. ದೇವದುರ್ಗದ ಮೇಲೆ ಕ್ರಿ.ಶ. ೧೬೭೪ರಲ್ಲಿ ಕನಕಗಿರಿ ನಾಯಕರು ಮಾಡಿದ ದಾಳಿ, ವೀರಗೋಟದಲ್ಲಿ ಕ್ರಿ.ಶ. ೧೭೦೫ರಲ್ಲಿ ಸುರಪುರ ಮತ್ತು ದೇವದುರ್ಗದ ಸಂಸ್ಥಾನಿಕರು ಎದುರುಗೊಂಡಿದ್ದು, ಕ್ಯಾದಿಗ್ಗೇರಿಯ ಮೇಲೆ ದೇವದುರ್ಗದ ಕಿಲಚನಾಯಕನು ಮಾಡಿದ ಕ್ರಿ.ಶ. ೧೭೨೭ರ ದಾಳಿ, ಮುದಗಲ್‌ನ ಮೇಲೆ ಕ್ರಿ.ಶ. ೧೭೨೦ರಲ್ಲಿ ಆನೆಗೊಂದಿಯ ಸಂಸ್ಥಾನಿಕರ ದಾಳಿ, ಗುಡಗುಂಟಿಯ ಮೇಲೆ ಸುರಪುರದವರು ಕ್ರಿ.ಶ. ೧೭೯ರಲ್ಲಿ ಮಾಡಿದ ದಾಳಿ, ಈ ಪ್ರದೇಶದ ಸಮಕಾಲೀನ ಸಂಸ್ಥಾನಗಳ ಮೇಲೆ ಸುರಪುರದವರು ಕ್ರಿ.ಶ. ೧೭೯೭ರಲ್ಲಿ ಮಾಡಿದ ದಾಳಿ, ದೇವದುರ್ಗದ ಮೇಲೆ ಕ್ರಿ.ಶ. ೧೭೯೭-೯೮ರಲ್ಲಿ ಸುರಪುರ ಮಾಡಿದ ದಾಳಿ ಹಾಗೂ ಕ್ರಿ.ಶ. ೧೮೪೦ರಲ್ಲಿ ದೇವದುರ್ಗದ ಮೇಲೆ ಸುರಪುರದ ರಾಜಾಕೃಷ್ಣಪ್ಪನಾಯಕನ ಮಲ ತಮ್ಮ ಹನುಮಪ್ಪನಾಯಕ ತನಗೆ ಅಧಿಕಾರ ಸಿಗಲಿಲ್ಲವೆಂಬ ಕಾರಣಕ್ಕಾಗಿ ದಾಳಿ ಮಾಡಿರುವುದು ಕಂಡುಬರುತ್ತದೆ. ಈ ಎಲ್ಲ ದಾಳಿಗಳು ಆಕ್ರಮಣಕಾರಿ ಸ್ವರೂಪವನ್ನು ಹೊಂದಿದ್ದವೆಂದು ತಿಳಿದುಬರುತ್ತದೆ.

### ೩.೩.೩.೫. ಕೋಟೆ ಕೊತ್ತಲುಗಳು

ಈ ಪ್ರದೇಶದಲ್ಲಿರುವ ರಾಯಚೂರು, ಮುದಗಲ್, ಮಾನ್ವಿ ಮುಂತಾದ ಕೋಟೆಗಳನ್ನು ವಶಪಡಿಸಿಕೊಳ್ಳುವ ಹಿನ್ನೆಲೆಯಲ್ಲಿ ಅನೇಕ ಯುದ್ಧಗಳು ನಡೆದಿವೆ. ಹೊಯ್ಸಳರಸ ವಿಷ್ಣುವರ್ಧನನಿಂದ ಕ್ರಿ.ಶ. ೧೧೩೧-೩೫ರಲ್ಲಿ ರಾಚನೂರು ಯುದ್ಧವಾಯಿತು. ಇದು ರಾಯಚೂರು ಕೋಟೆಗಾಗಿ ನಡೆಯಿತು. ಕಾಕತೀಯ ಪ್ರತಾಪರುದ್ರನು ಕ್ರಿ.ಶ. ೧೨೯೪ರಲ್ಲಿ ರಾಯಚೂರು ವಶಪಡಿಸಿಕೊಂಡನು. ಮುದಗಲ್‌ನಲ್ಲಿ ಕ್ರಿ.ಶ. ೧೩೬೬ರಲ್ಲಿ ನಡೆದ ಯುದ್ಧ, ಬುಕ್ಕನಿಂದ ಕ್ರಿ.ಶ. ೧೩೭೮ರಲ್ಲಿ ನಡೆದ ಯುದ್ಧ, ಕ್ರಿ.ಶ. ೧೪೦೬-೦೭ರಲ್ಲಿ ನಡೆದ ಮಾನವಿ ಯುದ್ಧ, ಕ್ರಿ.ಶ. ೧೪೯೦-೯೧ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ನಡೆದ ಯುದ್ಧ, ೧೪೯೨-೯೩ರಲ್ಲಿ ಮಾನವಿಯಲ್ಲಿ ನಡೆದ ಯುದ್ಧ, ಕ್ರಿ.ಶ. ೧೫೦೩-೦೯ರಲ್ಲಿ ನಡೆದ ರಾಯಚೂರು ಮತ್ತು ಮುದಗಲ್ ಕೋಟೆಯಲ್ಲಿನ ಯುದ್ಧಗಳು ಈ ಪ್ರದೇಶದ ಮೇಲೆ ಅಧಿಕಾರವನ್ನು ಸ್ಥಾಪಿಸಬೇಕೆಂದು ನಡೆದ ಯುದ್ಧಗಳಾಗಿವೆ. ಆರ್ಥಿಕವಾಗಿ ಬಲಿಷ್ಠವಾಗಿದ್ದ ರಾಯಚೂರು ಕೋಟೆಯ ಮೇಲೆ ಕ್ರಿ.ಶ. ೧೫೧೨, ಕ್ರಿ.ಶ. ೧೫೧೩-೧೫, ೧೫೧೫ ಮತ್ತು ೧೫೧೬-೧೯ರಲ್ಲಿ ನಡೆದ ಯುದ್ಧಗಳು ವಿಜಯನಗರ ಮತ್ತು ಬಿಜಾಪುರ ಆದಿಲಶಾಹಿಗಳ ನಡುವಿನ ವೈರತ್ವದ ಹಿನ್ನೆಲೆಯಲ್ಲಿ ನಡೆದ ಯುದ್ಧಗಳಾಗಿವೆ.

ಕ್ರಿ.ಶ. ೧೫೨೧ರಲ್ಲಿ ರಾಯಚೂರು ಕೋಟೆಯನ್ನು ವಿಜಯನಗರದ ಅರಸ ಕೃಷ್ಣದೇವರಾಯ ಮುತ್ತಿಗೆ ಹಾಕಿದನು. ಈ ಸಂದರ್ಭದಲ್ಲಿ ಪೋರ್ಚುಗೀಸರ ಸೈನಿಕರನ್ನು ಬಳಸಿ ರಾಯಚೂರು ಕೋಟೆಯನ್ನು ಬಂದೂಕು, ಫಿರಂಗಿ, ಮದ್ದು, ಗುಂಡುಗಳ ಮೂಲಕ ಹೊಡೆದು ಕೆಡವಿದ ಬಗ್ಗೆ ತಿಳಿದುಬರುತ್ತದೆ. ಕ್ರಿ.ಶ. ೧೫೩೦ರಲ್ಲಿ ಪುನಃ ರಾಯಚೂರು ಮತ್ತು ಮುದಗಲ್ ಕೋಟೆಗಳಲ್ಲಿ ಯುದ್ಧ ನಡೆದಿರುವುದು ಕಂಡುಬರುತ್ತದೆ. ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ ನಿರ್ಣಾಯಕ ಯುದ್ಧವಾಗಿದೆ. ಇದು ವಿಜಯನಗರದ ಸೋಲಿಗೆ ಕಾರಣವೂ ಆಯಿತು. ಕ್ರಿ.ಶ. ೧೬೯೦ರಲ್ಲಿ ದೆಹಲಿ ಸುಲ್ತಾನ ಔರಂಗಜೇಬನೂ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡಿರುವುದು ತಿಳಿದುಬರುತ್ತದೆ. ಬಹುತೇಕವಾಗಿ ಈ ಪ್ರದೇಶದಲ್ಲಿ ಪ್ರಮುಖವಾಗಿದ್ದ ರಾಯಚೂರು, ಮಾನ್ವಿ, ಮುದಗಲ್ ಕೋಟೆಗಳನ್ನು ವಶಪಡಿಸಿಕೊಳ್ಳಲು ವಿಜಯನಗರ ಹಾಗೂ ಬಹಮನಿ ಮತ್ತು ಆದಿಲಶಾಹಿಗಳ ನಡುವೆ ಹೆಚ್ಚು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ.

### ೩.೩.೩.೬. ಭದ್ರತೆ

ಪ್ರತಿಯೊಂದು ಅರಸುಮನೆತನ ತನ್ನ ಸುತ್ತಮುತ್ತಲಿನ ಅಧೀನ ಪ್ರದೇಶದಲ್ಲಿ ಭದ್ರತೆಯನ್ನು ಮಾಡಿಕೊಳ್ಳುವುದು ಅಗತ್ಯವಿತ್ತು. ರಾಜಕೀಯ ಭದ್ರತೆಯ ಜೊತೆಗೆ ಆರ್ಥಿಕ ಭದ್ರತೆಯೂ ಕೂಡಾ ಮುಖ್ಯವಾಗಿತ್ತು. ಆರ್ಥಿಕವಾಗಿ ಪ್ರಧಾನವಾಗಿ ಗುರುತಿಸಿಕೊಂಡಿದ್ದ ರಾಯಚೂರು ದೋ-ಅಬ್ ಪ್ರದೇಶವನ್ನು ತಮ್ಮ ಆಧೀನದಲ್ಲಿಟ್ಟುಕೊಳ್ಳಬೇಕೆಂದು ಅನೇಕ ಯುದ್ಧಗಳು ನಡೆದಿವೆ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ನಡೆದ ಎಲ್ಲ ಯುದ್ಧಗಳು ಭದ್ರತೆಗಾಗಿ ನಡೆದಿರುವುದನ್ನು ಗಮನಿಸಬಹುದು.

### ೩.೩.೩.೭. ಗಡಿಸ್ಥಾಪನೆ

ರಾಜ್ಯ ಭದ್ರವಾಗಿರಬೇಕಿದ್ದರೆ ಗಡಿಸ್ಥಾಪನೆ ಕೂಡ ಅಷ್ಟೆ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಆಯಕಟ್ಟಿನ ಸ್ಥಳಗಳನ್ನು ಆಧೀನಕ್ಕೊಳಪಡಿಸಿಕೊಂಡು ಅಭದ್ರತೆ ಕಾಡದಂತೆ ನೋಡಿಕೊಳ್ಳಬೇಕು.

ಅದಕ್ಕಾಗಿ ಗಡಿಯನ್ನು ಮೊದಲು ಸ್ಥಾಪನೆ ಮಾಡುವ ಕ್ರಮ ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶ ಕೆಲವು ಅರಸುಮನೆತನಗಳಿಗೆ ಕೃಷ್ಣಾ ಗಡಿಯಾಗಿದ್ದರೆ, ಇನ್ನೂ ಕೆಲವರಿಗೆ ತುಂಗಭದ್ರ ಗಡಿಯಾಗಿತ್ತು. ಈ ಪ್ರದೇಶದ ಉತ್ತರಕ್ಕಿರುವ ಅರಸು ಮನೆತನಗಳು ಕೃಷ್ಣಾ ನದಿಯನ್ನು ಸೇರಿಸಿಕೊಂಡು ತುಂಗಭದ್ರ ನದಿಯನ್ನು ಗಡಿಯನ್ನಾಗಿ ಮಾಡಿಕೊಳ್ಳಬೇಕೆಂದು ಬಯಸಿದರೆ ಮತ್ತೆ ಕೆಲವರು ಅಂದರೆ ತುಂಗಭದ್ರದಿಂದ ದಕ್ಷಿಣಕ್ಕಿರುವವರು ತುಂಗಭದ್ರವನ್ನು ಸೇರಿಸಿಕೊಂಡು ಕೃಷ್ಣಾ ನದಿಯವರೆಗೆ ಗಡಿಯನ್ನು ಸ್ಥಾಪಿಸಬೇಕೆಂಬ ಆಕಾಂಕ್ಷೆಯನ್ನು ಹೊಂದಿದ್ದವು. ಕರ್ನಾಟಕವನ್ನು ತುಂಗಭದ್ರ ನದಿಯ ಆಧಾರದ ಮೇಲೆ ಉತ್ತರ-ದಕ್ಷಿಣ ಎಂದು ವಿಂಗಡಿಸಿರುವುದನ್ನು ಗಮನಿಸಬಹುದು. ಗಡಿ ಸ್ಥಾಪನೆ ಮಾಡಬೇಕೆಂದು ನಡೆದ ಪ್ರಯತ್ನದ ಹಿನ್ನೆಲೆಯಲ್ಲಿ ಯುದ್ಧಗಳು ನಡೆದವು.

ಮೌರ್ಯ ಅರಸ ಅಶೋಕ ಇಡೀ ಭಾರತವನ್ನು ಏಕ ಆಡಳಿತವ್ಯವಸ್ಥೆಗೆ ತಂದಾಗ ನಾಲ್ಕು ಪ್ರಾಂತ್ಯಗಳನ್ನು ರಚಿಸಿದನು. ಅವುಗಳಲ್ಲಿ ದಕ್ಷಿಣ ಪ್ರಾಂತ್ಯ ಸುವರ್ಣಗಿರಿಯೂ ಒಂದು. ಮಸ್ಕಿ ಗಡಿಯಲ್ಲದಿದ್ದರೂ, ಗಡಿಗಳ ರಕ್ಷಣೆಗೆ ಸಲಹೆ ಸೂಚನೆಗಳನ್ನು ನೀಡುವ ಕೇಂದ್ರವಾಗಿತ್ತು. ಬ್ರಹ್ಮಗಿರಿ ದಕ್ಷಿಣದ ಗಡಿಯಾಗಿತ್ತು. ಬಾದಾಮಿ ಚಾಲುಕ್ಯ ಅರಸ ಎರಡನೆಯ ಪುಲಕೇಶಿ ತನ್ನ ಗಡಿಯೊಳಗೆ ಪಲ್ಲವರು ಸ್ಥಾಪಿಸಿದ ಗಡಿಯನ್ನು ಮರು ಪಡೆಯಲು ಪಲ್ಲಲೂರುನಲ್ಲಿ ಪಲ್ಲವರೊಂದಿಗೆ ಗಡಿಸ್ಥಾಪನೆಗಾಗಿ ಯುದ್ಧ ಮಾಡಿದನು. ರಾಷ್ಟ್ರಕೂಟರ ಕಾಲದಲ್ಲಿ ಈ ಪ್ರದೇಶ ಗಡಿಯಾಗಿರಲಿಲ್ಲ. ಆದರೆ ಈ ದೋ-ಅಬ್‌ನ್ನು ದಕ್ಷಿಣದ ಒಕ್ಕೂಟ ತನ್ನ ಗಡಿಯನ್ನಾಗಿ ಸ್ಥಾಪಿಸಲು ಪ್ರಯತ್ನಿಸಿತು. ಆದರೆ ಇದಕ್ಕೆ ಅವಕಾಶ ಕೊಡದ ಮೂರನೆಯ ಗೋವಿಂದ ಆ ಒಕ್ಕೂಟವನ್ನು ಕ್ರಿ.ಶ. ೮೦೨ರಲ್ಲಿ ಸೋಲಿಸಿ ರಾಜ್ಯದ ಭದ್ರತೆಯನ್ನು ಕಾಪಾಡಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರು ಮತ್ತು ಚೋಳರ ನಡುವೆ ಈ ಪ್ರದೇಶವನ್ನು ತಮ್ಮ ಗಡಿಯೊಳಗೆ ಸೇರಿಸಿಕೊಳ್ಳಬೇಕೆಂದು ಕ್ರಿ.ಶ. ೯೯೭-೧೦೦೮ರಲ್ಲಿ ನಡೆದ ಲಿಂಗಸೂಗೂರು ಯುದ್ಧ, ಕ್ರಿ.ಶ. ೧೦೧೪-೧೫೯೯ರ ಮಸ್ಕಿ ಯುದ್ಧ ಮತ್ತು ಕೊಪ್ಪರದಲ್ಲಿ ಕ್ರಿ.ಶ. ೧೦೫೪ರಲ್ಲಿ ನಡೆದ ಯುದ್ಧಗಳು ಕೃಷ್ಣಾನದಿಯನ್ನು ಗಡಿಯನ್ನಾಗಿಸಬೇಕೆಂದು ನಡೆದ ಯುದ್ಧಗಳಾಗಿವೆ. ಇವರಂತೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೊಯ್ಸಳರಸ ವಿಷ್ಣುವರ್ಧನನು ಕೃಷ್ಣಾನದಿಯನ್ನು ಗಡಿಯನ್ನಾಗಿ ಮಾಡಿಕೊಳ್ಳಲು ಮಾಡಿದ ರಾಚನೂರು ಯುದ್ಧ ಕ್ರಿ.ಶ. ೧೧೩೧-೩೫ರಲ್ಲಿ ನಡೆಯಿತು. ಹಾಗೆಯೇ ಸೇವುಣರ ಕಾಲಾವಧಿಯಲ್ಲಿ ಹೊಯ್ಸಳರಸ ಎರಡನೆಯ ಬಲ್ಲಾಳನು ಸಹ ಈ ಪ್ರದೇಶದ ಮೇಲೆ ಕ್ರಿ.ಶ. ೧೯೯೦ರಲ್ಲಿ ದಾಳಿ ಮಾಡಿದನು. ಇದಕ್ಕೆ ಪ್ರತಿಭಟನೆ ತೋರಿದ ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರು ಗಡಿಸ್ಥಾಪನೆಗೆ ಅವಕಾಶ ಕೊಡದಿರುವುದು ಕಂಡುಬರುತ್ತದೆ. ಕ್ರಿ.ಶ. ೧೩೫೬-೭೭ರ ಕಾಲಾವಧಿಯಲ್ಲಿ ವಿಜಯನಗರದ ರಾಜ ಒಂದನೆಯ ಬುಕ್ಕ ಕೃಷ್ಣಾ ನದಿಯನ್ನು ಗಡಿಯನ್ನಾಗಿಸಿ ಕೊಳ್ಳಲು ಕ್ರಿ.ಶ. ೧೩೬೭ರಲ್ಲಿ ಯುದ್ಧ ಮಾಡಿದ. ಈ ಯುದ್ಧ ಬಹಮನಿ ಒಂದನೆಯ ಮಹಮ್ಮದ್‌ಶಹ ನೊಂದಿಗೆ ನಡೆಯಿತು. ಸಾಳುವ ನರಸಿಂಹ ಅಧಿಕಾರದಲ್ಲಿದ್ದಾಗ ಬಹಮನಿ ಸುಲ್ತಾನರು ಯುದ್ಧಕ್ಕೆ ನಿಂತಾಗ ಅದನ್ನು ಸವಾಲಾಗಿ ಸ್ವೀಕರಿಸಿ ಗಡಿಸ್ಥಾಪನೆಗಾಗಿ ಕ್ರಿ.ಶ. ೧೪೮೪-೯೦ರಲ್ಲಿ ಹೋರಾಡಿದ ಬಗ್ಗೆ ತಿಳಿದುಬರುತ್ತದೆ. ಕೃಷ್ಣದೇವರಾಯನ ಕ್ರಿ.ಶ. ೧೫೧೨ರ ರಾಯಚೂರು ಯುದ್ಧ, ಕ್ರಿ.ಶ. ೧೫೨೧ರ ಗಬ್ಬೂರು ಮತ್ತು ರಾಯಚೂರು ಕೋಟೆ ಮುತ್ತಿಗೆ ಮತ್ತು ಕ್ರಿ.ಶ. ೧೫೨೭ರಲ್ಲಿ ನಡೆದ ಬಿಜಾಪುರ ಯುದ್ಧಗಳು ಗಡಿಸ್ಥಾಪನೆಯಲ್ಲಿ ಪ್ರಮುಖ ಪಾತ್ರ ವಹಿಸಿದವು. ಹೀಗೆ ಗಡಿಸ್ಥಾಪನೆಗಾಗಿ ಹಲವು ಯುದ್ಧಗಳು ನಿರಂತರವಾಗಿ ನಡೆದವು.

### ೩.೩.೩.೮. ಪ್ರಾಬಲ್ಯ ಹೆಚ್ಚಿಸಿಕೊಳ್ಳುವುದು

ರಾಜಮನೆತನಗಳು ತಾವು ಬಲಾಢ್ಯರೆನಿಸಿಕೊಳ್ಳಬೇಕು, ಆರ್ಥಿಕ ಮತ್ತು ರಾಜಕೀಯವಾಗಿ ಹೆಚ್ಚು ಪ್ರಾಬಲ್ಯವನ್ನು ಸಾಧಿಸಬೇಕು. ರಾಜ್ಯವನ್ನು ವಿಸ್ತರಿಸುತ್ತಾ ಹೋಗಬೇಕು, ಸೈನಿಕ ವ್ಯವಸ್ಥೆಯ ಮೂಲಕ ಪ್ರಬಲರೆಂದು ಗುರುತಿಸಿಕೊಳ್ಳಬೇಕು. ಒಟ್ಟಾರೆ ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರಬಲವಾಗಿ ಬೆಳೆಯಬೇಕೆಂಬ ಧೋರಣೆಯನ್ನು ಹೊಂದಿದವರಾಗಿದ್ದರು. ಹಾಗಾಗಿ ಈ ಪ್ರದೇಶದಲ್ಲಿ ಹಲವು ಯುದ್ಧಗಳಲ್ಲಿ ತೊಡಗಿಕೊಂಡ.

ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಮೌರ್ಯ ಅರಸ ಅಶೋಕನು ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಮಸ್ಕಿಯನ್ನು ಸುವರ್ಣಗಿರಿಯೆಂದು ರಾಜಧಾನಿಯನ್ನಾಗಿ ಮಾಡಿದನು. ಅಲ್ಲದೆ ಪ್ರಚಾರಕ್ಕಾಗಿ ಚಿತ್ರದುರ್ಗ ಜಿಲ್ಲೆ ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗರಾಮೇಶ್ವರ, ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದೇಗೋಳ, ಕೊಪ್ಪಳ ಜಿಲ್ಲೆಯ ಪಾಲ್ಕಿಗುಂಡ ಮತ್ತು ಗವಿಮಠ, ಗುಲ್ಬರ್ಗ ಜಿಲ್ಲೆಯ ಸನ್ನತಿ ಮತ್ತು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯ ಎರ್ರಗುಡಿಯಲ್ಲಿ ಶಾಸನಗಳನ್ನು ಹಾಕಿಸಿದನು. ಅಲ್ಲದೆ ಮಸ್ಕಿ ಪ್ರಧಾನ ಸ್ಥಳವಾಗಿದ್ದರಿಂದ ಇಲ್ಲಿಯೂ ಒಂದು ಶಾಸನ ಹಾಕಿಸಿರುವುದು ಕಂಡುಬರುತ್ತದೆ. ಇಮ್ಮಡಿ ಪುಲಿಕೇಶಿ ಈ ಪ್ರದೇಶದ ಮೇಲೆ ಪ್ರಾಬಲ್ಯವನ್ನು ಸಾಧಿಸಲು ಪಲ್ಲವರ ವಿರುದ್ಧ ಪಲ್ಲಲೂರಿನಲ್ಲಿ ಯುದ್ಧ ಮಾಡಿದನು. ಉತ್ತರ ಭಾರತದ ಮೇಲೆ ಪ್ರಭಾವ ಹೆಚ್ಚಿಸಿಕೊಳ್ಳಲು ಮೂರನೆಯ ಗೋವಿಂದ ದಾಳಿ ಮಾಡಿದನು. ಈ ಸಮಯವನ್ನು ಸಾಧಿಸಿ ಈ ಪ್ರದೇಶದಲ್ಲಿ ಪ್ರಭಾವ ಬೀರಲು ಮೂರನೆಯ ಗೋವಿಂದನ ವಿರುದ್ಧ ಕ್ರಿ.ಶ. ೮೦೨ರಲ್ಲಿ ದಕ್ಷಿಣ ಒಕ್ಕೂಟ ಯುದ್ಧ ಸಾರಿತು. ಇಲ್ಲಿ ಪರಸ್ಪರರು ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಹೋರಾಟ ಮಾಡಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹ ಮತ್ತು ಚೋಳರಸ ರಾಜೇಂದ್ರ ಚೋಳರ ನಡುವೆ ಕ್ರಿ.ಶ. ೧೦೧೫–೧೯ರಲ್ಲಿ ನಡೆದ ಮಸ್ಕಿ ಯುದ್ಧ ಈ ನಿಟ್ಟಿನಲ್ಲಿ ಪ್ರಮುಖವಾದುದಾಗಿದೆ. ಅಲ್ಲದೆ ಕೊಪ್ಪರ ಯುದ್ಧ ಸಹ ಕ್ರಿ.ಶ. ೧೦೫೪ರಲ್ಲಿ ಈ ಕಾರಣಕ್ಕಾಗಿಯೇ ಕಲ್ಯಾಣ ಚಾಲುಕ್ಯರಸ ಒಂದನೆಯ ಸೋಮೇಶ್ವರ ಮತ್ತು ಚೋಳರಸ ಒಂದನೆಯ ರಾಜಾಧಿರಾಜನ ನಡುವೆ ನಡೆಯಿತು.

ಕ್ರಿ.ಶ. ೧೦೬೮–೬೯ರಲ್ಲಿ ನಡೆದ ಕರಡಿಕಲ್ ಯುದ್ಧ ಅಣ್ಣನ ವಿರುದ್ಧ ತಮ್ಮನನ್ನು ಎತ್ತಿಕಟ್ಟಲು ಜೊತೆಗೆ ತಮ್ಮ ಪ್ರಾಬಲ್ಯವನ್ನು ದ್ವಿಗುಣಗೊಳಿಸಿಕೊಳ್ಳಲು ಚೋಳರಸ ವೀರರಾಜೇಂದ್ರನು ತನ್ನ ಮಗಳನ್ನು ಆರನೆಯ ವಿಕ್ರಮಾದಿತ್ಯನಿಗೆ ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದನು. ಆ ಮೂಲಕ ಆರನೆಯ ವಿಕ್ರಮಾದಿತ್ಯನ ಅಣ್ಣ ಸೋಮೇಶ್ವರನ ಮೇಲೆ ಪ್ರಾಬಲ್ಯ ಸಾರಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಹಾಗೆಯೇ ಹೊಯ್ಸಳರಸ ವಿಷ್ಣುವರ್ಧನನು ತನ್ನ ಪ್ರಾಬಲ್ಯವನ್ನು ತೋರಿಸಲು ೬ನೆಯ ವಿಕ್ರಮಾದಿತ್ಯನ ಕಾಲಾವಧಿಯಲ್ಲಿ ಅಂದರೆ ಕ್ರಿ.ಶ. ೧೧೩೧–೩೫ರಲ್ಲಿ ರಾಯಚೂರಿನ ಮೇಲೆ ದಾಳಿಮಾಡಿದನು. ವಿಷ್ಣುವರ್ಧನನ ನಂತರ ಹೊಯ್ಸಳರಸ ಎರಡನೆಯ ಬಲ್ಲಾಳನು ಈ ಪ್ರದೇಶದ ಮೇಲೆ ದಾಳಿ ಮಾಡಿದನು. ಕ್ರಿ.ಶ. ೧೧೯೦ರಲ್ಲಿ ಮಲ್ಲಟದಲ್ಲಿ ಈ ಯುದ್ಧ ನಡೆಯಿತು. ಕಾಕತೀಯ ಮಹಾದೇವ ಮತ್ತು ಸೇವುಣ ಜೈತುಗಿ ನಡುವೆ ಕ್ರಿ.ಶ. ೧೧೯೫ರಲ್ಲಿ ನಡೆದ ಕೂಡಲಸಂಗಮ ಯುದ್ಧ ಈ ಹಿನ್ನೆಲೆಯಿಂದ ನಡೆಯಿತು. ವಿಜಯನಗರ ಕಾಲಾವಧಿಯಲ್ಲಿ ಕೃಷ್ಣದೇವರಾಯನು ಕ್ರಿ.ಶ. ೧೫೨೧ ರಲ್ಲಿ ಮಾಡಿದ ರಾಯಚೂರು ಮುತ್ತಿಗೆ ಮತ್ತು ೧೫೨೨ರಲ್ಲಿ ಬಿಜಾಪುರದ ಮೇಲೆ ದಾಳಿ ಪ್ರಮುಖವಾಗಿವೆ. ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ, ಕ್ರಿ.ಶ. ೧೬೭೪ರಲ್ಲಿ ನಡೆದ ದೇವದುರ್ಗದ ಮೇಲೆ

ಕನಕಗಿರಿ ನಾಯಕರ ದಾಳಿ, ಕ್ರಿ.ಶ. ೧೭೦೫ರಲ್ಲಿ ರಾಯಚೂರು ಕೋಟೆ ಮೊಗಲರ ವಶವಾದದ್ದು ಹಾಗೂ ಸುರಪುರ ಸಂಸ್ಥಾನಿಕರು ಕ್ರಿ.ಶ. ೧೭೪೭ರಲ್ಲಿ ಇಲ್ಲಿನ ಸಮಕಾಲೀನ ಸಂಸ್ಥಾನಗಳ ಮೇಲೆ ದಾಳಿ ಮಾಡಿರುವುದು ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಎಂದು ತಿಳಿದುಬರುತ್ತದೆ. ಹೀಗೆ ಈ ಪ್ರದೇಶದ ಮೇಲೆ ಪ್ರಾಬಲ್ಯವನ್ನು ಸಾಧಿಸಲು ಬಯಸಿದ ಅರಸುಮನೆತನಗಳು ತಮ್ಮ ರಾಜಕೀಯ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಗಮನಿಸಬಹುದಾಗಿದೆ.

### ೩.೩.೩.೯. ಕಪ್ಪದ ಕಾರಣ

ಅಧೀನ ಅರಸರು ಮೇಲಿನ ಅರಸರಿಗೆ ಒಪ್ಪಂದದ ಪ್ರಕಾರವಾಗಿಯೇ, ಸೋಲಿನ ಹಿನ್ನೆಲೆಯಲ್ಲಿಯೇ ಕಪ್ಪಕಾಣಿಕೆಗಳನ್ನು ಸಲ್ಲಿಸುವುದಾಗಿತ್ತು. ಯುದ್ಧದಲ್ಲಿ ಸೋತವರು ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕಿತ್ತು. ಈ ಕಪ್ಪವನ್ನು ಸಲ್ಲಿಸದಿದ್ದರೆ ಅಂತವರ ವಿರುದ್ಧ ಹೋರಾಟ ಅಥವಾ ಯುದ್ಧವನ್ನು ಮಾಡಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಹಲವು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ.

ಕಪ್ಪದ ಕಾರಣದ ಹಿನ್ನೆಲೆಯಲ್ಲಿ ವಿಜಯನಗರ ಕಾಲದಲ್ಲಿಯೇ ಹೆಚ್ಚಾಗಿ ಯುದ್ಧಗಳು ನಡೆದಿವೆ. ಕ್ರಿ.ಶ. ೧೩೫೦ರಲ್ಲಿ ರಾಜ್ಯವಿಸ್ತರಣೆಯ ಹಿನ್ನೆಲೆಯಲ್ಲಿ ಬಹಮನಿ ಸುಲ್ತಾನ ಅಲ್ಲಾವುದ್ದೀನ್ ಬಹಮನಿಶಹ ರಾಯಚೂರು ದೋ-ಅಬ್‌ನ ಮೇಲೆ ದಾಳಿ ಮಾಡಿದನು. ಇದಕ್ಕೂ ಮುಂಚೆ ವಾರಂಗಲ್‌ನ ಕಾಪಯ ನಾಯಕನನ್ನು ಸೋಲಿಸಿ, ಕಪ್ಪ ಕಾಣಿಕೆಗಳನ್ನು ಸಲ್ಲಿಸುವಂತೆ ಮಾಡಿದನು. ವಿಜಯನಗರದ ಒಂದನೆಯ ಹರಿಹರನು ಹೋರಾಟ ಮಾಡಲಿಲ್ಲ. ಕ್ರಿ.ಶ. ೧೩೬೬ರಲ್ಲಿ ವಿಜಯನಗರದ ಒಂದನೆಯ ಬುಕ್ಕ ಮತ್ತು ಒಂದನೆಯ ಮಹಮ್ಮದ್‌ಶಹರ ನಡುವೆ ಈ ಕಾರಣಕ್ಕಾಗಿ ಯುದ್ಧವಾಯಿತು. ಇದು ಮುದಗಲ್‌ನಲ್ಲಿ ನಡೆಯಿತು. ಕಪ್ಪಕಾಣಿಕೆಗಳನ್ನು ಸರಿಯಾಗಿ ನೀಡದ ಕಾರಣ ಪುನಃ ಬಹಮನಿಸುಲ್ತಾನ ಒಂದನೆಯ ಮಹಮ್ಮದ್‌ಶಹ ಮತ್ತು ಒಂದನೆಯ ಬುಕ್ಕನ ನಡುವೆ ಕ್ರಿ.ಶ. ೧೩೬೬-೬೭ರಲ್ಲಿ ಆದೋನಿಯಲ್ಲಿ ಯುದ್ಧವಾಯಿತು. ಇದೇ ಕಾರಣವನ್ನು ನೆಪವಾಗಿಟ್ಟುಕೊಂಡು ಬಹಮನಿ ಸುಲ್ತಾನ ಎರಡನೆಯ ಮಹಮ್ಮದನ ಮೇಲೆ ಕ್ರಿ.ಶ. ೧೩೭೮ರಲ್ಲಿ ಒಂದನೆಯ ಬುಕ್ಕನು ದಾಳಿ ಮಾಡಿದನು. ಅಲ್ಲದೆ ಒಂದನೆಯ ದೇವರಾಯ ಅಧಿಕಾರದಲ್ಲಿದ್ದಾಗ ಬಹಮನಿ ಸುಲ್ತಾನ ಫಿರೋಜ್‌ಶಹನನ್ನು ಕ್ರಿ.ಶ. ೧೪೧೭-೧೯ರಲ್ಲಿ ರಾಯಚೂರಿನಲ್ಲಿ ಮುಖಾಮುಖಿಯಾಗಿ ಹೋರಾಟ ಮಾಡಿದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೪೩೫ರಲ್ಲಿ ಬಹಮನಿ ಸುಲ್ತಾನ ಎರಡನೆಯ ಅಲ್ಲಾವುದ್ದೀನನು ಕಪ್ಪವನ್ನು ಕೊಡಲಿಲ್ಲವೆಂಬ ಕಾರಣಕ್ಕಾಗಿ ವಿಜಯನಗರದ ಎರಡನೆಯ ದೇವರಾಯನ ವಿರುದ್ಧ ಮುದಗಲ್‌ನಲ್ಲಿ ಯುದ್ಧ ಮಾಡಿದನೆಂದು ತಿಳಿದುಬರುತ್ತದೆ.

### ೩.೩.೩.೧೦. ಸೇಡು

ರಾಜ್ಯ ವಿಸ್ತರಣೆ ನೀತಿಯನ್ನು ಪ್ರತಿಯೊಂದು ಅರಸು ಮನೆತನಗಳು ರೂಢಿಸಿಕೊಂಡಿರುತ್ತವೆ. ಜೊತೆಗೆ ಸೋಲಿಸಿದವರನ್ನು ಸದೆಬಡೆಯಬೇಕೆಂಬ ಸೇಡು ಮನೆಮಾಡಿರುವುದು ಕಂಡುಬರುತ್ತದೆ. ಈ ಕಾರಣದಿಂದಾಗಿ ಹಲವು ಯುದ್ಧಗಳು ನಡೆದಿರುವುದನ್ನು ಗಮನಿಸಬಹುದಾಗಿದೆ.

ಕ್ರಿ.ಶ. ೮೦೨ರಲ್ಲಿ ರಾಷ್ಟ್ರಕೂಟರಸ ಮೂರನೆಯ ಗೋವಿಂದನು ದಕ್ಷಿಣದ ಎಲ್ಲ ಅರಸರನ್ನು ಸೋಲಿಸಿ, ಉತ್ತರ ಭಾರತದ ಮೇಲೆ ದಂಡೆಯಾತ್ರೆಯನ್ನು ಕೈಗೊಂಡಿದ್ದನು. ಇಂತಹ ಸಮಯವನ್ನು ಬಳಸಿಕೊಂಡು ತಮಗಾದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ದಕ್ಷಿಣದ ಒಕ್ಕೂಟಕ್ಕೆ ಸೇರಿದ್ದ ಪಲ್ಲವ ಪಾಂಡ್ಯರು, ಕೇರಳರು ಮತ್ತು ಗಂಗರನ್ನೊಳಗೊಂಡ ಈ ಸಂಯುಕ್ತ ಒಕ್ಕೂಟ ರಾಜ್ಯಗಳು

ರಾಯಚೂರು ದೋ-ಅಬ್‌ನಲ್ಲಿ ಮೂರನೆಯ ಗೋವಿಂದನನ್ನು ಸೋಲಿಸಲು ಸಿದ್ಧವಾಗಿದ್ದವು. ಇದನ್ನರಿತ ಮೂರನೆಯ ಗೋವಿಂದನು ತೀಕ್ಷ್ಣವಾಗಿಯೇ ಪ್ರತಿಕ್ರಿಯಿಸಿ ಈ ಒಕ್ಕೂಟವನ್ನು ಸೋಲಿಸಿದನು. ಅಣ್ಣನ ಮೇಲಿನ ಸೇಡಿಗಾಗಿ ತಮ್ಮನಿಗೆ ತನ್ನ ಮಗಳನ್ನು ಕೊಟ್ಟು ವೈವಾಹಿಕ ಸಂಬಂಧದ ಮೂಲಕ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಈ ಬಗೆಯ ಘಟನೆಯೇ ಕರಡಿಕಲ್ ಯುದ್ಧವಾಗಿದೆ. ಈ ಯುದ್ಧವು ಕ್ರಿ.ಶ. ೧೦೬೮-೬೯ರಲ್ಲಿ ಎರಡನೆಯ ಸೋಮೇಶ್ವರ ಮತ್ತು ವೀರರಾಜೇಂದ್ರ ಚೋಳರ ನಡುವೆ ನಡೆಯಿತು. ಹಾಗೆಯೇ ಆರನೆಯ ವಿಕ್ರಮಾದಿತ್ಯನ ಮೇಲಿನ ಸೇಡಿಗಾಗಿ ಹೊಯ್ಸಳರಸ ವಿಷ್ಣುವರ್ಧನನು ಆರನೆಯ ವಿಕ್ರಮಾದಿತ್ಯನಿಗೆ ಸೇರಿದ್ದ ರಾಯಚೂರು ದೋ-ಅಬ್‌ನ ಮೇಲೆ ಕ್ರಿ.ಶ. ೧೧೩೧-೩೫ರಲ್ಲಿ ದಾಳಿ ಮಾಡಿ ವಶಪಡಿಸಿಕೊಂಡನು. ಈ ಯುದ್ಧವನ್ನು ರಾಚನೂರು ಯುದ್ಧವೆನ್ನಲಾಗುತ್ತದೆ. ಇದರಂತೆ ಹೊಯ್ಸಳರಸ ಎರಡನೆಯ ಬಲ್ಲಾಳನು ಸೇವುಣರ ಮೇಲಿನ ಸೇಡಿಗಾಗಿ ಕ್ರಿ.ಶ. ೧೧೯೦ರಲ್ಲಿ ಈ ಪ್ರದೇಶದ ಮೇಲೆ ದಾಳಿ ಮಾಡಿದನು. ಕಾಕತೀಯ ಪ್ರತಾಪರುದ್ರನು ಕ್ರಿ.ಶ. ೧೨೯೪ರಲ್ಲಿ ಸೇವುಣ ರಾಮಚಂದ್ರನ ಮೇಲಿನ ಸೇಡಿಗಾಗಿ ರಾಯಚೂರನ್ನು ಆಕ್ರಮಣ ಮಾಡಿರುವುದು ಕಂಡುಬರುತ್ತದೆ.

ಒಂದನೆಯ ಬುಕ್ಕ ಕ್ರಿ.ಶ. ೧೩೬೬ರಲ್ಲಿ ನಡೆದ ಮುದಗಲ್ ಯುದ್ಧದಲ್ಲಿ ಒಂದನೆಯ ಮಹಮ್ಮದ್‌ಶಹನಿಂದ ಸೋಲನುಭವಿಸಿದ್ದನು. ಈ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಮತ್ತು ಒಂದನೆಯ ಮಹಮ್ಮದ್‌ಶಹನು ಕೂಡ ಬುಕ್ಕನ ಮೇಲಿನ ಸೇಡನ್ನು ಸದೆಬಡಿಯಲು ಕ್ರಿ.ಶ. ೧೩೬೬-೬೭ರಲ್ಲಿ ಆದೋನಿ-೧ಯಲ್ಲಿ ಕಾದಾಡಿದರು. ಪರಸ್ಪರರು ಸೇಡು ತೀರಿಸಿಕೊಳ್ಳಲು ನಡೆದ ಯುದ್ಧ ಇದಾಗಿದೆ. ಕ್ರಿ.ಶ. ೧೪೦೬-೦೭ರಲ್ಲಿ ನಡೆದ ಮಾನವಿ ಯುದ್ಧ ವಿಜಯನಗರದ ಮೇಲಿನ ಸೇಡಿಗಾಗಿ ಫಿರೋಜ್‌ಶಹನು ಮಾಡಿದ್ದು ಕಂಡುಬರುತ್ತದೆ. ವಿಜಯನಗರದ ಒಂದನೆಯ ದೇವರಾಯ ಕ್ರಿ.ಶ. ೧೪೦೬-೦೭ರಲ್ಲಿ ನಡೆದ ಮುದಗಲ್ ಯುದ್ಧದಲ್ಲಿ ಫಿರೋಜ್‌ಶಹನಿಂದ ಅನುಭವಿಸಿದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಕ್ರಿ.ಶ. ೧೪೧೭-೧೯ರಲ್ಲಿ ರಾಯಚೂರು ದೋ-ಅಬ್‌ನ ಕಾರಣಕ್ಕಾಗಿ ಆಂಧ್ರಪ್ರದೇಶದ ನಲ್ಗೊಂಡ ಮತ್ತು ಪನಗಲ್ ಕೋಟೆಯಲ್ಲಿ ಫಿರೋಜ್‌ಶಹನೊಂದಿಗೆ ಯುದ್ಧ ಮಾಡಿದನು.

ಕ್ರಿ.ಶ. ೧೪೪೩ರಲ್ಲಿ ಎರಡನೆಯ ದೇವರಾಯ ಕ್ರಿ.ಶ. ೧೪೩೫ರ ಮುದಗಲ್ ಯುದ್ಧದಲ್ಲಿ ಬಹಮನಿ ಸುಲ್ತಾನ ಎರಡನೆಯ ಅಲ್ಲಾವುದ್ದೀನನಿಂದ ಸೋತನು. ನಂತರ ತನ್ನ ಸೋಲಿಗೆ ಕಾರಣಗಳನ್ನು ಹುಡುಕಿ ವಿಜಯನಗರದ ಸೈನ್ಯದಲ್ಲಿ ಮುಸ್ಲಿಂ ಸೈನಿಕರನ್ನು ನೇಮಕ ಮಾಡಿಕೊಂಡನು. ಆ ಮೂಲಕ ಬಹಮನಿ ಸುಲ್ತಾನರ ಮೇಲೆ ಸೇಡು ತೀರಿಸಿಕೊಳ್ಳಲೆಂದು ಮುದಗಲ್‌ನಲ್ಲಿ ಮೂರು ಯುದ್ಧಗಳನ್ನು ಮಾಡಿದನೆಂದು ತಿಳಿದುಬರುತ್ತದೆ. ಕೃಷ್ಣದೇವರಾಯ ಕ್ರಿ.ಶ. ೧೫೨೧ರಲ್ಲಿ ಗಬ್ಬೂರು ಮತ್ತು ರಾಯಚೂರು ಕೋಟೆ ಮುತ್ತಿಗೆ ಹಾಕಿದನು. ಬಿಜಾಪುರ ಆದಿಲಶಾಹಿಗಳು ಪದೇ ಪದೇ ರಾಯಚೂರು ದೋ-ಅಬ್‌ನ ಮೇಲೆ ದಾಳಿ ಮಾಡಿರುವುದನ್ನು ಕಂಡು ರಾಯಚೂರಿನಲ್ಲಿ ಯುದ್ಧ ಮಾಡಬೇಕಾಯಿತು. ಈ ಯುದ್ಧದಲ್ಲಿ ಸೋತ ಇಸ್ಮಾಯಿಲ್ ಆದಿಲ್‌ಶಾಹಿನು ತನ್ನ ದಂಡನಾಯಕನ ಮೂಲಕ ಕೃಷ್ಣದೇವರಾಯನು ರಾಯಚೂರು ಕೋಟೆಯ ಯುದ್ಧದಲ್ಲಿ ಗೆದ್ದ ಪ್ರದೇಶಗಳನ್ನು ವಾಪಾಸು ನೀಡುವಂತೆ ಮನವಿ ಮಾಡಿದನು. ಇದಕ್ಕೆ ಸ್ಪಂದಿಸಿದ ಕೃಷ್ಣದೇವರಾಯನು ಷರತ್ತಿಗೆ ಪೂರಕವಾಗಿ ನಡೆದುಕೊಂಡರೆ ಮರಳಿಕೊಡುತ್ತೇನೆಂಬ ಭರವಸೆ ನೀಡಿದನು. ಇದಕ್ಕೆ ಮರು ಉತ್ತರ ನೀಡದೆ ಸುಮ್ಮನಾದ ಬಿಜಾಪುರದ

ಆದಿಲ್‌ಶಾಹಿಗಳ ಮೇಲಿನ ಸೇಡಿಗಾಗಿ ಕ್ರಿ.ಶ. ೧೫೨೦ರಲ್ಲಿ ಬಿಜಾಪುರದ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ.

ಕ್ರಿ.ಶ. ೧೫೬೫ರಲ್ಲಿ ನಾಲ್ಕು ಶಾಹಿ ಸುಲ್ತಾನರು ವಿಜಯನಗರದ ಒಡೆದಾಳುವ ನೀತಿಯನ್ನು ಬಹುಬೇಗನೆ ಅರ್ಥ ಮಾಡಿಕೊಂಡು, ಎಚ್ಚರವಾಗಿ ವಿಜಯನಗರದ ವಿರುದ್ಧ ಸೇಡನ್ನು ತೀರಿಸಿಕೊಳ್ಳಲು ಒಂದು ಬಹುದೊಡ್ಡ ಪ್ರಮಾಣದಲ್ಲಿ ಯುದ್ಧದ ರೂಪುರೇಷೆಯನ್ನು ಸಿದ್ಧಪಡಿಸಿದರು. ಈ ಯುದ್ಧ ರಾಯಚೂರು ದೋ-ಅಬ್‌ನ ಬಯ್ಯಾಪುರ-ಭೋಗಾಪುರದಲ್ಲಿ ನಡೆಯಿತೆಂದು ತಿಳಿದುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ಬಿಜಾಪುರ ಆದಿಲಶಾಹಿಗಳ ಮೇಲಿನ ಸೇಡಿಗಾಗಿ ಕನಕಗಿರಿ ನಾಯಕರು ಕ್ರಿ.ಶ. ೧೬೭೪ರಲ್ಲಿ ದೇವದುರ್ಗದ ಮೇಲೆ ದಾಳಿ ಮಾಡಿರುವುದುಂಟು. ಸುರಪುರ ಸಂಸ್ಥಾನಿಕರ ಮೇಲಿನ ಸೇಡಿಗಾಗಿ ಮೊಗಲರ ಸ್ನೇಹ ಬೆಳೆಸಲೆಂದು ಕ್ರಿ.ಶ. ೧೭೦೫ರಲ್ಲಿ ದೇವದುರ್ಗದ ವಾಸುದೇವ ನಾಯಕ ವೀರಗೋಟ ಎಂಬಲ್ಲಿ ಯುದ್ಧ ಮಾಡಿದ. ಮಗನ ಜವಳ ಕಾರ್ಯಕ್ರಮದಲ್ಲಿ ಭಾಗವಹಿಸದೆ ಅಪಮಾನ ಮಾಡಿದ ಎಂಬ ಕಾರಣವನ್ನು ಹುಟ್ಟು ಹಾಕಿಕೊಂಡು, ದೇವದುರ್ಗದ ಕೊಳ್ಳಿರಂಗಪ್ಪ ನಾಯಕನ ಮೇಲಿನ ಸೇಡಿಗಾಗಿ ಸುರಪುರದ ವೆಂಕಟಪ್ಪ ನಾಯಕನು ಕ್ರಿ.ಶ. ೧೮೪೭ರಲ್ಲಿ ದಾಳಿ ಮಾಡಿರುವುದು ಕಂಡುಬರುತ್ತದೆ. ಹೀಗೆ ಪರಸ್ಪರ ಸೇಡನ್ನು ಕಾರಣವಾಗಿಸಿಕೊಂಡು ಹೋರಾಟ ಮಾಡಿದ ಸಂಗತಿ ಚರಿತ್ರೆ ಬರವಣಿಯಿಂದ ತಿಳಿದುಬರುತ್ತದೆ.

**೩.೩.೩.೧೧. ಒಪ್ಪಂದಗಳ ಉಲ್ಲಂಘನೆ**

ರಾಜ್ಯ ಭಂಡಾರವನ್ನು ತುಂಬಿಸಲು ಪ್ರಯತ್ನಿಸಿದಾಗ ಎದುರಾಗುವ ಸಮಸ್ಯೆಗಳನ್ನು ಬಗೆಹರಿಸಿ ಕೊಳ್ಳಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಯುದ್ಧಗಳೂ ನಡೆಯುತ್ತವೆ. ಈ ಯುದ್ಧಗಳಲ್ಲಿ ಸೋತವರು ಗೆದ್ದವರ ಅಧೀನತೆಯನ್ನು ಒಪ್ಪಿಕೊಳ್ಳಬೇಕಿತ್ತು, ಒಪ್ಪಂದಗಳನ್ನು ಮಾಡಿಕೊಳ್ಳಲಾಗುತ್ತಿತ್ತು. ಸಮಕಾಲೀನರು, ಸಮ ಸಾಮರ್ಥ್ಯವನ್ನು ಹೊಂದಿದವರು, ಹೋರಾಟ ಮಾಡುವ ಶಕ್ತಿ ಹೊಂದಿದವರು ಕೆಲಕಾಲದ ನಂತರ ಒಪ್ಪಂದಗಳನ್ನು ಉಲ್ಲಂಘಿಸುತ್ತಿದ್ದರು, ಅಧೀನತೆಯನ್ನು ಧಿಕ್ಕರಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಸಹಜವಾಗಿಯೇ ಒಪ್ಪಂದಗಳ ಉಲ್ಲಂಘನೆಯನ್ನು ನೆಪವಾಗಿಟ್ಟುಕೊಂಡು ಯುದ್ಧಗಳು ನಡೆದಿರುವುದು ಕಂಡುಬರುತ್ತದೆ.

ಕ್ರಿ.ಶ. ೧೩೬೭ರಲ್ಲಿ ವಿಜಯನಗರದ ಒಂದನೆಯ ಬುಕ್ಕ ಮತ್ತು ಬಹಮನಿ ಒಂದನೆಯ ಮಹಮ್ಮದ್‌ಶಹರ ನಡುವೆ ರಾಯಚೂರಿನಲ್ಲಿ ಯುದ್ಧ ನಡೆಯಿತು. ಇದು ಒಪ್ಪಂದದ ಮೂಲಕ ಕೊನೆಗೊಂಡಿತು. ಈ ಒಪ್ಪಂದಕ್ಕೆ ವಿಜಯನಗರ ಒಪ್ಪಿತು. ನಂತರ ಈ ಒಪ್ಪಂದವನ್ನು ಉಲ್ಲಂಘಿಸಿತು. ಇದು ಕ್ರಿ.ಶ. ೧೩೬೬ರಲ್ಲಿ ನಡೆದ ಯುದ್ಧಕ್ಕೆ ಕಾರಣವಾಯಿತು. ಈ ಒಪ್ಪಂದಗಳ ಉಲ್ಲಂಘನೆಯಾಗಿದ್ದು ವಿಜಯನಗರ ಮತ್ತು ಬಹಮನಿ ರಾಜ್ಯಗಳಲ್ಲಿಯೇ ಹೆಚ್ಚು. ಹಾಗಾಗಿಯೇ ಈ ಎರಡೂ ಮನೆತನಗಳು ಪರಸ್ಪರ ಹೋರಾಟಕ್ಕೆ ಇಳಿದದ್ದು ಕಂಡುಬರುತ್ತದೆ. ಕ್ರಿ.ಶ. ೧೩೬೬-೬೭ರಲ್ಲಿ ನಡೆದ ಆದೋನಿ-೧ ಯುದ್ಧವು ಒಪ್ಪಂದದ ಉಲ್ಲಂಘನೆಯಿಂದಾಗಿ ಯುದ್ಧ ನಡೆಯಿತು. ನಂತರ ಇದು ಶಾಂತಿ ಒಪ್ಪಂದಗಳ ಮೂಲಕ ಕೊನೆಯಾಗುತ್ತದೆ. ಈ ಯುದ್ಧ ಬಹಮನಿಸುಲ್ತಾನ ಒಂದನೆಯ ಮಹಮ್ಮದ್‌ಶಹ ಮತ್ತು ವಿಜಯನಗರದ ಒಂದನೆಯ ಬುಕ್ಕರ ನಡುವೆ ನಡೆದಿತ್ತು.

ಕ್ರಿ.ಶ. ೧೪೩೫ರ ಮುದಗಲ್ ಯುದ್ಧದಲ್ಲಿ ಸೋತ ವಿಜಯನಗರದ ಎರಡನೆಯ ದೇವರಾಯ ಬಹಮನಿ ಮಹಮ್ಮದ ಖಾನರ ನಡುವೆ ಒಪ್ಪಂದವಾಗಿತ್ತು. ಈ ಒಪ್ಪಂದವನ್ನು ಕ್ರಿ.ಶ. ೧೪೪೩ರಲ್ಲಿ

ಉಲ್ಲಂಘಿಸಿ ಮುದಗಲ್‌ನಲ್ಲಿ ಮೂರು ಯುದ್ಧಗಳನ್ನು ಮಾಡಿದನು. ಈ ಯುದ್ಧಗಳು ವಿಜಯನಗರ ಮತ್ತು ಬಹಮನಿ ರಾಜ್ಯಗಳ ನಡುವೆ ನಡೆಯಿತು. ಹಾಗೆಯೇ ಕ್ರಿ.ಶ. ೧೪೯೨-೯೩ರಲ್ಲಿ ಮಾನವಿ ಯುದ್ಧ ನಡೆಯಿತು. ಈ ಯುದ್ಧವೂ ಸಹ ಒಪ್ಪಂದ ಉಲ್ಲಂಘನೆ ಹಿನ್ನೆಲೆಯಲ್ಲಿ ನಡೆದಿದೆ. ಇದು ವಿಜಯನಗರದ ನರಸನಾಯಕ ಮತ್ತು ಬಿಜಾಪುರ ಯೂಸುಫ್ ಆದಿಲ್‌ಶಾಹಿ ಮಧ್ಯ ನಡೆಯಿತು. ಅಲ್ಲದೆ ಆದೋನಿ ಯುದ್ಧ(೧೫೪೩), ರಾಯಚೂರು ಮತ್ತು ಮುದಗಲ್ ವಶ(೧೫೫೦), ಬಿಜಾಪುರದ ಪರವಾಗಿ ಅಹಮ್ಮದನಗರದೊಂದಿಗೆ ಯುದ್ಧ(೧೫೫೭), ವಿಜಾಪುರದ ವಶದಲ್ಲಿ ರಾಯಚೂರು ದೋ-ಅಬ್ (೧೫೫೨-೫೪) ಹೀಗೆ ನಡೆದ ಯುದ್ಧಗಳಲ್ಲಿ ಒಪ್ಪಂದಗಳ ಉಲ್ಲಂಘನೆ ಮಾಡಿರುವುದನ್ನೇ ಕಾರಣವಾಗಿಸಿಕೊಂಡು ಹೋರಾಟ ಮಾಡಿರುವುದನ್ನು ಗಮನಿಸಬಹುದಾಗಿದೆ.

**೩.೩.೩.೧೨. ಬಲಪ್ರದರ್ಶನ**

ಬಲಿಷ್ಠವಾದ ರಾಜ್ಯವನ್ನು ಕಟ್ಟಲು, ಕಾರಣಗಳನ್ನು ಗುರುತಿಸಿ ಸೈನ್ಯವನ್ನು ಬಲಪಡಿಸುವುದು, ಹಾಗೂ ರಾಜ್ಯ ವಿಸ್ತರಣೆಗೆ ಅಗತ್ಯವಾದ ಬೆಂಬಲಗಳಿಸುವುದು, ಅಲ್ಲದೆ ಒಕ್ಕೂಟಗಳ ರಚನೆಯ ಮೂಲಕ ಬಲಪ್ರದರ್ಶನವನ್ನು ತೋರಲು ಅನೇಕ ಅರಸುಮನೆತನಗಳು ಪ್ರಯತ್ನಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಹಲವು ಯುದ್ಧಗಳು ನಡೆದಿವೆ.

ರಾಷ್ಟ್ರಕೂಟರಸ ಮೂರನೆಯ ಗೋವಿಂದನ ವಿರುದ್ಧ ಬಲಪ್ರದರ್ಶನ ಮಾಡಲು ದಕ್ಷಿಣ ರಾಜ್ಯಗಳು ಒಕ್ಕೂಟವನ್ನು ರಚಿಸಿಕೊಂಡವು. ಈ ಒಕ್ಕೂಟದಲ್ಲಿ ಪಲ್ಲವ, ಪಾಂಡ್ಯ, ಚೇರ ಮತ್ತು ಗಂಗರು ಪಾಲ್ಗೊಂಡಿದ್ದರು. ಈ ಒಕ್ಕೂಟ ಮತ್ತು ಮೂರನೆಯ ಗೋವಿಂದನ ನಡುವೆ ಕ್ರಿ.ಶ. ೮೦೨ರಲ್ಲಿ ಯುದ್ಧವಾಯಿತು. ಕ್ರಿ.ಶ. ೧೦೧೫-೧೯ರಲ್ಲಿ ನಡೆದ ಮಸ್ಕಿ ಯುದ್ಧದಲ್ಲಿಯೂ ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹ ಮತ್ತು ಚೋಳರಸ ರಾಜೇಂದ್ರಚೋಳರು ಪರಸ್ಪರ ಬಲಪ್ರದರ್ಶನದಲ್ಲಿ ತೊಡಗಿದ್ದರು. ಈ ಇಬ್ಬರ ನಡುವೆ ನಡೆದ ಈ ಯುದ್ಧದಲ್ಲಿ ಇಬ್ಬರೂ ಸೋಲು, ಗೆಲುವನ್ನು ಪಡೆದವರಾಗಿದ್ದಾರೆ. ಕ್ರಿ.ಶ. ೧೦೬೮-೬೯ರಲ್ಲಿ ಕಲ್ಯಾಣ ಚಾಲುಕ್ಯರಸ ಎರಡನೆಯ ಸೋಮೇಶ್ವರ ಮತ್ತು ಚೋಳರಸ ವೀರರಾಜೇಂದ್ರ ಚೋಳರು ಕರಡಿಕಲ್ ಯುದ್ಧದಲ್ಲಿ ಬಲಪ್ರದರ್ಶನ ತೋರಿರುವುದು ಕಂಡುಬರುತ್ತದೆ. ವಿಜಯನಗರದ ಎರಡನೆಯ ದೇವರಾಯ ಕ್ರಿ.ಶ. ೧೪೩೫ರ ಮುದಗಲ್ ಯುದ್ಧದಲ್ಲಿ ಎದುರಿಸಿದ ಸಮಸ್ಯೆಯನ್ನು ಮತ್ತೆ ಸುಳಿಯದಂತೆ ನೋಡಿಕೊಳ್ಳಲು ಕ್ರಿ.ಶ. ೧೪೪೨ರಲ್ಲಿ ಪರಿಶೀಲನಾ ಸಭೆಯನ್ನು ಕರೆದ. ಈ ಸಭೆಯ ನಿರ್ಣಯದ ಪ್ರಕಾರ ವಿಜಯನಗರ ಸೈನ್ಯದಲ್ಲಿ ಬಲಿಷ್ಠವಾದ ಕುದುರೆಗಳನ್ನು ಬಳಸುವುದು, ಮುಸ್ಲಿಂ ಸೈನಿಕರನ್ನು ಸೈನ್ಯಕ್ಕೆ ನೇಮಿಸಿಕೊಳ್ಳುವುದು ಎಂದು ತೀರ್ಮಾನಿಸಲಾಯಿತು. ಈ ಹಿನ್ನೆಲೆಯಲ್ಲಿ ದೊಡ್ಡ ಪ್ರಮಾಣದ ಸೈನ್ಯವನ್ನು ಜಮಾಯಿಸಿ ಕ್ರಿ.ಶ. ೧೪೪೩ ರಲ್ಲಿ ಬಹಮನಿ ಸುಲ್ತಾನ ಅಲ್ಲಾವುದ್ದೀನನ ವಿರುದ್ಧ ಮುದಗಲ್‌ನಲ್ಲಿ ಮೂರು ಯುದ್ಧಗಳು ಮಾಡಿರುವುದು ಕಂಡುಬರುತ್ತದೆ.

ವಿಜಯನಗರದ ಕೃಷ್ಣದೇವರಾಯ ಕ್ರಿ.ಶ. ೧೫೨೧ರಲ್ಲಿ ಗಬ್ಬೂರು ಮತ್ತು ರಾಯಚೂರು ಕೋಟೆ ಮುತ್ತಿಗೆ ಮತ್ತು ಕ್ರಿ.ಶ.೧೫೨೨ರಲ್ಲಿ ಬಿಜಾಪುರದ ಮೇಲೆ ಮಾಡಿದ ದಾಳಿ ಬಲಪ್ರದರ್ಶನ ಮಾಡಿದ. ಹಾಗೆಯೇ ವಿಜಯನಗರದ ಪ್ರಾಬಲ್ಯವನ್ನು ಮುರಿಯಲು ನಾಲ್ಕು ಶಾಹಿ ಸುಲ್ತಾನರು ತಮ್ಮ ಬಲಪ್ರದರ್ಶನ ಮತ್ತು ಸೇಡು ತೀರಿಸಿಕೊಳ್ಳಲು ಕ್ರಿ.ಶ. ೧೫೬೫ರಲ್ಲಿ ಬಯ್ಯಾಪುರ ಯುದ್ಧದಲ್ಲಿ ನಡೆಸಿದ್ದು ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ಕನಕಗಿರಿ ನಾಯಕರು ಬಿಜಾಪುರ ಆದಿಲ್‌ಶಾಹಿಗಳ ವಿರುದ್ಧ

ಬಲಪ್ರದರ್ಶನ ತೋರಿಸಲು ದೇವದುರ್ಗದ ಮೇಲೆ ದಾಳಿ ಮಾಡಿದರು. ಸಮಕಾಲೀನ ಸಂಸ್ಥಾನಗಳ ಮೇಲೆ ಸುರಪುರ ತನ್ನ ಬಲಪ್ರದರ್ಶನಕ್ಕಾಗಿ ಕ್ರಿ.ಶ. ೧೭೯೭ರಲ್ಲಿ ದಾಳಿ ಮಾಡಿರುವುದು ಗಮನಿಸಬಹುದು.

### ೩.೩.೩.೧೩. ಅಧಿಕಾರ ಪುನರ್‌ಸ್ಥಾಪಿಸಲು

ಆರ್ಥಿಕ ಮತ್ತು ರಾಜಕೀಯವಾಗಿ ಆಯಕಟ್ಟಿನ ಪ್ರದೇಶವಾಗಿ ಅಸ್ಮಿತೆಯನ್ನು ಪಡೆದಿತ್ತು. ವಿವಿಧ ಅರಸುಮನೆತನಗಳು ಅಧಿಕಾರ ಸ್ಥಾಪನೆ ಮಾಡಬೇಕೆಂಬ ಆಕಾಂಕ್ಷೆಯಿಂದ ಯುದ್ಧಗಳನ್ನು ಮಾಡಿದ್ದುಂಟು. ಈ ಯುದ್ಧಗಳಲ್ಲಿ ಸೋತವರು ಮತ್ತು ಗೆದ್ದವರು ಈ ಪ್ರದೇಶದ ಮೇಲೆ ಅಧಿಕಾರವನ್ನು ಪುನರ್‌ಸ್ಥಾಪಿಸುವ ತವಕವನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಹಲವು ಯುದ್ಧಗಳು ನಡೆದಿವೆ.

ಕ್ರಿ.ಶ. ೮೦೨ರಲ್ಲಿ ರಾಷ್ಟ್ರಕೂಟರಸ ಮೂರನೆಯ ಗೋವಿಂದ ಮತ್ತು ದಕ್ಷಿಣ ಒಕ್ಕೂಟದ ಪ್ರಯತ್ನ ಈ ಪ್ರದೇಶದ ಮೇಲೆ ಅಧಿಕಾರವನ್ನು ಪುನರ್‌ಸ್ಥಾಪಿಸಬೇಕೆಂಬ ಅಪೇಕ್ಷೆಯನ್ನು ಹೊಂದಲಾಗಿತ್ತು. ಹಾಗಾಗಿ ಉತ್ತರ ಭಾರತದ ಮೇಲೆ ದಂಡಯಾತ್ರೆ ಕೈಗೊಂಡಿದ್ದ ಮೂರನೆಯ ಗೋವಿಂದ ಮತ್ತು ದಕ್ಷಿಣ ಒಕ್ಕೂಟ ಈ ಪ್ರದೇಶದಲ್ಲಿ ಮೇಲೆ ಅಧಿಕಾರ ಪುನರ್‌ಸ್ಥಾಪಿಸಲು ಪ್ರಯತ್ನಿಸಿತ್ತು. ಆದರೆ ಇದಕ್ಕೆ ಅವಕಾಶ ಮಾಡಿಕೊಡದ ಮೂರನೆಯ ಗೋವಿಂದ ಈ ಒಕ್ಕೂಟದ ವಿರುದ್ಧ ಹೋರಾಟ ಮಾಡಿ ಅಧಿಕಾರವನ್ನು ಈ ಪ್ರದೇಶದ ಮೇಲೆ ಪುನರ್‌ಸ್ಥಾಪಿಸಿರುವ ಬಗ್ಗೆ ತಿಳಿದುಬರುತ್ತದೆ.

ಕ್ರಿ.ಶ. ೧೦೧೫-೧೯ರಲ್ಲಿ ನಡೆದ ಮಸ್ಕಿ ಯುದ್ಧದಲ್ಲಿ ಚೋಳರಸ ರಾಜೇಂದ್ರಚೋಳ ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಲು ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹನೊಡನೆ ಯುದ್ಧ ಮಾಡಿದನು. ಗೆದ್ದನು. ಸೋಲನುಭವಿಸಿದ ಎರಡನೆಯ ಜಯಸಿಂಹನು ಪುನಃ ಬೇಗನೆ ಚೇತರಿಸಿಕೊಂಡು ರಾಜೇಂದ್ರ ಚೋಳನೊಡನೆ ಮತ್ತೊಮ್ಮೆ ಯುದ್ಧ ಮಾಡಿ ಗೆದ್ದು, ಅಧಿಕಾರವನ್ನು ಪುನರ್‌ಸ್ಥಾಪಿಸಿದನು. ಕ್ರಿ.ಶ. ೧೦೬೮-೬೯ರಲ್ಲಿ ಕರಡಿಕಲ್ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಕಲ್ಯಾಣ ಚಾಲುಕ್ಯರಸ ಎರಡನೆಯ ಸೋಮೇಶ್ವರ ಮತ್ತು ವೀರರಾಜೇಂದ್ರ ಚೋಳರು ಪರಸ್ಪರ ಹೋರಾಡಿದರು. ಈ ಪ್ರದೇಶದಲ್ಲಿ ಅಧಿಕಾರವನ್ನು ಸ್ಥಾಪಿಸಲು ಎರಡನೆಯ ಸೋಮೇಶ್ವರನ ವಿರುದ್ಧ ಅವನ ತಮ್ಮನಾದ ಆರನೆಯ ವಿಕ್ರಮಾದಿತ್ಯನನ್ನು ಎತ್ತಿಕಟ್ಟಲು ವೀರರಾಜೇಂದ್ರನು ತನ್ನ ಮಗಳನ್ನು ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದನು. ಆದರೂ ಬಲಿಷ್ಠನಾಗಿದ್ದ ಎರಡನೆಯ ಸೋಮೇಶ್ವರನು ಇವರ ಅಧಿಕಾರ ಸ್ಥಾಪನೆಗೆ ಅವಕಾಶ ಕೊಡಲಿಲ್ಲ. ಬದಲಾಗಿ ಅವನೇ ಅಧಿಕಾರವನ್ನು ಪುನರ್ ಸ್ಥಾಪಿಸಿದನೆಂದು ತಿಳಿದುಬರುತ್ತದೆ.

ವಿಜಯನಗರದ ಒಂದನೆಯ ದೇವರಾಯ ಕ್ರಿ.ಶ. ೧೪೦೬-೦೭ರಲ್ಲಾದ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಮತ್ತು ಈ ಪ್ರದೇಶದ ಮೇಲೆ ಅಧಿಕಾರವನ್ನು ಪುನರ್‌ಸ್ಥಾಪಿಸಲು ಕ್ರಿ.ಶ. ೧೪೧೭-೧೯ರಲ್ಲಿ ಬಹಮನಿ ಸುಲ್ತಾನ ಫಿರೋಜ್‌ಶಹನ ವಿರುದ್ಧ ಆಂಧ್ರಪ್ರದೇಶದ ನಲ್ಗೊಂಡ ಮತ್ತು ಪನಗಲ್ ಕೋಟೆಯಲ್ಲಿ ಮುಖಾಮುಖಿಯಾಗಿದ್ದನು. ತೀವ್ರ ಪ್ರತಿರೋಧದ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಅಧಿಕಾರವನ್ನು ಪುನರ್‌ಸ್ಥಾಪಿಸಿದನು. ಮುದಗಲ್ ಮೇಲೆ ಅಧಿಕಾರ ಸ್ಥಾಪಿಸಲು ಎರಡನೆಯ ದೇವರಾಯ ಕ್ರಿ.ಶ. ೧೪೪೩ರಲ್ಲಿ ಬಹಮನಿ ಸುಲ್ತಾನ ಅಲ್ಲಾವುದ್ದೀನನ ವಿರುದ್ಧ ಮುದಗಲ್‌ನಲ್ಲಿ ಮೂರು ಯುದ್ಧಗಳನ್ನು ಮಾಡಿರುವ ಬಗ್ಗೆ ತಿಳಿದುಬರುತ್ತದೆ. ಹಾಗೆಯೇ ಸಾಳುವ ನರಸಿಂಹನು ಸಹ ಈ ಪ್ರದೇಶದ ಮೇಲಿನ ಹಿಡಿತ ತಪ್ಪಿಹೋದ ಕಾರಣ ಕ್ರಿ.ಶ. ೧೪೮೫-೯೦ರಲ್ಲಿ ದಾಳಿ ಮಾಡಿ ಅಧಿಕಾರವನ್ನು ಪುನರ್‌ಸ್ಥಾಪಿಸಿದನು.

ಕೃಷ್ಣದೇವರಾಯ ಅಧಿಕಾರಕ್ಕೆ ಬರುತ್ತಲೇ ರಾಯಚೂರು ದೋ-ಅಬ್ ಪ್ರದೇಶದ ಮೇಲೆ ಅಧಿಕಾರವನ್ನು ಪುನರ್‌ಸ್ಥಾಪಿಸಲು ಪ್ರಯತ್ನಿಸಿದ. ಈ ಹಿನ್ನೆಲೆಯಲ್ಲಿ ಬಿಜಾಪುರದ ಆದಿಲ್‌ಶಾಹಿಗಳ ವಿರುದ್ಧ ಕ್ರಿ.ಶ. ೧೫೧೨ರಲ್ಲಿ ರಾಯಚೂರು ಯುದ್ಧ, ಕ್ರಿ.ಶ. ೧೫೧೫ರಲ್ಲಿ ರಾಯಚೂರು ಮೇಲೆ ದಾಳಿ ಹಾಗೂ ಗಬ್ಬೂರು-ರಾಯಚೂರು ಕೋಟೆ ಮುತ್ತಿಗೆಯನ್ನು ಕ್ರಿ.ಶ. ೧೫೨೧ರಲ್ಲಿ ಹಾಕಿದ. ಈ ಮೂರು ಯುದ್ಧಗಳು ಅಧಿಕಾರ ಪುನರ್‌ಸ್ಥಾಪಿಸುವ ಅವಕಾಶವನ್ನೇ ಹೊಂದಿದ್ದವೆಂದು ತಿಳಿದುಬರುತ್ತದೆ. ಕೃಷ್ಣದೇವರಾಯನ ಮರಣದ ನಂತರ ಬಿಜಾಪುರದ ಆದಿಲ್‌ಶಾಹಿಗಳು ಕ್ರಿ.ಶ. ೧೫೩೦ರಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳ ಮೇಲೆ ದಾಳಿ ಮಾಡುವುದರ ಮೂಲಕ ಅಧಿಕಾರ ಪುನರ್‌ಸ್ಥಾಪಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೫೩೫ರಲ್ಲಿ ಅಚ್ಯುತರಾಯನು ಬಿಜಾಪುರದ ಇಸ್ಮಾಯಿಲ್ ಆದಿಲ್‌ಶಹನ ಮರಣದ ನಂತರ ಈ ಪ್ರದೇಶದ ಮೇಲೆ ವಿಜಯನಗರದ ಅಧಿಕಾರವನ್ನು ಪುನರ್‌ಸ್ಥಾಪಿಸಿದ. ಕ್ರಿ.ಶ. ೧೫೬೫ರಲ್ಲಿ ನಡೆದ ಬಯ್ಯಾಪುರ ಯುದ್ಧ ಈ ಪ್ರದೇಶದ ಮೇಲೆ ಅಧಿಕಾರ ಪುನರ್‌ಸ್ಥಾಪಿಸಲು ವಿಜಯನಗರ ಮತ್ತು ಶಾಹಿ ಸುಲ್ತಾನರುಗಳ ನಡುವೆ ನಡೆದ ಯುದ್ಧವಾಗಿದೆ. ಇದರಂತೆ ವಿಜಯನಗರೋತ್ತರ ಕಾಲದಲ್ಲಿ ಸುರಪುರ ಸಂಸ್ಥಾನ ಸಮಕಾಲೀನ ಸಂಸ್ಥಾನಗಳ ಮೇಲೆ ಕ್ರಿ.ಶ.೧೭೭೭ರಲ್ಲಿ ದಾಳಿ ಮಾಡುವುದರ ಮೂಲಕ ಈ ಪ್ರದೇಶದಲ್ಲಿ ಅಧಿಕಾರ ಪುನರ್‌ಸ್ಥಾಪಿಸಿದರೆಂದು ಹೇಳಬಹುದು.

**೩.೩.೩.೧೪. ಅಸ್ತಿತ್ವಕ್ಕಾಗಿ**

ಪ್ರಬಲ ಅರಸು ಮನೆತನಗಳ ವಿರುದ್ಧ ಹೋರಾಡುವುದು ಸಾಧ್ಯವಿರಲಿಲ್ಲ. ಆದರೂ ಅಸ್ತಿತ್ವಕ್ಕಾಗಿ ಯಾದರೂ ಹೋರಾಡಬೇಕಿತ್ತು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಯುದ್ಧಗಳು ನಡೆದದ್ದುಂಟು. ಅವು ಬಯ್ಯಾಪುರ ಯುದ್ಧ ಕ್ರಿ.ಶ. ೧೫೬೫, ಕ್ರಿ.ಶ. ೧೭೭೫ರಲ್ಲಿ ನಡೆದ ಗುಡಗುಂಟಿಯ ಮೇಲೆ ಸುರಪುರದ ದಾಳಿ, ದೇವದುರ್ಗದ ಮೇಲೆ ಕ್ರಿ.ಶ. ೧೭೭೭-೯೮ರಲ್ಲಿ ನಡೆದ ಸುರಪುರದ ದಾಳಿ, ವೀರಗೋಟ ಯುದ್ಧ ಕ್ರಿ.ಶ. ೧೭೦೫, ಗುಡಗುಂಟಿಯ ಮೇಲೆ ಸುರಪುರದ ದಾಳಿ ಕ್ರಿ.ಶ. ೧೮೦೦ ಹಾಗೂ ದೇವದುರ್ಗದ ಮೇಲೆ ಸುರಪುರದ ದಾಳಿ ಕ್ರಿ.ಶ. ೧೮೪೦, ಈ ದಾಳಿಗಳನ್ನು ಗೆಲ್ಲದಿದ್ದರೂ ಇಲ್ಲಿನ ಸಂಸ್ಥಾನಿಕರು ಎದುರಿಸಿದರು.

**೩.೩.೩.೧೫. ರಾಜ್ಯ ವಿಸ್ತರಣೆ**

ಆರ್ಥಿಕವಾಗಿ ಪ್ರಧಾನವಾಗಿದ್ದ ಈ ಪ್ರದೇಶವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಳ್ಳಲು ರಾಜ್ಯ ವಿಸ್ತರಣೆಯ ನೆಪದಲ್ಲಿ ವಿವಿಧ ಅರಸುಮನೆತನಗಳು ಹೋರಾಡಿದ್ದುಂಟು. ಈ ಹಿನ್ನೆಲೆಯಲ್ಲಿ ಇದುವರೆಗೆ ನಡೆದಿರುವ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯಕ್ಕೆ ಸಂಬಂಧಿಸಿದ ಯುದ್ಧಗಳೆಲ್ಲವೂ ಇಲ್ಲಿ ಅನ್ವಯಿಸುತ್ತವೆಂದು ಹೇಳಬಹುದು.

**೩.೪. ಧಾರ್ಮಿಕ ಯುದ್ಧಗಳು**

ಈ ಪ್ರದೇಶದಲ್ಲಿ ವೈದಿಕ, ಬೌದ್ಧ, ಜೈನ, ಶೈವ, ವೈಷ್ಣವ, ಕಾಳಾಮುಖ ಮತಗಳು, ಇಸ್ಲಾಂ ಮತ್ತು ಕ್ರೈಸ್ತಧರ್ಮಗಳು ಅಸ್ತಿತ್ವದಲ್ಲಿದ್ದವು. ಈ ಮತಧರ್ಮಗಳಿಗೆ ಸೇರಿದ ಅರಸರ ಆಳ್ವಿಕೆಯೂ ನಡೆದಿರುವುದು ಕಂಡುಬರುತ್ತದೆ. ಇಲ್ಲಿ ಮುಖ್ಯವಾಗಿ ವಿವಿಧ ಅರಸು ಮನೆತನಗಳು ಮತಧರ್ಮಗಳ ಉದ್ದೇಶವನ್ನೇ ಪ್ರಧಾನವಾಗಿಸಿಕೊಂಡು ಯುದ್ಧ ಮಾಡಿಲ್ಲ. ಬದಲಾಗಿ ಯುದ್ಧಗಳಾದ ನಂತರ ತಮ್ಮ ಧಾರ್ಮಿಕ ಮನೋಧೋರಣೆಯನ್ನು ವ್ಯಕ್ತಪಡಿಸಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಅಶೋಕ ಬೌದ್ಧಮತ ಪ್ರಚಾರಕ್ಕಾಗಿ ಮಸ್ಕಿಯಲ್ಲಿ ಶಾಸನ ಹಾಕಿಸಿದ. ಕ್ರಿ.ಶ. ೧೪೦೬ರಲ್ಲಿ ನಡೆದ

ಮಾನವಿ ಯುದ್ಧದ ನಂತರ ಫಿರೋಜ್‌ಶಹ ಇಲ್ಲಿನ ಕೋಟೆಯಲ್ಲಿನ ದೇವಾಲಯವನ್ನು ಮಸೀದಿಯನ್ನಾಗಿ ಪರಿವರ್ತಿಸಿ, ಇದರ ಉಸ್ತುವಾರಿಗೆ ದಂಡನಾಯಕ ಮಲ್ಲಿಕ್ ಸಬ್ದರ್‌ನನ್ನು ನೇಮಿಸಿದ ಬಗ್ಗೆ ತಿಳಿದು ಬರುತ್ತದೆ. ಎರಡನೆಯ ದೇವರಾಯ ಮುದಗಲ್‌ನಲ್ಲಿ ನಡೆದ ಮೂರು ಯುದ್ಧಗಳಲ್ಲಿ ಮುಸ್ಲಿಂ ಸೈನಿಕರನ್ನು ನೇಮಿಸಿಕೊಂಡು ಹೋರಾಟ ಮಾಡಲಾಯಿತು. ಸುರಪುರದ ವೆಂಕಟಪ್ಪನಾಯಕ ಮುಸ್ಲಿಂ ಮಹಿಳೆಯನ್ನು ವಿವಾಹವಾಗಿ ಅವಳಿಗೆ ಜನಿಸಿದ ಮಗುವಿನ ಜವಳ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮಕ್ಕೆ ದೇವದುರ್ಗದ ಕೊಳ್ಳಿರಂಗಪ್ಪನಾಯಕ ಅಂತರ್ಜಾತಿ ವಿವಾಹವೆಂದು ಬಂದಿರಲಿಲ್ಲ. ಇದನ್ನೇ ನೆಪವಾಗಿಟ್ಟುಕೊಂಡು ಕ್ರಿ.ಶ. ೧೮೪೭-೪೮ರಲ್ಲಿ ಸುರಪುರ ದೇವದುರ್ಗದ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ. ಅಧಿಕಾರ ಸ್ಥಾಪಿಸುವುದು ವಿವಿಧ ಅರಸು ಮನೆತನಗಳ ಉದ್ದೇಶವಾಗಿತ್ತು. ಈ ಅಧಿಕಾರ ಸ್ಥಾಪನೆಗಾಗಿ ವಿವಿಧ ಕಾರಣಗಳ ಹಿನ್ನೆಲೆಯಲ್ಲಿ ಯುದ್ಧಗಳು ನಡೆದವು. ಆ ಕಾರಣಗಳು ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಸ್ವರೂಪದಿಂದ ಕೂಡಿದ್ದವು. ಪ್ರಭುತ್ವದ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಈ ಕಾರಣಗಳ ಹಿನ್ನೆಲೆಯಲ್ಲಿ ಹೋರಾಡ ಬೇಕಾಯಿತು.

### ೩.೪. ಯುದ್ಧಗಳಿಂದಾದ ಪರಿಣಾಮಗಳು

ರಾಯಚೂರು ದೋ-ಅಬ್ ಪ್ರದೇಶ ಕ್ರಿಪೂ. ಮೂರನೆಯ ಶತಮಾನದಿಂದ ಕ್ರಿ.ಶ. ೨೦ನೆಯ ಶತಮಾನದವರೆಗೆ ಅಂದರೆ ಸುಮಾರು ಇಪ್ಪತ್ತುಮೂರು(೨೩) ಶತಮಾನಗಳ ಕಾಲ ವಿವಿಧ ಅರಸು ಮನೆತನಗಳ ನಡುವೆ ಸುಮಾರು ೬೧ ಯುದ್ಧಗಳನ್ನು ಕಂಡಿದೆ. ಆದರೆ ಒಂದು ಅಂದಾಜಿನ ಪ್ರಕಾರ ಈ ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುವ ತುರುಗೋಳ್ ಯುದ್ಧಗಳನ್ನು ಸೂಚಿಸುವ ವೀರಗಲ್ಲುಗಳನ್ನು ಗಮನಿಸಿದರೆ ಸುಮಾರು ಒಂದು ನೂರು ಯುದ್ಧಗಳು ನಡೆದಿರಬಹುದೆಂದು ಊಹಿಸಲು ಸಾಧ್ಯವಿದೆ. ಮೌರ್ಯರಿಂದ ರಾಷ್ಟ್ರಕೂಟರ ಕಾಲಾವಧಿಗಿಂತ ಕಲ್ಯಾಣ ಚಾಲುಕ್ಯರಿಂದ ನಿಜಾಮರ ಕಾಲದವರೆಗೆ ನಿರಂತರ ಯುದ್ಧಗಳು ನಡೆದವು. ಕ್ರಿ.ಶ. ೧೦-೨೦ನೆಯ ಶತಮಾನಗಳ ಕಾಲಾವಧಿಯನ್ನು ಯುದ್ಧಗಳ ಶತಮಾನಗಳೆಂದು ಕರೆಯಬಹುದು. ಈ ಬಗೆಯ ಯುದ್ಧಗಳಿಂದಾಗಿ ಅನೇಕ ಪರಿಣಾಮಗಳು ಉಂಟಾದವು. ಸಮಾಜದ ಸಮುದಾಯಗಳ ಜನಜೀವನ, ರಾಜಕೀಯ, ಸಾಮಾಜಿಕ, ಧರ್ಮ ಮತ್ತು ನೀತಿಯ ಬಗೆಗಿನ ದೃಷ್ಟಿಕೋನಗಳು, ದೇಶ, ಭಾಷೆ, ಸಂಸ್ಕೃತಿ ಮುಂತಾದ ಸಾಮಾಜಿಕ ಸಂಗತಿಗಳಲ್ಲಿ ಪಲ್ಲಟಗಳುಂಟಾದವು. ಈ ಬಗೆಯ ಸಾಮಾಜಿಕ ಪಲ್ಲಟಗಳಿಗೆ ರಾಜಕೀಯವೇ ಪ್ರಮುಖ ಕಾರಣವಾಗಿದೆ. ಅರಸುಕೇಂದ್ರಿತ ರಾಜಕಾರಣ ಸಮಾಜದ ಮೇಲೆ ವ್ಯತಿರಿಕ್ತ ಪರಿಣಾಮವನ್ನುಂಟು ಮಾಡಿತು. ಇದರಿಂದಾಗಿ ಈ ಪ್ರದೇಶದ ಸಾಮಾಜಿಕ ಪಲ್ಲಟವನ್ನು ಕುರಿತು ಅಧ್ಯಯನ ಮಾಡುವುದು ಅವಶ್ಯಕತೆಯಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ನಡೆದ ಯುದ್ಧಗಳಿಂದಾದ ಪರಿಣಾಮಗಳನ್ನು ಕುರಿತು ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

ಈ ಪ್ರದೇಶದಲ್ಲಿ ನಡೆದ ಹೋರಾಟಗಳಿಂದಾಗಿ ಇಲ್ಲಿನ ಜನ ಜೀವನದ ಮೇಲೆ ಭಾರಿ ಪರಿಣಾಮ ಬೀರಿರುವುದನ್ನು ಗಮನಿಸಬಹುದಾಗಿದೆ. ಯುದ್ಧಗಳಲ್ಲಿ ಸಾವು-ನೋವುಗಳು ಕಂಡುಬಂದರೆ, ಬದುಕಿ ರುವವರ ಬದುಕಿನ ಬವಣೆಗಳು ಬದಲಾಗಲಿಲ್ಲ. ಸದಾ ಯಜಮಾನಿಕೆಯನ್ನು ಒಪ್ಪಿಕೊಂಡೇ ಕಾಲನೂಕುವ ಪರಿಸ್ಥಿತಿ ನಿರ್ಮಾಣಗೊಂಡಿದ್ದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕವಾಗಿ ಅನೇಕ ಪಲ್ಲಟಗಳು ನಡೆದವು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ನಡೆದ

ಹೋರಾಟದ ಪರಿಣಾಮವಾಗಿ ಕಂಡು ಬರುವ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಅಂಶಗಳನ್ನು ಕುರಿತು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ಈ ಪ್ರದೇಶದಲ್ಲಿ ಕಂಡುಬರುವ ಅವಶೇಷಗಳನ್ನು, ಸ್ಮಾರಕಗಳನ್ನು ಕುರಿತು ವಿವರಿಸುವ ಪ್ರಯತ್ನವನ್ನೂ ಮಾಡಲಾಗಿದೆ. ಈ ಪ್ರದೇಶದಲ್ಲಿನ ಯುದ್ಧಗಳಿಂದಾದ ಪರಿಣಾಮದ ಹಿನ್ನೆಲೆಯಲ್ಲಿ ಈ ನಾಲ್ಕು ಅಂಶಗಳನ್ನು ಕುರಿತಾಗಿ ಇಲ್ಲಿ ವಿಶ್ಲೇಷಣೆ ನಡೆಸಲಾಗಿದೆ.

### ೩.೪.೧. ಆರ್ಥಿಕತೆ

ಒಂದು ಪ್ರದೇಶದ ಅಸ್ತಿತ್ವ ಆ ಪ್ರದೇಶದ ಅರ್ಥವ್ಯವಸ್ಥೆಯ ಮೇಲೆ ನಿಂತಿರುತ್ತದೆ. ಆ ಆರ್ಥಿಕ ವ್ಯವಸ್ಥೆ ಪ್ರಾಕೃತಿಕ ಸಂಪತ್ತು ಮತ್ತು ಜನತೆಯ ದುಡಿಮೆಯನ್ನು ಅವಲಂಬಿಸಿರುತ್ತದೆ. ಇಲ್ಲಿ ಭೂಮಿಯೆ ಪ್ರಧಾನವಾಗಿದದರಿಂದ ಭೂಕಂದಾಯ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುವ ಮೂಲ ಸಾಧನವಾಗಿತ್ತು. ಅಂತೆಯೇ ಸಪ್ತಾಂಗಗಳಲ್ಲಿ ಕೋಶವು ಒಂದಾಗಿದೆ. ಈ ಪ್ರದೇಶದಲ್ಲಿ ತೆರಿಗೆಯ ಮೂಲಕ ಬಹುಪಾಲು ಆದಾಯವನ್ನು ಸಂಗ್ರಹಿಸಲಾಗುತ್ತಿತ್ತು. ರಾಯಚೂರು ದೋ-ಅಬ್ ಪ್ರದೇಶದ ಜನತೆ ತಮ್ಮ ಉಪಜೀವನಕ್ಕಾಗಿ ಕೃಷಿಯನ್ನೇ ಅವಲಂಬಿಸಿದ್ದರು. ಕೆಲವರು ಮಾತ್ರ ವ್ಯಾಪಾರವನ್ನು ನೆಚ್ಚಿಕೊಂಡಿದ್ದುದು ಕಂಡುಬರುತ್ತದೆ. ಶ್ರಮ ವೃತ್ತಿಗಳು ಈ ಪ್ರದೇಶದ ಆರ್ಥಿಕ ಜೀವನಾಡಿಗಳಾಗಿದ್ದವು. ವಿವಿಧ ಅರಸುಮನೆತನಗಳ ರಾಜಕೀಯ ಚಟುವಟಿಕೆಗಳಿಗೆ ಈ ಪ್ರದೇಶದ ಅರ್ಥಸಂಪತ್ತು ಆಧಾರ ವಾಗಿತ್ತು. ಭೂ ಆಧಾರಿತ ಅರ್ಥ ವ್ಯವಸ್ಥೆ ಹೆಚ್ಚುವರಿ ಉತ್ಪಾದನೆಗೆ ಅನುವು ಮಾಡಿಕೊಟ್ಟಿತು. ಇದರಿಂದಾಗಿ ಪೇಟೆ, ಪಟ್ಟಣಗಳು ಕಾಣಿಸಿಕೊಂಡವು. ಈ ಬಗೆಯಲ್ಲಿ ಗುರುತಿಸಿಕೊಂಡಿದ್ದ ಈ ಪ್ರದೇಶ ಆರ್ಥಿಕವಾಗಿ ಬಹಳಷ್ಟು ಸುಧಾರಿಸಿತ್ತು. ಇಂತಹ ಆರ್ಥಿಕ ಅಭಿವೃದ್ಧಿಯನ್ನು ಹೊಂದಿರುವ ಈ ಪ್ರದೇಶದ ಮೇಲೆ ಹಿಡಿತ ಸಾಧಿಸುವ ಪ್ರಯತ್ನಕ್ಕೆ ಕೈಹಾಕಿ ಖಜಾನೆಗಳನ್ನು ಭರ್ತಿ ಮಾಡಿಕೊಳ್ಳಲು ವಿವಿಧ ಅರಸು ಮನೆತನಗಳನ್ನು ಪ್ರಯತ್ನಿಸಿರುವುದು ಕಂಡುಬರುತ್ತದೆ.

ರಾಯಚೂರು ದೋ-ಅಬ್ ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ಕೃಷಿ ವ್ಯವಸ್ಥೆ, ಕೈಗಾರಿಕೆಗಳು, ಕುಶಲಕರ್ಮಿಗಳು, ನಗರೀಕರಣ, ವರ್ತಕರು ಮತ್ತು ವ್ಯಾಪಾರ, ನಾಣ್ಯ ಪದ್ಧತಿ ಹಾಗೂ ತೆರಿಗೆಗಳು ಎಂಬ ಅಂಶಗಳ ಮುಖೇನ ಚರ್ಚಿಸಲು ಪ್ರಯತ್ನಿಸಲಾಗಿದೆ.

### ೩.೪.೧.೧. ಕೃಷಿ ವ್ಯವಸ್ಥೆ

ಕೃಷಿ ವ್ಯವಸ್ಥೆ ಮಾನವನ ಅನೇಕ ಬದಲಾವಣೆಗಳಿಗೆ ಅನುವು ಮಾಡಿಕೊಟ್ಟಿತು. ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆನಿಂತು ತನ್ನ ಜೀವನಾವಶ್ಯಕ ವಸ್ತುಗಳನ್ನು ತಾನೇ ಸಿದ್ಧಪಡಿಸಿಕೊಳ್ಳಲು ಪ್ರಯತ್ನಿಸಿದ. ಈ ಉತ್ಪಾದನಾಕ್ರಮ ಮಾನವನ ಬದುಕಿಗೆ ತಳಹದಿಯಾಗಿ ಆತನ ಸಂಬಂಧಗಳನ್ನು ನಿರ್ಣಯಿಸುವಂತಾದ್ದಾಗಿದೆ. ರಾಜ್ಯದ ಒಟ್ಟು ಆರ್ಥಿಕ ಸ್ಥಿತಿ ಕೃಷಿ ಮತ್ತು ಅದರ ಉತ್ಪಾದನೆಯನ್ನು ಅವಲಂಬಿಸಿರುತ್ತದೆ. ರಾಜ್ಯದ ಅರ್ಥ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ಹಾಗೂ ಆ ಮೂಲಕ ಚರಿತ್ರೆ ನಿರ್ಮಾಣಕ್ಕೆ ಕಾರಣವಾಗಿದ್ದ ರೈತಾಪಿ ವರ್ಗ, ದುಡಿಯುವ ವರ್ಗವನ್ನು ಕಡೆಗಣಿಸಲಾಗಿತ್ತು ಎಂಬುದು ತಿಳಿದುಬರುವ ಸಂಗತಿಯಾಗಿದೆ.

ಈ ಪ್ರದೇಶದಲ್ಲಿ ಕೃಷಿ ವ್ಯವಸ್ಥೆ ಮೌರ್ಯರ ಕಾಲದಿಂದಲೇ ರೂಪುಗೊಂಡಿರಬೇಕು. ಆದರೆ ಇದಕ್ಕೆ ಆಕರಗಳ ಕೊರತೆ ಇದೆ. ಹಾಗೆಂದು ಕಡೆಗಣಿಸಲಾಗದು. ಮೌರ್ಯರು ಮಗಧದಲ್ಲಿ ಕೃಷಿ ಭೂಮಿ ವಿಸ್ತರಣೆಗಾಗಿ ಕಾಡನ್ನು ಕಡಿದು ಕೃಷಿಭೂಮಿಯನ್ನಾಗಿಸುವುದಕ್ಕೆ ಯುದ್ಧ ಖೈದಿಗಳನ್ನು ಬಳಸಿಕೊಂಡಿದ್ದರು. ಹಾಗೆಯೇ ರಾಯಚೂರು ದೋ-ಅಬ್ ಪ್ರದೇಶ ಮೌರ್ಯ ಅರಸ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು.

ಮಸ್ಕಿಯಲ್ಲಿನ ಅವನ ಶಾಸನ ಪ್ರಸಿದ್ಧವಾಗಿದೆ. ಹಟ್ಟಿ ಚಿನ್ನದ ಗಣಿಯಿಂದ ಬಂಗಾರವನ್ನು ರಾಜಧಾನಿ ಪಾಟಲೀಪುತ್ರಕ್ಕೆ ರವಾನಿಸಲಾಗುತ್ತಿತ್ತು. ಈ ಎಲ್ಲ ಕಾರಣಗಳಿಂದ ಈ ಪ್ರದೇಶ ಜನವಸತಿಯನ್ನು ಹೊಂದಿ, ಕೃಷಿ ವ್ಯವಸ್ಥೆಯನ್ನು ರೂಢಿಸಿಕೊಂಡಿತ್ತೆಂದು ತಿಳಿದುಕೊಳ್ಳಬಹುದಾಗಿದೆ. ಕ್ರಿಪೂ. ೩ನೆಯ ಶತಮಾನದಿಂದ ಕೃಷಿ ಚಟುವಟಿಕೆಗಳು ಮಂದಗತಿಯಲ್ಲಿ ಸಾಗಿರಬೇಕು. ಕ್ರಿಶ. ೧೫೦ರಲ್ಲಿ ಗ್ರೀಕ್ ಪ್ರವಾಸಿ ಟಾಲೆಮಿ ಈ ಪ್ರದೇಶದ ಮುದಗಲ್ಲನ್ನು ಉಲ್ಲೇಖಿಸುತ್ತಾನೆ. ಈ ಸ್ಥಳ ಆ ಸಂದರ್ಭದಲ್ಲಿ ಪಟ್ಟಣವಾಗಿ ಪ್ರಸಿದ್ಧಿಯನ್ನು ಪಡೆದಿರಬೇಕು. ಕ್ರಿಶ. ೧೫೦ರ ವೇಳೆಗೆ ಪ್ರವಾಸಿಗಳು ಈ ಪ್ರದೇಶದಲ್ಲಿ ಓಡಾಡಿದ್ದು, ಈ ವೇಳೆಗಾಗಲೇ ಇಲ್ಲಿ ಕೃಷಿ ಚಟುವಟಿಕೆಗಳು ನಡೆದಿರಬೇಕೆಂದು ಊಹಿಸಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಕೃಷಿ ವ್ಯವಸ್ಥೆಯಡಿ ಕೃಷಿಭೂಮಿ, ನೀರಾವರಿ ವ್ಯವಸ್ಥೆ, ಭೂಮಾಲಿಕ ವರ್ಗ, ಉಂಳಿಗಮಾನ್ಯ ಪದ್ಧತಿ ಹಾಗೂ ಕೃಷಿ ಕಾರ್ಮಿಕರು ನೆಲೆಸಿದ್ದ ಅಂಶವನ್ನು ಗಮನಿಸಲಾಗಿದೆ.

### ೩.೪.೧.೧.೧. ಕೃಷಿ ಭೂಮಿ ವಿಸ್ತರಣೆ

ಸಂಸ್ಕೃತಿ ಮತ್ತು ನಾಗರಿಕತೆಯ ಬೆಳವಣಿಗೆಯಲ್ಲಿ ಕೃಷಿ ಪ್ರಧಾನ ಪಾತ್ರವನ್ನು ವಹಿಸಿದೆ. ಪ್ರಾಚೀನ ಸಂದರ್ಭದಲ್ಲಿ ಈ ಕೃಷಿ ಆಹಾರದ ಪ್ರಧಾನ ಮೂಲವಾಗಿರದೆ, ವಿವಿಧ ರಾಜಮನೆತನಗಳ ರಾಜ್ಯಾದಾಯದ ಪ್ರಮುಖ ಆದಾಯದ ಮೂಲವೂ ಆಗಿತ್ತು. ಹೀಗಾಗಿ ಫಲವತ್ತಾದ ಭೂಮಿಯನ್ನು ಹೊಂದಿರುವ ಈ ಪ್ರದೇಶದಲ್ಲಿ ಕೃಷಿಯ ಅಭಿವೃದ್ಧಿ ಮತ್ತು ವಿಸ್ತರಣೆ ಕಾರ್ಯ ನಡೆಯಿತು. ರಾಜ್ಯ ಮತ್ತು ಕೃಷಿ ವ್ಯವಸ್ಥೆಗಳ ನಡುವಿನ ಸಂಬಂಧ ಉತ್ತಮವಾಗಿದ್ದಾಗ ಕೃಷಿಯ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಂಡುಬರುತ್ತದೆ. ಇದನ್ನು ಪ್ರಭುತ್ವದ ಆರ್ಥಿಕ ನೆಲೆಗಟ್ಟಿನಿಂದ ಗುರುತಿಸಬಹುದು. ಆದರೆ ಪ್ರಭುತ್ವಕ್ಕಿಂತ ಮುಂಚೆ ಈ ಪ್ರದೇಶ ಕೃಷಿ ಚಟುವಟಿಕೆಗಳಿಂದ ಕೂಡಿ ಆರ್ಥಿಕ ದೃಷ್ಟಿಯಿಂದ ಮುಂದುವರೆದಿತ್ತು, ನಾಗರಿಕತೆಯ ಲಕ್ಷಣಗಳನ್ನು ಹೊಂದಿತ್ತು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕೃಷಿ ವಿಸ್ತರಣೆ ಕಾರ್ಯ ನಡೆದಿತ್ತೆಂದು ಹೇಳಬಹುದಾಗಿದೆ.

"ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯೇ ಕೃಷಿ ವಿಸ್ತರಣೆಯಾಗಿದೆ. ಈ ಪ್ರಕ್ರಿಯೆ ಕ್ರಿಶ. ೮ರಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಅಧಿಕವಾಗಿತ್ತು. ಇದರ ಉದ್ದೇಶ ರಾಜ್ಯಾದಾಯದ ಹೆಚ್ಚಳ, ಜನಸಂಖ್ಯೆಯ ಒತ್ತಡವನ್ನು ನಿಯಂತ್ರಿಸು ವುದಾಗಿದೆ" ಎಂದು ಮೋಹನ್‌ಕೃಷ್ಣ ರೈ ಅವರು ಹೇಳುತ್ತಾರೆ.[೯] ಈ ವಿಚಾರ ರಾಯಚೂರು ದೋ-ಅಬ್ ಪ್ರದೇಶಕ್ಕೂ ಅನ್ವಯವಾಗುತ್ತದೆ. ಇದಕ್ಕೆ ಈ ಪ್ರದೇಶದಲ್ಲಿ ದೊರೆತ ಶಾಸನಗಳು ಪ್ರಮುಖ ಆಧಾರವಾಗಿವೆ. ಕ್ರಿಶ. ೮ರಿಂದ ೧೪ನೆಯ ಶತಮಾನಗಳ ಅವಧಿ ರಾಜಕೀಯ ಹಿನ್ನೆಲೆಯನ್ನು ಹೊಂದಿದೆ. ಇದು ವಿವಿಧ ಅರಸುಮನೆತನಗಳು ತಮ್ಮ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುವ ನಿಟ್ಟಿನಲ್ಲಿ ಅನುಸರಿಸಿದ ಕ್ರಮವಾಗಿದೆ. ಆದರೆ ಇದಕ್ಕೂ ಮುಂಚೆ ಅಂದರೆ ಪ್ರಭುತ್ವದ ಪ್ರಭಾವಕ್ಕೂ ಮುನ್ನ ಈ ಪ್ರಕ್ರಿಯೆ ಈ ಪ್ರದೇಶದಲ್ಲಿ ನಡೆದಿತ್ತು ಎಂಬುದಾಗಿ ತಿಳಿದುಬರುತ್ತದೆ. ಅದಕ್ಕೆ ಸಂಬಂಧಿಸಿದ ಉಲ್ಲೇಖಗಳೂ ಕಂಡುಬರುತ್ತವೆ.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ನವಶಿಲಾಯುಗದ ಕಾಲಗಿಂದಲೂ ಕೃಷಿ ಚಟುವಟಿಕೆಗಳು ನಡೆದಿವೆ. ಕ್ರಿಪೂ. ೩೦೦೦-ಕ್ರಿಪೂ. ೧೬೦೦ರ ಅವಧಿಯಲ್ಲಿ ಈ ಪ್ರದೇಶದ ಮಸ್ಕಿ, ಪಿಕ್ಲಿಹಾಳ, ಕಲ್ಲೂರುಗಳಲ್ಲಿ ದೊರೆತ ಲೋಹಗಳಿಂದ ಕೃಷಿ ವಿಸ್ತರಣೆ ನಡೆಯಿತು. ಹಾಗೆಯೇ ಉಳುಮೆಗೆ

ಯೋಗ್ಯವಾದ ಭೂಮಿ ಸಿದ್ಧವಾಗಲು ಕಬ್ಬಿಣದ ಬಳಕೆಯನ್ನು ಮಾಡಲಾಯಿತು. ಈ ಪ್ರದೇಶದಲ್ಲಿ ನವಶಿಲಾಯುಗದ ಜನರ ವಾಸ್ತವ್ಯದಿಂದಾಗಿ ಆರಂಭವಾದ ಕೃಷಿ ವಿಸ್ತರಣೆಯ ಕಾರ್ಯ ನಂತರದಲ್ಲಿ ನಿರಂತರವಾಗಿ ಮುಂದುವರೆಯಿತು. ಇದು ಈ ಪ್ರದೇಶದಲ್ಲಿ ನಡೆದ ಪ್ರಥಮ ಬೇಸಾಯ ಕ್ರಮವಾಗಿದೆ. ಇದು ನವಶಿಲಾಯುಗದ ಜನರ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿತೆಂದು ತಿಳಿದುಬರುತ್ತದೆ.[೯] ಅಂದಿನಿಂದಲೇ ಕೃಷಿ ವಿಸ್ತರಣೆ ನಡೆದಿದೆಯೆಂದು ಹೇಳಬಹುದಾಗಿದೆ. ಇದಕ್ಕೆ ಪೂರಕವಾಗಿ ಎಸ್.ಆರ್.ರಾವ್ ಅವರು ಕೂಡ ರಾಯಚೂರು ದೋ-ಅಬ್ ಪ್ರದೇಶದಲ್ಲಿ ನವಶಿಲಾಯುಗದ ಕಾಲಕ್ಕೆ ಕೃಷಿಯ ಪರಿಚಯವಿತ್ತು. ಇಲ್ಲಿನ ಜನರು ಬೆಟ್ಟದ ಇಳಿಜಾರು ಪ್ರದೇಶದಲ್ಲಿ ನೆಲೆಸಿದ್ದರು. ಸಣ್ಣ ಸಣ್ಣ ಗ್ರಾಮಗಳಲ್ಲಿ ಪಶುಪಾಲನೆ ಕಾರ್ಯ ನಡೆಯುತ್ತಿತ್ತು. ಇಲ್ಲಿನ ಜನರು ಕೆಲವು ಬಗೆಯ ಧಾನ್ಯಗಳನ್ನೂ, ಬೆಳೆಗಳನ್ನೂ ಬೆಳೆಯುತ್ತಿದ್ದರು. ಈ ಪ್ರದೇಶದ ಪಿಕ್ಲಿಹಾಳ ಮತ್ತು ಹರಪ್ಪಾ ಜನರ ನಡುವೆ ವ್ಯಾಪಾರ ಸಂಪರ್ಕ ಬೆಳೆಯಿತು. ಹರಪ್ಪಾ ಜನರಿಗೆ ಅಗತ್ಯವಾದ ಚಿನ್ನವನ್ನು ಈ ಜನರು ಪೂರೈಸುತ್ತಿದ್ದರೆಂದು ತಿಳಿಸುತ್ತಾರೆ(ಗುರುರಾಜಾಚಾರ್ ೧೯೯೪: ೨೦೪-೨೦೫). ಈ ಕಾಲಕ್ಕಾಗಲೇ ಈ ಪ್ರದೇಶದ ಜನರಿಗೆ ಕೃಷಿಯ ಜೊತೆಗೆ ಚಿನ್ನವನ್ನು ಅಗೆದು ತೆಗೆದು, ಪರಿಷ್ಕರಿಸಿ ರಫ್ತು ಮಾಡುವ ತಾಂತ್ರಿಕತೆಯನ್ನು ಬಲ್ಲವರಾಗಿದ್ದರು. ಕೃಷಿಯ ವಿಸ್ತರಣೆ ಕಾರ್ಯ ಹಂತ ಹಂತವಾಗಿ ಮುಂದುವರೆದಿತ್ತು ಎಂದು ಗುರುತಿಸಬಹುದಾಗಿದೆ.

ಅ.ಸುಂದರ ಅವರು ಇನ್ನೂ ಸ್ವಲ್ಪ ಮುಂದುವರೆದು, ಈ ಪ್ರದೇಶದ ಆರ್ಥಿಕ ಚಟುವಟಿಕೆಗಳನ್ನು ಬೃಹತ್ ಶಿಲಾ ಸಂಸ್ಕೃತಿ ಕಾಲಕ್ಕೆ ಸೇರಿದ ಮಸ್ಕಿ ಉತ್ಖನನದಲ್ಲಿ ದೊರೆತ ಈಟಿ ಮತ್ತು ಕಠಾರಿಗಳ ಹಿನ್ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಮಸ್ಕಿಯಲ್ಲಿ ಕಲ್ಗೋರಿಗಳನ್ನು ನಿರ್ಮಿಸಿದ ಜನವರ್ಗದಲ್ಲಿ ಕೆಲವು ಜನಸಮುದಾಯಗಳು ಉತ್ತಮ ಕಬ್ಬಿಣ ಲೋಹವನ್ನು ಸಿದ್ಧ ಮಾಡಿ ಅದರಿಂದ ಉತ್ತಮ ಉಕ್ಕಿನ ಶಸ್ತ್ರಗಳನ್ನು ತಯಾರು ಮಾಡುವುದರಲ್ಲಿ ನಿಪುಣರಾಗಿದ್ದರು ಎಂಬುದು ಅನ್ವೇಷಣೆ, ಉತ್ಖನನ ಮತ್ತು ವೈಜ್ಞಾನಿಕ ಅನ್ವೇಷಣೆಗಳಿಂದ ಸಿದ್ಧವಾಗಿದೆ. ಈ ವಿಶಿಷ್ಟ ತಂತ್ರಗಾರಿಕೆಗೆ ಈ ಪ್ರದೇಶದ ಜನ ಹೆಸರುವಾಸಿಗಳಾಗಿದ್ದರೆಂದು ಹೇಳುತ್ತಾರೆ. ಅಲ್ಲದೆ ಈ ಪ್ರದೇಶದ ಆರ್ಥಿಕಾಭಿವೃದ್ಧಿ ಕಾರಣದಿಂದಲೇ ಅಶೋಕ ಚಕ್ರವರ್ತಿ ಈ ಪ್ರದೇಶದಲ್ಲಿ ಅಧಿಕಾರಿಗಳನ್ನು ನೇಮಿಸಿ ಶಾಸನಗಳನ್ನು ಹೊರಡಿಸಿದನೆಂದು ತಿಳಿದುಬರುತ್ತದೆ(ಸುಂದರ ೧೯೯೭: ೮-೯). ಇಷ್ಟಲ್ಲದೆ ಈ ಪ್ರದೇಶದಲ್ಲಿ ಕಂಡುಬಂದ ಪ್ರಾಗ್ಯೆತಿಹಾಸಿಕ ಕಾಲದ ಚಿತ್ರಕಲೆಯ ನೆಲೆಗಳನ್ನು ಗಮನಿಸಿದರೆ ಪಶುಪಾಲನೆ ಮತ್ತು ಕೃಷಿ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಮಸ್ಕಿ, ಪಿಕ್ಲಿಹಾಳ, ಭಿಲ್ಲಮರಾಯನಗುಡ್ಡ, ಮಾನವಿ, ಕಲ್ಲೂರು, ರಾಮದುರ್ಗ, ಆಲ್ಕೋಡ ಮುಂತಾದ ನೆಲೆಗಳಲ್ಲಿ ಒಂಟಿ ಗೂಳಿಯ ಚಿತ್ರಗಳು, ಜೋಡು ಎತ್ತಿನ ಚಿತ್ರಗಳು, ಬಯಲು ಮರ್ಚೇಡ್‌ದಲ್ಲಿರುವ ಗೋಗ್ರಹಣ ಚಿತ್ರಗಳು-ಇವು ಕಾರ ಹುಣ್ಣಿಮೆ, ಸಂಕ್ರಾಂತಿಯನ್ನು ನೆನಪಿಸುತ್ತವೆ. ಈ ಚಿತ್ರಕಲೆ ಈ ಪ್ರದೇಶದಲ್ಲಿನ ಕೃಷಿ ವಿಸ್ತರಣೆಯನ್ನು ಸೂಚಿಸುವ ಕುರುಹುಗಳಾಗಿವೆ.

ಈ ರೀತಿಯಾಗಿ ರಾಜ ಪ್ರಭುತ್ವದ ರಾಜ್ಯಾದಾಯದ ಹಿನ್ನೆಲೆಯಲ್ಲಿ ಕೃಷಿ ವಿಸ್ತರಣೆ ನಡೆಯುವ ಮುನ್ನ ಮಾನವನು ತನ್ನ ಬದುಕಿನ ಬವಣೆಯನ್ನು ನೀಗಿಸಿಕೊಳ್ಳಲು ಕೃಷಿಯನ್ನು ಅವಲಂಬಿಸಿದ್ದನು. ಹಾಗೆಯೆ ಜನಸಂಖ್ಯೆಯ ಬೆಳವಣಿಗೆಯಿಂದಾಗಿ ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿಕೊಂಡು ಜೀವನ ಸಾಗಿಸಿದ ಬಗ್ಗೆ ತಿಳಿದುಬರುತ್ತದೆ. ಕೃಷಿ ಉತ್ಪಾದನೆ ಜನರ ಮುಖ್ಯ ಕಸುಬಾಗಿತ್ತು. ಹೆಚ್ಚುವರಿ ಉತ್ಪಾದನೆಯಿಂದ ಗ್ರಾಮೀಣ ನಗರ ಸಂಸ್ಕೃತಿಗಳು ತಲೆ ಎತ್ತಿದವು. ಇದಕ್ಕೆ ನಾಗರಿಕತೆಯ ಸ್ಪರ್ಶ ತಗುಲಿತ್ತು ಎಂಬುದಾಗಿ ಊಹಿಸಬಹುದಾಗಿದೆ.

ಕ್ರಿಪೂ. ಮೂರನೆಯ ಶತಮಾನದ ವೇಳೆಗೆ ಈ ಬೃಹತ್ ಶಿಲಾಯುಗದ ಜನ ಗುಡ್ಡಗಾಡುಗಳಿಂದ ಫಲವತ್ತಾದ ಈ ನದಿ ಬಯಲು ಪ್ರದೇಶದಲ್ಲಿ ಇಳಿದು, ಮುಖಜ ಭೂಮಿಯಾಗಿರುವ ಈ ಪ್ರದೇಶದಲ್ಲಿ ಕೃಷಿ ವಿಸ್ತರಣೆಯಲ್ಲಿ ತೊಡಗಿಕೊಂಡರು. ಈ ಪ್ರದೇಶ ವಾಣಿಜ್ಯ-ವ್ಯಾಪಾರದಿಂದಾಗಿ ಅನ್ಯ ಪ್ರದೇಶ ಗಳೊಂದಿಗೆ ಉತ್ತಮ ಸಂಬಂಧವನ್ನು ಹೊಂದಿತ್ತು. ಹಾಗಾಗಿ ವರ್ತಕರು, ಜೈನ, ಬೌದ್ಧ ಹಾಗೂ ಬ್ರಾಹ್ಮಣ ಮತಧರ್ಮ ಪ್ರಚಾರಕರ ಸಂಪರ್ಕದಿಂದಾಗಿ ಗ್ರಾಮಗಳನ್ನು ರಚಿಸಿಕೊಂಡರು. ಈ ಪ್ರದೇಶ ಚಿನ್ನ ಮತ್ತು ಇತರ ಕಾರಣಗಳಿಂದಾಗಿ ಉತ್ತರದವರಿಗೆ ಬಹುಮಹತ್ವದ್ದಾಯಿತು. ದಕ್ಷಿಣಾ ಪಥದಲ್ಲಿ ರಾಯಚೂರು ದೋ-ಅಬ್ ಪ್ರದೇಶ ಪ್ರಮುಖ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಹೆಸರು ವಾಸಿಯಾಗಿತ್ತು. ಕೃಷಿಯ ಹೆಚ್ಚುವರಿ ಉತ್ಪಾದನೆಯೇ ನಗರ ಸಂಸ್ಕೃತಿಯಾಗಿದೆ. ಇದು ಸಿಂಧೂ ನಾಗರಿಕತೆಯ ಹರಪ್ಪಾದೊಂದಿಗೆ ಹೊಂದಿರುವ ವ್ಯಾಪಾರ ಸಂಬಂಧ ಹೊಂದಲು ಸಹಕಾರಿ ಯಾಯಿತು. ಇದಕ್ಕೂ ಮುಂಚೆ ಈ ಪ್ರದೇಶದ ಜನರಿಗೆ ಕಬ್ಬಿಣದ ಬಳಕೆ ತಿಳಿದಿತ್ತು. ಬೆಟ್ಟಗಳ ಇಳಿಜಾರಿನಲ್ಲಿ ವಾಸ ಮಾಡುತ್ತಿದ್ದುದು ಅವರಿಗೆ ರೂಢಿಯಾಗಿತ್ತು. ಅಲ್ಲಿಯೇ ಶವಸಂಸ್ಕಾರ ಮಾಡಲಾಗುತ್ತಿತ್ತು. ಇದಕ್ಕೆ ಇತ್ತೀಚೆಗೆ ಮಸ್ಕಿಯ ಗುಡ್ಡದಲ್ಲಿ ಕಂಡುಬಂದ ಮಾನವನ ಅಸ್ತಿ ಪಂಜರವೇ ಸಾಕ್ಷಿಯಾಗಿದೆ.[೯೫] ಇದರಿಂದಾಗಿ ಈ ಪ್ರದೇಶದಲ್ಲಿ ಜನರು ಒಂದೆಡೆ ನೆಲೆಸುತ್ತಿದ್ದರು. ಬೆಟ್ಟಗಳೇ ಆಶ್ರಯ ತಾಣಗಳಾಗಿದ್ದವು. ಈ ಜನರು ಒಂದೆಡೆ ನೆಲೆಸಿದ್ದರಿಂದ ಆಹಾರ ಉತ್ಪಾದನೆಗಾಗಿ ಕೃಷಿಯಲ್ಲಿ ತೊಡಗಿಸಿಕೊಂಡಿದ್ದರು.

ಬೃಹತ್ ಶಿಲಾಸಂಸ್ಕೃತಿಯ ಜನರಲ್ಲಿ ರೂಢಿಯಲ್ಲಿದ್ದ ಕೆಲವು ವಿಶಿಷ್ಟ ಆಚರಣೆಗಳು ಈ ಪ್ರದೇಶದ ಸಂದರ್ಭದಲ್ಲಿ ಭಿನ್ನ ಬಗೆಯಲ್ಲಿದ್ದಿರಬಹುದು. ಇಲ್ಲಿನ ಜನರುಕಬ್ಬಿಣದ ಅದಿರನ್ನು ಕರಗಿಸುವುದರಲ್ಲಿ ಮತ್ತು ಕಮ್ಮಾರಿಕೆಯಲ್ಲಿ ತೀರಾ ಪರಿಣಿತರಾಗಿದ್ದರು. ಇದಕ್ಕೆ ಮಾನವಿ ತಾಲೂಕಿನ ಮಾಚನೂರು, ಕವಿತಾಳ ಮತ್ತು ಕಲ್ಲೂರು ಬೆಟ್ಟಗಳಲ್ಲಿ ದೊರತಿರುವ ತಾಮ್ರದ ಕೊಡಲಿಗಳು, ಕಬ್ಬಿಣದ ಅದಿರುಗಳು ಮಾನವನ ಲೋಹ ತಂತ್ರಜ್ಞಾನಕ್ಕೆ ಸಾಕ್ಷಿಯಾಗಿವೆ. ಯರಗುಂಟಿ, ವಂದಲಿ, ಕವಿತಾಳಗಳಲ್ಲಿಯ ಕುದುರೆಲಾಳಾಕೃತಿಯ ಲೋಹ, ಕೊಳ್ಳದಲ್ಲಿ ದೊರೆತಿರುವ ಕೆಲವು ದಿಬ್ಬಗಳನ್ನು ಅಗೆದಾಗ, ಲೋಹ ಕರಗಿಸುವ ಕುಲುಮೆಗೆ ಬಾಯಿಂದ ಊದುವ ನಳಿಕೆಗಳನ್ನು ಕೂಡ ಕಂಡು ಹಿಡಿದಿರುವುದು ಗಮನಿಸಬಹುದಾಗಿದೆ(ಚಿತ್ರಾಗಾರ ೧೯೯: ೧೦). ಈ ಹಿನ್ನೆಲೆಯಲ್ಲಿ ಈ ಪ್ರದೇಶದ ಆರ್ಥಿಕ ಪರಿಸ್ಥಿತಿ ಉತ್ತಮವಾಗಿತ್ತೆಂದು ಹೇಳಬಹುದಾಗಿದೆ. ಇಲ್ಲಿನ ಆರ್ಥಿಕ ಅಭಿವೃದ್ಧಿಯೇ ಮೌರ್ಯ ಅರಸ ಅಶೋಕನ ಗಮನ ಸೆಳೆದಿರುವುದರಲ್ಲಿ ಎರಡು ಮಾತಿಲ್ಲ. ತನ್ನ ಸಾಮ್ರಾಜ್ಯಕ್ಕೆ ಅಗತ್ಯವಾಗಿರುವ ಇಂತಹ ಪ್ರದೇಶ ಮತ್ತು ಸಂಪತ್ತು, ಅಲ್ಲದೆ ಆರ್ಥಿಕ ಬೆಳವಣಿಗೆಗೆ ಕಾರಣರಾದ ಕಸುಬುದಾರರು ಅಶೋಕನಿಗೆ ಅವಶ್ಯವಾಗಿತ್ತು. ಈ ಕಾರಣಕ್ಕಾಗಿ ಇಂತಹ ನುರಿತ ಕಸಬುದಾರಿಕೆಯ ಸಮುದಾಯಗಳನ್ನು ತನ್ನ ವಶಕ್ಕೆ ಪಡೆದಿರುವ ಸಾಧ್ಯತೆಗಳಿವೆ. ರಾಜಕೀಯ ಸಂಬಂಧಗಳಿಂದಾಗಿ ಕೃಷಿ ವಿಸ್ತರಣೆ ಮತ್ತಷ್ಟು ಹೆಚ್ಚಿರುವುದು ಕಂಡುಬರುತ್ತದೆ. ರಾಜ ಪ್ರಭುತ್ವದ ವೇಳೆಗಾಗಲೇ ನಡೆದ ಕೃಷಿ ವಿಸ್ತರಣೆ ಕಾರ್ಯ ಮಾನವನ ಬದುಕಿನ ನಿರ್ವಹಣೆಗಾಗಿ ನಡೆದರೆ, ರಾಜಪ್ರಭುತ್ವ ಅಸ್ತಿತ್ವಕ್ಕೆ ಬರುತ್ತಿದ್ದಂತೆ ಇದು ರಾಜ್ಯಾದಾಯದ ಕಲ್ಪನೆಯನ್ನು ಪಡೆದುಕೊಂಡಿತು. ಅದಕ್ಕೆ ಸಂಬಂಧಿಸಿದ ಆದಾಯದ ಮೂಲಗಳನ್ನು ಸೃಷ್ಟಿಸಿ, ರಾಜ್ಯ ಭಂಡಾರದ ಭರ್ತಿಗಾಗಿ ರಾಜಪ್ರಭುತ್ವ ಪ್ರಯತ್ನಿಸಿದ ಬಗ್ಗೆ ತಿಳಿದುಬರುತ್ತದೆ.

"ಮೌರ್ಯ ಸಾಮ್ರಾಜ್ಯವೆಂಬ ಪೂರ್ಣ ಪ್ರಮಾಣದ 'ರಾಜ್ಯ' ಆರಂಭವಾಗುವುದಕ್ಕೆ ಮೊದಲು ಉತ್ತರ ಭಾರತದಲ್ಲಿ ವಿವಿಧ ರೀತಿಯ ರಾಜಕೀಯ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಅಂದರೆ ರಾಜ್ಯ ಸ್ವರೂಪಕ್ಕೆ ಹೋಲಿಕೆಯಾಗುವ ಹಲವಾರು ರಾಜಕೀಯ ವ್ಯವಸ್ಥೆಗಳು ಕಂಡುಬರುತ್ತವೆ. ಅವುಗಳಿಗೆ 'ಜನಪದ'ಗಳೆಂದು ಕರೆಯುತ್ತಾರೆ. ಅವರು ವಾಸ ಮಾಡುವ ಪ್ರದೇಶಕ್ಕೆ 'ಜನಪದ' ಎಂದು ಹೆಸರು. ಇದೊಂದು ಬುಡಕಟ್ಟು ವ್ಯವಸ್ಥೆ ಹಾಗೂ ಇವುಗಳಲ್ಲಿದ್ದ ಜನರ ಕಸುಬು ಬೇಟೆ ಹಾಗೂ ಪಶುಸಂಗೋಪನೆ. ತಮ್ಮ ಗಡಿಗಳನ್ನು ಅರಣ್ಯ, ನದಿ, ತೊರೆ, ಬೆಟ್ಟಗಳಿಂದ ಗುರುತಿಸಿಕೊಳ್ಳುತ್ತಿರುತ್ತಾರೆ" ಎಂಬುದಾಗಿ ಟಿ. ಮಂಜುನಾಥ ಅವರು ತಿಳಿಸುತ್ತಾರೆ(ತಂಬಂಡ ೨೦೧೦: ೧೭೦–೧೭೧). ಆದರೆ ದಕ್ಷಿಣ ಭಾರತದಲ್ಲಿ ಕರ್ನಾಟಕದ ಸಂದರ್ಭದಲ್ಲಿ ರಾಯಚೂರು ದೋ–ಅಬ್ ಪ್ರದೇಶದಲ್ಲಿ ಈ ಬಗೆಯ ಆಡಳಿತ ಗೋಚರಿಸುವುದಿಲ್ಲ. ಆದರೆ ಇಲ್ಲಿನ ಜನರು ಉತ್ತರದಲ್ಲಿ ಗುರುತಿಸಿಕೊಂಡಂತೆ ಬೇಟೆ, ಪಶುಸಂಗೋಪನೆ, ಕಾಡು, ತೊರೆ, ನದಿ, ಬೆಟ್ಟಗಳೊಂದಿಗೆ ಈ ಪ್ರದೇಶದ ಜನರೂ ಗುರುತಿಸಿಕೊಂಡಿದ್ದರು. ಆದರೆ ಸಣ್ಣ ಪ್ರಮಾಣದ ಆಡಳಿತ ವ್ಯವಸ್ಥೆಯ ಕುರಿತಾದ ಸುಳಿವು ದೊರೆಯುತ್ತಿಲ್ಲ. ಈ ಪ್ರದೇಶದ ಜನತೆ ಕೃಷಿ ವಿಸ್ತರಣೆಗೆ ಆದ್ಯತೆ ನೀಡಿದಷ್ಟು ರಾಜ್ಯ ವ್ಯವಸ್ಥೆಗೆ ಆಸಕ್ತಿಯನ್ನು ತೋರಿಸಿರಲಿಕ್ಕಿಲ್ಲ. ಸಾಮಾಜಿಕ ಜೀವನ ಕೃಷಿ ಚಟುವಟಿಕೆಗಳಿಂದ ಕೂಡಿತ್ತು. ಮೌರ್ಯರ ಆಗಮನದ ವೇಳೆಗೆ ಈ ಪ್ರದೇಶ ಆರ್ಥಿಕ ನೆಲೆಗಟ್ಟಿನಿಂದ ಭಿನ್ನವಾಗಿ ಗುರುತಿಸಿಕೊಂಡಿತ್ತು. ಹಾಗಾಗಿ ಈ ಪ್ರದೇಶದಲ್ಲಿ ಆರ್ಥಿಕ ಚಟುವಟಿಕೆಗಳಿಗೆ ಪೂರಕವಾದ ಸನ್ನಿವೇಶ ನಿರ್ಮಾಣಗೊಂಡಿತ್ತು.

ಈ ಪ್ರದೇಶದಲ್ಲಿ ಎಲ್ಲಾ ತರಹದ ಕೃಷಿ ಭೂಮಿಗಳಿದ್ದವು. ಅವನ್ನು ಹೊಲ, ಭೂಮಿ, ಗದ್ದೆ, ತೋಟ ಎಂದು ಕರೆಯಲಾಗುತ್ತಿತ್ತು.[೯೬] ಈ ಪ್ರದೇಶದಲ್ಲಿನ ಭೂಮಿಯನ್ನು ಕರಿಯನೆಲ,[೯೭] ಕಪ್ಪು ಭೂಮಿ[೯೮] ಎರೆಭೂಮಿ[೯೯] ಎಂಬ ಹೆಸರುಗಳಿಂದ ಗುರುತಿಸಲಾಗಿದೆ. ತೋಟ[೧೦೦]ಗಳ ಉಲ್ಲೇಖ ಬರುತ್ತದೆ. ಆದರೆ ಯಾವ ಬಗೆಯ ತೋಟಗಳಿದ್ದವೆಂಬುದು ತಿಳಿದುಬರುವುದಿಲ್ಲ. ಅಲ್ಲಿ ಹೂದೋಟ[೧೦೧]ಗಳ ಉಲ್ಲೇಖವಿದೆ. ಆರಂಭದಲ್ಲಿ ಮಳೆಯಾಶ್ರಿತ ಬೇಸಾಯ ಕ್ರಮವನ್ನು ಅನುಸರಿಸುತ್ತಿದ್ದರು. ಇದರಿಂದ ರಾಜ್ಯಾದಾಯಕ್ಕೆ ಹೆಚ್ಚಿನ ಆದಾಯ ಸಂದಾಯವಾಗದಿರುವುದಕ್ಕೆ ಕೆರೆ, ಕುಂಟೆ, ಬಾವಿ, ಏತ ಮತ್ತು ಕಾಲುವೆಗಳ ಮುಖಾಂತರ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಯಿತು.[೧೦೨] ಕ್ರಿಪೂ. ಮೂರನೆಯ ಶತಮಾನದಿಂದ ಕ್ರಿ.ಶ. ೨೦ನೆಯ ಶತಮಾನದವರೆಗೆ ಈ ಪ್ರದೇಶದಲ್ಲಿ ಯಾವ ಯಾವ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಶಾಸನಗಳು ಮತ್ತು ಸಾಹಿತ್ಯ ಕೃತಿಗಳಲ್ಲೂ ಇಲ್ಲಿನ ಬೆಳೆಗಳ ಕುರಿತಾದ ಉಲ್ಲೇಖಗಳಿವೆ. ಭತ್ತ,[೧೦೩] ಜೋಳ[೧೦೪] ಈ ಪ್ರದೇಶದ ಪ್ರಮುಖ ಬೆಳೆಗಳಾಗಿದ್ದವು. ಹಾಗೆಯೇ ಕೆಲವು ಬಗೆಯ ಧಾನ್ಯಗಳನ್ನು, ಬೇಳೆ ಕಾಳುಗಳನ್ನು ಬೆಳೆಯುತ್ತಿದ್ದರು ಎಂಬುದಾಗಿಯೂ ತಿಳಿದುಬರುತ್ತದೆ.[೧೦೫]

ಈ ಪ್ರದೇಶದಲ್ಲಿ ಅಗ್ರಹಾರ, ಬ್ರಹ್ಮಪುರಿ ಹಾಗೂ ಘಟಿಕಸ್ಥಾನಗಳನ್ನು ಸ್ಥಾಪಿಸುವ ಮೂಲಕ ಕೃಷಿ ವಿಸ್ತರಣೆ ಕಾರ್ಯ ನಡೆಯಿತು. ಅಲ್ಲದೆ ದೇವಾಲಯಗಳಿಗೆ ಭೂದಾನ ಮಾಡಿರುವುದು ಸಹ ಕೃಷಿ ವಿಸ್ತರಣೆಯ ಭಾಗವಾಗಿದೆ. ಹಾಗೆಯೇ ಮಹಾಸಾಮಂತ, ಮಹಾಮಂಡಲೇಶ್ವರ, ಸಾಮಂತ, ದಂಡನಾಯಕ ಮುಂತಾದವರಿಗೆ ಅಧಿಕಾರದ ಭಾಗವಾಗಿ ಲಭಿಸಿದ ಭೂ ಪ್ರದೇಶ ಸಹ ಕೃಷಿ ವಿಸ್ತರಣೆಗೆ ಕಾರಣವಾಯಿತೆನ್ನಬಹುದು. ಮುಖ್ಯವಾಗಿ ಈ ಪ್ರದೇಶ ಕ್ರಿಪೂ. ಮೂರನೆಯ ಶತಮಾನದಿಂದ

ಹಂತ ಹಂತವಾಗಿ ಕೃಷಿ ವಿಸ್ತರಣೆ ಕಾರ್ಯ ಹೆಚ್ಚುತ್ತಾ ಬಂದಿದೆ. ಆದರೆ ಮೌರ್ಯರ ನಂತರ ಕಾಲದ ಕೃಷಿ ವಿಸ್ತರಣೆಗೆ ಸಂಬಂಧಿಸಿದ ವಿವರಗಳು ದೊರೆಯುವುದಿಲ್ಲ. ಹಾಗೆಂದು ಮೌರ್ಯರಿಂದ ರಾಷ್ಟ್ರಕೂಟರ ವರೆಗಿನ ಕಾಲಾವಧಿಯನ್ನು ಕಡೆಗಣಿಸುವಂತಿಲ್ಲ. ಈ ಕಾಲಾವಧಿಯಲ್ಲಿ ವ್ಯಾಪಾರ-ವಾಣಿಜ್ಯ ಕ್ಷೇತ್ರದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿತ್ತು. ಇದಕ್ಕೆ ಇಲ್ಲಿನ ಕೃಷಿಯಲ್ಲಿನ ಹೆಚ್ಚುವರಿ ಉತ್ಪಾದನೆಯೇ ಕಾರಣವಾಗಿದೆ. ಅಂದರೆ ಕೃಷಿ ವಿಸ್ತರಣೆ ನಡೆದಿತ್ತು ಎಂದರ್ಥ.

ಕ್ರಿ.ಶ. ೧-೨ನೆಯ ಶತಮಾನದಲ್ಲಿ ಈ ಪ್ರದೇಶ ರೋಮ್‌ನೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಇದಕ್ಕೆ ಲಿಂಗಸೂಗೂರಿನಲ್ಲಿ ದೊರೆತ ಚಿನ್ನದ ನಾಣ್ಯ ಸಾಕ್ಷಿಯಾಗಿದೆ.[೧೦೬] ಈ ಪ್ರದೇಶದಲ್ಲಿ ದೊರೆತಂತೆ ದಕ್ಷಿಣ ಭಾರತದಲ್ಲಿ ಸುಮಾರು ೧೫೦ ರೋಮನ್ ನಾಣ್ಯ ನಿಧಿಗಳು ದೊರೆತಿವೆ. ಈ ಸಂದರ್ಭದಲ್ಲಿ ದಕ್ಷಿಣ ಭಾರತ ಮತ್ತು ರೋಮ್‌ನ ನಡುವೆ ವ್ಯಾಪಾರ ಸಂಬಂಧ ಹೆಚ್ಚಿನ ಪ್ರಮಾಣದಲ್ಲಿ ನಡೆಯಿತು. ಇದು ಎರಡನೆಯ ನಗರೀಕರಣಕ್ಕೆ ಕಾರಣವಾಯಿತು. ಕ್ರಿ.ಶ. ೧೫೦ರಲ್ಲಿ ಗ್ರೀಕ್ ಪ್ರವಾಸಿ ಟಾಲೆಮಿ ಕರ್ನಾಟಕದ ಒಳನಾಡಿನ ಸ್ಥಳಗಳಲ್ಲಿ ಮುದಗಲ್‌ನ್ನು ಗುರುತಿಸಿರುವುದು ಗಮನಾರ್ಹ.[೧೦೭]

ರೋಮ್‌ನೊಂದಿಗೆ ದಕ್ಷಿಣ ಭಾರತದ ವ್ಯಾಪಾರ ಸಂಬಂಧ ಕ್ರಿ.ಶ. ಮೂರನೆಯ ಶತಮಾನದ ನಂತರ ನಿಂತು ಹೋಯಿತು. ಈ ಕಾಲದಿಂದ ಕ್ರಿ.ಶ. ೧೦೧೮ರವರೆಗೆ ಈ ಪ್ರದೇಶದ ವ್ಯಾಪಾರ ಕುರಿತು ತಿಳಿಸುವ ಕುರುಹುಗಳು ಅಷ್ಟಾಗಿ ಕಂಡುಬರುವುದಿಲ್ಲ. ಹಾಗೆಂದು ವ್ಯಾಪಾರದ ಚಟುವಟಿಕೆಗಳು ನಡೆದಿಲ್ಲವೆಂದು ಹೇಳಲಾಗದು. ಕ್ರಿ.ಶ. ೭-೮ನೆಯ ಶತಮಾನದಲ್ಲಿ ಕಂಡುಬರುವ 'ಅಯ್ಯಾವೊಳೆ ಐನೂರ್ವರು' ಎಂಬ ವರ್ತಕರು ಈ ಪ್ರದೇಶದಲ್ಲಿ ವ್ಯಾಪಾರ ನಡೆಸಿರಬೇಕೆಂದು ಊಹಿಸುವ ಸಾಧ್ಯತೆಯಿದೆ. ಅದು ಹೇಗೆಂದರೆ, ಪಲ್ಲವರು ಮತ್ತು ಬಾದಾಮಿ ಚಾಲುಕ್ಯರು ನಡುವಿನ ಘರ್ಷಣೆಗೆ ರಾಯಚೂರು ದೋ-ಅಬ್ ಪ್ರದೇಶ ಕಾರಣವಾಗಿತ್ತು. ಈ ಹಿನ್ನೆಲೆಯಲ್ಲಿ 'ಅಯ್ಯಾವೊಳೆ ಐನೂರ್ವರು' ಈ ಪ್ರದೇಶದಲ್ಲಿ ಕ್ರಿ.ಶ ೭-೮ನೆಯ ಶತಮಾನದಿಂದ ವ್ಯಾಪಾರದಲ್ಲಿ ತೊಡಗಿರಬೇಕು. ಆದರೆ ಶಾಸನಾಧಾರಿತ ಉಲ್ಲೇಖ ಮಸ್ಕಿ(೩೪)-೧೦೧೮ರ ಶಾಸನದ ಮೂಲಕ ಮೊದಲಿಗೆ ಕಾಣಿಸಿ ಕೊಳ್ಳುತ್ತದೆ.[೧೦೮]

ಕೃಷಿ ವಿಸ್ತರಣೆಯ ಹೆಚ್ಚುವರಿ ಉತ್ಪಾದನೆ ದೇಶ-ವಿದೇಶಿ ವ್ಯಾಪಾರ ಸಂಬಂಧವನ್ನು ಬೆಳೆಸುವಂತೆ ಮಾಡಿತು. ಈ ಕಾರಣಕ್ಕಾಗಿ ಪಲ್ಲವರು ಈ ಪ್ರದೇಶದ ಮೇಲೆ ಪ್ರಭುತ್ವವನ್ನು ಸಾಧಿಸಿದ್ದರು. ಈ ಪ್ರದೇಶದಲ್ಲಿ ಕೃಷಿಯೇತರ ಚಟುವಟಿಕೆಗಳು ನಡೆದಿವೆಯೆಂದರೆ ಅವು ಕೃಷಿಯ ಹೆಚ್ಚುವರಿ ಉತ್ಪಾದನೆಯಿಂದ. ಆಕರಗಳ ಕೊರತೆಯಿಂದ ಮಾಹಿತಿ ಅಲಭ್ಯವಾದರೂ ವ್ಯಾಪಾರ-ವಾಣಿಜ್ಯದ ಹಿನ್ನೆಲೆಯಲ್ಲಿ ಕೃಷಿ ವಿಸ್ತರಣೆ ಕಾರ್ಯ ನಡೆದಿತ್ತೆಂದು ಗುರುತಿಸಬಹುದಾಗಿದೆ.

ಕೃಷಿ ವಿಸ್ತರಣೆಯ ಕಾರ್ಯ ಅಷ್ಟೊಂದು ಸುಲಭವಾಗಿರಲಿಲ್ಲ. ಕಾಡುಗಳನ್ನು ಕಡಿದು ಕೃಷಿ ಭೂಮಿಯನ್ನಾಗಿ ಪರಿವರ್ತನೆ ಮಾಡಬೇಕಾಗಿತ್ತು. ಈ ಕಾರಣಕ್ಕಾಗಿಯೇ ಕೃಷಿ ಭೂಮಿಯನ್ನು ವಿಸ್ತರಿಸುವ ಜನರಿಗೆ ರಾಜ್ಯ ಸಹಾಯ ಸಹಕಾರಗಳನ್ನು ನೀಡುತ್ತಿತ್ತು. ಅಂಥ ವ್ಯಕ್ತಿಗಳಿಗೆ ಮತ್ತು ಸಮುದಾಯಗಳಿಗೆ ಭೂಮಿಯನ್ನು ದಾನ ನೀಡಲಾಗುತ್ತಿತ್ತು ಹಾಗೂ ತೆರಿಗೆ ವಿನಾಯಿತಿಯನ್ನೂ ನೀಡಲಾಗುತ್ತಿತ್ತು.[೧೦೯] ಹಾಗಾಗಿ ಈ ಪ್ರದೇಶದಲ್ಲಿ ೧೮ ಅಗ್ರಹಾರಗಳು ಮತ್ತು ೫ ಬ್ರಹ್ಮಪುರಿಗಳಿವೆ. ಇವೆರಡು ಸೇರಿದರೆ ೨೩ ಹಳ್ಳಿಗಳು ರಚನೆಗೊಂಡಿದ್ದವೆನ್ನಬಹುದು. ಹಾಗೆಂದು ಈ ಮುಂಚೆ ರಚನೆಗೊಂಡಿಲ್ಲವೆಂದು ಹೇಳಲು ಬರುವುದಿಲ್ಲ. ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸುವಾಗ ಆ ಸ್ಥಳಗಳನ್ನು

ಪರಿಶೀಲಿಸಿ ಸೂಕ್ತವಾದ ಸ್ಥಳವನ್ನು ಆಯ್ಕೆ ಮಾಡಲಾಗುತ್ತಿತ್ತು. ಇಲ್ಲಿ ಕಂಡುಬರುವ ಅಗ್ರಹಾರಗಳು ಒಂದಕ್ಕಿಂತ ಹೆಚ್ಚಿನ ಹಳ್ಳಿಗಳನ್ನು ಹೊಂದಿದ್ದವು. ಆ ಹಳ್ಳಿಗಳ ಜನರು ಆ ಅಗ್ರಹಾರಗಳ ವ್ಯಾಪ್ತಿಗೆ ಸೇರಿದ ಭೂಮಿಯನ್ನು ಒಂದು ಕುಂಟೆಗೆ ಒಂದು ಜೋಳದ ಸೂಡು ಮತ್ತು ಒಂದು ಹಣದ ಲೆಕ್ಕದಲ್ಲಿ ಕೃಷಿ ಭೂಮಿಯನ್ನು ಉಳಬೇಕಾಗಿತ್ತು.[೧೧೦] ಗಬ್ಬೂರು ಸೇರಿದಂತೆ ಈ ಪ್ರದೇಶದಲ್ಲಿ ಕಂಡುಬರುವ ಅಗ್ರಹಾರ ಮತ್ತು ಬ್ರಹ್ಮಪುರಿಗಳ ಸ್ವರೂಪ ಒಂದೇ ಬಗೆಯಾಗಿರುವುದರಿಂದ ಈ ಕೇಂದ್ರಗಳು ಇರುವ ಸ್ಥಳಗಳು ಮಹಾಜನರಿಗೆ ಸೇರಿದವುಗಳಾಗಿದ್ದವೇ ಹೊರತು, ರೈತರ ಅಧೀನಕ್ಕೆ ಒಳಗಾಗಿರಲಿಲ್ಲ. ಅದೇ ರೀತಿ ಭೂಮಾಲಿಕರು ಹಳ್ಳಿಗಳ ಮೇಲೆ ಹಿಡಿತವನ್ನು ಸಾಧಿಸಿದ್ದರು. ಇದಕ್ಕೆ ಮಾನ್ವಿ ತಾಲೂಕಿನ ಕಲ್ಲೂರು(೭೨)-೧೧೩೪ರ ಶಾಸನದಿಂದ ತಿಳಿದುಬರುತ್ತದೆ.[೧೧೧] ಈ ರೀತಿಯಾಗಿ ಅನೇಕ ಶಾಸನಗಳು ಭೂಮಾಲಿಕ ವರ್ಗದ ಪ್ರಭಾವವನ್ನು ತಿಳಿಪಡಿಸುತ್ತವೆ. ಈ ಕಾರಣದಿಂದಾಗಿ ಕೃಷಿಯ ವಿಸ್ತರಣೆ ಅರಸರಿಗೆ ಮತ್ತು ಭೂಮಾಲಿಕರಿಗೆ ಹೆಚ್ಚು ಲಾಭದಾಯಕವಾಗಿರುತ್ತಿತ್ತು. ರೈತರು ಹೆಚ್ಚು ಕಡಿಮೆ ಕೂಲಿಯಾಳುಗಳಾಗಿ ಕೆಲಸ ಮಾಡಬೇಕಾಗುತ್ತಿತ್ತು ಎಂಬುದು ಗಬ್ಬೂರು(೨)-೧೧೦೩ರ ಶಾಸನದಿಂದ ತಿಳಿದುಬರುತ್ತದೆ. ಈ ಬೆಳವಣಿಗೆಗಳು ನವಶಿಲಾಯುಗದಿಂದ ಆರಂಭಗೊಂಡರೂ ಹಂತ ಹಂತವಾಗಿ ಹಿತಾಸಕ್ತಿಗೆ ಅನುಗುಣವಾಗಿ ಬೆಳೆಯುತ್ತಾ ಬಂದಿತು. ಇದು ಕ್ರಿ.ಶ. ೧ರಿಂದ ೧೦ನೆಯ ಶತಮಾನದವರೆಗೆ ಅಸ್ಪಷ್ಟತೆಯನ್ನು ವ್ಯಕ್ತಪಡಿಸಿದರೂ ವ್ಯಾಪಾರ-ವಾಣಿಜ್ಯದ ಹಿನ್ನೆಲೆಯಲ್ಲಿ ಹೆಚ್ಚುವರಿ ಉತ್ಪಾದನೆಯಲ್ಲಿ ಕೃಷಿ ವಿಸ್ತರಣೆ ನಡೆದಿತ್ತೆಂದು ಗ್ರಹಿಸಬಹುದಾಗಿದೆ. ಇದರ ತೀವ್ರತೆ ೧೦ನೆಯ ಶತಮಾನದಿಂದ ಹೆಚ್ಚಳ ಕಂಡುಬಂದಿತು. ನಂತರದಲ್ಲಿ ನಿಜಾಮರ ಕಾಲದವರೆಗೆ ಈ ಪ್ರದೇಶದ ಭೂಮಿಗೆ ಬಹು ಬೇಡಿಕೆಯಾಗಿತ್ತು. ಇಂಗ್ಲೆಂಡಿನ ಆದಾಯದ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಇಲ್ಲಿನ ಹತ್ತಿ ಬೆಳೆ ಕಚ್ಚಾ ವಸ್ತುವಾಗಿ ಪ್ರಮುಖ ಸ್ಥಾನ ಪಡೆದಿತ್ತು. ಅದಕ್ಕಾಗಿ ೧೮೫೧ರ ಆಗಸ್ಟ್ ವೇಳೆಗೆ ನಿಜಾಮನು ಈಸ್ಟ್ ಇಂಡಿಯಾ ಕಂಪನಿಗೆ ಕೊಡಬೇಕಾದ ಸಾಲದಲ್ಲಿ ಅರ್ಧಕ್ಕಿಂತ ಹೆಚ್ಚನ್ನು ತೀರಿಸಿದ್ದನು. ಉಳಿಕೆಯನ್ನು ವರ್ಷದ ಕೊನೆಯೊಳಗಾಗಿ ಕೊಟ್ಟು ಪೂರೈಸುವುದಾಗಿ ಮಾತು ಕೊಟ್ಟನು. ಆದರೆ ಅದು ನಡೆಯಲಿಲ್ಲ. ಪರ್ವೀನ್ ಸುಲ್ತಾನ ಅವರು "೧೮೫೩ ಮೇ ೨೧ರಂದು ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿ ಹಾಕುವಂತೆ ಬಲಾತ್ಕರಿಸಲಾಯಿತು. ಅದರ ಪ್ರಕಾರ ಬೀರಾರ್ ಪ್ರಾಂತವನ್ನು(ಧಾರಶಿವ) ಉಸ್ಮಾನಾಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನೂ ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟು ಕೊಡಬೇಕಾಯಿತು. ೧೮೫೩ರಲ್ಲಿ ನಿಜಾಮ ನಾಸಿರುದ್ದೌಲನು(೧೮೨೯-೫೭) ಈಸ್ಟ್ ಇಂಡಿಯಾ ಕಂಪನಿಯೊಂದಿಗೆ ಬೀರಾರ್-ರಾಯಚೂರು-ಉಸ್ಮಾನಾಬಾದ್ ಈ ಸಮೃದ್ಧವೂ ಫಲವತ್ತಾದ ಈ ಜಿಲ್ಲೆಗಳನ್ನು ವಹಿಸಿ ಕೊಡುವ ಒಪ್ಪಂದಕ್ಕೆ ಸಹಿ ಹಾಕಲೇಬೇಕಾಯಿತು" ಎಂದು ತಿಳಿಸುತ್ತಾರೆ(ಷೇಕ್ ಅಲಿ ೧೯೯೭: ೧೭೦). ಈ ಒಂದು ನೆಪದಿಂದ ರಾಯಚೂರು ದೋ-ಅಬ್ ಪ್ರದೇಶವನ್ನು ಈಸ್ಟ್ ಇಂಡಿಯಾ ಕಂಪನಿಗೆ ಒಪ್ಪಿಸುವುದರ ಮೂಲಕ ಕೃಷಿ ವಿಸ್ತರಣಾ ಚಟುವಟಿಕೆಗಳಿಗೆ ಮತ್ತಷ್ಟು ಆದ್ಯತೆಯನ್ನು ನೀಡಲಾಯಿತು. ಈ ಪ್ರದೇಶದಲ್ಲಿ ಭತ್ತ, ಜೋಳ, ಸಜ್ಜೆ, ರಾಗಿ, ಗೋಧಿ, ತೊಗರಿ, ಹೆಸರು, ತರಕಾರಿ, ಹಣ್ಣು-ಹಂಪಲು, ದವಸ-ಧಾನ್ಯ, ಎಣ್ಣೆ ಕಾಳುಗಳು, ಹತ್ತಿ, ಎಳ್ಳು, ಕುಸುಬೆ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ತಿಳಿದುಬರುತ್ತದೆ.[೧೧೨]

ಕೃಷಿಯ ಉತ್ಪಾದನೆ ಮತ್ತು ಹೆಚ್ಚುವರಿ ಉತ್ಪಾದನೆ ಕೃಷಿಯೇತರ ಚಟುವಟಿಕೆಗಳ ಹುಟ್ಟಿಗೂ ಕಾರಣವಾಯಿತು. ಕೃಷಿಯ ಬೆಳವಣಿಗೆಯೆಂದರೆ ಅದು ರಾಜ್ಯದ ಬೆಳವಣಿಗೆ ಎಂಬರ್ಥವನ್ನು ಪಡೆದುಕೊಂಡಿತ್ತು. ಕೃಷಿಯ ಪ್ರಾಮುಖ್ಯತೆಯನ್ನು ಅರಿತುಕೊಂಡ ಅರಸರು ಹಾಗೂ ಇತರ ಅಧಿಕಾರಿಗಳು

ಕೃಷಿಯನ್ನು ಸುಧಾರಿಸುವ ಪ್ರಯತ್ನ ಮಾಡಿದರು. ಇದು ಕೃಷಿಯ ವಿಸ್ತರಣೆಗೆ ಕಾರಣವಾಗಿ ಉಳುಮೆ ವಿಧಾನದಲ್ಲೂ ಬದಲಾವಣೆಗಳು ಕಾಣಿಸಿಕೊಂಡವು. ಕೃಷಿಗೆ ಬಳಸುವ ಉಪಕರಣಗಳಲ್ಲಿ ಬದಲಾವಣೆಗಳಾಗಿ ಅದು ಕೃಷಿಯ ಉತ್ಪಾದನೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರಿತು. ಸಾಮಾಜಿಕ ಸಂಬಂಧಗಳು ಇದರಿಂದಾಗಿ ಹೊಸ ರೂಪವನ್ನು ಪಡೆದುಕೊಳ್ಳುವಂತಾಯಿತು. ಇದಕ್ಕೆ ದೇವದುರ್ಗ ತಾಲೂಕಿನ ಗಬ್ಬೂರು(೨)-ಕ್ರಿ.ಶ. ೧೧೦೩ರ ಶಾಸನದಲ್ಲಿ ಕುಡುಗೋಲು, ಕೃಷಿಕೂಲಿ, ಬಂಟರ ಉಲ್ಲೇಖಗಳು ದೊರೆಯುತ್ತವೆ. ಅಲ್ಲದೆ ರಾಯಚೂರು ಜಿಲ್ಲಾ ಸರಕಾರಿ ಆಸ್ಪತ್ರೆಯಲ್ಲಿರುವ ವೀರಗಲ್ಲು ಕೃಷಿಕನನ್ನು ಸೂಚಿಸುತ್ತದೆ. ಈ ವೀರಗಲ್ಲಿನಲ್ಲಿರುವ ರೈತ ಬಲಗೈಯಲ್ಲಿ ಬಾರಕೋಲು, ಎಡಗೈಯಲ್ಲಿ ಕುಡುಗೋಲು ಹಿಡಿದಿರುವ ಚಿತ್ರವಿದೆ. ಈ ವೀರಗಲ್ಲನ್ನು ಅವಲೋಕಿಸಿದಾಗ ರೈತನು ಪ್ರಭುತ್ವದ ವಿರುದ್ಧ ಪ್ರತಿಭಟನೆಯನ್ನು ಮಾಡಿರಬೇಕು. ಏಕೆಂದರೆ ಈ ಬಗೆಯ ವೀರಗಲ್ಲು ಸಿಗುವುದು ಅಪರೂಪದ್ದಾಗಿದೆ. ಸೈನಿಕರ ವೀರಗಲ್ಲುಗಳು ಸಾಕಷ್ಟು ಇವೆ. ಅವರು ಹಿಡಿದ ವಸ್ತುಗಳು ಕತ್ತಿ, ಗುರಾಣಿ, ಬಂದೂಕುಗಳಾದರೆ, ಈ ರೈತನ ಎರಡು ಕೈಯಲ್ಲಿ ಬಾರಕೋಲು, ಕುಡುಗೋಲನ್ನು ಹಿಡಿದದ್ದು ಕೃಷಿಯನ್ನು ಪ್ರತಿನಿಧಿಸುತ್ತದೆ. ಅಂದರೆ ಅಧಿಕ ತೆರಿಗೆಯನ್ನು ಕಟ್ಟದೆ ಸತ್ತಿರಬೇಕು, ಇಲ್ಲ ಸ್ಥಳೀಯ ಅಧಿಕಾರಿಗಳ ವಿರುದ್ಧ ಪ್ರತಿಭಟನೆಯನ್ನು ತೋರಿರಬೇಕು ಎಂದು ಗ್ರಹಿಸಬಹುದಾಗಿದೆ.

ಕೆರೆ, ಬಾವಿಗಳ ನಿರ್ಮಾಣ, ಏತ ಬಾವಿಗಳ ನಿರ್ಮಾಣಗಳು ಮಧ್ಯಕಾಲೀನ ಸಂದರ್ಭದಲ್ಲಿ ಹಲವಾರು ಬದಲಾವಣೆಗೆ ಕಾರಣವಾದವು. ಪಶುಸಂಗೋಪನೆ ಪ್ರಮುಖ ಸ್ಥಾನ ಪಡೆದಿತ್ತು. ಕೃಷಿ ವಿಸ್ತರಣೆಗೆ ಸಹಕಾರ ನೀಡಿತು. ಈ ಪ್ರದೇಶದಲ್ಲಿ ಸಾಂಪ್ರದಾಯಿಕ ಉಳುಮೆ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಕೃಷಿ ಭೂಮಿಯನ್ನು ಸಾಗುವಳಿ ಮಾಡಲು ಎರಡು ಎತ್ತುಗಳು, ನೇಗಿಲು ಮತ್ತು ನೊಗವನ್ನು ಬಳಸುತ್ತಿದ್ದರು. ಎತ್ತುಗಳನ್ನು ಸರಕು ಸಾಗಾಣಿಕೆಗೂ ಉಪಯೋಗಿಸಿಕೊಳ್ಳುತ್ತಿದ್ದರು. ಕಬ್ಬಿಣ ಬಳಕೆ ಆರಂಭವಾದಂದಿನಿಂದ ಕೃಷಿಯಲ್ಲಿ ಪ್ರಗತಿಯನ್ನು ಕಾಣುವಂತೆ ಮಾಡಿತು.

ಕ್ರಿ.ಶ.೧೫ರಿಂದ ೧೭ನೆಯ ಶತಮಾನದವರೆಗೆ ಕೃಷಿ ವಿಸ್ತರಣೆ ಕಾರ್ಯದಲ್ಲಿ ಮಹತ್ವದ ಬದಲಾವಣೆಗಳಾದವು. ಈ ವೇಳೆಗಾಗಲೇ ಕೃಷಿ ಚಟುವಟಿಕೆಗಳು ತೀವ್ರತೆಯನ್ನು ಪಡೆದು ನಂತರದಲ್ಲಿ ಹೊಲಗಳು ಬೀಳು ಬಿದ್ದಿದ್ದವು. ಅವನ್ನು ಪುನ: ಕೃಷಿಭೂಮಿಯನ್ನಾಗಿ ಪರಿವರ್ತಿಸುವ ಪ್ರಯತ್ನಗಳು ನಡೆದವು. ಈ ಹಿನ್ನೆಲೆಯಲ್ಲಿ ಗೋರ್ಕಲು ಗ್ರಾಮದಲ್ಲಿ ಬೀಳುಬಿದ್ದ ಹೊಲಗಳನ್ನು ಉತ್ತು ಬಿತ್ತಲು ವರ್ಷಕ್ಕೆ ಇಂತಿಷ್ಟು ಧಾನ್ಯವನ್ನು ನೀಡಬೇಕು. ಇದು ವರ್ಷದಿಂದ ವರ್ಷ ಏರುತ್ತಾ ಹೋಗುತ್ತಿತ್ತು. ಐದು ವರ್ಷಗಳವರೆಗೆ ಆ ಹೊಲಗಳನ್ನು ಆರಂಭದಲ್ಲಿ ಯಾರು ರಕಮಿಗೆ ಪಡೆದಿರುತ್ತಾರೋ ಅವರಿಗೆ ನೀಡಲಾಗುತ್ತಿತ್ತು. ಈ ಮೂಲಕ ಕೃಷಿ ವಿಸ್ತರಣೆ ಹೆಚ್ಚಿಸುವುದಾಗಿತ್ತು. ಇದು ಗೋರ್ಕಲು ಶಾಸನದಿಂದ ತಿಳಿದುಬರುತ್ತದೆ.[೧೧೩] ಇನ್ನೂ ಕೆಲವು ಹೊಲಗಳನ್ನು ಪಾಲಿಗೆ ನೀಡಲಾಗುತ್ತಿತ್ತು. ಈ ಪದ್ಧತಿ ಈಗಲೂ ಚಾಲ್ತಿಯಲ್ಲಿದೆ. ಆದರೆ ಈ ಪದ್ಧತಿಗೆ ಈಗ ವಿದಾಯ ಹೇಳಿದ್ದಾರೆ. ಇದರ ಬದಲಿಗೆ ವರ್ಷಕ್ಕೆ ಇಂತಿಷ್ಟು ಹಣವನ್ನು ನೀಡಬೇಕೆಂಬ ಕರಾರಿನ ಮೇಲೆ ಭೂಮಿಯನ್ನು ರಕಮಿಗೆ ಮಾಡುವ ಪದ್ಧತಿ ಮುಂದುವರೆದಿದೆ. ಇತ್ತೀಚಿನವರೆಗೆ ಅಸ್ತಿತ್ವದಲ್ಲಿದ್ದ ಹೊಲವನ್ನು ಪಾಲಿಗೆ ಮಾಡುವ ಪದ್ಧತಿಯಲ್ಲಿ ಬೆಳೆದ ಬೆಳೆಯಲ್ಲಿ ಅರ್ಧಭಾಗ ಭೂ ಮಾಲಿಕನಿಗೆ ಕೊಡಬೇಕು. ಉಳಿದರ್ಧ ಭಾಗವನ್ನು ಹೊಲ ಮಾಡಿದವನು ತೆಗೆದುಕೊಳ್ಳಬೇಕು ಎಂಬ ನಿಯಮದಂತೆ ನಡೆದುಕೊಳ್ಳಲಾಗುತ್ತಿತ್ತು. ಇದು ಪ್ರಸ್ತುತ ಸಂದರ್ಭದಲ್ಲಿ ಕಂಡುಬರುವ ಪದ್ಧತಿಯಾಗಿದೆ. ಆದರೆ ಕ್ರಿ.ಶ. ೧೭ನೆಯ ಶತಮಾನದಲ್ಲಿ

ಪಾಲಿಗೆ ಕೊಡುವ ಹೊಲದ ಉತ್ಪತ್ತಿಯಲ್ಲಿ ಹಲವು ಪಾಲನ್ನು ನೀಡಲಾಗುತ್ತಿತ್ತು. ಕೃಷಿ ಉತ್ಪಾದನೆಯ ಆದಾಯದಲ್ಲಿ ಈ ಬಗೆಯ ಸ್ಥಿತಿಗೆ ತಲೆಬಾಗಲೇ ಬೇಕಿತ್ತು. ರೈತನು ತನಗೆ ಬಂದ ಆದಾಯದಲ್ಲಿ ಮೂರು ಭಾಗ ಸರ್ಕಾರಕ್ಕೆ ನೀಡಿದರೆ, ಉಳಿದದ್ದು ಕೇವಲ ಒಂದೇ ಭಾಗವನ್ನು ಪಡೆಯಬೇಕಿತ್ತು.[೧೧೪]

ಇದೇ ಕಾಲಘಟ್ಟದಲ್ಲಿ ಅಂದರೆ ಕ್ರಿ.ಶ.೧೭ನೆಯ ಶತಮಾನದಲ್ಲಿ ಈ ಪ್ರದೇಶದಲ್ಲಿ ಹೊಲಗಳನ್ನು ಪಾಲಿಗೆ ಮಾಡುವ ಪದ್ಧತಿಯಂತೆ ಗುತ್ತಿಗೆ(ರಕಮಿಗೆ)ಗೆ ಹೊಲಗಳನ್ನು ನೀಡುವ ಪದ್ಧತಿ ಇರುವ ಬಗ್ಗೆ ತಿಳಿದುಬರುತ್ತದೆ.[೧೧೫] ಹೊಲಗಳನ್ನು ಪಾಲಿಗೆ ಕೊಡುವ ಭೂಮಿ ಉತ್ತು, ಬಿತ್ತು ಚಟುವಟಿಕೆಗಳು ನಡೆಯುತ್ತಿರುತ್ತವೆ. ಆದರೆ ಕೃಷಿ ನಿರ್ವಹಣೆ ಹೊಲದ ಮಾಲಿಕರಿಂದ ಮಾಡಲು ಸಾಧ್ಯವಾಗುತ್ತಿರಲಿಲ್ಲ, ಎತ್ತುಗಳನ್ನು ಹೊಂದಿರುವುದಿಲ್ಲ, ಹಾಗಾಗಿ ಪಾಲಿಗೆ ನೀಡಲಾಗುತ್ತಿತ್ತು. ಆದರೆ ಗುತ್ತಿಗೆ ನೀಡುವ ಪದ್ಧತಿಯಲ್ಲಿ ವರ್ಷಕ್ಕೆ ಇಂತಿಷ್ಟು ಹಣವನ್ನು ಪಡೆಯುವುದಾಗಿತ್ತು. ಗುತ್ತಿಗೆ ನೀಡುವ ಭೂಮಿ ಬಹುತೇಕವಾಗಿ ಬೀಳು ಬಿದ್ದಿರುವಂತಹದ್ದೇ ಆಗಿರುತ್ತಿತ್ತು. ಅದನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲು ಕಡಿಮೆ ಗುತ್ತಿಗೆಯಲ್ಲಿ ಇಂತಹ ಹೊಲಗಳನ್ನು ಕೃಷಿಕರಿಗೆ ನೀಡಲಾಗುತ್ತಿತ್ತು. ಒಂದು ವರ್ಷವಾದ ನಂತರ ಅದೇ ರೈತನಿಗೆ ಸ್ವಲ್ಪ ಪ್ರಮಾಣದಲ್ಲಿ ರಕಮನ್ನು ಹೆಚ್ಚಿಸಲಾಗುತ್ತಿತ್ತು. ಇದರಂತೆ ಸುಮಾರು ಐದು ವರ್ಷಗಳವರೆಗೆ ಸಂಪೂರ್ಣವಾಗಿ ಬೀಳು ಹೊಲ ಕೃಷಿ ಭೂಮಿಯಾಗಿ ಪರಿವರ್ತನೆಗೊಳ್ಳವವರೆಗೆ ಗುತ್ತಿಗೆಗೆ ನೀಡುತ್ತಿದ್ದರು.[೧೧೬] ನಂತರ ಆ ಹೊಲಗಳ ರಕಮನ್ನು ಹೆಚ್ಚಿಸಿ ಅಧಿಕ ಆದಾಯವನ್ನು ಸಂಪಾದಿಸುವುದು ಭೂಮಾಲಿಕರ ಗುರಿಯಾಗಿತ್ತೆಂಬುದು ಇದರಿಂದ ತಿಳಿದುಬರುತ್ತದೆ.

ಈ ಪ್ರದೇಶದಲ್ಲಿ ಖಾಸಗಿ ಒಡೆತನದಲ್ಲಿದ್ದ ಭೂಮಿಗಳನ್ನು ಅಂದರೆ ಅಗ್ರಹಾರದ ಮಹಾಜನರಿಗೆ ಸೇರಿದ ಜಮೀನುಗಳನ್ನು ಸಾಗುವಳಿಗಾಗಿ ನೀಡಲಾಗುತ್ತಿತ್ತು. ಹೀಗೆ ನೀಡಿದ ಸಾಗುವಳಿ ಭೂಮಿಗೆ ಗಡಿಗಳನ್ನು ನಿರ್ಧರಿಸಲಾಗುತ್ತಿತ್ತು. ಭೂ ಹಿಡುವಳಿಯ ಸುತ್ತ ವಾಮನ ಮುದ್ರೆಯ ಕಲ್ಲನ್ನು ಹಾಕಿಸಿ ಗಡಿ ಗುರುತಿಸುವ ಪದ್ಧತಿ ಇದ್ದಿತೆಂಬುದು ಮುಕ್ಕುಂದಿ(೧೫) ಕ್ರಿ.ಶ.೧೫೬೧ರ ಶಾಸನದಿಂದ ತಿಳಿದು ಬರುತ್ತದೆ.[೧೧೭] ಮಹಾಜನರು ಸಾಗುವಳಿಗಾಗಿ ಕಲ್ಲುಗಳನ್ನು ನೆಟ್ಟು ದಾನ ಮಾಡುವ ಪದ್ಧತಿ ಇದ್ದಿತ್ತು. ವಾಮನ ಮುದ್ರೆಯ ಕಲ್ಲು ವೈಷ್ಣವ ಸಂಪ್ರದಾಯವನ್ನು ಪ್ರತಿನಿಧಿಸುತ್ತಿತ್ತು. ಇದು ಕೂಡ ಕೃಷಿ ವಿಸ್ತರಣೆಯನ್ನು ಸೂಚಿಸುತ್ತದೆ. ಅಲ್ಲದೆ ಭೂಮಿಯನ್ನು ಬೀಜವರಿ ಪದ್ಧತಿಯಲ್ಲಿ ಕರೆಯುವುದುಂಟು. ಈ ಪ್ರದೇಶದ ಶಾಸನಗಳಲ್ಲಿ ಇಕ್ಕುಳ[೧೧೮] ಒಕ್ಕುಳ[೧೧೯](ವಕ್ಕುಳ) ಹೊಲಗಳ ಉಲ್ಲೇಖಗಳು ಕಂಡುಬರುತ್ತವೆ. ಒಂದು ಇಕ್ಕುಳ ಭೂಮಿ ಎಂದರೆ ಆ ಪ್ರಮಾಣದ ಬೀಜವನ್ನು ಬಿತ್ತುವ ಭೂಮಿಯೆಂದು ಅರ್ಥೈಸ ಬಹುದು. ಒಂದು ಒಕ್ಕುಳ ಭೂಮಿಗೂ ಇದೇ ಅರ್ಥವನ್ನು ತಿಳಿದುಕೊಳ್ಳಬೇಕು. ಪ್ರಸ್ತುತ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ಶೇಂಗಾ ಬಿತ್ತನೆ ಮಾಡುವಾಗ ಒಂದು ಹೊಲಕ್ಕೆ ಎಂಟು ಮಾನ, ಇನ್ನೊಂದು ಹೊಲಕ್ಕೆ ಒಕ್ಕಳ ಶೇಂಗಾ ಬೀಜಗಳನ್ನು ಬಿತ್ತುವುದು ಕಂಡುಬರುತ್ತದೆ. ಈಗ ಮಾನಗಳ, ಒಕ್ಕುಳ, ಇಕ್ಕುಳಗಳ ಸ್ಥಾನಗಳನ್ನು ಕ್ವಿಂಟಾಲ್‌ಗಳು ಆಕ್ರಮಿಸಿವೆ. ಈ ಹಿನ್ನೆಲೆಯಲ್ಲಿ ಬೀಜವರಿ ಬಿತ್ತುವ ಭೂಮಿಯೆಂದು ಗುರುತಿಸಬಹುದಾಗಿದೆ. ಇದೊಂದು ಜಮೀನನ್ನು ಅಳೆಯುವ ಪದ್ಧತಿಯಾಗಿದೆ.

ಈ ಪ್ರದೇಶದಲ್ಲಿ ಬಿಜಾಪುರದ ಆದಿಲ್‌ಷಾಹಿಗಳಿಗೆ ಸೇರಿದ ಶಾಸನಗಳಲ್ಲಿ ಈ ಪ್ರದೇಶದ ಕೃಷಿಕರಿಗೆ ಪ್ರೋತ್ಸಾಹವನ್ನು ನೀಡಿದಂತೆ ಕಾಣುತ್ತದೆ. ಹೇಗೆಂದರೆ ಕೃಷಿ ಉ.ತ್ಪಾದನೆಗೆ ನಿಗದಿಪಡಿಸಿದ ತೆರಿಗೆಗಿಂತ ಹೆಚ್ಚಿನ ತೆರಿಗೆಯನ್ನು ವಸೂಲಿ ಮಾಡಬಾರದೆಂದು ಮಲಿಯಾಬಾದ್(೯)-೧೫೫೩ ಶಾಸನದಲ್ಲಿ ಹೇಳಿದರೆ,[೧೨೦] ಗಲಗಿನ(೩೫)-೧೭೨೬ರ ಶಾಸನದಲ್ಲಿ ಯಾರು ದಂಡವನ್ನು ವಸೂಲಿ

ಮಾಡಬಾರದೆಂದು ತಿಳಿಸುತ್ತದೆ.[೨೫] ಇದಲ್ಲದೆ ಹೊಲದಲ್ಲಿ ಬೆಳೆದ ಬೆಳೆಯಲ್ಲಿ ಪಾಲು ಪಡೆಯುವುದನ್ನು ನಿಲ್ಲಿಸಬೇಕೆಂದು ತಿಳಿಸಲಾಗಿದೆ. ಇದಕ್ಕೆ ಗಬ್ಬೂರು(೧೪)-೧೭ನೆಯ ಶತಮಾನದ ಶಾಸನ ಸಾಕ್ಷಿಯಾಗಿದೆ. ಇದನ್ನು ಗಮನಿಸಿದರೆ ಆರ್ಥಿಕವಾಗಿ ಪ್ರಮುಖ ಪಾತ್ರವಹಿಸುವ ಕೃಷಿ ವಿಸ್ತರಣೆಗೆ ಹೆಚ್ಚಿನ ಆದ್ಯತೆಯನ್ನು ಆದಿಲ್‌ಷಾಹಿಗಳು ನೀಡಿರುವುದು ಕಂಡುಬರುತ್ತದೆ. ಅಲ್ಲದೆ ಅಲ್ಲಿಯವರೆಗೆ ಹೇರಲಾಗಿದ್ದ ತೆರಿಗೆ, ದಂಡ, ಪಾಲುಗಳನ್ನು ರದ್ದುಗೊಳಿಸಿ, ರೈತರಲ್ಲಿ ಹೊಸ ಉತ್ಸಾಹವನ್ನು ತುಂಬಿದರು. ಜನಸಾಮಾನ್ಯರ ಮೇಲೆ ಹೊರೆಯಾಗದಂತೆ ನೋಡಿಕೊಂಡಿರುವುದು ಗೋಚರಿಸುತ್ತದೆ. ಹಾಗೆಯೇ ಬಿಟ್ಟಿ ಕೆಲಸವನ್ನು ಯಾರಿಂದಲೂ ಮಾಡಿಸಬಾರದೆಂದು ಮಲಿಯಾಬಾದ್ ಶಾಸನದಿಂದ ತಿಳಿದುಬರುತ್ತದೆ.[೨೬]

ಕ್ರಿ.ಶ. ೧೭ರಿಂದ ೧೯ನೆಯ ಶತಮಾನದ ಕಾಲಾವಧಿಯಲ್ಲಿ ಸಂಸ್ಥಾನಿಕರು ಮತ್ತು ನಿಜಾಮರ ಆಡಳಿತ ಕಂಡುಬರುತ್ತದೆ. ಹಾಗೆಯೇ ಆಡಳಿತದ ದೃಷ್ಟಿಯಿಂದ ನಾಡಗೌಡರು, ಜಹಗೀರದಾರರು, ದೇಸಾಯಿಗಳು, ಗೌಡ, ಪೋಲಿಸ್‌ಗೌಡ, ಮಾಲಿಗೌಡ, ಕುಲಕರ್ಣಿ, ತಳವಾರ ಹೀಗೆ ನೇಮಕ ಮಾಡಲಾಯಿತು. ಇವರನ್ನು ಪ್ರತಿ ಗ್ರಾಮಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಬಿಡಲಾಯಿತು. ಆಡಳಿತಗಾರರಿಗೆಲ್ಲಾ ಭೂಮಿಯನ್ನು ಇನಾಮು ನೀಡಲಾಗುತ್ತಿತ್ತು. ಅಲ್ಲದೆ ಈ ಪ್ರದೇಶದಲ್ಲಿ ವಿವಿಧ ಜಾತಿ ಜನಾಂಗ, ವೃತ್ತಿ, ಸಾಹಸ, ಸೇವೆ ಮುಂತಾದ ಆಧಾರದ ಮೇಲೆ ಭೂಮಿಯನ್ನು ದಾನದ ರೂಪದಲ್ಲಿ ಇನಾಮು ಕೊಟ್ಟಿರುವುದು ಸರ್ವ ವಿಧಿತವಾಗಿದೆ. ಇದಕ್ಕೆ ಪೂರಕವಾಗಿ ಈ ಪ್ರದೇಶದಲ್ಲಿನ ಹೊಲಗಳಿಗೆ ಹೆಸರುಗಳನ್ನು ನೀಡಲಾಗಿದೆ. ಅವನ್ನು ಗಮನಿಸಿದರೆ ಈ ಕಾಲಾವಧಿಯಲ್ಲಿ ಭೂಮಿ ಹಂಚಿಕೆ ನಡೆದಿತ್ತೆಂದು ತಿಳಿದುಬರುತ್ತದೆ. ಆ ಹೊಲಗಳ ಹೆಸರುಗಳು ಹೀಗಿವೆ. ಅವೆಂದರೆ, ಫಕೀರಸಾಬನ ಹೊಲ, ಜಂಗಮರ ಪಟ್ಟಿ, ವಡ್ಡರ ಹೊಲ, ಕೊರವರ ಹೊಲ, ಕಾವಲಿಯವರ ಹೊಲ, ಟುಬಾಕಿನ ಹೊಲ, ರೊಕ್ಕದ ಹೊಲ, ದಳವಾಯಿ ಹೊಲ, ಎಮ್ಮೆ ಮಾನ್ಯದ ಹೊಲ, ಜೇರ್ ಹೊಲ, ಕೋಣದ ಹೊಲ, ಬ್ಯಾಗಾರ ಪಟ್ಟಿ, ಕೊಳ್ಳೆಮಾನ ಪಟ್ಟಿ, ಹುಲಿ ಮಾನ್ಯದ ಹೊಲ, ಕುದುರೆ ಮಾನ್ಯದ ಹೊಲ, ನಾದಿರ ಪಟ್ಟಿ, ಗರಡಿಯವರ ಹೊಲ, ಮುಲ್ಲವರ ಹೊಲ, ಕುಲಕರ್ಣಿ ಮಾಗಿ, ತುಮ್ಮಲಗಡ್ಡಿ, ಕುಂಟೆಹೊಲ, ಡಂಬರ ಮಾನ್ಯದ ಹೊಲ, ಕಪಿಲೆನ ಮಾಗಿ, ಜಟ್ಟಿಯವರ ಹೊಲ, ಗುರಿಕಾರನ ಹೊಲ ಹೀಗೆ ಇನ್ನು ಮುಂತಾದ ಹೆಸರುಗಳು ಈ ಪ್ರದೇಶದಲ್ಲಿನ ಹೊಲಗಳಿಗೆ ಹೆಸರಿಸಲಾಗಿದೆ. ಇವುಗಳ ಆಧಾರದ ಮೇಲೆ ಈ ಪ್ರದೇಶದ ಭೂಮಿಯನ್ನು ಹಂತ ಹಂತವಾಗಿ ಹಂಚಿಕೆ ಮಾಡಲಾಗಿತ್ತು ಎಂಬುದಾಗಿದೆ. ಈ ಬಗೆಯ ಭೂಮಿ ಹಂಚಿಕೆ ಅಗತ್ಯವಾಗಿತ್ತೆನಿಸುತ್ತದೆ. ಏಕೆಂದರೆ ಸಂಸ್ಥಾನಿಕರಿಗೆ ಜನರ ಸಹಕಾರ ಅಗತ್ಯವಿತ್ತು. ನಿಜಾಮರಿಗೆ ಸ್ಥಳೀಯ ಆಡಳಿತದ ಅವಶ್ಯಕತೆಯಿತ್ತು. ಹೀಗಾಗಿ ಈ ಕಾಲಾವಧಿಯಲ್ಲಿ ಭೂಮಿ ಹಂಚಿಕೆಯ ಸ್ವರೂಪ ಇನಾಮು ಸಂಸ್ಕೃತಿಯ ಮೂಲಕ ನಡೆದಿತ್ತೆಂದು ಹೇಳಬಹುದು. ಈ ಮೂಲಕ ಕೃಷಿ ವಿಸ್ತರಣೆ ಕಾರ್ಯ ನಡೆದು ಆದಾಯ ಹೆಚ್ಚಳಗೊಂಡಿತ್ತೆನ್ನಬಹುದು.

"ಹೈದರಾಬಾದ್ ಕರ್ನಾಟಕದಲ್ಲಿ ೧೮೫೩ರಲ್ಲಿ ಸಾಗುವಳಿಯಾಗುವ ಇಡೀ ಜಮೀನುಗಳನ್ನು ಸ್ಥೂಲವಾಗಿ ಅಳತೆ ಮಾಡಿ ಕೂರಿಗೆ ಘಟಕವನ್ನು ಎಕರೆಗಳನ್ನಾಗಿ ಪರಿವರ್ತಿಸಲಾಯಿತು. ಬೀಳು ಭೂಮಿಯನ್ನು ಕೃಷಿಗೊಳಪಡಿಸಲು ಅನೇಕ ನಿಯಮಗಳನ್ನು ರೂಪಿಸಲಾಯಿತು. ರೈತರಿಗೆ ಬೀಳು ಭೂಮಿಯನ್ನು ಕೃಷಿಗೆ ಕೊಟ್ಟಾಗ ಮೊದಲನೆಯ ವರ್ಷ ಯಾವುದೇ ತೆರಿಗೆಯನ್ನು ಕೊಡಬೇಕಾಗಿರಲಿಲ್ಲ. ಆ ಮುಂದಿನ ವರ್ಷಗಳಲ್ಲಿ ಎಕರೆಗೆ ರೂಪಾಯಿಯ ೧/೮ರಷ್ಟನ್ನು ಮಾತ್ರ ವಿಧಿಸಲಾಗುತ್ತಿತ್ತು.

ಬೆಲೆಯ ಸ್ವರೂಪಕ್ಕೆ ತಕ್ಕಂತೆ ಕಂದಾಯವನ್ನು ಮೂರು ಕಂತುಗಳಲ್ಲಿ ಸಂಗ್ರಹಿಸಲಾಗುತ್ತಿತ್ತು. ಸಾಲಾರ್‌ಜಂಗ್ ಕೃಷಿ ಭೂಮಿಯನ್ನು ಅಳತೆ ಮಾಡಿ, ಗುರುತಿಸಿ, ನೋಂದಾಯಿಸಿ, ಬಿಘಾಗಳ ಪ್ರಕಾರ ನಿಗದಿಯಾದ ಕಂದಾಯ ದರವನ್ನು ವಿಧಿಸಲಾಯಿತು. ಹಿಡುವಳಿದಾರರಿಗೆ ಅವರ ಜಮೀನುಗಳ ಮೇಲೆ ಒಡೆತನದ ಹಕ್ಕನ್ನು ವಹಿಸಿಕೊಡಲಾಯಿತು. ಇದಕ್ಕೂ ಮುಂಚೆ ದೇಶದಲ್ಲಿ ಶಾಂತಿಯನ್ನು ಕಾಪಾಡುವ ಸಲುವಾಗಿ ಅಸಫ್‌ಝಾ ಕೆಲವು ಸುಧಾರಣೆಗಳನ್ನು ಜಾರಿಗೆ ತಂದನು. ಅವನು ನೀಡಿದ ಮೊದಲನೆಯ ಭೂಮಿಯ ಕೊಡುಗೆ ೧೭೯ರಲ್ಲಿ. ೧೯ನೆಯ ಶತಮಾನದಲ್ಲಿ ಸರ್ ಸಾಲಾರ್‌ಜಂಗ್ ಈ ಜಾಗೀರುಗಳು ಮತ್ತು ಇನಾಂಗಳ ಪರಿಸ್ಥಿತಿಯನ್ನು ಪರೀಕ್ಷಿಸಿ ಅವುಗಳ ಆಡಳಿತಕ್ಕೆಂದೇ ದರಿಯಾಫ್, ಇನಾಮತ್ ಎಂಬ ಪ್ರತ್ಯೇಕ ಇಲಾಖೆಯನ್ನು ಪ್ರಾರಂಭಿಸಿದನು. ಬ್ರಿಟಿಶರ ಪ್ರಭುತ್ವ ರಾಯಚೂರು ದೋ-ಅಬ್ ಪ್ರದೇಶದಲ್ಲಿ ೧೮೫೩ರಿಂದಲೇ ಸ್ಥಾಪನೆಗೊಂಡಿತು. ಬ್ರಿಟಿಶರ ಪ್ರಭುತ್ವ ಬಂದ ಮೇಲೆ ದೇಶದ ಹಲವು ಭಾಗಗಳಲ್ಲಿ ರೈತವಾರಿ ಪದ್ಧತಿ ಪ್ರಾಮುಖ್ಯತೆ ಪಡೆಯಿತು. ಅದರಂತೆ ಈ ಪ್ರದೇಶದಲ್ಲಿಯೂ ಈ ಪದ್ಧತಿಯನ್ನು ಅನುಸರಿಸಲಾಯಿತು. ಈ ಪದ್ಧತಿಯಲ್ಲಿ ಕೃಷಿ ಭೂಮಿಯೆಲ್ಲವೂ ಸರ್ಕಾರಕ್ಕೆ ಸೇರಿದ್ದು, ಪಟ್ಟಾದಾರನು ಅಧಿಕೃತವಾಗಿ ನೋಂದಾಯಿತನಾದ ಒಡೆಯನಾಗಿರುತ್ತಿದ್ದನು"ಎಂದು ಪರ್ವೀನ್ ಸುಲ್ತಾನ ಅವರು ತಿಳಿಸುತ್ತಾರೆ(ಷೇಕ್ ಅಲಿ ೧೯೯೭: ೧೭೩-೧೭೪). ಈ ಮೂಲಕ ಕೃಷಿ ವಿಸ್ತರಣೆ ಚಟುವಟಿಕೆಗಳನ್ನು ಹೆಚ್ಚಿಸಲಾಯಿತು. ಜನಸಂಖ್ಯೆಯ ಹೆಚ್ಚಳದಿಂದ ಕೂರಿಗೆ ಹೊಲದ ಬದಲಾಗಿ ಎಕರೆ ಮಾಪನ ಜಾರಿಗೆ ಬಂದಿತು.

ರೈತವಾರಿ ಪದ್ಧತಿಯ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ೧೮೫೮-೫೯ರಲ್ಲಿ ಭೂ ಸರ್ವೇಮಾಡಿ, ಗ್ರಾಮಗಳ ಗಡಿಗಳನ್ನು ಗುರುತಿಸಲಾಯಿತೆಂದು ತಿಳಿದುಬರುತ್ತದೆ. ಹಾಗೆಯೆ ಈ ಭೂ ಸರ್ವೇಕಾರ್ಯವನ್ನು ದಕ್ಷಿಣ ಮರಾಠ ದೇಶದ ಭೂಮಾಪನ ಅಧಿಕಾರಿಯಾಗಿದ್ದ ಡಬ್ಲ್ಯೂ.ಸಿ. ಅಂಡರಸನ್ ಎಂಬುವವನ ನೇತೃತ್ವದಲ್ಲಿ ಈ ಪ್ರದೇಶದಲ್ಲಿ ಭೂಮಾಪನ ಕಾರ್ಯ ಆರಂಭಿಸಲಾಯಿತೆಂದು ತಿಳಿದುಬರುತ್ತದೆ. ಈ ಸರ್ವೇ ಪದ್ಧತಿ ಬಾಂಬೆ ಭೂಸರ್ವೇ ಪದ್ಧತಿಯಂತಿತ್ತು ಎಂಬುದಾಗಿದೆ.[೧೫] ಪರ್ವೀನ್ ಸುಲ್ತಾನ್ ಅವರು "ರೈತವಾರಿ ಭೂಮಿಯ ಸರ್ವೇ ಮತ್ತು ಕಂದಾಯ ವ್ಯವಸ್ಥೆಯನ್ನು ಭೂ ಕಂದಾಯಾಡಳಿತದ ಮೂಲ ತತ್ವಗಳನ್ನು ೧೯೦೭ರಲ್ಲಿ ಹೈದರಾಬಾದ್ ಲ್ಯಾಂಡ್ ರೆವಿನ್ಯೂ ಆಕ್ಟ್ ಶಾಸನ ಸ್ಪಷ್ಟವಾಗಿ ನಿರೂಪಿಸಿತು. ಇದನ್ನು ಕ್ರಿ.ಶ.೧೮೭೯ರ ಬಾಂಬೆ ಲ್ಯಾಂಡ್ ರೆವಿನ್ಯೂ ಕೋಡ್ ಮಾದರಿಯಲ್ಲೇ ರೂಪಿಸಲಾಗಿತ್ತು. ೧೮೭೫ರಲ್ಲಿ ವಿಸ್ತೀರ್ಣ, ವಾರಸುದಾರಿಕೆ ಮೊದಲಾದವನ್ನು ಸೂಚಿಸುವ ಸರ್ವೇ ನಡೆಸುವುದಕ್ಕೆ ಮುಂಚಿತವಾಗಿ ಕಂದಾಯ ಆಡಳಿತದಲ್ಲಿ ಹಲವು ದೋಷಗಳನ್ನು ಗಮನಿಸಲಾಗಿತ್ತು. ಅವುಗಳಿಂದಾಗಿ ಜನರಲ್ಲಿ ಅತೃಪ್ತಿ ಬೆಳೆದಿತ್ತು. ಪುನರ್ ವ್ಯವಸ್ಥೆಯಾಗಬೇಕಾಗಿತ್ತು. ಸರಕಾರ ಇದನ್ನು ಗಮನಕ್ಕೆ ತಂದುಕೊಂಡು ಬಾಂಬೆ ಮಾದರಿಯಲ್ಲಿ ಒಂದು ಕದಸ್ತ್ರಲ್ ಸರ್ವೇ(Cadastral Survey)ಯನ್ನು ನಡೆಸಲು ಆದೇಶಿಸಿತು. ಕೃಷಿ ಮಾಡುವ ಪ್ರತಿಯೊಬ್ಬ ವ್ಯಕ್ತಿಯೊಂದಿಗೆ ಮಧ್ಯವರ್ತಿ ಮಾಲಿಕರ ಪದ್ಧತಿಯನ್ನು ರದ್ದುಗೊಳಿಸಿತು. ೧೮೭೮ರಲ್ಲಿ ಗುಲ್ಬರ್ಗಾ, ಬೀದರ್ ಮತ್ತು ರಾಯಚೂರುಗಳಲ್ಲಿ ಬಾಂಬೆ ಮಾದರಿಯಲ್ಲಿ ಮಣ್ಣಿನ ವರ್ಗೀಕರಣ ಕಾರ್ಯವನ್ನು ಕೈಗೊಳ್ಳಲಾಯಿತು"ಎನ್ನುತ್ತಾರೆ(ಷೇಖ್ ಅಲಿ ೧೯೯೭: ೧೭೪-೧೭೫).

ಹೀಗೆ ನಿಜಾಮ ಮತ್ತು ಬ್ರಿಟಿಶರ ಪ್ರಭುತ್ವದ ಸಂದರ್ಭದಲ್ಲಿ ರಾಯಚೂರು ದೋ-ಅಬ್ ಪ್ರದೇಶದ ಭೂ ಕೃಷಿ ವಿಸ್ತರಣೆಯ ಸ್ವರೂಪ ಕಂದಾಯದ ಮೂಲ ನೆಲೆಯಾಗಿ ಪರಿಣಮಿಸಿತು.

ಹಾಗಾಗಿ ಕೃಷಿ ಭೂಮಿಯನ್ನು ಭಿನ್ನ ಭಿನ್ನವಾಗಿ ವರ್ಗೀಕರಿಸುವ ಪ್ರಮೇಯಕ್ಕೆ ಬರಬೇಕಾಯಿತು. ಒಟ್ಟಾರೆಯಾಗಿ ಕ್ರಿ.ಪೂ.ಮೂರನೆಯ ಶತಮಾನದಿಂದ ನಿಜಾಮರ ಕಾಲದವರೆಗೆ ಕೃಷಿ ವಿಸ್ತರಣೆಯ ಚಟುವಟಿಕೆಗಳು ಕಾಲದಿಂದ ಕಾಲಕ್ಕೆ ಭಿನ್ನ ಸ್ವರೂಪದಲ್ಲಿ ನಡೆದವು.

### ೩.೪.೧.೧.೨. ನೀರಾವರಿ ವ್ಯವಸ್ಥೆ

ಈ ಪ್ರದೇಶ ಮಳೆಯಾಶ್ರಿತ ಕೃಷಿಯನ್ನೇ ಅವಲಂಬಿಸಿತ್ತು. ಕೃಷ್ಣಾ ಮತ್ತು ತುಂಗಭದ್ರಾ ನದಿಗಳು ಈ ಪ್ರದೇಶದ ಎಡಬಲದಲ್ಲಿ ಹರಿದರೂ ಅವುಗಳಿಂದ ಇಲ್ಲಿನ ಭೂಮಿ ನೀರಾವರಿಗೆ ಒಳಗಾಗಿರಲಿಲ್ಲ. ಮಳೆಯನ್ನೇ ಅವಲಂಬಿಸಿತ್ತು. ಮಳೆಯಾಧಾರಿತ ಕೃಷಿ ಭೂಮಿಗೆ ನೀರಾವರಿ ವ್ಯವಸ್ಥೆ ಕಲ್ಪಿಸಿದರೆ ಕೃಷಿ ವ್ಯವಸ್ಥೆ ಜೀವಂತವಾಗಿರುತ್ತದೆ. ರಾಜ್ಯದ ಆರ್ಥಿಕತೆಯಲ್ಲಿ ಪ್ರಧಾನವಾಗಿ ಗುರುತಿಸಿಕೊಂಡಿದ್ದು ಕೃಷಿ. ಈ ಕೃಷಿಯಿಂದ ರಾಜ್ಯದ ಖಜಾನೆಯನ್ನು ತುಂಬಿಸಿಕೊಳ್ಳಲು ವಿವಿಧ ಅರಸುಮನೆತನಗಳು ಅರಸರು ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸಿಕೊಂಡರು. ಅದುವೇ ನೀರಾವರಿ ವ್ಯವಸ್ಥೆ. ಅರಸರು ನೀರಾವರಿಗೆ ಹೆಚ್ಚಿನ ಗಮನವನ್ನು ಕೊಡುವುದು ಅವಶ್ಯಕವಾಗಿತ್ತು. ಅರಸರಷ್ಟೆಲ್ಲದೆ ಸಾಮಂತರು ಮತ್ತು ಅಧಿಕಾರಿಗಳು ಸಹ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದರು. ಅಂದಿನ ಕಾಲದಲ್ಲಿ ಕೃಷ್ಣಾ-ತುಂಗಭದ್ರಾ ನದಿಗಳಿದ್ದರೂ ಕೆರೆ, ಬಾವಿ, ಏತಬಾವಿಗಳನ್ನು ನೀರಾವರಿಗೆ ಅವಲಂಬಿಸಿಬೇಕಿತ್ತು. ಈ ನದಿಗಳಿಂದ ನೀರನ್ನು ಕಾಲುವೆಯ ಮೂಲಕ ನೀರಾವರಿಗಾಗಿ ಬಳಸಲಿಲ್ಲ. ಬದಲಾಗಿ ಕೆರೆಯ ನೀರನ್ನು ಕಾಲುವೆಯ ಮೂಲಕ ಕೃಷಿಗೆ ಬಳಸಲಾಗುತ್ತಿತ್ತು. ಕೆರೆಗಳನ್ನು ಅರಸರು ಹಾಗೂ ಇತರ ಖಾಸಗಿ ವ್ಯಕ್ತಿಗಳು ಕಟ್ಟಿಸುತ್ತಿದ್ದರು. ಪ್ರತಿಯೊಂದು ಊರುಗಳಲ್ಲಿಯೂ ಕೆರೆಗಳಿರುತ್ತಿದ್ದವು. ಪ್ರತಿಯೊಂದು ಕೆರೆಗೂ ಹೆಸರುಗಳಿರುತ್ತಿದ್ದವು. ಕೆರೆಗಳನ್ನು ಕಟ್ಟಿಸಿದವರ ಹೆಸರು ಅಥವಾ ಯಾರ ಗೌರವಾರ್ಥವಾಗಿ ಕಟ್ಟಿಸಲಾಗಿದೆಯೋ ಅವರ ಹೆಸರನ್ನು ಆಯಾ ಕೆರೆಗಳಿಗೆ ಹೆಸರಿಡುವುದು ರೂಢಿಯಲ್ಲಿತ್ತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಅಭೆಸಾಣಿ ಅಯ್ಯನ ಕಾರ್ಯಕರ್ತನಾದ ಜೊಮರಾಹತನು ತನ್ನ ಅಧೀನರಾಗಿದ್ದ ಮುಕ್ಕುಂದಿಯ ಗೌಡ, ಸೇನಬೋವ ಮೊದಲಾದವರಿಗೆ ಕೆರೆಯನ್ನು ಕಟ್ಟಿಸಲು ಆದೇಶವನ್ನು ಹೊರಡಿಸುವನು. ಅದರಂತೆ ಮುಕ್ಕುಂದಿಯಲ್ಲಿ ಕಟ್ಟಿಸಿದ ಕೆರೆಗಳೆಂದರೆ ಗೌಡ ಸೇನಬೋವರು ಕಟ್ಟಿಸಿದ ಕೆರೆ, ಅಮಿತಿರೆಡ್ಡಿ ಕಟ್ಟಿಸಿದ ಕೆರೆ, ಸೂಗೂರು ನಾಗಪ್ಪನ ಕೆರೆ, ಆಟುಲ ಪರುವತನ ಕೆರೆ ಎಂಬ ನಾಲ್ಕು ಕೆರೆಗಳನ್ನು ಊರ ಪ್ರಮುಖರ ಹೆಸರಿನಲ್ಲಿ ಕಟ್ಟಿಸಲಾಗಿದೆ. ಹಾಗೆಯೇ ಈ ಕೆರೆಗಳ ಮೂಲಕ ಇನ್ನಷ್ಟು ನೀರನ್ನು ಉಪಯೋಗಿಸಿಕೊಂಡು ಹೆಚ್ಚಿನ ನೀರಾವರಿಗಾಗಿ ಕಾಲುವೆಯನ್ನು ಮಾಡಲಾಗಿದೆ. ಅಲ್ಲದೆ ಗುಡ್ಡದ ಇಳಿಜಾರಿನಲ್ಲಿ ಎರಡು ಕುಂಟೆಗಳನ್ನು ನಿರ್ಮಿಸಲಾಗಿತ್ತು ಎಂಬುದು ತಿಳಿದುಬರುತ್ತದೆ.[೨೪] ಈ ಕೆರೆ, ಕಾಲುವೆಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಈ ನೀರಿನಿಂದ ಕೃಷಿಯಲ್ಲಿ ಹೆಚ್ಚಳ ಕಂಡುಬಂದಿತು. ಹಾಗಾಗಿ ಈ ಆದಾಯದಲ್ಲಿ ಕುಳಪಾಲು ಎರಡು ಮತ್ತು ರಾಜ ಪಾಲು ಒಂದರ ಲೆಕ್ಕದಲ್ಲಿ ಹಂಚಿಕೆಯಾಗಿತ್ತು. ಮೂರು ಭಾಗಗಳನ್ನು ಸರ್ಕಾರಕ್ಕೆ ನೀಡಿದರೆ ಉಳಿದ ಒಂದು ಭಾಗವನ್ನು ಕೃಷಿಕನು ಪಡೆಯಬೇಕಿತ್ತು.

ಮಳೆಯನ್ನೇ ಅವಲಂಬಿಸಿದ ವ್ಯವಸಾಯ ಪದ್ಧತಿಯನ್ನು ಕಾಡಾರಂಭವೆಂದೂ ಮತ್ತು ಕೆರೆ ಮೊದಲಾದ ಜಲಾಶಯಗಳನ್ನು ಆಧರಿಸಿ ನಡೆಸುತ್ತಿದ್ದ ವ್ಯವಸಾಯ ಪದ್ಧತಿಗೆ ನೀರಾರಂಭ ಎಂದು ಕರೆಯುತ್ತಿದ್ದರು.[೨೫] ಈ ಪ್ರದೇಶದಲ್ಲಿ ಶಾಸನ ಉಲ್ಲೇಖಿತ ೧೮-೨೦ ಕೆರೆಗಳು ಕಂಡುಬರುತ್ತವೆ. ಈ ಕೆರೆಗಳ ಕೆಳಗೆ ಭೂದಾನ ಮಾಡುವ ಪದ್ಧತಿಯಿತ್ತು. ಆ ಮೂಲಕ ಆದಾಯ ಹೆಚ್ಚಿಸಿಕೊಳ್ಳುವುದಾಗಿತ್ತು.

ದಿದ್ದಿಗಿಯ ಕೆರೆಯ ಕೆಳಗೆ ಸಾಮಂತ ಸಿಂದವಂಶದ ಕಣ್ಣರಸನು ಭೂದಾನ ಮಾಡಿದ ಬಗ್ಗೆ ಉಲ್ಲೇಖವಿದೆ.[೧೬] ಅಲ್ಲದೆ ರಾಣಿ ಚಾಮಲದೇವಿಯ ಸಾಮಂತನಾಗಿದ್ದ ಭಾಸ್ಕರ ಸೆಟ್ಟಿ ಎಂಬುವವನು ಕವಿತಾಳದ ಅಳತೆ ಬಟ್ಟೆಯಿಂದ ಅಳೆದು ಕೆರೆಯ ಕೆಳಗಿನ ಭೂಮಿಯನ್ನು ದಾನ ಮಾಡುತ್ತಾನೆ.[೧೭] ಸಾಲಗುಂದೆಯಲ್ಲಿ ನಾಗದೇವನೆಂಬುವವನು ದೇವಸ್ಥಾನಗಳನ್ನು ನಿರ್ಮಿಸಿ, ಅವುಗಳ ನಿರ್ವಹಣೆಗಾಗಿ ಕೆರೆ, ಬಾವಿಗಳಿಂದ ನೀರಾವರಿಗೊಳಗಾದ ಕೃಷಿ ಭೂಮಿಯನ್ನು ಮತ್ತು ಗದ್ದೆಯನ್ನು ದಾನ ಬಿಟ್ಟಿರುವುದು ಕಂಡುಬರುತ್ತದೆ.[೧೮] ಹೀಗೆ ಕೆರೆಗಳು ನೀರಾವರಿಗೆ ಅನುಕೂಲಕರವಾದ ಜಲಾಶಯಗಳಾಗಿದ್ದವು. ಬಾವಿ ನೀರಾವರಿ ಪದ್ಧತಿ ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿತ್ತು. ಕೆರೆಗಳಲ್ಲದೆ ಈ ಪ್ರದೇಶದಲ್ಲಿ ಬಾವಿಗಳಿಂದಲೂ ವ್ಯವಸಾಯ ಮಾಡಲಾಗುತ್ತಿತ್ತು. ಇದಕ್ಕೆ ಅನೇಕ ಆಧಾರಗಳಿವೆ. ತೋಟ, ಹೂದೋಟ, ಗದ್ದೆಗಳಲ್ಲಿ ಬಾವಿಗಳಿರುತ್ತಿದ್ದವು. ಬಾವಿಗಳಿಗೆ ಏತವನ್ನು ಅಳವಡಿಸಲಾಗುತ್ತಿತ್ತು. ಈ ಬಾವಿಯ ನೀರನ್ನು ಗಂಗೆಯೆಂದು ಭಾವಿಸಲಾಗುತ್ತಿತ್ತು. ಇದು ವರ್ತಮಾನದಲ್ಲೂ ಚಾಲ್ತಿಯಲ್ಲಿದೆ. ಈ ಪ್ರದೇಶದ ಶಾಸನಗಳಲ್ಲಿ ಏತದ ಬಾವಿಗಳ ಉಲ್ಲೇಖ ಕಂಡುಬರುತ್ತದೆ. ಈ ಮೂಲಕ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತಿತ್ತು. ಏತದ ನೀರಾವರಿಯಲ್ಲಿ ಮೂರು ಬಗೆಯಲ್ಲಿ ಗುರುತಿಸಬಹುದು. ಒಂದು ಎತ್ತುಗಳ ಸಹಾಯದಿಂದ ಚರ್ಮದ ಕಪಿಲೆಯ(ಮಾಟೆ) ಮೂಲಕ ನೀರನ್ನು ಮೇಲೆತ್ತುವುದು. ಎರಡನೆಯದು ಹೂದೋಟಗಳಿಗೆ ಮತ್ತು ತರಕಾರಿ ತೋಟಗಳಿಗೆ ಗಿರಕಿಯ ಮೂಲಕ ನೀರನ್ನು ಸೇದುವುದು. ಮೂರನೆಯದು ಸಣ್ಣ ಪ್ರಮಾಣದ ಮೆಣಸಿನ, ಟೊಮೋಟೋ ಬದನೆಕಾಯಿ ಮುಂತಾದ ತೋಟಗಳಿಗೆ ಕಟ್ಟಿಗೆಗೆ ಹಗ್ಗವನ್ನು ಕಟ್ಟಿ ಬಕೇಟಿನ ಮೂಲಕ ನೀರನ್ನು ಮೇಲೆತ್ತುವುದು. ಈ ರೀತಿಯಾದ ನೀರಾವರಿ ಹೊಂದಿದ ಭೂಮಿಯನ್ನು ದಾನ ಬಿಡುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಏತದ ಬಾವಿಗಳನ್ನು ಕುರಿತು ಕನ್ಸಾವಿ ಮತ್ತು ಬಾಗಲವಾಡ ಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಇವಲ್ಲದೆ ನಾಲ್ಕು ಮೂಲೆಯ ಬಾವಿಗಳ ಉಲ್ಲೇಖಗಳು ದೊರೆಯುತ್ತವೆ. ಇವು ಕಲ್ಲು ಕಟ್ಟಡಗಳಿಂದ ಕೂಡಿರುತ್ತವೆ. ಹೀಗೆ ಈ ಪ್ರದೇಶದ ನೀರಾವರಿ ವ್ಯವಸ್ಥೆಯಲ್ಲಿ ಕೆರೆಗಳು ಮತ್ತು ಬಾವಿಗಳು ಪ್ರಧಾನ ಪಾತ್ರವಹಿಸಿದ್ದವು ಎಂಬುದು ತಿಳಿದುಬರುತ್ತದೆ. ಕೃಷಿಯ ವಿಸ್ತರಣೆಯ ಸಂದರ್ಭದಲ್ಲಿ ಹೊಸ ಭೂ ಪ್ರದೇಶಗಳನ್ನು ಸಾಗುವಳಿಗೆ ಒಳಪಡಿಸುವಷ್ಟೇ ಪ್ರಾಮುಖ್ಯತೆಯನ್ನು ನೀರು ಪೂರೈಕೆಗೂ ನೀಡಲಾಗುತ್ತಿತ್ತು. ರಾಜ್ಯದ ಒಟ್ಟು ಆರ್ಥಿಕ ವ್ಯವಸ್ಥೆ ಕೃಷಿಯನ್ನು ಅವಲಂಬಿಸಿರುವುದೇ ನೀರಾವರಿ ಹೆಚ್ಚಿನ ಪ್ರೋತ್ಸಾಹವನ್ನು ಪಡೆಯುವುದಕ್ಕೆ ಕಾರಣವಾಯಿತು. ಕೃಷಿಯ ವಿಸ್ತರಣೆ ಮತ್ತು ಸೂಕ್ತ ನೀರಾವರಿ ವ್ಯವಸ್ಥೆಯಿಂದಾಗಿ ಹೆಚ್ಚುವರಿ ಉತ್ಪಾದನೆ ಸಾಧ್ಯವಾದರೂ ಅದು ಸಮಾನವಾಗಿ ಹಂಚಿಕೆಯಾಗುತ್ತಿರಲಿಲ್ಲ ಎಂದು ತಿಳಿದುಬರುತ್ತದೆ.

ಕೆರೆಗಳನ್ನು ವಿವಿಧ ಹೆಸರುಗಳಿಂದ ಕರೆದಿರುವುದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಶಾಸನಾಧಾರಿತವಾಗಿ ಸುಮಾರು ೧೬-೨೦ ಕೆರೆಗಳ ಉಲ್ಲೇಖ ಸಿಗಬಹುದು. ಬಾವಿಗಳು ಸಹ ೧೬-೨೦ ಸಿಗುವುದು ಕಷ್ಟ. ಆದರೆ ದಾಖಲಾಗದ ಅದೆಷ್ಟೋ ಏತಬಾವಿಗಳು, ಸೇದುವ ಬಾವಿಗಳು, ಗಿರಿಕಿ ಬಾವಿಗಳು, ದೇವಸ್ಥಾನಗಳಲ್ಲಿರುವ ಗಜಗುಂಡ ಎಂಬ ಹೆಸರುಗಳಿಂದ ಕರೆಯಿಸಿ ಕೊಳ್ಳುವ ಕಲ್ಲು ಕಟ್ಟಡದ ಬಾವಿಗಳು ಚರಿತ್ರೆ ಬರವಣಿಗೆಯಲ್ಲಿ ಸೇರಿಲ್ಲ. ಆದರೆ ಇಲ್ಲಿ ಶಾಸನಾಧಾರಿತ ಕೆರೆ ಬಾವಿಗಳನ್ನು ಹೊಂದಿರುವ ಗ್ರಾಮಗಳನ್ನು ಕುರಿತು ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಈ ಪ್ರದೇಶದಲ್ಲಿ ಕಂಡುಬರುವ ಕೆರೆ, ಬಾವಿಗಳನ್ನು ಹೊಂದಿರುವ ಸ್ಥಳಗಳು ಇಂತಿವೆ. ಅವೆಂದರೆ, ದೇವದುರ್ಗ ತಾಲೂಕಿನಲ್ಲಿ ೬ ಶಾಸನ ಉಲ್ಲೇಖ ಕೆರೆಗಳಿವೆ. ಅವುಗಳೆಂದರೆ: ಗಬ್ಬೂರು(೬)–೧೧೪೯, ಹಿರೇರಾಯಕಂಪಿ(೨೭)–೧೧೩೦, ಅರಸಿಯಕೆರೆ ಚಂದನಕೇರಿ(೩೯), ಚಂದನಕೇರಿ(೪೧), ದೇವದುರ್ಗ(೪೬)–೧೬೭೦, ಇವಲ್ಲದೆ ಲಿಂಗಸೂಗೂರು ತಾಲೂಕಿನಲ್ಲಿ ನಾಗರಕೆರೆ– ಮಸ್ಕಿ(೪೪)–೧೦೭೧, ಮಾನ್ವಿ ತಾಲೂಕಿನಲ್ಲಿ ಕೊತ್ತಕೋಟ ಚೆರುವು(ಕೆರೆ), ಮಾನ್ವಿ(೧೦)–೧೭೬೦, ಮಾನ್ವಿ(೧೫)–೧೦೫೨, ಮರ್ಚೇಡಿನಕೆರೆ–ಸುಂಕೇಶ್ವರ(೨೯)–೧೯೯೭, ಗೋರ್ಕಲ್ಲು ಕೆರೆ(೩೩)–೧೬–೧೭ನೆಯ ಶತಮಾನ, ಹೊಕ್ರಾಣಿ–ಕುರುಡಿ(೪೩)–೧೧೨೩ ಹಾಗೂ ಇನ್ನೂ ಮುಂತಾದವು ಇರಬಹುದು. ಸಾಲಗುಂದೆಯಲ್ಲಿ ೨ ಕೆರೆಗಳಿವೆ. ಮುಕ್ಕುಂದಿಯಲ್ಲಿ ೫ ಕೆರೆಗಳಿವೆ ಮತ್ತು ಕುಂಟೆ, ಕಾಲುವೆಗಳೂ ಇದ್ದವೆಂದು ತಿಳಿದುಬರುತ್ತದೆ. ಇದಕ್ಕೆ ಮುಕ್ಕುಂದಿ(೧೯)–೧೬೪೬ರ ಶಾಸನ ಪ್ರಮುಖ ಸಾಕ್ಷಿಯಾಗಿದೆ. ಇವು ಸಿಂಧನೂರು ತಾಲೂಕಿಗೆ ಸೇರಿದೆ. ರಾಯಚೂರಿನಲ್ಲಿ ೧ ಕೆರೆ ಇದೆ(ದೇವರ ಕೊಂಡಾರೆಡ್ಡಿ ೨೦೦೩).

ಕೆರೆಗಳಂತೆ ಬಾವಿಗಳು ಸಹ ಬಳಕೆಯಲ್ಲಿದ್ದವು. ಅವುಗಳ ಉಲ್ಲೇಖ ಸುಮಾರು ೧೬–೨೦ರವರೆಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಈ ಪ್ರದೇಶದಲ್ಲಿನ ಶಾಸನಾಧಾರಿತ ಬಾವಿಗಳ ಉಲ್ಲೇಖ ಹೀಗಿದೆ. ಬಾವಿಗಳನ್ನು ಕೂಪ, ಏತದಬಾವಿ, ಬಾವಿ ಎಂದು ಕರೆಯಲಾಗಿದೆ. ಇಡಪನೂರು(೧೧)–೧೧೨೨, ಮಟಮಾರಿ(೫)–೧೭ನೆಯ ಶತಮಾನ, ರಾಮಪುರ(೧೨)– ೧೫೫೩, ರಾಯಚೂರು(೨೬)–೧೫೮೨, ರಾಯಚೂರು(೩೬)–೧೫೧೭ ಶಾಸನಗಳು ರಾಯಚೂರು ತಾಲೂಕಿನಲ್ಲಿ ಕಂಡುಬರುತ್ತವೆ. ಲಿಂಗಸೂಗೂರಿನಲ್ಲಿ ಮೂರು ಬಾವಿಗಳಿವೆ. ಮಸ್ಕಿ(೩೫)–ಕಾಲವಿಲ್ಲ, ಮುದಗಲ್(೧೧೫)–೧೫೦೩, ಏತದ ಬಾವಿ ಕನ್ನಾವಿ(೧೨೩)–೧೯೯೧ ಹಾಗೂ ಮಾನ್ವಿ ತಾಲೂಕಿನಲ್ಲಿ ಮಾನ್ವಿ(೧)–೧೬೦೭, ಮಾನ್ವಿ(೨)–೧೬೨೫, ಆರೋಲಿ(೪೧)–ಕಾಲವಿಲ್ಲ, ಕಪಗಲ್(೫೫)–೧೦೯೯, ಏತಬಾವಿ–ಬಾಗಲವಾಡ (೧೦೮)–೧೦೫೩ ಹಾಗೂ ಸಿಂಧನೂರು ತಾಲೂಕಿನಲ್ಲಿ ಕುರುಕುಂದಿ(೧೧೦)–೧೭–೧೮ನೆಯ ಶತಮಾನ ಮತ್ತು ಸಾಲಗುಂದೆ(೪)–೧೦೬೩ ಇಷ್ಟಲ್ಲದೆ ಕುಡಿಯುವ ನೀರಿಗಾಗಿ ಅರವಂಟಿಗೆಗಳನ್ನು ಸ್ಥಾಪಿಸಲಾಗುತ್ತಿತ್ತು ಎಂದು ಸಿದ್ಧರಾಂಪುರ(೨೨)–೧೫೨೩ರ ಶಾಸನದಿಂದ ತಿಳಿದುಬರುತ್ತದೆ. ಪ್ರಮುಖ ಬೀದಿ, ರಸ್ತೆಗಳಲ್ಲಿ ಪ್ರವಾಸಿಗರಿಗೆ ಮತ್ತು ಪ್ರಯಾಣಿಕರಿಗೆ ನೀರಿನ ದಾಹವನ್ನು ನಿವಾರಿಸಲು ಅರವಂಟಿಗೆಗಳನ್ನು ಸ್ಥಾಪಿಸುತ್ತಿದ್ದರೆಂದು ತಿಳಿದುಬರುತ್ತದೆ(ದೇವರಕೊಂಡಾರೆಡ್ಡಿ ೨೦೦೩). ಕೆರೆ, ಬಾವಿಗಳು ಪವಿತ್ರ ಸ್ಥಾನವನ್ನು ಪಡೆದವು. ಆದರೆ ಕೆರೆ, ಬಾವಿಗಳನ್ನು ನಿರ್ಮಿಸಿದ ದುಡಿಯುವ ವರ್ಗ ಎಂದಿಗೂ ಪಾವಿತ್ರ್ಯತೆಯ ಸ್ಥಾನವನ್ನು ಪಡೆಯಲಿಲ್ಲ ಎಂಬುದು ಗಮನಿಸಬಹುದಾದ ಸಂಗತಿಯಾಗಿದೆ.

### ೩.೪.೧.೧.೩. ದಾನ ಪ್ರಕ್ರಿಯೆ

ಈ ಕಲ್ಪನೆ ಪ್ರಾಚೀನ ಕಾಲದಿಂದ ವರ್ತಮಾನದವರೆಗೂ ಅಸ್ತಿತ್ವದಲ್ಲಿದೆ. ಈ ಪರಿಕಲ್ಪನೆಯನ್ನು ಮೋಹನ್‌ಕೃಷ್ಣ ರೈ ಅವರು ಹೀಗೆ ವಿಶ್ಲೇಷಿಸಿದ್ದಾರೆ. 'ರಾಜಪ್ರಭುತ್ವದ ಸಂದರ್ಭದಲ್ಲಿನ ದಾನದ ಪರಿಕಲ್ಪನೆ ವ್ಯಾಪಕಾರ್ಥವನ್ನು ಉಳ್ಳದ್ದಾಗಿದೆ. ಅದು ಮೇಲ್ನೋಟಕ್ಕೆ ಸರಳವಾಗಿ ಕಂಡುಬಂದರೂ, ಅತ್ಯಂತ ಸಂಕೀರ್ಣವಾದ ಹಾಗೂ ಸಮಾಜದಲ್ಲಿ ಯಜಮಾನಿಕೆ' ವಹಿಸುವ ಶಕ್ತಿಗಳ ಅಸ್ತ್ರವಾಗಿ

ಬಳಕೆಯಾದಂಥದ್ದು[೧೫] ಎಂದಿದ್ದಾರೆ. ಇದಕ್ಕೆ ಪೂರಕವಾಗಿ ಡಿ.ಡಿ. ಕೊಸಾಂಬಿಯವರು ಭೂದಾನಗಳು ಕ್ರಮೇಣವಾಗಿ ಸ್ವಯಂ ಪೋಷಕವಾಗುತ್ತಿದ್ದ ನೂತನ ಗ್ರಾಮೀಣ ವ್ಯವಸ್ಥೆಯನ್ನು ಮುಖ್ಯ ಪರಿಕ್ರಮವಾಗಿ ಹೊಂದಿದ್ದ ಚಿಕ್ಕ ಚಿಕ್ಕ ರಾಜ್ಯಗಳು ಹುಟ್ಟಿಕೊಳ್ಳತೊಡಗಿದವು[೧೬] ಎಂಬುದಾಗಿ ತಿಳಿಸುತ್ತಾರೆ. ದಾನ ನೀಡುವ ಪ್ರಕ್ರಿಯೆ ಕೇವಲ ಆರ್ಥಿಕ ಚಟುವಟಿಕೆಗಳಿಗಷ್ಟೇ ಸೀಮಿತವಾಗಿರದೆ ಸಾಮಾಜಿಕ ಸ್ಥಿತ್ಯಂತರದ ಸ್ವರೂಪವನ್ನು ಪರಿಚಯಿಸುವ ಅಂಶವೂ ಆಗಿದೆ. ದಾನವನ್ನು ಸಾಮಾಜಿಕ ಹಿನ್ನೆಲೆಯಲ್ಲಿ ನೀಡಲಾಗುತ್ತಿತ್ತು. ಸಂಗ್ರಹಿಸಿದ ಸಂಪತ್ತು ಎಲ್ಲ ಜಾತಿ/ವರ್ಗಗಳಿಗೆ ಸಮಾನ ಹಂಚಿಕೆಯಾಗುತ್ತಿರಲಿಲ್ಲ. ಸಂಪತ್ತು ಕೆಲವೇ ವರ್ಗಗಳ ಸ್ವತ್ತಾಗಿ ಮಾರ್ಪಟ್ಟಿತ್ತು. ಸಮಾಜದಲ್ಲಿ ಉಚ್ಚಸ್ಥಾನದಲ್ಲಿ ಇರುತ್ತಿದ್ದ ವರ್ಗಕ್ಕೆ ಮಾತ್ರ ಅನೇಕ ಸವಲತ್ತುಗಳು ಸಿಗುತ್ತಿದ್ದವು. ರಾಜಪ್ರಭುತ್ವ ಸಮಾಜವನ್ನು ತನಗೆ ಬೇಕಾದ ರೀತಿಯಲ್ಲಿ ಪರಿವರ್ತಿಸುವ ಸಾಮರ್ಥ್ಯವನ್ನು ಹೊಂದಿತ್ತು. ಪ್ರಭುತ್ವದ ವಿಸ್ತರಣೆಗೆ ದಾನ ಪ್ರಮುಖ ದಾರಿಯಾಗಿ ಪರಿಣಮಿಸಿದ್ದಿತ್ತು.

ದಾನ ಪ್ರಕ್ರಿಯೆ ಪ್ರಭುತ್ವದ ಅಸ್ತಿತ್ವಕ್ಕಾಗಿ ಸಹಕಾರಿಯಾಗಿತ್ತು. ಧಾರ್ಮಿಕ ಕ್ಷೇತ್ರದಲ್ಲಿ ದಾನದ ಮಹತ್ವ ಅರಿತ ಅರಸರು ಮತ್ತು ಅಧಿಕಾರಿ ವರ್ಗದವರು ಅಗ್ರಹಾರ, ದೇವಾಲಯ, ಬ್ರಾಹ್ಮಣರಿಗೆ, ಜೈನರಿಗೆ, ಮಠಗಳಿಗೆ ದಾನ ನೀಡಿದ ಉಲ್ಲೇಖಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತವೆ. ರಾಜಪ್ರಭುತ್ವ ತನ್ನ ಅಧಿಕಾರವನ್ನು ಭದ್ರವಾಗಿಟ್ಟುಕೊಳ್ಳಬೇಕಾದರೆ ಸಮಾಜದ ಮೇಲೆ ಹಿಡಿತ ಸಾಧಿಸಿದ ಸಂಸ್ಥೆಗಳಿಗೆ ದಾನದ ಮೂಲಕ ಸಂಬಂಧವನ್ನು ಬೆಳೆಸುವುದಾಗಿತ್ತು. ಜೊತೆಗೆ ಸಾಮಾಜಿಕ ಸಂಸ್ಥೆಗಳನ್ನೆ ತನ್ನ ಅಧೀನಕ್ಕೊಳಪಡಿಸುವ ಆಕಾಂಕ್ಷೆಯನ್ನು ಹೊಂದಿತ್ತು. ಇವರನ್ನು ಅಧೀನದಲ್ಲಿಟ್ಟುಕೊಳ್ಳಲು ದಾನ ನೀಡುವುದು ಅನಿವಾರ್ಯವಾಗಿತ್ತು. ಈ ದಾನ ನೀಡುವ ಪದ್ಧತಿ ವಿಜಯನಗರೋತ್ತರ ಕಾಲದಲ್ಲಿ ಇನಾಮ ಭೂಮಿಯೆಂದು ಗುರುತಿಸಿಕೊಂಡಿತು. ದಾನವನ್ನು ಅರಸುಕೇಂದ್ರಿತ ರಾಜಕಾರಣದಲ್ಲಿ ಉನ್ನತ ಸ್ಥಾನದಲ್ಲಿ ಕಾಣಲಾಗುತ್ತಿತ್ತು. ಇದರ ಸ್ಥಾನದಲ್ಲಿ ಇನಾಮ್ ಪ್ರವೇಶಿಸಿ ಪ್ರಾಂತಗಳ ಮಟ್ಟದಲ್ಲಿ ನೀಡುವುದಾಗಿ ಕಾಣಿಸಿಕೊಂಡಿತು. ನಿಜಾಮ ಮತ್ತು ಸಂಸ್ಥಾನಿಕರ ಸಂದರ್ಭದಲ್ಲಿ ಭೂಮಿಯನ್ನು ಜಾತಿ, ವೃತ್ತಿ, ಸೇವೆ ಮುಂತಾದ ಆಧಾರಗಳ ಹಿನ್ನೆಲೆಯಲ್ಲಿ ಇನಾಮು ನೀಡಲಾಗುತ್ತಿತ್ತು. ಇದು ಸಹ ಸ್ಥಳೀಯ ಅರಸರ ಅಸ್ತಿತ್ವಕ್ಕಾಗಿ ನಡೆದ ದಾನ ಪದ್ಧತಿಯಾಗಿದೆ. ದಾನ ನೀಡುವ ಪದ್ಧತಿಯನ್ನು ಒಂದು ಬಗೆಯ ಲಂಚವೆಂದು ಕರೆಯಲಾಗಿದೆ.[೧೭] ಈ ಪ್ರದೇಶದಲ್ಲಿ ದಾನ ನೀಡುವ ಪ್ರಕ್ರಿಯೆ ಕ್ರಿ.ಶ. ೧೧ನೆಯ ಶತಮಾನದಿಂದ ಹೈದರಾಬಾದ್ ನಿಜಾಮರ ಕಾಲದವರೆಗೂ ಚಾಲ್ತಿಯಲ್ಲಿತ್ತು. ಈ ಮುಂಚಿನ ದಾನದ ಬಗ್ಗೆ ತಿಳಿದು ಬರುವುದಿಲ್ಲ. ೮ನೆಯ ಶತಮಾನದಲ್ಲಿ ವ್ಯಾಪಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ಅಂದರೆ ಆ ವೇಳೆಗೆ ಇಲ್ಲಿ ಕೃಷಿ ವಿಸ್ತರಣೆ ಹೆಚ್ಚಾಗಿತ್ತು. ಆ ಸಂದರ್ಭದ ದಾನಗಳ ಬಗ್ಗೆ ಏನೂ ತಿಳಿದುಬರುವುದಿಲ್ಲ. ಆದರೆ ೧೧ನೆಯ ಶತಮಾನದಿಂದ ದಾನದ ಉಲ್ಲೇಖಗಳು ನೂರಕ್ಕೆ ಅರ್ಧದಷ್ಟು ಸಿಗುತ್ತವೆ. ಅವು ಹೀಗಿವೆ. ಇಡಪನೂರಿನ ಉತ್ತರೇಶ್ವರ ದೇವಾಲಯಕ್ಕೆ ಮಹಾಮಂಡಳೇಶ್ವರ ಪೆರ್ಮಾಡಿದೇವನು ೧೨ ಮತ್ತರುಭೂಮಿ, ತಾಳೆಯ ತೋಟ, ಹೂದೋಟಗಳನ್ನು ದಾನವಾಗಿ ನೀಡುತ್ತಾನೆ. ಇದನ್ನು ಕಟ್ಟಿಸಿದವರು ಇವನ ಅಧಿಕಾರಿ ಮೇಳೆಯನಾಯಕ. ಇದರ ಖರ್ಚಿಗಾಗಿ ದೊಡ್ಡ ಪ್ರಮಾಣದ ದಾನ ನೀಡಲಾಗಿತ್ತು.[೧೮]

ಈ ಪ್ರದೇಶದಲ್ಲಿ ಪುರುಷರು ಮತ್ತು ಮಹಿಳೆಯರು ಭೂ ದಾನ ಮಾಡಿದ ಉಲ್ಲೇಖಗಳಿವೆ. ಪುರುಷರ ಪ್ರಮಾಣ ತುಸು ಹೆಚ್ಚೇ ಇದೆ. ಆದರೂ ಸ್ತ್ರೀಯರನ್ನು ಕಡೆಗಣಿಸುವಂತಿಲ್ಲ. ಏಕೆಂದರೆ

ಶಾಸನಗಳಲ್ಲಿ ಉಲ್ಲೇಖಿತ ಮಹಿಳೆಯರು ಅಧಿಕಾರಿ ಮತ್ತು ಸಾಮಂತ ಮತ್ತು ರಾಣಿಯರಾಗಿದ್ದಾರೆ. ಇತರೆ ರಾಜಮನೆತನದ ರಾಣಿಯರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಚಾಲುಕ್ಯ ಅರಸರ ರಾಣಿಯರು ಉಲ್ಲೇಖಗೊಂಡಿದ್ದಾರೆ. ಇಲ್ಲಿನ ಅನೇಕ ಶಾಸನಗಳಲ್ಲಿ ರಾಣಿಯರು ಗ್ರಾಮವನ್ನು ಆಳುತ್ತಿದ್ದ ಬಗ್ಗೆ ಹಾಗೂ ಇಲ್ಲಿನ ದೇವಾಲಯ, ಧರ್ಮದ ಏತ ಮುಂತಾದ ರಚನೆಗಳನ್ನು ಮಾಡಿಸಿದ್ದ ಉಲ್ಲೇಖಗಳಿವೆ. ಇಮ್ಮಡಿ ಜಯಸಿಂಹನ ಪತ್ನಿಯರಾದ ಸೋಮಲಾದೇವಿ[೧೩೩] ಹಾಗೂ ಬಿಜ್ಜಲದೇವಿ[೧೩೪]ಯರು, ತ್ರೈಲೋಕ್ಯಮಲ್ಲನ ಪತ್ನಿಯರಾದ ಚಾಮಲಾದೇವಿ[೧೩೫] ಮತ್ತು ತ್ರೈಲೋಕ್ಯ ಮಹಾದೇವಿ[೧೩೬] ಭುವನೈಕ ಮಲ್ಲನ ಪತ್ನಿ ಪಂಪಾದೇವಿ[೧೩೭] ಹಾಗೂ ತ್ರಿಭುವನಮಲ್ಲನ ಪತ್ನಿಯರಾದ ಕೇತಲದೇವಿ, ಮೇಲಳದೇವಿ, ಲಚ್ಚಲ ಮಹಾದೇವಿ, ಕುಂಚಲದೇವಿಯರೂ ವಿಕ್ರಮಾದಿತ್ಯನ ಪತ್ನಿಯರಾದ ಲಕ್ಷ್ಮೀದೇವಿ, ಚಂದಲದೇವಿ,[೧೩೮] ಅಬ್ಬಲದೇವಿ[೧೩೯] ಸಾವಳದೇವಿ, ಜಾಕಲದೇವಿ, ಮಲ್ಲಿಣಿದೇವಿ, ಧಾರಲದೇವಿ ಮೊದಲಾದವರನ್ನು ಹೆಸರಿಸುತ್ತವೆ. ಇವರೆಲ್ಲರೂ ಭೂದಾನ ಮಾಡಿದ ಉಲ್ಲೇಖಗಳು ದೊರೆಯುತ್ತದೆ. ಇವರಲ್ಲದೆ ದಾನ ನೀಡಿದ ಇತರ ಮಹಿಳೆಯರಲ್ಲಿ ದೇವಾಲಯದಲ್ಲಿ ಹಲಗೆ ಬಾರಿಸುವ ಪರೆಕಾರ ಎಳಮೊಜೆಸನ ಮಗಳು ಸೋಮಕ್ಕ ಎಂಬುವವಳು ೧ಳ ಮತ್ತರು ಭೂಮಿಯನ್ನು ಪಂಚಲಿಂಗಕ್ಕೆ ನೀಡಿದ ಬಗ್ಗೆ ತಿಳಿದುಬರುತ್ತದೆ.[೧೪೦] ಇಲ್ಲಿ ಹಲಗೆ ಬಾರಿಸುವವನೆಂದರೆ ಕೆಳಜಾತಿಗೆ ಸೇರಿದವನು. ಇವನು ಭೂಮಿ ದಾನ ಮಾಡುವಷ್ಟು ಭೂಮಿಯನ್ನು ಹೊಂದಿರಬೇಕು. ಇಲ್ಲಿ ಇವನ ಸೇವೆಗಾಗಿ ಪ್ರಭುತ್ವ ಭೂಮಿದಾನ ನೀಡಿರಬೇಕು.[೧೪೧] ಅದರಲ್ಲಿ ಮಗಳು ಭೂದಾನ ಮಾಡಿದ್ದು ಕಂಡುಬರುತ್ತದೆ. ಕೆಳಜಾತಿಯವರು ದಾನ ಮಾಡಿದ ಏಕೈಕ ಉದಾಹರಣೆ ಇದಾಗಿದೆ. ಇದರಿಂದ ಶೂದ್ರರು ದಾನ ಮಾಡುವ ಪದ್ಧತಿಯನ್ನು ಅನುಸರಿಸುತ್ತಿದ್ದರೆಂದು ತಿಳಿಯುತ್ತದೆ. ಪುಳಿಯಮ್ಮ ಎಂಬ ಮಹಿಳೆ ಮಲ್ಲಿನಮಡುವು ಗ್ರಾಮದ ದೇವಾಲಯಕ್ಕೆ ನಿವೇಶನ ಮತ್ತು ತೋಟವನ್ನು ನೀಡಿದ ಬಗ್ಗೆ ತಿಳಿದುಬರುತ್ತದೆ.[೧೪೨] ಆದರೆ ಮಹಿಳೆಯ ಅಧಿಕಾರದ ಹಿನ್ನೆಲೆ ತಿಳಿದು ಬರುವುದಿಲ್ಲ. ಈ ವಿಚಾರ ೧೦ನೆಯ ಶತಮಾನದ್ದಾಗಿದೆ. ಈ ಸಂದರ್ಭದಲ್ಲಿ ರಾಷ್ಟ್ರಕೂಟರ ಆಡಳಿತವಿತ್ತು. ಆದರೆ ಪುಳಿಯಮ್ಮನ ಬಗ್ಗೆ ಬೇರೆ ಶಾಸನಗಳ ಸಹಕಾರವೂ ಇಲ್ಲ. ಈಕೆ ಈ ಗ್ರಾಮದ ಪ್ರಮುಖ ಅಧಿಕಾರಿಯ ಹೆಂಡತಿಯಾಗಿರಬೇಕು. ಗಂಡನ ಅನುಪಸ್ಥಿತಿಯಲ್ಲಿ ಈ ಕಾರ್ಯ ಜರುಗಿರಬೇಕು. ವಿಜಯನಗರ ಕಾಲದಲ್ಲಿ ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲ ದೇವಿಯವರು ಚಿನ್ನ, ಗೋದಾನವನ್ನು ಮಾಡಿರುವುದು ತಿಳಿದುಬರುತ್ತದೆ.[೧೪೩] ಹೀಗೆ ಮಹಿಳೆಯರು ದಾನ ಮಾಡಿರುವವರಲ್ಲಿ ಅಧಿಕಾರದಲ್ಲಿರುವವರೇ ಆಗಿದ್ದಾರೆ.

ನಿಜಾಮರ ಕಾಲದಲ್ಲಿ ಅನೇಕ ಇನಾಮ್ ಭೂಮಿಗಳಿರುವುದು ಗೋಚರಿಸುತ್ತದೆ. ಇಲ್ಲಿನ ಮಠಗಳಿಗೆ, ದೇವಾಲಯಗಳಿಗೆ, ವೃತ್ತಿಯವರಿಗೆ, ತಳವಾರರಿಗೆ ಮುಂತಾದವರಿಗೆ ಅಧಿಕ ಪ್ರಮಾಣದಲ್ಲಿ ಇನಾಮ್ ನೀಡಲಾಗಿದೆ. ಆದರೆ ಈ ಪ್ರದೇಶದ ಭೂಮಿಯನ್ನು ತಮ್ಮ ಆಳ್ವಿಕೆಯಲ್ಲಿ ಅಧಿಕಾರದ ನೆಲೆಯಿಂದ ಆಡಳಿತದ ಹಿತದೃಷ್ಟಿಯಿಂದ ಬಹುತೇಕ ಭೂಮಿಯನ್ನು ಹಿಂದೂಗಳಿಗೆ ಹಂಚಲಾಗಿತ್ತು. ನಿಜಾಮರ ಪ್ರಭಾವವಿತ್ತು. ಆದರೆ ಮುಸ್ಲಿಂರಿಗೆ ಭೂಮಿ ನೀಡಿರುವುದು ವಿರಳ. ನಿಜಾಮರ ದೃಷ್ಟಿಯಿಂದ ನೋಡಿದರೆ ಈ ಪ್ರದೇಶದಲ್ಲಿ ಮುಸ್ಲಿಂರೇ ದೊಡ್ಡ ದೊಡ್ಡ ಜಮೀನ್ದಾರರಿರಬೇಕಿತ್ತು. ಬದಲಾಗಿ ಲಿಂಗಾಯತರು ಮತ್ತು ಬ್ರಾಹ್ಮಣರೇ ದೊಡ್ಡ ಜಮೀನ್ದಾರರಾಗಿದ್ದರು. ಇದರಿಂದಾಗಿ ಈ ಪ್ರದೇಶದಲ್ಲಿ ನಿಜಾಮರ ಆಳ್ವಿಕೆಯಿದ್ದರೂ ಅಧಿಕಾರ ಮಾತ್ರ ಈ ಭೂ ಹಿಡುವಳಿದಾರರ ಕೈಯಲ್ಲಿತ್ತು ಎನ್ನಬಹುದು.

ಭೂಮಿಯನ್ನು ದಾನ ನೀಡುವ ಪದ್ಧತಿ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿತು. ದಾನವನ್ನು ಪಡೆದ ಜನರು ಮತ್ತು ಧಾರ್ಮಿಕ ಕೇಂದ್ರಗಳು ಭೂಮಾಲಿಕರಾಗಿ ಕಾಣಿಸಿಕೊಂಡರು. ರಾಜಕೀಯ ಮತ್ತು ಧಾರ್ಮಿಕ ಅಧಿಕಾರಗಳನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಜನರು ಈ ದಾನ ನೀಡುವ ವ್ಯವಸ್ಥೆಯಿಂದಾಗಿ ಸಂಪತ್ತು ಮತ್ತು ಸವಲತ್ತುಗಳನ್ನೂ ಪಡೆದುಕೊಳ್ಳುವಂತಾಯಿತು. ಇದರಿಂದ ಇವರು ಸ್ಥಳೀಯ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳ ಮೇಲೆ ನೇರವಾಗಿ ನಿಯಂತ್ರಣ ಸಾಧಿಸಿ, ಸ್ಥಳೀಯ ಯಜಮಾನರಾಗಿ ಕಾಣಿಸಿಕೊಂಡರು.

### ೩.೪.೧.೧.೪. ಭೂಮಾಲಿಕ ವರ್ಗ

ಈ ಪ್ರದೇಶ ಕೇವಲ ಅರಸರ ಆಳ್ವಿಕೆಗೆ ಒಳಪಡದೆ, ಹಲವು ಜನ ಆಡಳಿತಗಾರರಾದ ಅಧಿಕಾರಿಗಳ ಅಧೀನದಲ್ಲಿತ್ತು. ನೆಪ ಮಾತ್ರಕ್ಕೆ ಅರಸರ ಆಳ್ವಿಕೆಯಾಗಿತ್ತು. ವಾಸ್ತವವಾಗಿ ಈ ಪ್ರದೇಶದ ಒಡೆತನವನ್ನು ಮಹಾಸಾಮಂತರು, ಸಾಮಂತರು, ದಂಡನಾಯಕರು, ಅಲ್ಲದೆ ಅಗ್ರಹಾರಗಳ ಮಹಾಜನರು ಮುಂತಾದವರು ಹೊಂದಿದ್ದರು. ಇದಕ್ಕೆ ಕಾರಣ ಭೂದಾನ ಪ್ರಕ್ರಿಯೆ ಆಗಿದೆ. ಧಾರ್ಮಿಕ ಚಟುವಟಿಕೆಗಳಲ್ಲಿ ಪ್ರಭಾವಿಯಾಗಿ ಗುರುತಿಸಿಕೊಂಡಿದ್ದ ಬ್ರಾಹ್ಮಣರು ಅನೇಕ ಭೂದಾನಗಳನ್ನು ಪಡೆದಿದ್ದರು. ಗಬ್ಬೂರಿನಲ್ಲಿ ಕಂಡುಬರುವ ೨೦-೨೫ ಶಾಸನಗಳು ಬ್ರಾಹ್ಮಣರು ದಾನ ಪಡೆದ ಉಲ್ಲೇಖಗಳನ್ನು ತಿಳಿಸುತ್ತವೆ. ಸುಮಾರು ೨೦-೨೫ ಅಗ್ರಹಾರಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಇವೆಲ್ಲವೂ ಭೂದಾನವನ್ನು ಪಡೆದು ಸ್ವಾಯತ್ತ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಇದಕ್ಕೆ ಬ್ರಾಹ್ಮಣರೇ ಅಧಿಪತಿಗಳು. ಹೀಗೆ ಭೂದಾನಗಳನ್ನು ಪಡೆದ ಬ್ರಾಹ್ಮಣರು ಭೂಮಾಲಿಕರಾಗಿ ಸೃಷ್ಟಿಯಾದರು. ಇವರು ದಾನವಾಗಿ ದೊರೆತ ಭೂಮಿಯ ವ್ಯವಹಾರಗಳನ್ನು ಮಹಾಜನರು ನೋಡಿಕೊಳ್ಳುತ್ತಿದ್ದರು. ಹಾಗೆಯೇ ಈ ಮಹಾಜನರು ಭೂದಾನ ಮಾಡುವ ಹಕ್ಕನ್ನು ಹೊಂದಿದ್ದರು. ಧಾರ್ಮಿಕ ಮತ್ತು ಶೈಕ್ಷಣಿಕ ಕೆಲಸ ಕಾರ್ಯಗಳನ್ನು ಮಾಡುವುದು ಇವರಿಗೆ ಸೇರಿದ್ದವು.

ಮೌರ್ಯರ ಕಾಲದಿಂದ ನಿಜಾಮರ ಕಾಲದವರೆಗೂ ಈ ಪ್ರದೇಶದಲ್ಲಿ ಕೃಷಿ ಆಧಾರಿತ ಅರ್ಥವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಇದು ಈ ಪ್ರದೇಶದ ಮೇಲೆ ಮಹತ್ತರವಾದ ಬದಲಾವಣೆ ತಂದಿತ್ತು. ಇದರಿಂದಾಗಿ ಅನೇಕ ಬಗೆಯ ಸಂಘರ್ಷಗಳು ನಿರಂತರವಾಗಿ ನಡೆದಿರುವುದು ಚರಿತ್ರೆ. ಕೃಷಿಯ ಜೊತೆಗೆ ಕೌಶಲ್ಯದ ಕೆಲಸಗಳು ಬೆಳಕಿಗೆ ಬಂದವು. ಮೌರ್ಯ ಪೂರ್ವ ಮತ್ತು ಮೌರ್ಯ ಕಾಲಗಳನ್ನು ಬಿಟ್ಟರೆ ಕೃಷಿಯಲ್ಲಿ ಗುಲಾಮರನ್ನು ತೊಡಗಿಸಿದ್ದು ಭಾರತದಲ್ಲಿ ಕಾಣಸಿಗುವುದಿಲ್ಲವೆಂದು ಆರ್.ಎಸ್. ಶರ್ಮ ಅವರು ಹೇಳುತ್ತಾರೆ. ಏಕೆ ಗುಲಾಮರನ್ನು ಬಳಸಿಲಿಲ್ಲವೆಂಬುದಕ್ಕೆ ಅವರು ಮೌರ್ಯರ ನಂತರ ದೊಡ್ಡ ದೊಡ್ಡ ಪ್ರಮಾಣದಲ್ಲಿ ಯುದ್ಧಗಳು ನಡೆಯಲಿಲ್ಲ, ಹಾಗಾಗಿ ಗುಲಾಮರು ಕಾಣಸಿಗಲಿಲ್ಲವೆಂದು ತಿಳಿಸುತ್ತಾರೆ.[೧೪] ಗುಲಾಮರೆ ಇಲ್ಲವೆಂದರೆ ಕೃಷಿಯಿಂದ ಬರುವ ಆದಾಯ ಕಡಿಮೆಯಾಯಿತು. ಇದರಿಂದ ಎಚ್ಚೆತ್ತ ಅರಸರು ಗೇಣಿದಾರರಿಗೆ ಷರತ್ತಿನ ಮೇಲೆ ಭೂಮಿ ನೀಡುವ ಪದ್ಧತಿಯನ್ನು ಜಾರಿಗೆ ತಂದರು. ಆಗ ಭೂಮಿಯ ಮೇಲಿನ ಹಿಡಿತವನ್ನು ಸಡಿಲಿಸಿದ ಅರಸರು ಧಾರ್ಮಿಕ ಸಂಸ್ಥೆಗಳಿಗೆ ದಾನ ನೀಡಿದರು. ವರ್ಷಕ್ಕೆ ಇಂತಿಷ್ಟು ಎಂದು ನಿಗದಿಪಡಿಸಿಕೊಂಡು ರಾಜ್ಯದಲ್ಲಿನ ಎಲ್ಲರಿಗೂ ಅವಕಾಶ ಮಾಡಿಕೊಟ್ಟರು. ಈ ರೀತಿಯಾಗಿ ಚಿಕ್ಕ ಚಿಕ್ಕ ಹಿಡುವಳಿಗಳನ್ನು ಹೊಂದಿದ್ದರು. ಈ ಪ್ರದೇಶದ ಶಾಸನಗಳಲ್ಲಿ ಕಂಡು ಬರುವಂತೆ ಸರ್ಕಾರಿ ಭೂಮಿಗಿಂತ ಖಾಸಗಿ ಭೂಮಿಯೇ ಅಧಿಕವಾಗಿತ್ತು ಎಂಬ ಅಂಶ ಶಾಸನಗಳಿಂದ

ತಿಳಿದುಬರುತ್ತದೆ. ಬಹುತೇಕವಾಗಿ ಸಾಮಂತರು ಮತ್ತು ಮಹಾಜನರು ಪ್ರಭಾವಿಯಾಗಿ ಭೂಮಾಲಿಕತ್ವದ ಹಕ್ಕನ್ನು ಹೊಂದಿದ್ದರು.

ಈ ಪ್ರದೇಶದಲ್ಲಿ ಭೂಮಿಯ ಮೇಲಿನ ಒಡೆತನ ಏಕ ರೂಪದ್ದಾಗಿರಲಿಲ್ಲ. ರಾಜ ಪ್ರಭುತ್ವದ ಹಿಂಬಾಲಕರಾಗಿದ್ದ ಮಹಾಸಾಮಂತರು, ಸಾಮಂತರು, ದಂಡನಾಯಕರು ಅಲ್ಲದೆ ಸಾಮಾಜಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸಿದ್ದ ಪುರೋಹಿತಶಾಹಿ ವರ್ಗ ಹಾಗೂ ಸ್ಥಳೀಯ ಆಡಳಿತ ವರ್ಗ ಮತ್ತು ಪ್ರಭಾವಿ ವ್ಯಕ್ತಿಗಳು ಈ ಪ್ರದೇಶದ ಭೂಮಿಯ ಮೇಲಿನ ಒಡೆತನವನ್ನು ಸಾಧಿಸಿದ್ದರು. ಇದಕ್ಕೆ ಶಾಸನಗಳಲ್ಲಿ ಸಾಕಷ್ಟು ಆಧಾರಗಳು ದೊರೆಯುತ್ತವೆ. ಹಾಗೆಯೇ ಅಮರನಾಯಕರು, ಸಂಸ್ಥಾನಿಕರು, ನಾಡಗೌಡರು, ದೇಸಾಯಿಗಳು, ಗೌಡ, ಕುಲಕರ್ಣಿಗಳು ಮುಂತಾದವರು ಈ ಪ್ರದೇಶದ ಭೂಮಿಯ ಮೇಲೆ ಹಿಡಿತ ಸಾಧಿಸಿರುವುದು ಕಂಡುಬರುತ್ತದೆ. ಆಳ್ವಿಕೆ ಮಾತ್ರ ಅರಸರ ಹೆಸರಿನಲ್ಲಿರುತ್ತಿತ್ತು. ಆದರೆ ಅಧಿಕಾರ ಮಾತ್ರ ಆಡಳಿತ ವರ್ಗದ ಕೈಯಲ್ಲಿತ್ತು. ರಾಜ್ಯದ ಎಲ್ಲಾ ಸಂಪತ್ತು ಮೇಲ್ನೋಟಕ್ಕೆ ಅರಸರ ಅಧೀನದಲ್ಲಿದ್ದಂತೆ ಕಂಡುಬರುತ್ತದೆ. ಆದರೆ ಅದು ವಾಸ್ತವ ಸ್ಥಿತಿಯಲ್ಲ. ಏಕೆಂದರೆ ಅನೇಕ ಖಾಸಗಿ ವ್ಯಕ್ತಿಗಳು ಹಾಗೂ ಸಾಮಂತ ಅರಸರು, ಮಹಾಜನರು ಮುಂತಾದವರು ಸ್ವಂತ ಆಸ್ತಿಯನ್ನು ಹೊಂದಿದ್ದರು. ಅವರಲ್ಲಿ ಅರಸನಿಗೆ ಸಾಮಂತರು ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಅರಸರು, ಸಾಮಂತರು, ಮಹಾಜನರು ತಮ್ಮ ಅಧೀನಕ್ಕೆ ಒಳಪಡದ ಭೂಮಿಯನ್ನು ದಾನ ನೀಡಬೇಕಾದರೆ ಸಂಬಂಧ ಪಟ್ಟ ಭೂಮಾಲಿಕರ ಅನುಮತಿ ಪಡೆದುಕೊಳ್ಳಬೇಕಾಗಿತ್ತು. ಇಲ್ಲದಿದ್ದರೆ ಭೂಮಿಯನ್ನು ಖರೀದಿಸಿ ದಾನ ನೀಡಬೇಕಾಗಿತ್ತು. ಖಾಸಗಿ ವ್ಯಕ್ತಿಗಳೂ ದಾನ ನೀಡುತ್ತಿದ್ದರು. ಕಲ್ಯಾಣ ಚಾಲುಕ್ಯ ಅರಸ ತ್ರಿಭುವನಮಲ್ಲನ ಕಾಲದಲ್ಲಿ ಮಧುಸೂದನ ಎಂಬ ಸಾಮಂತನು ಕರಡಕಲ್-೩೦೦ರ ಬನ್ನಿಗೊಳವನ್ನು ಆಳುತ್ತಿದ್ದನು. ಇವನು ವಾಸುದೇವ ಎಂಬ ದೇವಾಲಯವನ್ನು ಕಟ್ಟಿಸಿದ್ದನು. ಇವನ ಮರಣದ ನಂತರ ಇವನ ಮಗ ಮಾಚರಸನು ಅಧಿಕಾರಕ್ಕೆ ಬಂದನು. ಇವನು ತನ್ನ ತಂದೆ ಮಧುಸೂದನ ಕಟ್ಟಿಸಿದ ವಾಸುದೇವ ದೇವಾಲಯಕ್ಕೆ ಭೂಮಿಯನ್ನು ದಾನ ನೀಡಬೇಕಾದರೆ ಕುರುಡಿಯಲ್ಲಿರುವ ಮಹಾಜನರನ್ನು ವಿನಂತಿಸಿಕೊಂಡು ಅನುಮತಿಯನ್ನು ಪಡೆದು ಭೂದಾನ ಮಾಡಿರುವುದು ತಿಳಿದುಬರುತ್ತದೆ.[೧೪೫]

ಹಾಗೆಯೇ ಚಾಲುಕ್ಯರಸ ಎರಡನೆಯ ಜಯಸಿಂಹನ ರಾಣಿ ಮಹಾದೇವಿಯು ಬಲ್ಲಟಗಿಯಲ್ಲಿ ತನ್ನ ತಂತ್ರಪಾಳ ಕಟ್ಟಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ-೩೦೦ರ ಮನ್ನೆಯ ಲೋಕಾದಿತ್ಯನೆಂಬ ಮುಖಂಡನಿಂದ ಭೂಮಿಯನ್ನು ಪಡೆದು ದಾನ ನೀಡಿರುವುದು ಕಂಡುಬರುತ್ತದೆ.[೧೪೬] ಮಹಾಮಂಡಳೇಶ್ವರನಾಗಿದ್ದ ಬಿಜ್ಜರಸನು ಕರಡಿಕಲ್ಲಿನ ಸೋಮನಾಥ ದೇವರಿಗೆ ವಿವಿಧ ಕಾರ್ಯಗಳಿಗಾಗಿ ಭೂದಾನ ಮಾಡಬೇಕಾದರೆ ಕಸಬಾ ಲಿಂಗಸೂಗೂರು ಸಮಸ್ತ ಪ್ರಭುಗಳಿಂದ ಹೊಲವನ್ನು ಖರೀದಿಸಿ ದಾನ ಮಾಡುತ್ತಾನೆ.[೧೪೭] ಖಾಸಗಿ ವ್ಯಕ್ತಿಗಳಾದ ನಖರರು ಕಲಚೂರಿ ಚಕ್ರವರ್ತಿ ರಾಯಮುರಾರಿ ಸೋವಿದೇವನ ಆಳ್ವಿಕೆಯ ಕಾಲದಲ್ಲಿ ಮಾದುಪಾಧ್ಯ ಎಂಬ ಭೂಮಾಲಿಕನಿಂದ ಭೂಮಿಯನ್ನು ಖರೀದಿಸಿ ಮಹಾಜನಗಳ ಪಾದ ಪೂಜೆಗಾಗಿ ಅಗಸ್ತ್ಯ ದೇವರಿಗೆ ದಾನ ನೀಡುತ್ತಾರೆ.[೧೪೮] ಇದನ್ನು ಗಮನಿಸಿದರೆ ವರ್ತಕರು ಶ್ರೀಮಂತರಾಗಿದ್ದು, ದಾನಗಳನ್ನು ನೀಡುವ ಸಾಮರ್ಥ್ಯವನ್ನು ಹೊಂದಿದ್ದರೆಂದು ತಿಳಿಯಬಹುದಾಗಿದೆ. ವೈಯಕ್ತಿಕವಾಗಿ ದಾನ ನೀಡುವ ಪ್ರಭಾವ ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಪೋತಿ ಶೆಟ್ಟಿ ಎಂಬುವವನು ಬ್ರಾಹ್ಮಣರ ಛತ್ರಕ್ಕೆ ಭೂಮಿಯನ್ನು ಖರೀದಿಸಿ ದಾನ ನೀಡಿದನು.[೧೪೯]

ಇವನಂತೆ ಹಿರಿಯ ಬಳಗಾನೂರಿನ ಛಾತ್ರ ಪೆದ್ದಣ್ಣನ ಮೊಮ್ಮಕ್ಕಳಾದ ಶ್ರೀಧರಪೆದ್ದಿ, ನರಸಿಂಹಗರ್ಭದಾಸಪ್ಪ, ವೈಜನಾಥ ಪೆದ್ದಿಗಳು ಸೇರಿ ಇವರ ತಾತನಾದ ಪೆದ್ದಣ್ಣ ಹಿಂದೆ ದಾನವಾಗಿ ಪಡೆದ ಭೂಮಿಯಲ್ಲಿ ಒಂದು ಪಾಲನ್ನು ಪಡೆಯಬೇಕಾದರೆ ವರ್ತಕರಾಗಿದ್ದ ವಡ್ಡವ್ಯವಹಾರಿ ರವಿದೇವಶೆಟ್ಟಿ, ಚೌಡಿಸೆಟ್ಟಿ ಮುಂತಾದವರಿಂದ ಪಡೆದದ್ದು ಕಂಡುಬರುತ್ತದೆ.[೧೫೦] ದಾನ ನೀಡುವ ಪದ್ಧತಿ ಧಾರ್ಮಿಕವಾಗಿ ಹೆಚ್ಚು ಪ್ರಭಾವಿತವಾಗಿತ್ತೆಂದು ತಿಳಿದುಬರುತ್ತದೆ. ಅಧಿಕಾರವನ್ನು ಯಥಾವತ್ತಾಗಿ ಮುಂದುವರೆಸಬೇಕಾದರೆ ಹೆಚ್ಚು ಹೆಚ್ಚು ದಾನಗಳನ್ನು ನೀಡಬೇಕಾಗಿತ್ತು. ಈ ದಾನವನ್ನು ಮಹಾಜನರಿಗೆ ನೀಡಲಾಗುತ್ತಿತ್ತು. ಏಕೆಂದರೆ ಅರಸರಿಗೂ ಮಹಾಜನರಿಗೂ ನೇರ ಸಂಬಂಧಗಳಿದ್ದವು. ಅವರು ರಾಜಪ್ರಭುತ್ವದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದರು. ಮಹಾಜನರನ್ನು ಎದುರುಹಾಕಿಕೊಳ್ಳುವ ಸಾಮರ್ಥ್ಯ ಯಾವ ಅಧಿಕಾರಿಗೂ ಇರಲಿಲ್ಲ. ಈ ಕಾರಣಕ್ಕಾಗಿ ಕುರುಡಿ ಅಗ್ರಹಾರದಲ್ಲಿ ಸಾಮಂತರಾದ ಕುಮಾರ ತೈಲಪದೇವ ಮತ್ತು ಮಹಾಪ್ರಧಾನ ದಂಡನಾಯಕ ನಿಂಬಣ್ಣಯ್ಯನು ನಿಂಬಣೇಶ್ವರ ದೇವರಿಗೆ ಭೂದಾನ ಮಾಡುತ್ತಾರೆ. ಈ ದೇವರಿಗೆ ದಾನ ನೀಡಲು ಮಾಡಿದ ಪ್ರಯತ್ನ ಗಂಭೀರ ಸ್ವರೂಪದ್ದಾಗಿದೆ. ಕುರುಡಿ ಅಗ್ರಹಾರದಲ್ಲಿರುವ ಚಂದ್ರಶೇಖರ ಭಟ್ಟ ಎಂಬುವವರಿಗೆ ನಿಂಬಣ್ಣಯ್ಯ ಭೂಮಿಯನ್ನು ಖರೀದಿಗೆ ನೀಡಿದ್ದನು. ಈ ಭೂಮಿಯಲ್ಲಿ ಅರ್ಧಭೂಮಿಯನ್ನು ವಾಪಾಸು ಪಡೆದು ಆ ಅರ್ಧಭೂಮಿಯನ್ನು ಮಹಾಜನರ ನೇತೃತ್ವದಲ್ಲಿ ದೇವರಿಗೆ ದಾನ ನೀಡುತ್ತಾನೆ.[೧೫೧] ಇಲ್ಲಿ ಮಹಾಜನರ ಪ್ರಭಾವ ಹೆಚ್ಚಾಗಿರುವುದು ಗೋಚರಿಸುತ್ತದೆ. ಮಹಾಜನರು ೧೦೦ ಕಮ್ಮದಷ್ಟು ತೋಟವನ್ನು ದಾನ ನೀಡಿದ ಉಲ್ಲೇಖವಿದೆ.[೧೫೨] ಅರಸರಂತೆ ಖಾಸಗಿ ವ್ಯಕ್ತಿಗಳು ಸ್ವಂತ ಭೂಮಿಯನ್ನು ಹೊಂದಿರುತ್ತಿದ್ದರೆಂದು ತಿಳಿದುಬರುತ್ತದೆ.

ಈ ಬಗೆಯಲ್ಲಿ ಭೂಮಾಲಿಕರು ತಮ್ಮ ಭೂಮಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಸ್ವತಂತ್ರವಾಗಿಯೇ ಮಾಡಬಹುದಾಗಿತ್ತು. ರಾಜಪ್ರಭುತ್ವಕ್ಕೆ ಖಾಸಗಿ ಭೂಮಾಲಿಕರ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲು ಅವಕಾಶವಿರಲಿಲ್ಲ. ಆದರೆ ಆ ಭೂಮಿಯ ಮೇಲೆ ಸಂಪೂರ್ಣ ಹಕ್ಕು ಇವರಿಗೆ ಸೇರಿತ್ತು. ಈ ಭೂಮಾಲಿಕರ ಭೂಮಿ ವಂಶಪರಂಪರೆಯಿಂದ ಬಂದದ್ದಾಗಿತ್ತು. ಕೆಲವು ಸಲ ಹೊಸದಾಗಿ ಪಡೆಯಲಾಗಿತ್ತು. ಭೂಮಿಯನ್ನು ಮಾರಾಟ ಮಾಡಬೇಕಾದರೆ ಕುಟುಂಬದ ಎಲ್ಲ ಸದಸ್ಯರ ಒಪ್ಪಿಗೆಯೂ ಬೇಕಾಗಿರುತ್ತಿತ್ತು. ಅದೇ ರೀತಿ ಅರಸರು ಖಾಸಗಿ ವ್ಯಕ್ತಿಗಳಿಂದ ಭೂಮಿಯನ್ನು ಖರೀದಿಸುತ್ತಿದ್ದ ಬಗ್ಗೆ ತಿಳಿದುಬರುತ್ತದೆ.[೧೫೩] ಹೀಗೆ ರಾಜಪ್ರಭುತ್ವದ ರಾಜಕೀಯ ಮತ್ತು ಧಾರ್ಮಿಕ ಅಧಿಕಾರಗಳನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಜನರು ದಾನ ನೀಡುವ ವ್ಯವಸ್ಥೆಯಿಂದಾಗಿ ಸಂಪತ್ತು ಮತ್ತು ಸವಲತ್ತುಗಳನ್ನು ಹೆಚ್ಚು ಹೆಚ್ಚು ಪಡೆದುಕೊಳ್ಳುವಂತಾಯಿತು.

ದಾನದ ರೂಪದಲ್ಲಿ ಧಾರ್ಮಿಕ ಹಾಗೂ ಸಾರ್ವಜನಿಕ ಸೇವೆಗೆಂದು ಪಡೆದ ಭೂಮಿಯ ಭೂ ಮಾಲಿಕತ್ವದ ಅಂಶಗಳು ಕ್ರಿ.ಶ. ೧೦-೧೧ನೆಯ ಶತಮಾನದವರೆಗೆ ದೊರೆಯುವ ಶಾಸನಗಳಿಂದ ತಿಳಿದುಬರುತ್ತದೆ. ದಾನದ ರೂಪದಲ್ಲಿ ಭೂಮಿಯನ್ನು ಪಡೆದ ವ್ಯಕ್ತಿ ಅಥವಾ ಸಂಸ್ಥೆ ಆ ಭೂಮಿಯ ಮೇಲಿನ ಮಾಲಿಕತ್ವವನ್ನು ಹೊಂದಿರುತ್ತಿದ್ದರು. ಇದು ಬ್ರಾಹ್ಮಣರು ಮತ್ತು ದೇವಾಲಯಗಳು ಭೂಮಾಲಿಕರಾಗುವಂತೆ ಮಾಡಿತು. ಈ ಪ್ರಕ್ರಿಯೆಗಳು ಈ ಪ್ರದೇಶದಲ್ಲಿ ಹೊಸ ಭೂಮಾಲಿಕ ವರ್ಗ ಹುಟ್ಟಿಕೊಳ್ಳುವುದಕ್ಕೆ ಕಾರಣವಾದವು. ಈ ಪ್ರದೇಶದ ಮೇಲಿನ ಹಿಡಿತವನ್ನು ಸಾಧಿಸಲು ದಾನ

ಪ್ರಕ್ರಿಯೆ ಅನಿವಾರ್ಯವಾಗಿತ್ತು. ಈ ಪ್ರದೇಶದ ಆರ್ಥಿಕತೆಯನ್ನು ಭೂಮಿಯ ಹಿನ್ನೆಲೆಯಲ್ಲಿಯೇ ನೋಡಲಾಗುತ್ತಿತ್ತು. ಹಾಗಾಗಿ ಭೂಮಿಯ ಖಾಸಗಿ ಒಡೆತನ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದು ಭೂಮಾಲಿಕ ವರ್ಗದ ಸೃಷ್ಟಿಗೆ ಕಾರಣವಾಯಿತೆನ್ನಬಹುದು.

ಇದು ಈ ಪ್ರದೇಶದಲ್ಲಿನ ಭೂಮಿಯ ಒಡೆತನದಲ್ಲಿ ನಡೆದ ಒಂದು ಮುಖ್ಯ ಬೆಳವಣಿಗೆಯಾಗಿದೆ. ಇಲ್ಲಿ ಬ್ರಾಹ್ಮಣರಿಗೆ ನೀಡಲಾದ ಭೂ ಕೊಡುಗೆಗಳಿಂದ ಆ ವರ್ಗ ಭೂಮಾಲಿಕತ್ವವನ್ನು ಹೊಂದಿತು. ಇದು ಈ ಪ್ರದೇಶದಲ್ಲಿ ಕೃಷಿ ವಿಸ್ತರಣೆಗೆ ಕಾರಣವಾದರೂ ಕೃಷಿಕನ ಸ್ಥಾನಮಾನಗಳನ್ನು ಕುಗ್ಗುವಂತೆ ಮಾಡಿತು. ಹಾಗೆಯೇ ಅಧಿಕಾರಿಗಳಿಗೆ ಸ್ಥಳೀಯ ಮುಖಂಡರು ಮುಂತಾದವರಿಗೆ ಇದೇ ರೀತಿ ಭೂ ಕೊಡುಗೆಗಳನ್ನು ನೀಡಿದುದರಿಂದ ಕೃಷಿ ಕ್ಷೇತ್ರದ ಮೇಲೆ ಪರಿಣಾಮ ಬೀರಿತು. ಅಲ್ಲದೆ ಕೃಷಿ ಸಂಬಂಧಗಳು ಸಹ ಬದಲಾದವು. ರೈತರು ಮತ್ತು ಭೂಮಾಲಿಕರ ನಡುವಿನ ಸಂಬಂಧಗಳು ಸಂಘರ್ಷದ ಸ್ವರೂಪ ಪಡೆದಿರಬೇಕು. ಏಕೆಂದರೆ ಇಲ್ಲಿನ ಶಾಸನಗಳಲ್ಲಿ ಕುಡುಗೋಲು, ಕೂಲಿಗಳ ಉಲ್ಲೇಖದ ಜೊತೆಗೆ ವೀರಗಲ್ಲು ಸಹ ಇದಕ್ಕೆ ಸಾಕ್ಷಿಯಾಗಿ ಕಂಡುಬರುತ್ತವೆ.[೧೪೯] ಇಂತಹ ಘಟನೆಗಳ ಹಿನ್ನೆಲೆಯಲ್ಲಿ ಭೂ ಸಂಬಂಧಿತ ವಿವಾದಗಳನ್ನು ಬಗೆಹರಿಸಲು ಹೊಸ ನಿಯಮಗಳ ಪರಿಚಯ ಇರಬೇಕೆನಿಸುತ್ತದೆ.

**೩.೪.೧.೧.೫. ಊಳಿಗಮಾನ್ಯ ವ್ಯವಸ್ಥೆ**

ಈ ವ್ಯವಸ್ಥೆಯ ಬಗೆಗೆ ಚರಿತ್ರೆಕಾರರಲ್ಲಿ ಭಿನ್ನಭಿಪ್ರಾಯಗಳಿವೆ. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆ ಅಸ್ತಿತ್ವದಲ್ಲಿತ್ತೇ ಅಥವಾ ಇರಲಿಲ್ಲವೋ ಎಂಬುದು ಕೂಡಾ ಅಷ್ಟೇ ಕುತೂಹಲಕಾರಿ ಸಂಗತಿ ಎನ್ನಬಹುದು. ಈ ವಾದವನ್ನು ಕುರಿತು ಚರಿತ್ರೆಕಾರರಾದ ಡಿ.ಡಿ.ಕೊಸಾಂಬಿ, ಆರ್.ಎಸ್.ಶರ್ಮ ಮುಂತಾದವರು ಹಾಗೂ ಕರ್ನಾಟಕದ ಮಟ್ಟಿಗೆ ಅಶೋಕ ಶೆಟ್ಟರ್, ರಾಜಾರಾಮಹೆಗಡೆ ಮುಂತಾದವರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ.

ಊಳಿಗಮಾನ್ಯವಾದದ ಕುರಿತು ಮೊದಲ ಬಾರಿಗೆ ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಿ, ಮಾರ್ಕ್ಸ್‌ವಾದಕ್ಕೆ ರೂಪುರೇಷೆಯನ್ನು ನೀಡಿ ಗಮನ ಸೆಳೆದವರು ಡಿ.ಡಿ.ಕೊಸಾಂಬಿ ಅವರು. ಅವರು "ಭಾರತೀಯ ಚರಿತ್ರೆಯಲ್ಲಿ 'ಗುಲಾಮಿ' ಪದ್ಧತಿಯ ಉತ್ಪಾದನಾ ಘಟ್ಟ ಇರಲಿಲ್ಲ. ಆದರೆ ಫ್ಯೂಡಲ್ ಉತ್ಪಾದನಾ ಘಟ್ಟ ಇತ್ತು. ಆದರೆ ಆ ಐರೋಪ್ಯ ಫ್ಯೂಡಲ್ ವ್ಯವಸ್ಥೆಗೂ ಭಾರತೀಯ ಫ್ಯೂಡಲ್ ವ್ಯವಸ್ಥೆಗೂ ವ್ಯತ್ಯಾಸಗಳಿವೆ ಎನ್ನುತ್ತಾರೆ"(ಕೊಸಾಂಬಿ ೨೦೦೩: ೧೯೧). ಆರ್.ಎಸ್.ಶರ್ಮ ಅವರು "ದಾನವಾಗಿ ನೀಡಲ್ಪಟ್ಟ ಗ್ರಾಮಗಳಲ್ಲಿ ಬೇಸಾಯಗಾರರ ಮತ್ತು ಬ್ರಾಹ್ಮಣ ಅಧಿಪತಿಗಳ ಸಂಬಂಧಗಳನ್ನು ಇಂಗ್ಲೆಂಡಿನ ಜಹಗೀರು ಗ್ರಾಮಗಳಲ್ಲಿನ ಬೇಸಾಯಗಾರರ ಮತ್ತು ಅಧಿಪತಿಗಳ ಸಂಬಂಧಗಳೊಂದಿಗೆ ಹೋಲಿಸಲು ನಮ್ಮಲ್ಲಿ ಆಧಾರಗಳಿಲ್ಲ. ದಾನವಾಗಿ ನೀಡಲ್ಪಟ್ಟ ಗ್ರಾಮಗಳಲ್ಲಿನ ಬೇಸಾಯಗಾರರು ದತ್ತಿಯನ್ನು ಪಡೆದವರ ಸಂಪೂರ್ಣ ಅಧೀನದಲ್ಲಿದ್ದರು. ದತ್ತಿಯನ್ನು ಪಡೆದವರು ತಮ್ಮ ಭೂಮಿಯನ್ನು ಇತರರಿಗೆ ಬೇಸಾಯ ಮಾಡಲು ಕೊಡುವ ಹಕ್ಕನ್ನು ಪಡೆದಿದ್ದುದರಿಂದ ಅವರು ಹಳೆಯ ಬೇಸಾಯಗಾರರನ್ನು ಹೊರ ದೂಡಿ ಹೊಸ ಬೇಸಾಯಗಾರರಿಗೆ ತಮ್ಮ ಭೂಮಿಯನ್ನು ಕೊಡಬಹುದಿತ್ತು. ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಿದ ಅತಿಯಾದ ಭೂದಾನ ಪದ್ಧತಿ ಊಳಿಗಮಾನ್ಯ ವ್ಯವಸ್ಥೆಗೆ ಕಾರಣವಾಯಿತು" ಎನ್ನುತ್ತಾರೆ(ಶರ್ಮ ೨೦೦೭:೩೭). ಅಶೋಕ ಶೆಟ್ಟರ್ ಅವರು "ಊಳಿಗಮಾನ್ಯ

ಪದ್ಧತಿ ಅಸ್ತಿತ್ವದಲ್ಲಿತ್ತು. ಆದರೆ ಅದು ಸಮಗ್ರವಾಗಿ ವ್ಯಾಪಿಸಿಕೊಂಡಿರಲಿಲ್ಲ. ಅದು ರಾಜಕೀಯ ಪ್ರಕ್ರಿಯೆಗಳಿಗೆ ಸಮಾನಾಂತರವಾಗಿ ನಡೆಯುತ್ತಿದ್ದ ಸಾಮಾಜಿಕ, ಆರ್ಥಿಕ ಪ್ರಕ್ರಿಯೆಗಳ ಒಟ್ಟು ಸಂಕೀರ್ಣ ಗ್ರಹಿಕೆ ಭಾರತೀಯ ಊಳಿಗಮಾನ್ಯವಾದ ಪ್ರಮೇಯದಲ್ಲಿ ಕಾಣದು. ಊಳಿಗಮಾನ್ಯ ವ್ಯವಸ್ಥೆ ಇತ್ತು ಎನ್ನುವುದಕ್ಕೆ ಸ್ಪಷ್ಟವಾದ ಉಲ್ಲೇಖಗಳಿಲ್ಲ. ಇದನ್ನು ಅರ್ಥೈಸಿಕೊಳ್ಳಬೇಕಾದರೆ ಗ್ರಾಮೀಣ ಸಾಮಾಜಿಕ, ಆರ್ಥಿಕ ರಚನೆಯ ಕುರಿತು ಅಧ್ಯಯನಗಳ ಅಗತ್ಯವಿದೆ"ಎನ್ನುತ್ತಾರೆ(ತಂಬಂಡ ೧೦೨೦: ೪೯-೧೦). ಅಲ್ಲದೆ ಊಳಿಗಮಾನ್ಯ ವ್ಯವಸ್ಥೆಯನ್ನು ಕುರಿತು ಎರಡು ಬಲವಾದ ಪ್ರಶ್ನೆಗಳನ್ನು ಅಶೋಕ ಶೆಟ್ಟರ್ ಅವರು ಎತ್ತಿದ್ದಾರೆ. ಅವೆಂದರೆ, ೧. ನಾವು ಪರಿಗಣಿಸಬೇಕಾದುದು ಬ್ರಾಹ್ಮಣರಿಗಾಗಲಿ, ದೇವಾಲಯಗಳಿಗಾಗಲಿ ಕೊಡುಗೆಯಾಗಿ ಕೊಡಲ್ಪಟ್ಟ ಭೂಮಿಯು ಬೇಸಾಯಕ್ಕೊಳಪಟ್ಟ ಭೂಮಿಯಾಗಿತ್ತೋ, ಬೇಸಾಯಕ್ಕೊಳಪಡದ ಭೂಮಿಯಾಗಿತ್ತೋ. ಎರಡನೆಯದ್ದು, ಹೀಗೆ ಕೊಡಲ್ಪಟ್ಟ ದಾನಗಳ ಫಲಾನುಭವಿಗಳು ಅಥವಾ ಇತರ ಭೂಮಾಲಿಕರು ತಮ್ಮ ಮಣ್ಣಿನ ವಾಸ್ತವ ಉಳುಮೆ ಗಾರರಾಗಿದ್ದರೋ ಅಥವಾ ತಮ್ಮ ಜಮೀನುಗಳನ್ನು ರೈತಾಪಿಗಳಿಂದ ಉಳುಮೆ ಮಾಡಿಸಿಕೊಳ್ಳುತ್ತಿದ್ದರೋ ಎಂಬುದು. ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆ ಇರುವ\ಇಲ್ಲದಿರುವ ಬಗ್ಗೆ ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

ಅಶೋಕ ಶೆಟ್ಟರ್ ಅವರು ಈ ವಿಚಾರವಾಗಿ ಊಳಿಗಮಾನ್ಯ ವ್ಯವಸ್ಥೆಯ ಲಕ್ಷಣಗಳನ್ನು ತಿಳಿಸುತ್ತಾರೆ. ಅವು ಹೀಗಿವೆ; ಆರ್.ಎಸ್. ಶರ್ಮ ಅವರು ಗುರುತಿಸಿದಂತೆ ೧. ರಾಜಕೀಯ, ೨. ಭೂ ಮಾಲಿಕ ವರ್ಗದ ಉದಯ. ೩. ಜೀತ ಪದ್ಧತಿ. ೪. ಉತ್ಪಾದಿತ ವಸ್ತುಗಳು ಭೂಮಾಲಿಕನಿಗೆ ಸೇರಬೇಕು. ಹಾಗೆಯೇ ಭಾರತೀಯ ಊಳಿಗಮಾನ್ಯ ಪದ್ಧತಿಯ ಮೂಲ ಲಕ್ಷಣಗಳು; ೧. ಭೂಮಾಲಿಕ ಮಧ್ಯಮ ವರ್ಗದ ಉದಯ. ೨. ರೈತಾಪಿಗಳ ಚಲನ ಹಾಗೂ ಸ್ವಾತಂತ್ರ್ಯದ ಮೇಲಿನ ನಿರ್ಬಂಧಗಳು. ೩. ಬಿಟ್ಟಿ ದುಡಿಮೆ. ೪. ಜೀತ ಪದ್ಧತಿ(ತಂಬಂಡ ೨೦೧೦: ೪೦೦-೪೦೧). ಇವುಗಳನ್ನು ಗಮನಿಸಿದಾಗ ಅದಕ್ಕೆ ಕಾರಣವಾದ ಅಂಶಗಳನ್ನು ತಿಳಿದುಕೊಳ್ಳುವ ಕುತೂಹಲ ಮೂಡುತ್ತದೆ. ರಾಜ ಪ್ರಭುತ್ವ ವ್ಯವಸ್ಥೆಯಲ್ಲಿ ಭೂ ಮಾಲಿಕರಾಗಿ ಗುರುತಿಸಿಕೊಳ್ಳಲು ಅತಿಯಾದ ಭೂದಾನಗಳೇ ಕಾರಣ. ಈ ಭೂದಾನ ಪ್ರಕ್ರಿಯೆಯು ಬ್ರಾಹ್ಮಣ ಮತ್ತು ದೇವಾಲಯಗಳನ್ನು ರಾಜ ಮತ್ತು ರೈತಾಪಿವರ್ಗದ ನಡುವಿನ ಹೊಸ ಭೂಮಾಲಿಕ ವರ್ಗವನ್ನು ಸೃಷ್ಟಿಸಿದಂತಾಯಿತು. ಈ ವರ್ಗ ಭೂಮಿಯ ಮೇಲೆ ಹಿಡಿತವನ್ನು ಸಾಧಿಸಿತು. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬ್ರಾಹ್ಮಣ ಮತ್ತು ದೇವಾಲಯಗಳಿಗೆ ಅಧಿಕ ಪ್ರಮಾಣದ ಭೂದಾನ ಮಾಡಿರುವುದು ಕಂಡುಬರುತ್ತದೆ. ಇದಕ್ಕೆ ಅನೇಕ ಶಾಸನಗಳು ಸಹ ಸಹಕರಿಸುತ್ತವೆ. ಪ್ರಭುತ್ವದಿಂದ ಭೂಮಿಯನ್ನು ಪಡೆದ ಬ್ರಾಹ್ಮಣರು ಮತ್ತು ದೇವಾಲಯಗಳು ಭೂಮಾಲಿಕರಾಗಿ ಗುರುತಿಸಿಕೊಂಡಿದ್ದರೆಂದು ಹೇಳಬಹುದಾಗಿದೆ. ಭೂಮಿಯ ಮೇಲೆ ಹಿಡಿತ ಸಾಧಿಸಿದ್ದ ಇವರು ರೈತಾಪಿ ವರ್ಗದ ಮೇಲೆ ನಿರ್ಬಂಧಗಳನ್ನು ಹೇರಿದರು. ಇದಕ್ಕೆ ಆರ್.ಎಸ್.ಶರ್ಮ ಅವರು ಹೇಳುವ ಮಾತು. "ದಾನವಾಗಿ ನೀಡಲ್ಪಟ್ಟ ಗ್ರಾಮಗಳಲ್ಲಿನ ಬೇಸಾಯಗಾರರು ದತ್ತಿಯನ್ನು ಪಡೆದವರ ಸಂಪೂರ್ಣ ಅಧೀನದಲ್ಲಿದ್ದರು. ದತ್ತಿಯನ್ನು ಪಡೆದವರು ತಮ್ಮ ಭೂಮಿಯನ್ನು ಇತರರಿಗೆ ಬೇಸಾಯ ಮಾಡಲು ಕೊಡುವ ಹಕ್ಕನ್ನು ಪಡೆದಿದ್ದುದರಿಂದ ಅವರು ಹಳೆಯ ಬೇಸಾಯಗಾರರನ್ನು ಹೊರದೂಡಿ ಹೊಸ ಬೇಸಾಯಗಾರರಿಗೆ ತಮ್ಮ ಭೂಮಿಯನ್ನು ಕೊಡಬಹುದಿತ್ತು"(ಶರ್ಮ ೨೦೦೭: ೩೭) ಎಂಬುದಾಗಿ ತಿಳಿದುಬರುತ್ತದೆ. ಇದು ರೈತಾಪಿ ವರ್ಗವನ್ನು ಜೀತಕ್ಕೆ ದೂಡಿತು. ಅಲ್ಲದೆ ಬಿಟ್ಟಿ ದುಡಿಮೆಗೆ ದಾರಿ

ಮಾಡಿಕೊಟ್ಟಿತು. ಬದುಕಿನ ಬವಣೆಯನ್ನು ನೀಗಿಸುವ ಅನಿವಾರ್ಯತೆಯ ಹಿನ್ನೆಲೆಯಲ್ಲಿ ಭೂಮಾಲಿಕ ವರ್ಗದ ಹಿಡಿತದಲ್ಲಿ ಸಿಲುಕಿ ಊಳಿಗಮಾನ್ಯ ಪದ್ಧತಿಯನ್ನು ಒಪ್ಪಿಕೊಳ್ಳುವಂತಾಯಿತು. ಮುಂದುವರೆದು ಆರ್.ಎಸ್.ಶರ್ಮ ಅವರು "ಕ್ರಿ.ಶ. ೫ನೆಯ ಶತಮಾನದಿಂದ ಭೂಮಾನ್ಯ ನೀಡುವ ಪದ್ಧತಿ ಬಿರುಸಾಯಿತು. ಅದರ ಪ್ರಕಾರ ಯಾವುದೇ ಕಂದಾಯ ಹಾಗೂ ತೆರಿಗೆಗಳ ಹೊರಯಿಲ್ಲದಂತೆ ಹಳ್ಳಿಗಳನ್ನು ಬ್ರಾಹ್ಮಣರಿಗೆ ನೀಡಲಾಯಿತು. ಅಂದರೆ ಆ ಹಳ್ಳಿಯಿಂದ ರಾಜನಿಗೆ ಸಂದಾಯವಾಗಬೇಕಿದ್ದ ಕಂದಾಯಗಳೆಲ್ಲ ಆ ಬ್ರಾಹ್ಮಣರಿಗೆ ವರ್ಗಾಯಿಸಲ್ಪಟ್ಟವು. ಅದರ ಜೊತೆಗೆ ಆ ಹಳ್ಳಿಗಳ ಜನರ ಆಡಳಿತವೂ ಅವರಿಗೇ ಸೇರಿತು. ಸರ್ಕಾರದ ಅಧಿಕಾರಿಗಳು ಆ ಹಳ್ಳಿಗಳಿಗೆ ಪ್ರವೇಶಿಸುವಂತಿರಲಿಲ್ಲ"(ಶರ್ಮ ೨೦೧೦: ೨೫೮). ಈ ಭೂದಾನ ಪ್ರಕ್ರಿಯೆಯು ದುಡಿಯುವ ವರ್ಗವನ್ನು ಭೂಮಾಲಿಕರ ಯಜಮಾನಿಕೆಯಲ್ಲಿ ಕಾಲ ನೂಕುವಂತೆ ಮಾಡಿತು ಎನ್ನಬಹುದು. ಭೂದಾನ ಪ್ರಕ್ರಿಯೆಯನ್ನು ಸೂಚಿಸುವ ಅನೇಕ ದಾನ ಶಾಸನಗಳು ರಾಯಚೂರು ದೋ-ಅಬ್ ಪ್ರದೇಶಲ್ಲಿರುವುದನ್ನು ಗಮನಿಸಬಹುದಾಗಿದೆ.

ಅಶೋಕ ಶೆಟ್ಟರ್ ಅವರು ಊಳಿಗಮಾನ್ಯ ವ್ಯವಸ್ಥೆ ಇತ್ತು. ಆದರೆ ಅದು ಸಮಗ್ರವಾಗಿ ವ್ಯಾಪಿಸಿಕೊಂಡಿಲ್ಲ. ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ ಎಂದು ತಿಳಿಸುತ್ತಾರೆ. ಹಾಗೆಯೇ ಶೆಟ್ಟರ್ ಅವರು ಎತ್ತಿರುವ ಎರಡು ಪ್ರಶ್ನೆಗಳನ್ನು ಕುರಿತು ಅಭ್ಯಸಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಮೊದಲನೆಯ ಪ್ರಶ್ನೆಗೆ ಪೂರಕವಾಗಿ ಅವಲೋಕಿಸಿದಾಗ ಬ್ರಾಹ್ಮಣರಿಗೆ ದೇವಾಲಯಗಳಿಗೆ ಕೊಡುಗೆಯಾಗಿ ಕೊಟ್ಟ ಭೂಮಿ ಬೇಸಾಯಕ್ಕೊಳಪಟ್ಟ ಭೂಮಿಯಾಗಿತ್ತೆಂದು ಗುರುತಿಸಬಹುದಾಗಿದೆ. ಕೃಷಿಯೋಗ್ಯ ಭೂಮಿಯನ್ನೇ ನೀಡಲಾಗಿತ್ತು. ಇದಕ್ಕೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಹಲವು ಶಾಸನಗಳು ಕಂಡುಬರುತ್ತವೆ. ಆ ಶಾಸನಗಳಲ್ಲಿ ದಾನ ಪಡೆದ ಭೂಮಿಯಿಂದ ಬರುವ ಆದಾಯದಲ್ಲಿ ದೇವ ರಂಗಭೋಗ, ರಂಗಭೋಗ, ಖಂಡಸ್ಫುಟಿತ, ಜೀರ್ಣೋದ್ಧಾರ, ವಿದ್ಯಾರ್ಥಿಗಳಿಗೆ, ಚೈತ್ರ ಪವಿತ್ರ, ಪಾತ್ರ ಪಾವುಳ, ಧೂಪದೀಪಕ್ಕೆ, ನಂದಾದೀಪಕ್ಕೆ, ನೈವೇದ್ಯ, ಪೂಜಾರಿಗಳ ಆಹಾರ, ಪೂಜೆ ಪುನಸ್ಕಾರ ಮುಂತಾದ ಕಾರ್ಯಗಳಿಗೆ ಹಣ ಬಳಸಿಕೊಳ್ಳಲೆಂದು ಭೂದಾನ ಮಾಡಲಾಗಿದೆ. ನೀಡಿದ ಭೂಮಿಯನ್ನು ಗಾಣ, ತೋಟ, ಗದ್ದೆ, ಹೊಲ, ಕರಿನೆಲ, ಕಪ್ಪುಭೂಮಿ, ಖರೀದಿಸಿದ ಹೊಲ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಅಂದರೆ ಇಲ್ಲಿ ಉಲ್ಲೇಖಗೊಂಡಿರುವ ಹೊಲಗಳಿರುವ ಹೆಸರುಗಳು ಬೇಸಾಯಕ್ಕೊಳಪಟ್ಟ ಭೂಮಿ ಎಂದು ಸೂಚಿಸುತ್ತವೆ. ಈ ಸಂಗತಿಗಳನ್ನು ಅಳವಡಿಸಿಕೊಂಡು ಚರಿತ್ರೆಯಲ್ಲಿ ಪ್ರಮುಖ ಆಕರಗಳಾಗಿ ಕಂಡುಬರುವ ಈ ಶಾಸನಗಳು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅಲ್ಲಲ್ಲಿ ವ್ಯಾಪಿಸಿಕೊಂಡಿವೆ. ಅವೆಂದರೆ, ರಾಯಚೂರು ತಾಲೂಕಿನ ಇಡಪನೂರು ಕ್ರಿ.ಶ. ೧೧೨೨ರ ಶಾಸನ, ದೇವಸೂಗೂರು(೫೮) ಕ್ರಿ.ಶ. ೧೦೨೨ರ ಶಾಸನ, ದೇವದುರ್ಗ ತಾಲೂಕಿನ ಗಬ್ಬೂರು(೬) ಕ್ರಿ.ಶ. ೧೧೪೯, ಗಬ್ಬೂರು(೨೬) ಕ್ರಿ.ಶ. ೧೦೮೪, ಹಿರೇರಾಯಕುಂಪಿ(೨೭) ಕ್ರಿ.ಶ. ೧೧೩೦, ನಿಲವಂಜಿ(೨೯) ಕ್ರಿ.ಶ. ೧೧೭೭, ವೀರಗೋಟ(೩೧) ಕ್ರಿ.ಶ. ೧೨೨೩ (ಈ ಶಾಸನದಲ್ಲಿ ಸಂಕದೇವರಿಗೆ ಒಂದು ಗ್ರಾಮವನ್ನು ದಾನ ನೀಡಲಾಗಿದೆ). ಮಾನ್ವಿ ತಾಲೂಕಿನ ಕಪಗಲ್(೫೫), ಕ್ರಿ.ಶ. ೧೦೯೯, ಹರವಿ(೬೦) ಕ್ರಿ.ಶ. ೧೦೭೬, ಕಲ್ಲೂರು(೬೬) ಕ್ರಿ.ಶ. ೧೧೯೬, ಬಲ್ಲಟಗಿ(೯೧) ಕ್ರಿ.ಶ. ೧೦೩೧, ಮಲ್ಲಟ(೧೦೨) ಕ್ರಿ.ಶ. ೧೧೯೬, ಕವಿತಾಳ(೧೧೬) ಕ್ರಿ.ಶ. ೧೨೧೭, ಮಸ್ಕಿ(೩೩) ಕ್ರಿ.ಶ. ೧೦೩೨, ಮಸ್ಕಿ(೪೫) ಕ್ರಿ.ಶ. ೧೦೨೭ರ ಶಾಸನ ಮುಂತಾದ ಶಾಸನಗಳ ಆಧಾರದ ಮೇಲೆ ರಾಯಚೂರು

ದೋ-ಅಬ್ ಪ್ರದೇಶದಲ್ಲಿನ ಬ್ರಾಹ್ಮಣ ಮತ್ತು ದೇವಾಲಯಗಳಿಗೆ ದಾನ ನೀಡಿದ ಭೂಮಿ ಬೇಸಾಯ ಕ್ಕೊಳಪಟ್ಟ ಭೂಮಿಯಾಗಿತ್ತೆಂದು ಗುರುತಿಸಬಹುದಾಗಿದೆ.

ಎರಡನೆಯ ಪ್ರಶ್ನೆ ದಾನ ಪಡೆದ ಭೂಮಿಯಲ್ಲಿ ಭೂಮಾಲಿಕರು ಸ್ವತಃ ಬೇಸಾಯ ಮಾಡುತ್ತಿದ್ದರೋ ಅಥವಾ ಇತರ ರೈತಾಪಿ ಜನರಿಂದ ಉಳುಮೆ ಮಾಡಿಸುತ್ತಿದ್ದರೋ ಎಂಬುದಾಗಿದೆ. ಇದನ್ನು ಗ್ರಹಿಸಿದಾಗ ಭೂಮಾಲಿಕರ ಭೂಮಿಯನ್ನು ಬಹುತೇಕವಾಗಿ ಇತರ ರೈತಾಪಿ ಜನರಿಂದಲೇ ಉಳುಮೆ ಮಾಡಿಸಿರುವುದೇ ಹೆಚ್ಚು. ಹಾಗೆಂದು ಭೂಮಾಲಿಕರು ಬೇಸಾಯ ಮಾಡುತ್ತಿರಲಿಲ್ಲವೆಂದಲ್ಲ. ಆದರೆ ಇಲ್ಲಿನ ಭೂಮಾಲಿಕರು ಮರಿಪಾಳೆಗಾರರಂತೆ ವರ್ತಿಸುತ್ತಿದ್ದರು. ಹಾಗಾಗಿ ಈ ಭೂಮಾಲಿಕರ ಭೂಮಿಯಲ್ಲಿ ಇತರ ರೈತಾಪಿ ಜನರೇ ಉಳುಮೆ ಮಾಡುತ್ತಿದ್ದರೆಂಬುದಕ್ಕೆ ರಾಯಚೂರು ದೋ-ಅಬ್ ಪ್ರದೇಶದಲ್ಲಿನ ಶಾಸನಗಳು ಸಾಕ್ಷಿಯಾಗಿವೆ. ಅವೆಂದರೆ, ದೇವದುರ್ಗ ತಾಲೂಕಿನ ಗಬ್ಬೂರು(೨) ಕ್ರಿ.ಶ.೧೧೧೦೩ರ ಶಾಸನದಲ್ಲಿ ಗಬ್ಬೂರು ಸೇರಿದಂತೆ ಇದಕ್ಕೆ ಸಂಬಂಧಿಸಿದ ಹಳ್ಳಿಗಳ ಜನರು ನೊಗಕಟ್ಟಿ, ಉತ್ತು-ಬಿತ್ತಿ, ಬೆಳೆದ ಬೆಳೆಯಲ್ಲಿ ಸೂಡು ಜೋಳವನ್ನು ಹಾಗೂ ವರ್ಷ ಪ್ರತಿ ಬಳಸುವ ಒಂದೊಂದು ಕುಂಟೆಗೆ ಒಂದು ಹಣದ ಲೆಕ್ಕದಲ್ಲಿ ನೀಡಲಾಗುತ್ತಿತ್ತು (ದೇವರಕೊಂಡಾರೆಡ್ಡಿ ೨೦೦೩: ೪೬-೪೯). ಲಿಂಗಸೂಗೂರು ತಾಲೂಕಿನ ಬನ್ನಿಗೋಳ(೧೧೮) ಕ್ರಿ.ಶ. ೧೦೨೫ರ ಶಾಸನದಲ್ಲಿ ಬನ್ನಿಗೋಳದ ಊರಿನ ಒಡೆಯನು ರೈತಾಪಿ ಜನರಿಗೆ ಭೂಮಿಯ ರೀತಿಗೆ ತಕ್ಕಂತೆ ಮತ್ತರಿಗೆ ಇಷ್ಟು ನೀಡಬೇಕೆಂದು ನಿರ್ದೇಶಿಸಲಾಗಿದೆ. ಇದು ಭೂಮಿಯು ಕಪ್ಪು, ಕೆಂಪು, ಮಸಬು, ಸೌಳು ಭೂಮಿ ಇದ್ದಿರಬೇಕು. ಹಾಗಾಗಿ ರೈತರಿಗೆ ಭೂಮಿಯನ್ನು ಉಳುಮೆ ಮಾಡಲು ವಾರ್ಷಿಕ ರಕಮು ನೀಡುವ ಪದ್ಧತಿ ಇದ್ದಿತೆಂದು ತಿಳಿಯುತ್ತದೆ. ಮಾನ್ವಿ ತಾಲೂಕಿನ ಕಲ್ಲೂರು(೬೩) ಕ್ರಿ.ಶ. ೧೬೫೨ರ ಶಾಸನವು ಮಾನ್ಯದ ಹೊಲ ನೀಡಿ, ಅದರ ಉತ್ಪತ್ತಿಯಲ್ಲಿ ಕೆಲವು ಪಾಲನ್ನು ನೀಡಲಾಗುತ್ತಿತ್ತೆಂದು ತಿಳಿಯುತ್ತದೆ. ಹೊಲವನ್ನು ಪಾಲಿಗೆ ನೀಡುವ ಪದ್ಧತಿಯನ್ನು ಅನುಸರಿಸಲಾಗಿದೆ. ಇಲ್ಲಿ ಭೂಮಿಯನ್ನು ಇತರ ರೈತಾಪಿ ಜನರು ಉಳುಮೆ ಮಾಡುವ ಬಗ್ಗೆ ತಿಳಿದುಬರುತ್ತದೆ. ಹಾಗೆಯೇ ಗೋರ್ಕಲ್ಲು(೩೪) ಕ್ರಿ.ಶ. ೧೬೧೬ರ ಶಾಸನ ಬೀಳು ಬಿದ್ದಿರುವ ಹೊಲಗಳನ್ನು ವರ್ಷಕ್ಕೆ ಇಂತಿಷ್ಟು ಧಾನ್ಯ ನೀಡುವ ಪದ್ಧತಿಗನುಗುಣವಾಗಿ ಉಳುಮೆ ಮಾಡಲು ರೈತರಿಗೆ ನೀಡಲಾಗುತ್ತಿತ್ತು. ಈ ಶಾಸನದಲ್ಲಿ ಕಟ್ಟಳೆಯನ್ನು ವಿಧಿಸಲಾಗಿದೆ. ಇದು ಅಧಿಕಾರದ, ಭೂಮಾಲಿಕತ್ವದ ಪ್ರಭಾವವನ್ನು ಸೂಚಿಸುತ್ತದೆ. ಅಲ್ಲದೆ ಅತ್ತನೂರು(೭೧) ಕ್ರಿ.ಶ. ೧೭ನೆಯ ಶತಮಾನದ ಶಾಸನವು ಗುತ್ತಿಗೆ ಒಪ್ಪಂದ ಮೂಲಕ ಭೂಮಿಯನ್ನು ರೈತರಿಗೆ ನೀಡಲಾಗುತ್ತಿತ್ತು. ಸಿಂಧನೂರು ತಾಲೂಕಿನ ಮುಕ್ಕುಂದಿ(೧೯) ಕ್ರಿ.ಶ. ೧೬೪೬ರ ಶಾಸನವು ವಿಶೇಷವಾಗಿದೆ ಎನ್ನಬಹುದು. ಕೃಷಿಭೂಮಿಗೆ ನೀರಾವರಿ ಸೌಲಭ್ಯವನ್ನು ಕೆರೆ, ಕುಂಟೆ, ಕಾಲುವೆಗಳಿಂದ ಕಲ್ಪಿಸಿ, ಬರುವ ಆದಾಯದಲ್ಲಿ ೩ಪಾಲು ರಾಜನಗೆ ಸೇರಿದರೆ ೧ ಪಾಲು ರೈತನಗೆ ಸೇರುತ್ತಿತ್ತು. ಪಾಲು ನೀಡುವ ಪದ್ಧತಿಯು ಅಂದು ಅಧಿಕವಾಗಿತ್ತೆಂದೇ ಹೇಳಬಹುದಾಗಿದೆ. ಈ ರೀತಿಯಾಗಿ ಕಂಡುಬರುವ ಶಾಸನಗಳಲ್ಲಿ ಭೂಮಾಲಿಕರು ಭೂಮಿಯಲ್ಲಿ ಸ್ವತಃ ಉಳುಮೆ ಮಾಡದೆ ಇತರೆ ರೈತಾಪಿ ಜನರಿಗೆ ರಕಮು, ಪಾಲಿಗೆ ಧಾನ್ಯಕ್ಕೆ ವರ್ಷವಾರು ಉಳುಮೆ ಮಾಡುವಂತೆ ನೀಡಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಬಹುತೇಕವಾಗಿ ಭೂಮಾಲಿಕರು ಕೃಷಿ ಕೆಲಸ ಮಾಡದೆ ಭೂಮಾಲಿಕರಾಗಿಯೇ ಗುರುತಿಸಿಕೊಳ್ಳಲು ಹೆಚ್ಚು ಆಸಕ್ತಿ ತೋರಿಸಿರಬೇಕು. ಹಾಗಾಗಿ ರೈತಾಪಿ ಜನರು ಕೃಷಿಕರಾಗಿದ್ದರು. ಮೇಲಾಗಿ ಭೂಮಾಲಿಕರ ಭೂಮಿಯನ್ನು ಉಳುಮೆ ಮಾಡುವ ಪ್ರಮಾಣ ಅಧಿಕವಾಗಿತ್ತು.

ಅಶೋಕ ಶೆಟ್ಟರ್ ಎತ್ತಿರುವ ಪ್ರಶ್ನೆಗಳನ್ನು ಅವಲೋಕಿಸಲಾಗಿ ಬ್ರಾಹ್ಮಣರಿಗೆ, ದೇವಾಲಯಗಳಿಗೆ ದಾನವಾಗಿ ಕೊಡಲ್ಪಟ್ಟ ಭೂಮಿಯು ಬೇಸಾಯಕ್ಕೊಳಪಟ್ಟ ಭೂಮಿಯಾಗಿತ್ತು. ಹಾಗೆಯೇ ಭೂಮಾಲಿಕರ ಭೂಮಿಯಲ್ಲಿ ರೈತಾಪಿ ವರ್ಗದ ಜನರೇ ಉಳುಮೆ ಮಾಡುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಆರ್.ಎಸ್.ಶರ್ಮ ಅವರು ಕೂಡಾ "ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ಬಂಜರು ಭೂಮಿಗಳನ್ನು ನೀಡುವಹಾಗಿರಲಿಲ್ಲ. ಗ್ರಾಮದಲ್ಲಿನ ಬೇಸಾಯಕ್ಕೆ ಒಳಗಾದ ಭೂಮಿಯನ್ನು ಮಾತ್ರ ನೀಡಲಾಗುತ್ತಿತ್ತು. ಕ್ರಿ.ಶ. ೫ನೆಯ ಶತಮಾನದಿಂದ ಬೇಸಾಯಕ್ಕೊಳಗಾದ ಭೂಮಿಯನ್ನು ನೀಡಲಾಗುತ್ತಿತ್ತೆಂದು" ತಿಳಿಸುತ್ತಾರೆ(ಶರ್ಮ ೨೦೦೭:೧೮೨). ಈ ಕುರಿತು ತಿಳಿಸುವ ಅನೇಕ ಶಾಸನಗಳಲ್ಲಿ ಭೂಒಡೆಯರು ತಮ್ಮ ಭೂಮಿಯನ್ನು ಬೇಸಾಯ ಮಾಡುವ ರೈತಾಪಿ ಜನರಿಗೆ ವರ್ಷಕ್ಕೆ ಇಂತಿಷ್ಟು ರಕಮು, ಪಾಲಿಗೆ, ಗುತ್ತಿಗೆ ಮುಂತಾದ ಪದ್ಧತಿಯಂತೆ ನೀಡಲಾಗುತ್ತಿತ್ತು. ಇದು "ಊಳಿಗಮಾನ್ಯ ವ್ಯವಸ್ಥೆ"ಯನ್ನು ಪ್ರತಿಫಲಿಸುತ್ತದೆ.

ರಾಜರಾಮ ಹೆಗಡೆಯವರು ಅವರ ವಿಮರ್ಶೆಯು ಮೇಲ್ಕಂಡ ವಾದಗಳಿಗಿಂತ ಭಿನ್ನವಾಗಿ ಕಾಣುತ್ತದೆ. ರಾಜರಾಮ ಹೆಗಡೆ ಅವರ ಪ್ರಕಾರ,

> ಮೂಲತಃ ಭಾರತೀಯ ಸಮಾಜವು ಸಂಪ್ರದಾಯ ಸಮಾಜವಾಗಿದೆ. ಇದು ರಿಲಿಜಿಯಸ್ ಸಮಾಜವಾಗಿಲ್ಲ. ಪಾಶ್ಚಾತ್ಯ ಸಂಸ್ಕೃತಿ ಕ್ರಿಶ್ಚಿಯನ್ ರಿಲಿಜನ್ನಿನ ಕುರಿತ ಥಿಯಾಲಜಿಯ ಲೋಕದೃಷ್ಟಿಯಿಂದ ರೂಪುಗೊಂಡಿದೆ. ಇದರಿಂದ ರೂಪುಗೊಂಡ ಪಾಶ್ಚಾತ್ಯ ಚಿಂತನೆಗಳು ಬೆಳೆಸಿದ ಪರಿಭಾಷೆಗಳು ಹಾಗೂ ಪರಿಕಲ್ಪನೆಗಳು ಭಾರತದಲ್ಲಿ ಇರುವುದು ಸಾಧ್ಯವಿಲ್ಲ. ಅವುಗಳನ್ನು ಭಾರತದಲ್ಲಿ ಕಾಣದೇ ಹೋದುದರಿಂದಲೇ ಪಾಶ್ಚಾತ್ಯ ಚಿಂತಕರು ಭಾರತೀಯ ಸಂಸ್ಕೃತಿಯಲ್ಲಿ ಏನೋ ಐಬಿದೆ ಎಂದು ತರ್ಕಿಸುತ್ತಾರೆ. ಅಲ್ಲದೆ ಲೋಕವನ್ನು ಏಕತ್ರವಾಗಿ ವ್ಯವಸ್ಥಿತಿಗೊಳಿಸುವ ವೈಚಾರಿಕ ರಚನೆಗಳು ಭಾರತೀಯರಲ್ಲಿ ಇಲ್ಲ. ಭಾರತೀಯ ವಿಧಿ ಆಚರಣೆಗಳಿಗೆ ಅರ್ಥವಿಲ್ಲ. ಪುರಾಣ ಇತಿಹಾಸಗಳು ನಿಜವೂ ಅಲ್ಲ/ಸುಳ್ಳು ಅಲ್ಲ ಮುಂತಾದವು ಭಾರತೀಯ ಸಂಸ್ಕೃತಿಯ ವಾಸ್ತವಗಳಾದರೆ, ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳದೆ ಸ್ಟೇಟ್‌ನ ಕುರಿತು ಅಧ್ಯಯನ ಮಾಡಲು ಸಾಧ್ಯವಿಲ್ಲ. ಭಾರತೀಯರಿಗೆ ರಿಲಿಜನ್ ಹಾಗೂ ಆದರಿಂದ ಹುಟ್ಟಿಕೊಳ್ಳಬಲ್ಲ ಲೋಕದೃಷ್ಟಿಯೇ ಇಲ್ಲದಿದ್ದರೆ ಐರೋಪ್ಯರಂತೆ ಭಾವಿಸಬೇಕಾಗುತ್ತದೆ. ಹಾಗಾಗಿ ಲೋಕದೃಷ್ಟಿಯಿಂದ ಇಲ್ಲಿನ ಯಾವುದೇ ವ್ಯವಸ್ಥೆಯನ್ನು ಯತಾರ್ಥವಾಗಿ ತಿಳಿದುಕೊಳ್ಳ ಬಹುದು ಎಂದು ಉಲ್ಲೇಖಿಸುತ್ತಾರೆ(ತಂಬಂಡ ೨೦೧೦: ೪೩೬-೪೩೭).

ರಾಜಾರಾಮ ಹೆಗಡೆ ಅವರು ಯುರೋಪ್ ಕೇಂದ್ರಿತ ಜ್ಞಾನದ ಹಿನ್ನೆಲೆಯಲ್ಲಿ ಊಳಿಗಮಾನ್ಯ ವ್ಯವಸ್ಥೆ ಭಾರತದಲ್ಲಿತ್ತೆಂದು ಹೇಳುವುದು ಸಮಂಜಸವಲ್ಲವೆಂದು ಹೇಳುತ್ತಾರೆ. ಭಾರತದಲ್ಲಿ/ಕನಾಟಕದಲ್ಲಿ ಊಳಿಗಮಾನ್ಯ ವ್ಯವಸ್ಥೆ ಇತ್ತೋ ಇಲ್ಲವೋ ಎನ್ನುದಕ್ಕಿಂತ ಮುಖ್ಯವಾಗಿ ದೋ-ಅಬ್ ಪ್ರದೇಶದ ಚರಿತ್ರೆಯನ್ನು ನಿರ್ವಚಿಸುವಲ್ಲಿ ಈ ವಾದಗಳು ಸಹಕಾರಿಯಾಗುತ್ತವೆ ಎನ್ನುವುದು ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ.

ಒಟ್ಟಾರೆಯಾಗಿ ಆರ್ಥಿಕ ವ್ಯವಸ್ಥೆಯಲ್ಲಿ ರೈತರು, ಕೃಷಿಕಾರ್ಮಿಕರು ಹಾಗೂ ಜೀತದಾಳುಗಳು ಪ್ರಧಾನ ಪಾತ್ರ ವಹಿಸುವ ಮೂಲಕ ಈ ಪ್ರದೇಶವನ್ನು ಆದಾಯ ಕೇಂದ್ರವನ್ನಾಗಿ ಮಾಡಿದರು. ದುಡಿಯುವ ವರ್ಗಕ್ಕೆ ಭೂಮಿಯಿಲ್ಲದ್ದು, ಆರ್ಥಿಕ ಅಭದ್ರತೆ ಕಾಡಿತು. ವಂಶಪಾರಂಪರ್ಯವಾಗಿ ಭೂಮಿಯ ಹಿಡುವಳಿ ಮೇಲ್ವರ್ಗಕ್ಕೆ ಸೇರಿದ್ದಾಗಿತ್ತು. ಆರ್ಥಿಕತೆಯಲ್ಲಿ ಪ್ರಧಾನರಾಗಿದ್ದ ದುಡಿಯುವ ವರ್ಗ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜಕೀಯವಾಗಿ ಅಮುಖ್ಯರಾಗಿ ಕಾಣಿಸಿಕೊಂಡಿತ್ತು. ಕೇವಲ ದುಡಿಮೆಯೇ ಅವರ ಮೂಲ ಆಧಾರವಾಗಿತ್ತು.

**೩.೪.೧.೨. ಕುಶಲಕರ್ಮಿಗಳು**

ಈ ಪ್ರದೇಶದಲ್ಲಿ ಆರ್ಥಿಕವಾಗಿ ರೈತಾಪಿವರ್ಗದ ನಂತರ ಪ್ರಧಾನವಾಗಿ ಗುರುತಿಸಿಕೊಂಡಿದ್ದು ಕುಶಲಕರ್ಮಿಗಳು. ಇವರು ಈ ಪ್ರದೇಶದಲ್ಲಿ ಕ್ರಿಪೂ. ೩೦೦೦ರ ಕಾಲಘಟ್ಟದಿಂದ ನಿಜಾಮರ ಕಾಲದವರೆಗೆ ಕಂಡುಬರುತ್ತಾರೆ. ಕೃಷಿ ಉತ್ಪಾದನೆ ವ್ಯವಸ್ಥೆಯಲ್ಲಿ ಸಹಕಾರಿಗಳಾಗಿದ್ದರು. ಯಾವ ಯಾವ ವೃತ್ತಿಗಳು ಕೌಶಲ್ಯವನ್ನು ಅವಲಂಬಿಸಿರುತ್ತವೆಯೋ ಅವು ಕುಶಲವೃತ್ತಿಗಳು. ಕುಶಲಕರ್ಮ ಎಂಬ ಪದವನ್ನು ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟ ಕೆಲಸ ಅಥವಾ ವ್ಯಾಪಾರದಲ್ಲಿ ನಿಪುಣತೆಯನ್ನು ಪಡೆದಿರುವುದು ಎಂದು ತಿಳಿಯಬಹುದು. ಇಂಥಹ ಕುಶಲ ಕರ್ಮಗಳನ್ನು ಆಧರಿಸಿ ಜೀವಿಸುವ ಜನರನ್ನು ಕುಶಲಕರ್ಮಿಗಳು ಎನ್ನಬಹುದು. ಈ ಪ್ರದೇಶದಲ್ಲಿ ಲಭ್ಯವಿರುವ ಶಾಸನಗಳನ್ನು ಆಧರಿಸಿ ಕುಶಲಕರ್ಮಿಗಳನ್ನು ಕುರಿತು ಅಭ್ಯಸಿಸಲಾಗಿದೆ. ಇಲ್ಲಿನ ಶಾಸನಗಳು ತಿಳಿಸುವಂತೆ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರರು, ತೆಲ್ಲಿಗರು, ಮಾಲೆಗಾರರು, ಮೇದಾರರು ಮುಂತಾದ ವೃತ್ತಿಗಳು ಕಂಡುಬರುತ್ತವೆ.

**೩.೪.೧.೨.೧. ನೇಕಾರರು**

ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಒಂದು ಪ್ರಮುಖ ಕುಶಲಕಲೆ ನೇಕಾರಿಕೆ. ನೇಕಾರರು ಹತ್ತಿ, ರೇಷ್ಮೆ ಮತ್ತು ಉಣ್ಣೆ ಬಟ್ಟೆಗಳನ್ನು ನೇಯುತ್ತಿದ್ದರು. ಹತ್ತಿ ಬೆಳೆಗೆ ಈ ಪ್ರದೇಶ ಮೊದಲಿನಿಂದಲೂ ಹೆಸರುವಾಸಿಯಾಗಿತ್ತು. ಈ ಕಾರಣಕ್ಕಾಗಿ ವಸಾಹತುಶಾಹಿ ರಾಯಚೂರು ದೋ-ಅಬ್ ಪ್ರದೇಶವನ್ನು ೧೮೫೩ರಲ್ಲಿ ನಡೆದ ಬೀರಾರ್ ಒಪ್ಪಂದದ ಪ್ರಕಾರ ನಿಜಾಮನಿಂದ ಪಡೆದುಕೊಂಡಿತು. ಇದಕ್ಕೆ ಕಾರಣವೆಂದರೆ ಜಾಗತಿಕ ಮಾರುಕಟ್ಟೆಯಲ್ಲಿ ಈ ಪ್ರದೇಶದ ಹತ್ತಿ ಬಟ್ಟೆಗಳು ಪ್ರಸಿದ್ಧಿಯನ್ನು ಪಡೆದಿದ್ದವು. ಈ ರೀತಿಯಾಗಿ ಪ್ರಸಿದ್ಧಿಯನ್ನು ಪಡೆದ ನೇಕಾರಿಕೆ ಅಧಿಕವಾಗಿ ಇಲ್ಲಿ ನಡೆಯುತ್ತಿತ್ತು. ಇವರು ಉತ್ಪಾದನಾ ವಿನಿಮಯ ವರ್ತಕರಾಗಿ ಪ್ರಚಾರಕ್ಕೆ ಬಂದಿದ್ದರು. ಇವರು 'ಜೇಡಗೊತ್ತಳಿ'[೧೫೫] ಎಂಬ ವೃತ್ತಿ ಸಂಘವನ್ನು ಸ್ಥಾಪಿಸಿಕೊಂಡಿದ್ದರೂ ಜೇಡರ ದಾಸಿಮಯ್ಯನ ಅನುಯಾಯಿಗಳಾಗಿದ್ದರೂ ಆರ್ಥಿಕವಾಗಿ ಸ್ವಲ್ಪ ಪ್ರಮಾಣದಲ್ಲಿ ಸುಧಾರಿಸಿದಂತೆ ಕಾಣುತ್ತದೆ. ತಮ್ಮ ಕುಲದೇವರಾದ ಗೊಜ್ಜೇಶ್ವರ ದೇವರಿಗೆ ಹಣವನ್ನು ದಾನ ಮಾಡಿರುವುದು ಕಂಡುಬರುತ್ತದೆ. ಒಂದು ಬಗೆಯಲ್ಲಿ ನೇಕಾರಿಕೆ ಬಹುದೊಡ್ಡ ಉದ್ದಿಮೆಯಾಗಿದ್ದಿರಬೇಕು. ಗಬ್ಬೂರಿನಲ್ಲಿ ಬಟ್ಟೆ ನೇಯುವ ಕಾರ್ಖಾನೆಯಿರಬೇಕು. ಬಟ್ಟೆಗಳನ್ನು ತಯಾರಿಸಲು ಬೇಕಾದ ಕಚ್ಚಾವಸ್ತುಗಳನ್ನು ಉತ್ಪಾದಿಸುವ, ನೇಯುವ, ಮಾರಾಟ ಮಾಡುವ ಕೆಲಸ ಒಂದು ಬೃಹತ್ ಉದ್ದಿಮೆಯಂತೆಯೇ ಇತ್ತು. ಬಟ್ಟೆ ನೇಯುವ ಕಾರ್ಖಾನೆಗೆ

ಅರಸರ ಮತ್ತು ಅಧಿಕಾರಿ ವರ್ಗಗಳ ಪ್ರೋತ್ಸಾಹ ಇದ್ದಿರಬೇಕು. ಇವರನ್ನು ಜೇಡರೊಕ್ಕಲು,[೧೫೬] ಪಟ್ಟಸಾಲಿ.[೧೫೭] ಎಂದು ಶಾಸನಗಳಲ್ಲಿ ಕರೆಯಲಾಗಿದೆ. ಈ ಕುಲಕ್ಕೆ ಸೇರಿದವರು ದಾನ ನೀಡುವುದು ಮತ್ತು ದಾನಗಳಲ್ಲಿ ಭಾಗಿಗಳಾಗಿರುವುದು ಕಂಡುಬರುತ್ತದೆ.

### ೩.೪.೧.೨.೨. ಬಡಗಿಗಳು

ಕೃಷಿ ಪ್ರಧಾನವಾಗಿದ್ದ ಈ ಪ್ರದೇಶದಲ್ಲಿ ಬಡಗಿಗಳ ಅವಶ್ಯಕತೆ ಇತ್ತು. ಈ ಪ್ರದೇಶದ ಆರ್ಥಿಕ ಚಟುವಟಿಕೆಗಳಲ್ಲಿ ಹನ್ನೆರಡು ಜನ ಗ್ರಾಮಸೇವಕರಲ್ಲಿ ಇವರೂ ಒಬ್ಬರು. ಕೃಷಿ ಮತ್ತು ಗೃಹ ಉಪಯೋಗಿ ವಸ್ತುಗಳನ್ನು ಗಿಡ ಮರಗಳ ಕಟ್ಟಿಗೆಯಿಂದ ತಯಾರಿಸಿಕೊಡುವ ವೃತ್ತಿಯನ್ನು ಬಡಗಿಗಳು ಎನ್ನುವರು. ಇವರು ಕೃಷಿ ಉಪಕರಣಗಳಾದ ನೇಗಿಲು, ಕುಂಟೆ, ಕೂರಿಗೆ, ಕುಡುಗೋಲು, ಚಿಕ್ಕಕುಂಟೆ, ನೊಗ ಮುಂತಾದವು ಮತ್ತು ಗೃಹೋಪಯೋಗಿ ಉಪಕರಣಗಳಾದ ಒಣಕೆ, ಕುಡಗೋಲು, ಮಣೆ, ಲಟ್ಟಣಿಗೆ, ಹುಟ್ಟು, ಹೊರಸು, ತೊಟ್ಟಿಲು, ಮುದ್ದೆ ಇವಲ್ಲದೆ ಮನೆ ಕಟ್ಟಲು ಬೇಕಾಗುವ ಬಾಗಿಲು ಚೌಕಟ್ಟು, ಹೊಸ್ತಿಲು, ಕಿಟಕಿ, ಕದ, ತೊಲಿ, ಜಂತಿ, ಕಂಬ, ಮೇಜು, ಕುರ್ಚಿ ಇನ್ನೂ ಮುಂತಾದವನ್ನು ತಯಾರಿಸುವರು. ಹಾಗೆಯೇ ರಥಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿರುತ್ತಾರೆ. ಬಡಗಿತನವನ್ನು ಪಾಂಚಾಳರೇ ಹೆಚ್ಚಾಗಿ ಮಾಡುತ್ತಾರೆ. ಈ ಪ್ರದೇಶದಲ್ಲಿ ಬಡಗಿಗಳ ಕುರಿತು ಉಲ್ಲೇಖಿಸುವ ಶಾಸನಗಳು ವಿರಳ, ಹಾಗೆಂದು ಬಡಗಿತನ ಇಲ್ಲವೆಂದು ಭಾವಿಸುವಂತಿಲ್ಲ. ಕೃಷಿ ಚಟುವಟಿಕೆಗಳಿಗೆ ಆಧಾರ ಸ್ಥಂಭವಾಗಿದ್ದರು. ಆದರೂ ಗುಂಜಹಳ್ಳಿ ಶಾಸನದಲ್ಲಿ ಬಡಗೇರ ಯಲ್ಲೋಜನ ಉಲ್ಲೇಖವಿದೆ. ಗುಂಜಹಳ್ಳಿ ಗ್ರಾಮದ ಕೇಶವದೇವರ ದೇವಾಲಯವನ್ನು ಬಡಗೇರ ಯಲ್ಲೋಜ ಮತ್ತು ಕಾಸೆ ವೆಂಕಟಯ್ಯ ಎಂಬುವವರು ಕಟ್ಟಿದರು. ಈ ಗುಡಿಯನ್ನು ಗುತ್ತಿಗೆ ಹಿಡಿದಿರಬೇಕು. ಅದರಿಂದ ದುಡಿಮೆಗೆ ತಕ್ಕ ಕೂಲಿ ಸಿಗದೆ ನಷ್ಟವಾಗಿರಬೇಕು. ಆದ್ದರಿಂದ ಅಲ್ಲಿನ ಮುಖಂಡರು ಈ ಇಬ್ಬರಿಗೆ ತಲಾ ಎಂಟುಮಾನ ಬೀಜವರಿ ಭೂಮಿಯನ್ನು ನೀಡಿದ ಬಗ್ಗೆ ತಿಳಿದುಬರುತ್ತದೆ.[೧೫೮] ಇವರ ಪಾತ್ರ ಕೃಷಿಯಲ್ಲಿ ಪ್ರಮುಖವಾಗಿತ್ತು. ಇವರ ಸೇವೆಯನ್ನು ಪ್ರತಿ ಗ್ರಾಮವೂ ಪಡೆದಿದೆ ಎನ್ನಬಹುದು.

### ೩.೪.೧.೨.೩. ಕಮ್ಮಾರರು

ಕಬ್ಬಿಣ ಲೋಹದ ಕೆಲಸಗಳನ್ನು ಮಾಡುತ್ತಿದ್ದವರನ್ನು ಕಮ್ಮಾರರು ಎನ್ನುವರು. ಕಮ್ಮಾರರು ವ್ಯವಸಾಯಕ್ಕೆ, ಯುದ್ಧಕ್ಕೆ, ನಿತ್ಯ ಜೀವನಕ್ಕೆ ಅನಿವಾರ್ಯವಾದ ಕಬ್ಬಿಣದ ಉಪಕರಣಗಳನ್ನು ತಯಾರಿಸಿ ಕೊಡುವ ಕಸುಬುಗಾರರು. ಇವರು ಹಳ್ಳಿಯ ಹನ್ನೆರಡು ಆಯಗಾರರಲ್ಲಿ ಒಬ್ಬರು. ಕಮ್ಮಾರಿಕೋದ್ಯಮ ಅರಸು ಕೇಂದ್ರಿತ ರಾಜಕಾರಣದಲ್ಲಿ ರಾಜಪ್ರಭುತ್ವ ಅಧಿಪತ್ಯ ಸಾಧಿಸಲು ಅನುಸರಿಸುವ ನೀತಿಯೇ ಯುದ್ಧ ನೀತಿ. ಈ ಯುದ್ಧಕ್ಕೆ ಅಗತ್ಯವಾದ ವಿವಿಧ ಬಗೆಯ ಯುದ್ಧ ಸಾಮಾಗ್ರಿಗಳನ್ನು ಸಿದ್ಧಪಡಿಸುತ್ತಿದ್ದರು. ಅಲ್ಲದೆ ಕೃಷಿಕ ಮತ್ತು ಕಮ್ಮಾರರಿಬ್ಬರು ಪರಸ್ಪರ ಅವಲಂಬಿಗಳಾಗಿದ್ದರು. ವ್ಯವಸಾಯಕ್ಕೆ ಬೇಕಾದ ಉಪಕರಣಗಳನ್ನು ತಯಾರಿಸಿಕೊಟ್ಟು ಅದಕ್ಕೆ ಪ್ರತಿಯಾಗಿ ಬೆಳೆದ ಧಾನ್ಯದ ಒಂದು ಭಾಗವನ್ನು ಪಡೆಯುತ್ತಿದ್ದರು. ರೈತನಿಗೆ ಕಮ್ಮಾರನ ಹೊರತು ಕೃಷಿ ಮಾಡುವುದು ಅಸಾಧ್ಯವಾಗಿತ್ತು. ಈ ಕಮ್ಮಾರನನ್ನು ಕುರಿತು ಇಲ್ಲಿನ ಶಾಸನಗಳಲ್ಲಿ ಉಲ್ಲೇಖಗಳು ವಿರಳ. ಆದರೂ ಮಟಮಾರಿ ಶಾಸನದಲ್ಲಿ ಕಮ್ಮಾರ ಎಂಬ ಉಲ್ಲೇಖವಿದೆ.[೧೫೯] ಹಾಗೆಯೇ ಕ್ರಿಪೂ. ನವಶಿಲಾಯುಗದ ಕಾಲದ ಕುಲುಮೆಗಳು ಕವಿತಾಳ ಮತ್ತು ಕಲ್ಲೂರು ಮುಂತಾದ ಕಡೆಗಳಲ್ಲಿ ಕಂಡುಬರುತ್ತವೆ.[೧೬೦] ಹೀಗೆ ಪುರಾತನ ಕಾಲದಿಂದಲೂ ಕೃಷಿ ಉತ್ಪಾದನೆಯಲ್ಲಿ ಭಾಗಿಯಾಗಿ ಆರ್ಥಿಕತೆಯನ್ನು ಹೆಚ್ಚಿಸುವಲ್ಲಿ ಕಮ್ಮಾರರು ಮುಖ್ಯರಾಗಿದ್ದರು.

**೩.೪.೧.೨.೪. ಕುಂಬಾರರು**

ಈ ಪ್ರದೇಶದ ಚರಿತ್ರೆಯನ್ನು ತಿಳಿಸುವ ಅಂಶಗಳಲ್ಲಿ ಕುಂಬಾರಿಕೆ ಒಂದಾಗಿದೆ. ಇಲ್ಲಿಯವರೆಗೆ ನಡೆದ ಉತ್ಖನನಗಳಲ್ಲಿ ಮಡಕೆಯ ಪಾತ್ರವೇ ಪ್ರಧಾನವಾಗಿ ಕಂಡುಬರುತ್ತದೆ. ಇದು ಸಂಸ್ಕೃತಿಯ ಭಾಗವೂ ಆಗಿದೆ. ನವಶಿಲಾಯುಗ, ಬೃಹತ್ ಶಿಲಾಯುಗ ಮುಂತಾದ ಸಂದರ್ಭಗಳಲ್ಲಿ ಈ ಪ್ರದೇಶದಲ್ಲಿ ದೊಡ್ಡ ದೊಡ್ಡ ಮಡಕೆಗಳಲ್ಲಿಟ್ಟು ಶವ ಸಂಸ್ಕಾರವನ್ನು ಮಾಡಲಾಗುತ್ತಿತ್ತು. ಇದಕ್ಕೆ ಇತ್ತೀಚೆಗೆ ಕಂಡುಬಂದಿರುವ ಮಸ್ಕಿಯಲ್ಲಿನ ಮಾನವನ ಅಸ್ಥಿಪಂಜರ ಮತ್ತು ಅಸ್ತಿಪಂಜರವನ್ನು ಸುತ್ತುವರೆದಿರುವ ಮಡಿಕೆಗಳು ಸಾಕಷ್ಟು ಪ್ರಮಾಣದಲ್ಲಿ ಗೋಚರಿಸಿರುವುದು ಸಾಕ್ಷಿಯಾಗಿದೆ. ಮಡಕೆ ಜನಸಾಮಾನ್ಯರ ಬದುಕಿನಲ್ಲಿ ಬಹುಮುಖ್ಯ ಪಾತ್ರ ವಹಿಸಿದೆ. ಇದು ಬಹು ಪ್ರಾಚೀನದಿಂದಲೂ ಮಾನವನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಹಾಗೂ ಲೌಕಿಕ ಬದುಕಿಗೆ ನೇರವಾಗುತ್ತಾ ಬಂದಿದೆ.

ಅಲೆಮಾರಿಯಾದ ಮಾನವ ಒಂದೆಡೆ ನೆಲೆ ನಿಂತಾಗ ಸಹಾಯಕ್ಕೆ ಬಂದದ್ದು ಕುಂಬಾರನ ಗಡಿಗೆ. ದಿನನಿತ್ಯದ ಬಳಕೆಯಲ್ಲಿ ಕುಂಬಾರಿಕೆ ಪ್ರಮುಖ ಪಾತ್ರವಹಿಸಿದೆ. ಗ್ರಾಮೀಣ ಆರ್ಥಿಕತೆಯಲ್ಲಿ ಕುಂಬಾರರು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಕುಂಬಾರರು ಮಡಕೆ ತಯಾರಿಕೆಗೆ ಬಳಸುತ್ತಿದ್ದ ತಿಗರಿ ಅವರ ಜೀವನೋಪಾಯಕ್ಕೆ ಭದ್ರಬುನಾದಿಯಾಗಿತ್ತು. ಇದಲ್ಲದೆ ಕೈಯಿಂದಲೇ ಘಟ, ಹಂಚು. ಪಣತೆ, ಕುಡಿಕೆ, ಐರಾಣಿ ಮುಂತಾದವುಗಳನ್ನು ಸಿದ್ಧಪಡಿಸುತ್ತಿದ್ದರು. ಇವನ್ನು ಇನ್ನೊಬ್ಬರಿಗೆ ಮಾರುವುದರಿಂದ ಬಂದ ಹಣದಲ್ಲಿ ಜೀವನ ಸಾಗಿಸುತ್ತಿದ್ದರು. ಆದರೆ ಇವರನ್ನು ಕುರಿತು ಈ ಪ್ರದೇಶದ ಶಾಸನಗಳಲ್ಲಿ ಅಷ್ಟಾಗಿ ಉಲ್ಲೇಖಿಸದೆ ಕಡೆಗಣಿಸಲಾಗಿದೆ. ಆದರೂ ಲಿಂಗಸೂಗೂರು ತಾಲೂಕಿನ ನವಿಲೆ(ಲ) ಕ್ರಿ.ಶ. ೧೧೩೫ರ ಶಾಸನದಲ್ಲಿ ಕುಂಬಾರ ರಾಚಿಮಯ್ಯ ಎಂಬಾತನಿಗೆ ಭೂಲೋಕಮಲ್ಲನ ಕಾಲದಲ್ಲಿ ಒಂದು ಮತ್ತರು ಭೂಮಿಯನ್ನು ದಾನ ನೀಡಿದ ಉಲ್ಲೇಖವಿರುವುದು ಕಂಡುಬರುತ್ತದೆ.[೧೫೧] ಮಸ್ಕಿ, ಪಿಕ್ಲಿಹಾಳ ಮುಂತಾದ ಕಡೆ ದೊರೆತ ಮಡಕೆ ಚೂರುಗಳು ಕುಂಬಾರಿಕೆಯ ಇರುವಿಕೆಯನ್ನು ಸೂಚಿಸುತ್ತವೆ. ಆರ್ಥಿಕವಾಗಿ ಕುಂಬಾರಿಕೆ ಕುಂಬಾರರ ಜೀವನೋಪಾಯಕ್ಕೆ ಬೆನ್ನೆಲುಬಾಗಿತ್ತು. ಇವರು ಸಹ ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಧಾನ ಪಾತ್ರವಹಿಸಿದ್ದರು.[೧೫೨]

**೩.೪.೧.೨.೫. ಅಕ್ಕಸಾಲಿಗರು**

ಈ ಪ್ರದೇಶದ ಅಕ್ಕಸಾಲಿಗರ ಉಲ್ಲೇಖಗಳು ಅಲ್ಲಲ್ಲಿ ಕಂಡುಬರುತ್ತವೆ. ಇವರು ಬೆಳ್ಳಿ, ಬಂಗಾರ ಮತ್ತು ತಾಮ್ರದ ಆಭರಣ, ನಾಣ್ಯಗಳನ್ನು ಸಿದ್ಧಪಡಿಸುವಲ್ಲಿ ಸಿದ್ಧಹಸ್ತರಾಗಿದ್ದರು. ವಿವಿಧ ಬಗೆಯ ಕುಸುರಿ ಕೆಲಸಗಳನ್ನು ಮಾಡಿ ಆರ್ಥಿಕವಾಗಿ ಸಬಲತೆಯನ್ನು ಸಾಧಿಸಲು ಪ್ರಯತ್ನಿಸಿದರು. ವಿವಿಧ ಕಾಲ ಘಟ್ಟಗಳಲ್ಲಿ ಅನೇಕ ಅರಸರು ನಾಣ್ಯಗಳನ್ನು ಮುದ್ರಿಸುತ್ತಿರುವುದು ಕಂಡುಬರುತ್ತದೆ. ಆದರೆ ನಾಣ್ಯ ಮುದ್ರಣ ಟಂಕಸಾಲೆಯಲ್ಲಿ ಯಾರು ನಾಣ್ಯಗಳನ್ನು ಸಿದ್ಧ ಪಡಿಸುತ್ತಿದ್ದರೆಂಬ ಬಗ್ಗೆ ಯಾವುದೇ ಉಲ್ಲೇಖಗಳು ಲಭಿಸುವುದಿಲ್ಲ. ಆದರೆ ಬಂಗಾರದ ಆಭರಣಗಳನ್ನು ರಚಿಸುವಲ್ಲಿ ಕಾರ್ಯಶೀಲರಾಗಿದ್ದ ಅಕ್ಕಸಾಲಿಗರು ಕಮ್ಮಟಗಳಲ್ಲಿ ಸೇವೆ ಸಲ್ಲಿಸಿರಬೇಕೆಂದೆನಿಸುತ್ತದೆ. ಈ ಪ್ರದೇಶದಲ್ಲಿ ಹಟ್ಟಿಯಲ್ಲಿ ಚಿನ್ನದ ಗಣಿ ಇರುವುದರಿಂದ ಈ ಪ್ರದೇಶದಲ್ಲಿನ ಅಕ್ಕಸಾಲಿಗರು ಚಿನ್ನದ ಆಭರಣ ಮುಂತಾದವನ್ನು ತಯಾರಿಸುವಲ್ಲಿ ಪ್ರಮುಖ ಪಾತ್ರ ವಹಿಸಿರುವುದರಿಂದ ಇವರನ್ನು ಕಮ್ಮಟಗಳಲ್ಲಿ ನೇಮಿಸಿಕೊಂಡಿದ್ದರು. ಈ ಪ್ರದೇಶದಲ್ಲಿ ಗಬ್ಬೂರು,[೧೫೩] ಮುದಗಲ್,[೧೫೪] ಮುಂತಾದ ಕಡೆ ಟಂಕಸಾಲೆಗಳಿದ್ದವು. ಈ ಟಂಕಸಾಲೆಗಳಿಗೆ ಕಮ್ಮಟಕಾರ ಎಂಬ ಅಧಿಕಾರಿಗಳಿರುತ್ತಿದ್ದರು. ಇಲ್ಲಿ ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳನ್ನು

ಮುದ್ರಿಸುತ್ತಿದ್ದರು. ಗಬ್ಬೂರಿನ ಟಂಕಸಾಲೆಯಲ್ಲಿ ಬಂಗಾರ, ಬೆಳ್ಳಿಯ ನಾಣ್ಯಗಳನ್ನು ಮುದ್ರಿಸಿದರೆ, ಮುದಗಲ್‌ನಲ್ಲಿ ಬಂಗಾರ, ಬೆಳ್ಳಿ ನಾಣ್ಯಗಳು ಮುದ್ರಿಸುತ್ತಿದ್ದರು. ಕ್ರಿ.ಶ. ೧೬೮೫ರಲ್ಲಿ ರಚನೆಗೊಂಡಿದ್ದ ಮುದಗಲ್ ಟಂಕಸಾಲೆಯಲ್ಲಿ ತಾಮ್ರದ ನಾಣ್ಯಗಳನ್ನು ಮುದ್ರಿಸಲಾಗುತ್ತಿತ್ತು. ಇದರ ಸ್ಥಾಪಕರು ಯಾರು ಎಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ಔರಂಗಜೇಬನೆಂದರೆ, ಇನ್ನೂ ಕೆಲವರು ಸ್ಥಳೀಯ ವಜೀರರು ಅಥವಾ ಸರಾಫರು ಈ ನಾಣ್ಯಗಳನ್ನು ಅಚ್ಚು ಹಾಕಿಸಿರಬೇಕೆಂದು ಊಹಿಸಲಾಗಿದೆ. ಆದರೆ ಸ್ಥಾಪಕರು ಯಾರೆಂಬುದು ಸ್ಪಷ್ಟವಿಲ್ಲ.[೧೬೫] ಈ ಕಮ್ಮಟಗಳಿಂದ ಮುದ್ರಣಗೊಂಡಿದ್ದ ನಾಣ್ಯಗಳು ಹೀಗಿವೆ. ವರಹ, ಟಂಕ, ದೊಡ್ಡಹೊನ್ನ ಹಣ, ಹಾಗ, ಗದ್ಯಾಣ, ಪಣ, ವಡ್ಡ, ವೀಸಕ, ದಶಕ, ಪಂಚಕ ಇವುಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. ಹೀಗೆ ರಾಜ್ಯದ ಆರ್ಥಿಕ ಹಿನ್ನೆಲೆಯಲ್ಲಿ ತೊಡಗಿದ್ದ ಅಕ್ಕಸಾಲಿಗರ ಕಾರ್ಯ ಮತ್ತು ತಮ್ಮ ಕುಶಲತೆಯಿಂದ ಆರ್ಥಿಕ ವ್ಯವಸ್ಥೆಗೆ ಬೆನ್ನೆಲೆಬಾಗಿದ್ದರು.

### ೩.೪.೧.೨.೬. ಕಂಚುಗಾರರು

ತಾಮ್ರ, ಹಿತ್ತಾಳೆ ಮತ್ತು ಕಂಚು ಎಂಬ ಮೂರು ಲೋಹಗಳಲ್ಲಿ ಕೆಲಸ ಮಾಡುವವರನ್ನು ಕಂಚುಗಾರರು ಎಂದು ಕರೆಯುತ್ತಾರೆ. ಈ ಮೂರು ಲೋಹಗಳನ್ನು ಬಳಸಿ ಹೊಸದೊಂದು ವಸ್ತುವನ್ನು ತಯಾರಿಸುತ್ತಿದ್ದರು. ವಿಗ್ರಹಗಳನ್ನು ತಯಾರಿಸುವಲ್ಲಿ ಪರಿಣಿತರಾಗಿದ್ದರು. ಇವರ ಬಗ್ಗೆ ಈ ಪ್ರದೇಶದಲ್ಲಿ ಹೆಚ್ಚಿನ ಮಾಹಿತಿಯಿಲ್ಲ. ಆದರೆ ದೇವದುರ್ಗ ತಾಲೂಕಿನ ಗೂಗಲ್(೨೮)-೧೮೨೫ರ ಶಾಸನದಲ್ಲಿ ಕಂಚಗಾರ ಅಮ್ಮ ಎಂಬ ಉಲ್ಲೇಖವಿದೆ. ಇದರ ಆಧಾರದ ಮೇಲೆ ಕಂಚುಗಾರರು ಈ ಪ್ರದೇಶದ ಗಬ್ಬೂರಿನಲ್ಲಿದ್ದರೆಂದು ಹೇಳಬಹುದಾಗಿದೆ.[೧೬೬] ಇವರು ತಮ್ಮ ಕುಶಲತೆಯಿಂದ ಆರ್ಥಿಕ ಸಹಾಯಕಾರಾಗಿ ಕಾರ್ಯನಿರ್ವಹಿಸಿರಬೇಕು.

### ೩.೪.೧.೨.೭. ತೆಲ್ಲಿಗರು(ಗಾಣಿಗರು)

ಈ ಪ್ರದೇಶದಲ್ಲಿನ ತೆಲ್ಲಿಗರ ಬಗ್ಗೆ ಸಾಕಷ್ಟು ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಇದನ್ನು ಗಮನಿಸಿದರೆ ಎಣ್ಣೆ ತಯಾರಿಕೆಗೆ ಬೇಕಾದ ಎಣ್ಣೆ ಬೀಜಗಳನ್ನು ಇಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದದು ತಿಳಿದುಬರುತ್ತದೆ. ಎಣ್ಣೆ ಬೀಜಗಳಾದ ಔಡಲ, ಎಳ್ಳು, ಸಾಸವಿ, ತೆಂಗು, ಶೇಂಗಾ, ಕುಸುಬೆ, ಸೂರ್ಯಕಾಂತಿ, ಅಗಸೆ, ಹೊಂಗೆ ಮುಂತಾದ ಬೀಜಗಳಿಂದ ಎಣ್ಣೆಯನ್ನು ತಯಾರಿಸಲಾಗುತ್ತಿತ್ತು. ಈ ಪ್ರದೇಶದ ದಾನ ಶಾಸನಗಳಲ್ಲಿ ದೇವಾಲಯ ದಾನಗಳ ಸಂದರ್ಭದಲ್ಲಿ ನಂದಾದೀವಿಗೆಗೆ ಎಣ್ಣೆಯನ್ನು ದಾನ ಮಾಡುವ ಉಲ್ಲೇಖ ಸಾಮಾನ್ಯವಾಗಿ ಬರುತ್ತದೆ. ಇಂಥ ಎಣ್ಣೆಯನ್ನು ಸೊಂಟಿಗೆ ಲೆಕ್ಕದಲ್ಲೂ, ಗಾಣದ ಲೆಕ್ಕದಲ್ಲೂ ನಿಶ್ಚಿತಪಡಿಸಿ ದಾನ ಮಾಡುತ್ತಿದ್ದರು. ಈ ಬಗ್ಗೆ ಈ ಪ್ರದೇಶದ ದೇವಾಲಯಗಳಿಗೆ ಅವಿರತವಾಗಿ ಪೂರೈಸುತ್ತಿದ್ದ ಜನರೇ ತೆಲ್ಲಿಗರಾಗಿದ್ದರು. ಎಣ್ಣೆಯ ಉತ್ಪಾದನೆ ಅಂದಿನ ಪ್ರಮುಖ ಉದ್ದಿಮೆಯಾಗಿತ್ತು. ಎಣ್ಣೆ ಉತ್ಪಾದಿಸುವವರನ್ನು ತೆಲ್ಲಿಗರು,[೧೬೭] ಗಾಣಿಗ[೧೬೮] ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಎಣ್ಣೆಯ ಉತ್ಪಾದನೆ ಮತ್ತು ಮಾರಾಟಗಳೆರಡೂ ಒಂದೇ ಕಡೆ ನಡೆಯುತ್ತಿತ್ತು. ಎತ್ತುಗಾಣ, ಕೈಗಾಣ, ಮೆಟ್ಟುಗಾಣಗಳಲ್ಲಿ ಎಣ್ಣೆ ಬೀಜಗಳನ್ನು ಹಾಕಿ ಎಣ್ಣೆ ಉತ್ಪಾದಿಸುತ್ತಿದ್ದರು.[೧೬೯] ಗಾಣಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಗಾಣದೆರೆ, ಗಾಣಾಯ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತೆಂದು ಅನ್ವರಿ(೨೪)-೧೧೧೪ರ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೧೭೦]

ಇವರು ಆರ್ಥಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಅಲ್ಲದೆ ತೆಲ್ಲಿಗಗೊತ್ತಳಿ[೧೧] ಎಂಬ ಸಂಘವನ್ನು ಕಟ್ಟಿಕೊಂಡಿದ್ದರು. ಮತ್ತು ದೇವಾಲಯಗಳಿಗೆ ದಾನ ನೀಡುವಷ್ಟು ಆರ್ಥಿಕವಾಗಿ ಗುರುತಿಸಿಕೊಂಡಿದ್ದರು. ಇದಕ್ಕೆ ಚಂದನಕೇರಿ(೩೯) ಕ್ರಿ.ಶ. ೧೧ನೆಯ ಶತಮಾನ, ಜಲದುರ್ಗ(೧೩) ಕ್ರಿ.ಶ. ೧೦೮೯ ಹಾಗೂ ಬಳಗಾನೂರು(೪೦) ಕ್ರಿ.ಶ. ೧೧೮೨ರ ಶಾಸನಗಳು ಆಧಾರವಾಗಿವೆ.[೧೨] ಅಲ್ಲದೆ ತಮ್ಮ ಸಂಘಟನೆಯ ಮೂಲಕ ದೊಡ್ಡ ವ್ಯಾಪಾರಸ್ಥರಾಗಿಯೂ ಪ್ರಸಿದ್ಧಿಯನ್ನು ಪಡೆದಿದ್ದರು. ವೈಯಕ್ತಿಕವಾಗಿ ದಾನ ನೀಡುವ ಸಾಮರ್ಥ್ಯವನ್ನು ಹೊಂದಿದ್ದರೆಂಬುದು ತಿಳಿದುಬರುತ್ತದೆ.[೧೩] ಈ ರೀತಿಯಾಗಿ ಕೃಷಿ ಆಧಾರಿತ ಉದ್ದಿಮೆಯನ್ನು ಹೊಂದಿದ್ದ ಗಾಣಿಗರು ಬೇಗನೆ ಮೇಲ್‌ಸ್ತರದಲ್ಲಿ ಗುರುತಿಸಿಕೊಳ್ಳಲು ಪ್ರಯತ್ನಿಸಿದರೆಂದು ತಿಳಿದುಬರುತ್ತದೆ. ಇವರಲ್ಲದೆ ಮಾಲೆಗಾರರು, ಮೇದಾರರು ಮುಂತಾದವರು ಕುಶಲಕರ್ಮಿಗಳಾಗಿದ್ದರು.

ಕುಶಲಕರ್ಮಿಗಳು ಈ ಪ್ರದೇಶದಲ್ಲಿ ಕೈಗಾರಿಕೆಗೆ ಚಾಲನೆಯನ್ನು ನೀಡಿದರು. ಇವರು ಪ್ರಕೃತಿದತ್ತವಾಗಿ ಲಭ್ಯವಾಗುವ ಕಚ್ಚಾವಸ್ತುಗಳನ್ನೇ ಹೆಚ್ಚಾಗಿ ಬಳಸಿಕೊಂಡು ತಮ್ಮ ಉದ್ದಿಮೆಗಳನ್ನು ನಡೆಸುತ್ತಿದ್ದರು. ಅದೇ ರೀತಿ ತಮ್ಮ ಹಿತರಕ್ಷಣೆಗಾಗಿ ವೃತ್ತಿ ಸಂಘಗಳನ್ನು ರಚಿಸಿಕೊಂಡಿದ್ದರು. ಕುಶಲಕರ್ಮಿಗಳು ಆಯಗಾರರಾಗಿದ್ದರು. ಒಟ್ಟಿನಲ್ಲಿ ಕುಶಲಕರ್ಮಿಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಧಾರ್ಮಿಕ ವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಚಾಚಿಕೊಂಡಿದ್ದರು. ಈ ವೃತ್ತಿಗಳು ಒಂದಕ್ಕೊಂದು ಪೂರಕವಾಗಿವೆ. ರಾಜ್ಯದ ಆರ್ಥಿಕತೆಯನ್ನು ಹೆಚ್ಚಿಸುವಲ್ಲಿ ಪ್ರಧಾನ ಪಾತ್ರವನ್ನು ವಹಿಸಿದವು. ಅಲ್ಲದೆ ತಮ್ಮ ಉದ್ದಿಮೆಗಳ ಮೂಲಕ ನಗರೀಕರಣವನ್ನು ಸೃಷ್ಟಿಸಿದವು.

**೩.೪.೧.೩. ತೆರಿಗೆಗಳು**

ರಾಜ್ಯದ ಆದಾಯದ ಮೂಲಗಳಲ್ಲಿ ತೆರಿಗೆಗಳಿಗೆ ಮೊದಲಸ್ಥಾನ ನೀಡಲಾಗಿದೆ. ತೆರಿಗೆಯನ್ನು ಅನೇಕ ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಹಾಗೆಯೇ ರಾಯಚೂರು ದೋ–ಅಬ್ ಪ್ರದೇಶದಲ್ಲಿ ವಿವಿಧ ಅರಸುಮನೆತನಗಳು ತಮ್ಮ ಆಳ್ವಿಕೆಯ ಕಾಲಾವಧಿಯಲ್ಲಿ ವಿವಿಧ ಬಗೆಯ ತೆರಿಗೆಗಳನ್ನು ಅನೇಕ ಮೂಲಗಳಿಂದ ಸಂಗ್ರಹಿಸುತ್ತಿದ್ದವು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಭೂಮಿ ಪ್ರಮುಖ ಪಾತ್ರ ವಹಿಸುತ್ತಿದ್ದರಿಂದ ರಾಜ್ಯಾದಾಯದಲ್ಲಿ ಭೂಕಂದಾಯ ಮೊತ್ತ ದೊಡ್ಡದಾಗಿರುತ್ತಿತ್ತು. ಕೃಷಿ ಪ್ರಧಾನವಾದ ಈ ಪ್ರದೇಶದಲ್ಲಿ ಅಧಿಕ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದರು. ಭೂತೆರಿಗೆಯನ್ನು ಹಣ ಅಥವಾ ವಸ್ತುರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಭೂಮಿಯ ಫಲವತ್ತತೆ ಮತ್ತು ಬೆಳೆಗಳ ಆಧಾರದ ಮೇಲೆ ಭೂ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಬೀಳು ಬಿದ್ದ ಹೊಲಗಳನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಕೃಷಿಕರಿಗೆ ಕೆಲವು ವರ್ಷಗಳವರೆಗೆ ತೆರಿಗೆ ವಿನಾಯಿತಿಯೊಂದಿಗೆ ನೀಡಲಾಗುತ್ತಿತ್ತು.[೧೪] ಇದು ಮುಂದೆ ನಿಜಾಮರ ಕಾಲದಲ್ಲಿ ಬೀಳು ಬಿದ್ದ ಹೊಲಕ್ಕೆ ಮೊದಲ ವರ್ಷ ಯಾವುದೇ ತೆರಿಗೆಯನ್ನು ಕೊಡಬೇಕಾಗಿರಲಿಲ್ಲ. ಆ ನಂತರದ ವರ್ಷಗಳಲ್ಲಿ ಎಕರೆಗೆ ರೂಪಾಯಿಯ ೧/೮ ರಷ್ಟು ಮಾತ್ರ ವಿಧಿಸಲಾಗುತ್ತಿತ್ತು. ನಂತರ ಬೆಳೆಯ ಸ್ವರೂಪಕ್ಕೆ ತಕ್ಕ ಹಾಗೆ ಕಂದಾಯವನ್ನು ಮೂರು ಕಂತುಗಳಲ್ಲಿ ಸಂಗ್ರಹಿಸಲಾಗುತ್ತಿತ್ತು.[೧೫] ಈ ಪ್ರದೇಶದಲ್ಲಿ ಭೂ ತೆರಿಗೆಯನ್ನು ೧/೩, ೧/೫, ೧/೬, ೧/೮ ಮುಂತಾಗಿ ನಿಗದಿಪಡಿಸಲಾಗಿತ್ತು.[೧೬] "ಹೈದರಾಬಾದ್ ನಿಜಾಮರ ಕಾಲದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕೆಲವು ಆರ್ಥಿಕ ಸುಧಾರಣೆಗಳನ್ನು ಕೈಗೊಳ್ಳಲಾಯಿತು. ಅದು ರಾಜಾ

ತೋಡರಮಲ್ಲನ ತೆರಿಗೆ ಪದ್ಧತಿಯ ಪ್ರಕಾರವಾಗಿ ಕಂದಾಯವನ್ನು ನಗದೀಕರಿಸಲಾಯಿತು. ಇದು ರೈತವಾರಿ ಪದ್ಧತಿಯಾಗಿತ್ತು. ಜಮೀನಿನಲ್ಲಿ ಬಿತ್ತಲು ಉಪಯೋಗಿಸಿದ ಧಾನ್ಯದ ಪ್ರಮಾಣದ ಮೇಲೆ ತೆರಿಗೆ ನೀಡಬೇಕಾಯಿತು. ಈ ಲೆವಿ ಪದ್ಧತಿಯ ಪ್ರಕಾರ, ಒಣ ಬೆಳೆಗಳ ಮೇಲೆ ಸರಕಾರದ ಪಾಲು ಉತ್ಪನ್ನದ ೧/೪ ಭಾಗವಾಗಿರುತ್ತಿತ್ತು. ಗದ್ದೆ ಬೆಳೆಗಳ ಮೇಲೆ ೧/೨ರಿಂದ ೨/೫ರವರೆಗೆ ಕಂದಾಯ ವಾಗಿರುತ್ತಿತ್ತು. ಕಂದಾಯ ವಸೂಲಿಯನ್ನು ಗುತ್ತಿಗೆದಾರರ ಮೂಲಕ ಮಾಡಲಾಗುತ್ತಿತ್ತು. ಜಮೀನಿನ ತೆರಿಗೆಯನ್ನು ಈ ನೆಲದ ವರ್ಗೀಕರಣದ ಮೇಲೆ ನಿಗದಿಪಡಿಸಲಾಗಿತ್ತು. ಮುಖ್ಯವಾಗಿ ನಾಲ್ಕು ಬಗೆಯ ನೆಲವನ್ನು ಗುರುತಿಸಲಾಗಿತ್ತು. ೧. ರೆಗರ್(ಕಪ್ಪು ಹತ್ತಿಮಣ್ಣು) ೨. ಮಿಲ್ವಾ(ಕಪ್ಪು ಮತ್ತು ಕೆಂಪು ಮಣ್ಣು)೩. ಮಸಬು(ಕೆಂಪು ಮಣ್ಣು). ೪. ಶೇರೆ(ಕ್ಷಾರ ಅಥವಾ ಸೌಳುಮಣ್ಣು). ಹೀಗೆ ವಿಂಗಡಿಸಿದ ಭೂಮಿಯ ಮೇಲೆ ಕೂರಿಗೆಯ ಘಟಕದ ಆಧಾರ ಮೇಲೆ ಒಟ್ಟು ತೆರಿಗೆ ನಿಗದಿಯಾಗುತ್ತಿತ್ತು. ಮೊದಲನೆಯ ದರ್ಜೆಯ ಒಂದು ಕೂರಿಗೆ ನೆಲಕ್ಕೆ ೫ರಿಂದ ೧೦ ರೂಪಾಯಿ, ಎರಡನೆಯದ್ದು ೩ರಿಂದ ೮ ರೂಪಾಯಿ, ಮೂರನೆಯದು ೧ರಿಂದ ೫ ರೂಪಾಯಿ, ನಾಲ್ಕನೆಯದು ೮ ಆಣೆಯಿಂದ ೨ ರೂಪಾಯಿ ಎಂದು ನಿಗದಿಯಾಗುತ್ತಿತ್ತು. ಭತ್ತದ ಗದ್ದೆಗೆ ಕೂರಿಗೆಗೆ ೨೦-೧೫೦ ರೂಪಾಯಿವರೆಗೆ ಹಾಕಲಾಗುತ್ತಿತ್ತು. ನಿಜಾಮನು ನವಾಬ್ ತುರಬ್ ಆಲಿಖಾನನನ್ನು ಹೈದರಾಬಾದ್ ಸಂಸ್ಥಾನದ ನೂತನ ಪ್ರಧಾನ ಮಂತ್ರಿಯನ್ನಾಗಿ(ದಿವಾನ) ೧೮೫೩ ಮೇ ೩೧ರಂದು ನೇಮಿಸಲಾಯಿತು. ಇವನಿಗೆ ಸಾಲಾರ್‌ಜಂಗ್ ಎಂಬ ಬಿರುದನ್ನು ಕೊಡಲಾಯಿತು. ಅವನು ಕ್ರಿ.ಶ. ೧೯ನೆಯ ಶತಮಾನದ ಅತ್ಯುತ್ತಮ ಭಾರತೀಯ ಆಡಳಿತಗಾರರಲ್ಲಿ ಒಬ್ಬನು. ಹೈದರಾಬಾದನ್ನು ಮೊಗಲ್ ಫ್ಯೂಡಲ್ ಸ್ಥಿತಿಯಿಂದ, ಸುವ್ಯವಸ್ಥಿತವಾದ ಆಡಳಿತವುಳ್ಳ ಹೊಂದಾಣಿಕೆಯ ಆರ್ಥಿಕ ಭದ್ರತೆಯುಳ್ಳ ಆಧುನಿಕ ರಾಜ್ಯದ ಮಟ್ಟಕ್ಕೆ ಏರಿಸಿದನು. ಈ ಕಾಲಾವಧಿಯಲ್ಲಿ ಇಡೀ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸಾಗುವಳಿಯಾಗುವ ಇಡೀ ಜಮೀನುಗಳನ್ನು ಸ್ಥೂಲವಾಗಿ ಅಳತೆ ಮಾಡಿ ಕೂರಿಗೆ ಲೆಕ್ಕದಲ್ಲಿದ್ದ ಭೂಮಿಯನ್ನು ಎಕರೆಗಳನ್ನಾಗಿ ಪರಿವರ್ತನೆ ಮಾಡಲಾಯಿತೆಂದು ತಿಳಿದುಬರುತ್ತದೆ. ಈ ಮೂಲಕ ತೆರಿಗೆಯನ್ನು ಹಾಕುವ ಪ್ರಯತ್ನಗಳು ನಡೆದವು" ಎಂದು ಪರ್ವಿನ್‌ಸುಲ್ತಾನ್ ಅವರು ಅಭಿಪ್ರಾಯಪಟ್ಟಿದ್ದಾರೆ(ಷೇಕ್ ಅಲಿ ೧೯೯೭: ೧೭೦-೧೭೩).

ಕೃಷಿ ಭೂಮಿ ಹೆಚ್ಚು ಮಾನವ ಶ್ರಮವನ್ನು ಅವಲಂಬಿಸಿತ್ತು. ಕೃಷಿಕರಿಗೆ ಇಂಥ ಭೂಮಿಗಳಲ್ಲಿ ಲಾಭಕ್ಕಿಂತ ನಷ್ಟವೇ ಹೆಚ್ಚಿನದಾಗಿತ್ತು. ಆದರೆ ರಾಜ್ಯದ ಬೊಕ್ಕಸಕ್ಕೆ ಅದು ಲಾಭದಾಯಕವಾಗಿತ್ತು. ಕುಶಲಕರ್ಮಿಗಳ ಮೇಲಿನ ತೆರಿಗೆಯೂ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿತ್ತು. ಕುಶಲಕಾರ್ಮಿಕರ ಮೇಲೆ ವಿಧಿಸುತ್ತಿದ್ದ ವಿವಿಧ ತೆರಿಗೆಗಳ ಕುರಿತು ಅನೇಕ ಶಾಸನಗಳಲ್ಲಿ ಉಲ್ಲೇಖಗಳು ಸಿಗುತ್ತವೆ. ಕ್ರಿಪೂ. ೩೦೦೦ದಿಂದಲೂ ಈ ಪ್ರದೇಶ ಆರ್ಥಿಕ ಕೇಂದ್ರವಾಗಿತ್ತು. ಆದರೆ ವಿಧಿಸಿದ ತೆರಿಗೆಗಳ ಬಗ್ಗೆ ಉಲ್ಲೇಖಗಳು ಸಿಗುವುದಿಲ್ಲ. ತೆರಿಗೆಗಳ ಉಲ್ಲೇಖಗಳು ಕ್ರಿ.ಶ. ೧೧ನೆಯ ಶತಮಾನದಿಂದ ನಿಜಾಮರ ಕಾಲದವರೆಗೆ ವಿವಿಧ ಬಗೆಯ ತೆರಿಗೆಗಳ ಉಲ್ಲೇಖಗಳು ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಕಂಡು ಬರುತ್ತವೆ. ಈ ತೆರಿಗೆಗಳು ಸಮಾಜದ ಎಲ್ಲ ವರ್ಗಗಳ ಮೇಲೂ ಹೇರಲ್ಪಟ್ಟಿದ್ದವು. ಆದರೆ ತೆರಿಗೆಗಳ ಸ್ವರೂಪ ಮತ್ತು ಪ್ರಮಾಣದಲ್ಲಿ ವ್ಯತ್ಯಾಸಗಳಿರುತ್ತಿದ್ದವು. ಈ ಸಂದರ್ಭದಲ್ಲಿ ಕಂಡು ಬಂದ ತೆರಿಗೆಗಳು ಹೀಗಿವೆ.

೧. ಅಚ್ಚು ಪನ್ನಾಯ[೧೭] – ಟಂಕಸಾಲೆಯ ಉತ್ಪನ್ನದ ಮೇಲಿನ ಒಂದು ಕರ

೨. ಒಂದೊಕ್ಕಲು ತೆರ[೧೮] – ಒಂದು ಒಕ್ಕಲುತನ ಕುಟುಂಬದವರ ಮೇಲಿನ ಕರ

೩. ಕಾಣಿ[೧೭೯] – ಆಸ್ತಿಯ ಮೇಲಿನ ತೆರಿಗೆ

೪. ಗಾಣದೆರೆ[೧೮೦] – ಎಣ್ಣೆಯ ಗಾಣದ ಮೇಲಿನ ಕರ

೫. ದಶವಂದ[೧೮೧] – ನೂರಕ್ಕೆ ಹತ್ತರ ದರದಂತೆ ಕೊಡುವ ತೆರಿಗೆ(ಎಲೆ, ಗದ್ದೆ, ಹೊಲ)

೬. ಬಂಟರ ಹಾಗ[೧೮೨] – ಸೈನಿಕರ ಹೊಲದ ಮೇಲಿನ ಕರ

೭. ಬಿರಾಡ[೧೮೩] – ಒಕ್ಕಲುತನದ ಹುಟ್ಟುವಳಿಯ ಮೇಲಿನ ಕರ, ಬೀಜವರಿ ತೆರಿಗೆ

೮. ಬೀರವಣ[೧೮೪] – ವೀಳ್ಯೆದೆಲೆಯ ಕಟ್ಟುಗಳ ಮೇಲಿನ ತೆರಿಗೆ, ಸಾರಿಗೆ ಸುಂಕ, ಎತ್ತು, ಕೋಣ
ಕತ್ತೆಗಳ ಸಾರಿಗೆ

೯. ಬಿಲ್ಕೊಡೆ[೧೮೫] – ಪ್ರಾಣಿಗಳ ಮೇಲೆ ಸಾಮಾನು ಸಾಗಿಸುವುದರ ಮೇಲಿನ ತೆರಿಗೆ

೧೦. ಬೆಲ್ಕೊಡೆ[೧೮೬] – ಬಿಳಿಯ ಛತ್ರಿ, ಮರ್ಯಾದೆ, ಗೌರವಗಳ ಸೂಚಕ ತೆರಿಗೆ

೧೧. ಮೂರ್ತಿದೆರೆ[೧೮೭] – ಶಿಲ್ಪಿಗಳ ಮೇಲಿನ ತೆರಿಗೆ

೧೨. ಮೂಲಿಗದೆರೆ[೧೮೮] – ಸಗಟು ವ್ಯಾಪಾರಸ್ಥರ ಮೇಲಿನ ತೆರಿಗೆ

೧೩. ವಡ್ಡರಾವುಳ[೧೮೯] – ವ್ಯಾಪಾರ ಸಾಮಗ್ರಿಗಳ ಮೇಲಿನ ತೆರಿಗೆ

೧೪. ಸಿದ್ಧಾಯ[೧೯೦] – ಫಲವತ್ತಾದ ಭೂಮಿಯ ಮೇಲೆ ಹಾಕುತ್ತಿದ್ದ ತೆರಿಗೆ

೧೫. ಹನ್ನವಣ[೧೯೧] – ವೀಳ್ಯೆದೆಲೆ ಇಳಿಸುವವನಿಗೆ ನೀಡುವ ಕರ

೧೬. ಹನ್ನಸು[೧೯೨] – ಭತ್ತದ ಗದ್ದೆಯ ಭೂಮಿ ಮೇಲಿನ ತೆರಿಗೆ

೧೭. ಹಾಗ[೧೯೩] – ಭೂಮಿಯ, ಹೊಲದ ಮೇಲಿನ ತೆರಿಗೆ

೧೮. ಹೆಜ್ಜುಂಕ[೧೯೪] – ಹೆಚ್ಚು ಆದಾಯ ತರುವ ಸುಂಕ ಅಥವಾ ಒಂದು ಪ್ರದೇಶದ
ಮೇಲೆ ಹಾಕುತ್ತಿದ್ದ ಒಟ್ಟು ಸುಂಕ

೧೯. ಹೊಂಗೆ[೧೯೫] – ಈ ಎಣ್ಣೆಯನ್ನು ಉತ್ಪಾದಿಸುವುದರ ಮೇಲೆ ತೆರಿಗೆ

೨೦. ಹೊಳೆಯ ಉಪ್ಪಿನ ಸುಂಕ[೧೯೬] – ಉಪ್ಪಿನ ಮಾಳದ ಕರ

೨೧. ಒಕ್ಕಲುದೆರೆ[೧೯೭] – ಒಕ್ಕಲುತನ ಕುಟುಂಬದವರ ಮೇಲಿನ ಕರ

೨೨. ನಾವಿಂದ ಸುಂಕ[೧೯೮] – ಕ್ಷೌರಿಕರ ಮೇಲಿನ ತೆರಿಗೆ

೨೩. ಬೆಳೆದೆರೆ[೧೯೯] – ಬೆಳೆಯ ಮೇಲೆ ವಿಧಿಸಿದ ತೆರಿಗೆ

೨೪. ಅಂಗಡಿದೆರೆ[೨೦೦] – ಅಂಗಡಿಗಳ ಮೇಲಿನ ತೆರಿಗೆ

೨೫. ಲೆವಿ[೨೦೧] – ಆಹಾರ ಧಾನ್ಯಗಳನ್ನು ಕಡ್ಡಾಯವಾಗಿ ಎಲ್ಲರಲ್ಲೂ ವಸೂಲಿ ಮಾಡುತ್ತಿದ್ದರು

೨೬. ಭತ್ತಾಯ[೨೦೨] – ಭತ್ತದ ರೂಪದಲ್ಲಿ ಕೊಡುವ ತೆರಿಗೆ

೨೭. ಜಕಾತ್[೨೦೩] – ಪ್ರವೇಶ ತೆರಿಗೆ

ಈ ರೀತಿಯಾಗಿ ಅತಿಯಾದ ತೆರಿಗೆಯನ್ನು ಹೇರುವುದರ ಮೂಲಕ ರಾಯಚೂರು ದೋ–ಅಬ್ ಪ್ರದೇಶದ ಮೇಲೆ ಹತೋಟಿಯನ್ನು ಸಾಧಿಸಿದ್ದರು. ತೆರಿಗೆಗಳನ್ನು ವಿರೋಧಿಸಿ ಇಲ್ಲವೆ ನಿರಾಕರಿಸಿ ನಿಲ್ಲುವಷ್ಟು ಸಾಮರ್ಥ್ಯ ಈ ಪ್ರದೇಶದ ಜನರಿಗೆ ಇರಲಿಲ್ಲ. ಈ ಬಗ್ಗೆ ಮಾಹಿತಿಗಳೂ ಸಿಗುವುದಿಲ್ಲ.

ಆದರೂ ರಾಯಚೂರು ಜಿಲ್ಲಾ ಸರ್ಕಾರಿ ಆಸ್ಪತ್ರೆ ಆವರಣದಲ್ಲಿರುವ ಅಪರೂಪದ ಕೃಷಿಕನ ವೀರಗಲ್ಲಿದೆ. ಅದರಲ್ಲಿ ಕೃಷಿಕ ಬಲಗೈಯಲ್ಲಿ ಬಾರಕೋಲು ಮತ್ತು ಎಡಗೈಯಲ್ಲಿ ಕುಡುಗೋಲು ಹಿಡಿದು ನಿಂತಿರುವ ಚಿತ್ರವಿದೆ. ಇದು ರೈತನು ತೆರಿಗೆ ಅಥವಾ ಇನ್ನಿತರ ಯಾವುದೋ ಉದ್ದೇಶದಿಂದ ಪ್ರತಿಭಟನೆ ಮಾಡುವ ಪ್ರಯತ್ನ ಮಾಡಿರಬಹುದೆಂದು ಊಹಿಸುವ ಸಾಧ್ಯತೆಯಿದೆ. ಅಧಿಕಾರಿಗಳು ರೈತರನ್ನು ಹಿಂಸಿಸುತ್ತಿದ್ದರೆಂದು ಎನಿಸುತ್ತದೆ. ಇದಕ್ಕೆ ದೇವದುರ್ಗ ತಾಲೂಕಿನ ಗಲಗಿನ(೩೫)–ಕ್ರಿ.ಶ.೧೭೬೮ರ ಶಾಸನದಲ್ಲಿ ಗಲಗು ಮತ್ತು ರಾಯದುರ್ಗ ಸೀಮೆಯಲ್ಲಿ. ಯಾರೂ ದಂಡವನ್ನು ತೆರೆದುಕೊಳ್ಳಬಾರದೆಂದೂ ನ್ಯಾಯದಿಂದ ಕೊಡಬೇಕೆಂದು ಕಟ್ಟಳೆ ವಿಧಿಸಿರುವುದು ಕಂಡುಬರುತ್ತದೆ.[೨೦೪] ಇದು ರೈತರು ಕೃಷಿ ಉತ್ಪಾದನೆಯಲ್ಲಿ ನಷ್ಟವನ್ನು ಅನುಭವಿಸಿರಬೇಕು. ಆದ್ದರಿಂದ ತೆರಿಗೆಯನ್ನು ಕಟ್ಟಲಿಕ್ಕೆ ಆಗಿರಲಿಕ್ಕಿಲ್ಲ. ಸ್ಥಳೀಯ ಅಧಿಕಾರಿಗಳು ತೆರಿಗೆ ಜೊತೆಗೆ ದಂಡವನ್ನು ವಿಧಿಸಲು ಪ್ರಯತ್ನಿಸಿರಬೇಕು. ಈ ವಿಷಯವನ್ನು ಅರಸನಿಗೆ ತಿಳಿಸಿರಬೇಕು. ಆಗ ಆ ರಾಜನು ರೈತರನ್ನು ಮತ್ತು ಅಧಿಕಾರಿಗಳನ್ನು ಸಮತೂಕವಾಗಿ ನೋಡಬೇಕಾಗುತ್ತದೆ. ಈ ಇಬ್ಬರಿಗೂ ಸಮಜಾಯಿಸಿ ನೀಡಿ ವಿಧಿಸಿದ ತೆರಿಗೆಯನ್ನು ನ್ಯಾಯಯುತವಾಗಿ ಸಲ್ಲಿಸಬೇಕು. ಹಾಗೂ ಅಧಿಕಾರಿಗಳು ರೈತರಿಂದ ದಂಡವನ್ನು ವಸೂಲಿ ಮಾಡಬಾರದೆಂದು ಹೇಳುತ್ತಾ ಈ ಇಬ್ಬರನ್ನು ತನ್ನ ಹತೋಟಿಯಲ್ಲಿ ಇರುವಂತೆ ನೋಡಿಕೊಂಡಿರಬೇಕೆನಿಸುತ್ತದೆ.

ಗಲಗಿನ ಶಾಸನದಂತೆ ಕ್ರಿ.ಶ. ೧೫೧೩ರಲ್ಲಿ ಮಲಿಯಾಬಾದ್ (೯) ಶಾಸನದಲ್ಲಿ ಸಹ ಅರಸನು ರೈತರು ಮತ್ತು ಕುಶಲಕರ್ಮಿಗಳಿಗೆ ನಿಗದಿಪಡಿಸಿದ ತೆರಿಗೆಯನ್ನು ಮಾತ್ರ ಸಂಗ್ರಹಿಸಬೇಕು. ಅಲ್ಲದೆ ನಿಗದಿಪಡಿಸಿದ ತೆರಿಗೆಗಿಂತ ಹೆಚ್ಚು ಸಂಗ್ರಹಿಸಬಾರದೆಂದು ತಿಳಿಸಲಾಗಿದೆ[೨೦೫] ಇದು ಕೂಡ ಅಧಿಕಾರಿಗಳು ಕೊಡುತ್ತಿದ್ದ ಹಿಂಸೆಯನ್ನು ನಿಯಂತ್ರಿಸಲು ಈ ಶಾಸನ ಹೊರಡಿಸಲಾಗಿದೆ.

ಈ ಎರಡೂ ಶಾಸನಗಳಿಂದ ಭೂಮಾಲಿಕರ ವಿರುದ್ಧ ರೈತರು ಅಸಮಾಧಾನ ಹೊಂದಿದ್ದರೆನಿಸುತ್ತದೆ. ಇವು ಪ್ರತಿಭಟನೆಯನ್ನು ಸೂಚಿಸುತ್ತವಾದರೂ ಪರ್ಯಾಯ ವ್ಯವಸ್ಥೆ ಮಾಡದೆ ಯಥಾವತ್ತಾಗಿ ಮುಂದುವರೆಯುವಂತೆ ಮಾಡುತ್ತವೆ. ಆದರೆ ಅರಸ ಕೇಂದ್ರಿತ ಚರಿತ್ರೆಯಲ್ಲಿ ಇಂತಹ ಘಟನೆಗಳು ಮೌನವಹಿಸಿರುವುದು ಕಂಡುಬರುತ್ತದೆ. ಏಕೆಂದರೆ ಪ್ರಭುತ್ವದ ಪರವಾಗಿರುವ ಶಾಸನಗಳ ವೈಭವೀಕೃತ ಅಧ್ಯಯನದ ಎದುರು ಇವು ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಆದರೆ ಈ ಪ್ರದೇಶದಲ್ಲಿ ಮುಸ್ಲಿಂರ ಆಡಳಿತಾವಧಿಯಲ್ಲಿ ರೈತರಿಗೆ ಮತ್ತು ಕುಶಲಕರ್ಮಿಗಳಿಗೆ ಪ್ರೋತ್ಸಾಹವಿತ್ತೆಂಬುದು ಗಲಗ ಮತ್ತು ಮಲಿಯಾಬಾದ್ ಶಾಸನಗಳಿಂದ ತಿಳಿಯಬಹುದು. ಇದನ್ನು ಹೊರತುಪಡಿಸಿದರೆ ಉಳಿದಂತೆ ಅಧಿಕಾರಿಶಾಹಿ ವರ್ಗದ ಪ್ರಭಾವವೇ ಹೆಚ್ಚಾಗಿ ಕಂಡುಬರುತ್ತದೆ.

**೩.೪.೧.೪. ವರ್ತಕರು ಮತ್ತು ವ್ಯಾಪಾರ ಸಂಬಂಧಗಳು**

ಒಂದು ಪ್ರದೇಶದ ಚಲನಶೀಲತ್ವ ಆ ಪ್ರದೇಶದ ಆರ್ಥಿಕತೆಯನ್ನು ಅವಲಂಬಿಸಿರುತ್ತದೆ. ಹಾಗೆಯೇ ಅದು ಹೊಂದಿರುವ ಇತರ ಪ್ರದೇಶಗಳೊಂದಿಗಿನ ಸಂಬಂಧಗಳು ಕೂಡ ಅದಕ್ಕೆ ಪೂರಕವಾಗಿರುತ್ತವೆ. ಆ ಪ್ರದೇಶದ ಅಸ್ತಿತ್ವ ಎರಡು ಬಗೆಯಿಂದ ಗುರುತಿಸಿಕೊಂಡಿರುತ್ತದೆ. ಒಂದು ವಿನಿಮಯ ಕೇಂದ್ರ ಮತ್ತು ಎರಡು ಉತ್ಪಾದನಾ ವಿನಿಮಯ ಕೇಂದ್ರ. ಈ ಎರಡೂ ಅಂಶಗಳ ಹಿನ್ನೆಲೆಯಲ್ಲಿ ಸಿಂಧೂ ನಾಗರಿಕತೆಯ ಕಾಲದಿಂದ ನಿಜಾಮರ ಕಾಲದವರೆಗೆ ಆರ್ಥಿಕ ವ್ಯವಸ್ಥೆಯ ಮೂಲಕ ತನ್ನ ಅಸ್ಮಿತೆಯನ್ನು

ಪಡೆದ ಪ್ರದೇಶಗಳಲ್ಲಿ ರಾಯಚೂರು ದೋ-ಅಬ್ ಪ್ರದೇಶ ಒಂದಾಗಿದೆ. ಈ ಪ್ರದೇಶ ವ್ಯಾಪಾರ-ವಾಣಿಜ್ಯ ಸಂಬಂಧಗಳಿಂದಾಗಿ ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಪರಿಣಾಮಗಳನ್ನು ಎದುರಿಸ ಬೇಕಾಯಿತು. ಈ ಹಿನ್ನೆಲೆಯಲ್ಲಿ ವರ್ತಕ ವ್ಯಾಪಾರ ಸಂಬಂಧಗಳನ್ನು ಕುರಿತು ಸಿಂಧೂ ನಾಗರಿಕತೆಯಿಂದ ನಿಜಾಮರ ಕಾಲದವರೆಗೆ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ವ್ಯಾಪಾರಿ ಸಂಬಂಧಗಳ ಉಗಮ ಮತ್ತು ಬೆಳವಣಿಗೆ, ವರ್ತಕರ ಪ್ರಭಾವ, ವ್ಯಾಪಾರ ಕೇಂದ್ರಗಳು, ವ್ಯಾಪಾರ ವಿಸ್ತೀರ್ಣತೆ, ವ್ಯಾಪಾರ ಮಾರ್ಗಗಳು, ಮಾರಾಟ ಮಾಡುವ ವಸ್ತುಗಳು, ಮಾರುಕಟ್ಟೆ ವ್ಯವಸ್ಥೆ, ವಸ್ತುಗಳ ಸಾಗಾಟ ಹಾಗೂ ವ್ಯಾಪಾರ ತೆರಿಗೆಗಳನ್ನು ಹಾಗೂ ನಗರೀಕರಣವನ್ನು ಕುರಿತು ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

**೩.೪.೧.೪.೧. ವ್ಯಾಪಾರಿ ಸಂಬಂಧಗಳ ಉಗಮ ಮತ್ತು ಬೆಳವಣಿಗೆ**

ಈ ಪ್ರದೇಶ ಇತರ ಪ್ರದೇಶಗಳೊಂದಿಗೆ ಸಂಬಂಧ ಬೆಳೆಸಿ ವ್ಯಾಪಾರ ಕೇಂದ್ರವಾಗಿ ಮತ್ತು ಸಂಪತ್ತಿನ ಮೂಲವಾಗಿ ಗುರುತಿಸಿಕೊಂಡಿತ್ತು. ಈ ಪ್ರದೇಶದ ಚರಿತ್ರೆ ಬರವಣಿಗೆಯಲ್ಲಿ ಮುಖ್ಯವಾಗಿ ಕರ್ನಾಟಕದ ಸಂದರ್ಭದಲ್ಲಿ ನಿರಂತರ ಯುದ್ಧಕೇಂದ್ರವಾಗಿದ್ದ ಈ ಪ್ರದೇಶ ವ್ಯಾಪಾರದ ಮೂಲಕ ಪ್ರಮುಖ ಸ್ಥಾನವನ್ನು ಹೊಂದಿದೆ. ವ್ಯಾಪಾರ ವಾಣಿಜ್ಯಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಅವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಈ ಪ್ರದೇಶ ಸಿಂಧೂ ನಾಗರಿಕತೆಯ ನಗರಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಈ ಪ್ರದೇಶದಲ್ಲಿ ದೊರೆಯುತ್ತಿದ್ದ ಚಿನ್ನ, ಬೆಳ್ಳಿ, ಮೇದಶಿಲೆಯ ಮಣಿಗಳ ತಯಾರಿಕೆಗೆ ಬೇಕಾದ ಕಚ್ಚಾ ವಸ್ತುಗಳನ್ನು ಈ ಪ್ರದೇಶದ ಹಟ್ಟಿ, ಮಸ್ಕಿ ಮತ್ತು ಪಿಕ್ಲಿಹಾಳಗಳಿಂದ ಲೋಥಲ್‌ಗೆ ರಫ್ತು ಮಾಡಲಾಗುತ್ತಿತ್ತು. ಲೋಥಲ್‌ನಲ್ಲಿ ಸಿದ್ಧಪಡಿಸಿದ ಮೇದಶಿಲೆಯ ಮಣಿಗಳನ್ನು ಈ ಪ್ರದೇಶಕ್ಕೆ ಆಮದು ಮಾಡಿಕೊಳ್ಳುತ್ತಿದ್ದರು ಎಂಬುದು ತಿಳಿದುಬರುತ್ತದೆ (ಗುರುರಾಜಾಚಾರ್ ೧೯೯೪: ೧೦೦-೧೧೫). ಅಲ್ಲದೆ ಸಿದ್ಲಿಂಗಮ್ಮ ಅವರು ಈ ಮೇಲಿನ ವಿಚಾರವನ್ನು ಪುಷ್ಟೀಕರಿಸಲು ಲೋಥಲ್ ಮತ್ತು ಸಿಂಧೂ ಕಣಿವೆಯ ನಗರಗಳಿಗೆ ಕರ್ನಾಟಕದ ಹಟ್ಟಿ ಮತ್ತು ಕೋಲಾರ ಗಣಿಗಳಿಂದ ಚಿನ್ನವನ್ನು ತರಿಸಿಕೊಳ್ಳಲಾಗುತ್ತಿತ್ತು. ಬಿಳಿ ಮೇದಶಿಲೆಯ ಚಕ್ರಾಕಾರದ ಮಣಿಗಳಂಥ ಹರಪ್ಪಾದ ವಿಶಿಷ್ಟ ವಸ್ತುಗಳು ಮಸ್ಕಿ ಮತ್ತು ಪಿಕ್ಲಿಹಾಳಗಳಲ್ಲಿ ಸಿಕ್ಕಿರುವುದು ಈ ಸಂದರ್ಭದಲ್ಲಿ ಹೆಚ್ಚು ಮಹತ್ವ ಪಡೆದುಕೊಂಡಿದೆ(ತಂಬಂಡ ೨೦೧೦:೮೪). ಹಾಗೆಯೇ ಈ ಪ್ರದೇಶದಲ್ಲಿ ಹಟ್ಟಿ, ಮಸ್ಕಿ, ಹೀರಾ, ಬುದ್ದಿನ್ನಿ, ಊಟಿ, ವಂದಲಿ, ತಪ್ಪಲದೊಡ್ಡಿ, ಕೋಟೆಕಲ್, ಹೊನ್ನಕುಣಿ, ಉದ್ಬಾಳ-ಸಾನಬಾಳ, ಕಡ್ಡೋಣಿ, ಚಿಂಚರಕಿ, ರಾಮಲದಿಣ್ಣಿ, ತುಪ್ಪದೂರು ಮುಂತಾದ ಸ್ಥಳಗಳಲ್ಲಿ ಪ್ರಾಚೀನ ಕಾಲದಲ್ಲಿ ಚಿನ್ನದ ಗಣಿಗಾರಿಕೆ ನಡೆಯುತ್ತಿತ್ತು ಎಂಬುದಾಗಿ ತಿಳಿದುಬರುತ್ತದೆ (ರಾಧಾಕೃಷ್ಣ ೨೦೦೩: ೧೬೫-೧೯೯). ಇದಕ್ಕೂ ಸ್ವಲ್ಪ ಮುಂದುವರೆದು ಕ್ರಿ.ಶ. ೧೮೭೪ರಲ್ಲಿ ಭೂ ಸಮೀಕ್ಷೆ ನಡೆಸಿದ ರಾಬರ್ಟ್ ಬ್ರೂಸ್ ಪೂಟ್ ಮತ್ತು ಕ್ಯಾಪ್ಟನ್ ಲಿಯೋನಾರ್ಡ್ ಮನ್ ಅವರು ಹಟ್ಟಿ-ಮಸ್ಕಿ ಶಿಷ್ಟ ಭೂ ವಲಯದಲ್ಲಿ ಪುರಾತನ ಗಣಿಗಳಿರುವ ಬಗ್ಗೆ ತಿಳಿಸುತ್ತಾರೆ. ಕ್ರಿಪೂ. ೧೦೦೦ದಿಂದ ಕ್ರಿಪೂ. ೨೦೦ರ ಅವಧಿಯಲ್ಲಿ ರಾಯಚೂರು ದೋ-ಅಬ್ ಪ್ರದೇಶ ಚಿನ್ನ, ಬೆಳ್ಳಿ, ಸ್ಪಿಯಟೈಟ್, ಹವಳ, ತಾಮ್ರ ಮತ್ತು ಕಬ್ಬಿಣದ ಖನಿಜ ಲೋಹಗಳನ್ನು ಹೊಂದಿ ಉತ್ತರಾಪಥದ ವರ್ತಕರನ್ನು

ಆಕರ್ಷಿಸಿತು. ಅಲ್ಲದೆ ಹಟ್ಟಿ ಚಿನ್ನದ ಗಣಿಯಿಂದ ಮೌರ್ಯರ ರಾಜಧಾನಿ ಪಾಟಲಿಪುತ್ರಕ್ಕೆ ರವಾನೆಯಾಗಿದ್ದು, ಮೌರ್ಯರ ಕಾಲದಿಂದಲೂ ಸಮೃದ್ಧ ಚಿನ್ನ ದೊರೆಯುವ ಪ್ರದೇಶವಾಗಿ ಹಟ್ಟಿ ಪ್ರಸಿದ್ಧಿ ಪಡೆಯುತ್ತಾ ಬಂದುದು ವಾಸ್ತವ ಸಂಗತಿಯಾಗಿದೆ. ಹಾಗಾಗಿ ದಕ್ಷಿಣ, ಚಿನ್ನ, ಮುತ್ತು ಹಾಗೂ ರತ್ನಗಳನ್ನು ಒದಗಿಸುತ್ತಿದ್ದ ಕಾರಣದಿಂದಾಗಿ ಉತ್ತರದವರಿಗೆ ದಕ್ಷಿಣಾಪಥ ಮಹತ್ವದ್ದಾಯಿತು. ಉತ್ತರ ಮತ್ತು ದಕ್ಷಿಣಗಳನ್ನು ಬೆಸೆಯುವಲ್ಲಿ ವ್ಯಾಪಾರಸ್ಥರ ಪಾತ್ರ ಗಣನೀಯವಾದುದು. ಈ ಹಿನ್ನೆಲೆಯಲ್ಲಿ ನೋಡಿದಾಗ ಮೌರ್ಯ ಅರಸ ಅಶೋಕ ತನ್ನ ವಸಾಹತು ಧೋರಣೆಯ ಹಿನ್ನೆಲೆಯಲ್ಲಿ ಚಿನ್ನ ಸಿಗುವ ಪ್ರದೇಶವಾದ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಮಸ್ಕಿ ಎಂಬಲ್ಲಿ ಶಾಸನವನ್ನು ಹಾಕಿಸಿದನು(ತೆಲಗಾವಿ ೨೦೦೪: ೨೮-೪೫). ಇದರಂತೆ ಕರ್ನಾಟಕದಲ್ಲಿ ಕಂಡುಬರುವ ಅಶೋಕನ ಶಾಸನಗಳ ಪ್ರದೇಶಗಳು ಕೂಡಾ ಚಿನ್ನದ ನಿಕ್ಷೇಪವನ್ನು ಹೊಂದಿದವುಗಳಾಗಿವೆ. ಅಲ್ಲದೆ ಕ್ರಿಪೂ. ೫ನೆಯ ಶತಮಾನದಿಂದ ಮೌರ್ಯರ ಕಾಲಾವಧಿಯ ಸಂದರ್ಭದಲ್ಲಿ ವ್ಯಾಪಾರಿಗಳು ಚಿನ್ನ, ಬೆಳ್ಳಿ, ವಜ್ರ, ವೈಢೂರ್ಯ, ಶಂಖ, ಮುತ್ತು, ರತ್ನ ಮುಂತಾದವನ್ನು ವ್ಯಾಪಾರ ಮಾಡುತ್ತಿದ್ದರು. ಅಂದಿನ ವರ್ತಕರು ಭೂ ಮತ್ತು ಜಲಮಾರ್ಗಗಳ ಮೂಲಕ ವ್ಯಾಪಾರ-ವಹಿವಾಟು ನಡೆಸುತ್ತಿದ್ದರು. ಅದರಂತೆ ಈ ಪ್ರದೇಶದಲ್ಲಿ ಭೂ ಮತ್ತು ಜಲಮಾರ್ಗಗಳ ಮೂಲಕ ವ್ಯಾಪಾರ ನಡೆಯುತ್ತಿತ್ತು. ಹಾಗೆಯೇ ಈ ಪ್ರದೇಶಕ್ಕೆ ಬೇರೆ ಬೇರೆ ಪ್ರದೇಶಗಳಿಂದ ಭೂ ಮಾರ್ಗಗಳ ಸಂಪರ್ಕವೂ ಇತ್ತು. ಭೀಮಾ-ಕೃಷ್ಣ ನದಿ ದಂಡೆಗಳು ವ್ಯಾಪಾರದ ಮಾರ್ಗಗಳಾಗಿದ್ದವು. ಈ ಎರಡು ನದಿಗಳು ಕೂಡುವ ಸಂಗಮ ಸ್ಥಳ ಕಾಡಲೂರು ಮೂಲಕ ರಾಯಚೂರು ಪ್ರದೇಶಕ್ಕೆ ಸಂಪರ್ಕ ಹೊಂದಿದ್ದವು. ಈ ಪ್ರದೇಶದ ಮಧ್ಯಭಾಗದಲ್ಲಿ ಕಾವೇರಿ ಬಯಲು ಪ್ರದೇಶಕ್ಕೆ ಸಂಪರ್ಕಿಸುವ ಮಾರ್ಗ ಹೊಂದಿತ್ತು. ಆದ್ದರಿಂದ ಉತ್ತರಾಪಥ ಮತ್ತು ದಕ್ಷಿಣಾಪಥಗಳ ಮಧ್ಯ ಪರಸ್ಪರ ವ್ಯಾಪಾರ ಸಂಬಂಧಗಳು ಉಂಟಾದವು ಎಂಬುದಾಗಿ ತಿಳಿದುಬರುತ್ತದೆ (ಮೋತಿಚಂದ್ರ ೧೯೯೬: ೩೫-೩೬).

೧೯೩೫ರಲ್ಲಿ ರಾಯಚೂರು ರೈಲ್ವೆ ನಿಲ್ದಾಣದ ಬಳಿ ನೆಲ ಅಗೆಯುವಾಗ ಕ್ರಿಪೂ. ಮೂರನೆಯ ಶತಮಾನಕ್ಕಿಂತ ಮುಂಚಿನ ಪಂಚ್‌ಮಾರ್ಕ್ ಮಾಡಿದ ಅರವತ್ಮೂರು(೬೩) ಬೆಳ್ಳಿಯ ನಾಣ್ಯಗಳು ಸಿಕ್ಕಿವೆ. ಮಸ್ಕಿಯಲ್ಲಿ ಉತ್ಖನನದ ಸಂದರ್ಭದಲ್ಲಿ ಪಂಚ್‌ಮಾರ್ಕ್ ಮಾಡಿದ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಪತ್ತೆಯಾಗಿವೆ. ಇವು ಮೌರ್ಯರ ಪೂರ್ವದಲ್ಲಿ ವರ್ತಕರ ವ್ಯಾಪಾರ ಸಾಕಷ್ಟು ಪ್ರಮಾಣದಲ್ಲಿ ಮುಂದುವರೆದಿತ್ತು ಎಂಬುದನ್ನು ಸೂಚಿಸುತ್ತವೆ. ಅಲ್ಲದೆ ಈ ನಾಣ್ಯಗಳನ್ನು ಬೃಹತ್ ಶಿಲಾ ಸಂಸ್ಕೃತಿಯ ಜನಗಳಿಗೆ ಕೂಲಿಕೊಟ್ಟ ಹಣವಾಗಿದೆಯೆಂದು ಪಿ.ಎಲ್.ಗುಪ್ತ ಅವರು ಅಭಿಪ್ರಾಯ ಪಟ್ಟಿದ್ದಾರೆ. ವರ್ತಕರು ನಾಣ್ಯಗಳನ್ನು ಮುದ್ರಿಸುವಷ್ಟು ಸಾಮರ್ಥ್ಯ ಹೊಂದಿದ್ದರೆನಿಸುತ್ತದೆ. ಈ ಪ್ರದೇಶದಲ್ಲಿ ಸಿಕ್ಕಂತೆ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿಯೂ ಪಂಚ್‌ಮಾರ್ಕ್ ಮಾಡಿದ ನಾಣ್ಯಗಳು ದೊರೆತಿವೆ. ಉತ್ತರ ಭಾರತದಲ್ಲಿ ಚಲಾವಣೆಯಲ್ಲಿದ್ದ ಪಂಚ್‌ಮಾರ್ಕ್ ಮಾಡಿದ ನಾಣ್ಯಗಳೇ ಕರ್ನಾಟಕದಲ್ಲಿಯೂ ಬಳಕೆಯಲ್ಲಿದ್ದವು. ಮೌರ್ಯರ ಕಾಲದಲ್ಲಿಯೂ ಪಂಚ್ ಮಾರ್ಕ್ ಮಾಡಿ ನಾಣ್ಯಗಳೇ ಕರ್ನಾಟಕದಲ್ಲಿ ಚಲಾವಣೆಗೆ ಬಂದವು. ಆದರೆ ಕರ್ನಾಟಕದಲ್ಲಿ ಸ್ಥಳೀಯವಾಗಿ ನಾಣ್ಯಗಳನ್ನು ಟಂಕಿಸುತ್ತಿದ್ದರೆಂದು ಎಂ.ಎಚ್. ಕೃಷ್ಣ ಅವರು ಅಭಿಪ್ರಾಯ ಪಟ್ಟಿದ್ದಾರೆ(ನರಸಿಂಹಮೂರ್ತಿ ೨೦೦೩: ೪೧-೪೬).

ಡಿ.ಡಿ. ಕೊಸಾಂಬಿ ಅವರು "ಅಶೋಕನ ನಾಣ್ಯಗಳೊಂದಿಗೆ ತಾಳೆ ಹಾಕಿದರೆ ಇವೆಲ್ಲ ಕಾಲ್ಪನಿಕವಾದ ಪುನರ್‌ರಚನೆಯಲ್ಲವೆಂದು ತಿಳಿಯುತ್ತದೆ. ಚಂದ್ರಗುಪ್ತನ ನಂತರ ಮೌರ್ಯರ ಪಂಚ್ ಗುರುತಿನ ಕಾರ್ಷಾಪಣಗಳ ತೂಕ ಹಿಂದಿನ ನಾಣ್ಯಗಳ ತೂಕದಷ್ಟೇ ಇತ್ತು. ಆದರೆ ಅದರಲ್ಲಿ ತಾಮ್ರದ ಅಂಶ ಹೆಚ್ಚಿಗೆ ಇತ್ತು. ಅದರ ರಚನೆಯೂ ಅಷ್ಟೂ ನಾಜೂಕಾಗಿರಲಿಲ್ಲ. ತೂಕದಲ್ಲಿ ಎಷ್ಟು ವ್ಯತ್ಯಾಸವಿತ್ತೆಂದರೆ ಅವುಗಳನ್ನು ತುಂಬಾ ತರಾತುರಿಯಲ್ಲಿ ಟಂಕಿಸಿದ್ದಾರೆ ಎನ್ನುವುದು ಅರಿವಾಗುತ್ತದೆ. ನಾಣ್ಯಕ್ಕೆ ಪೂರೈಸಲಾಗದಷ್ಟು ಬೇಡಿಕೆ ಇತ್ತು. ಹಾಗಾಗಿ ನಾಣ್ಯ ವ್ಯವಸ್ಥೆಯ ಮೇಲೆ ತುಂಬಾ ಒತ್ತಡವಿತ್ತು. ಜೊತೆಗೆ ನಾಣ್ಯದ ಗುಣ ಮಟ್ಟವೂ ಕಳಪೆಯಾಗಿತ್ತು. ನಾಣ್ಯದ ಇನ್ನೊಂದು ಬದಿಯಲ್ಲಿ ಇರುತ್ತಿದ್ದ ವರ್ತಕರ ಸಂಘದ ಮುದ್ರೆ ಮರೆಯಾಗಿತ್ತು. ಹೊಸ ವರ್ತಕನನ್ನು ನಿಯಂತ್ರಿಸುವುದು ಕಷ್ಟವಾಗಿತ್ತು. ವಾಸ್ತವವಾಗಿ ದಖ್ಖನ್ನಿನಲ್ಲಿ ಕಡಿಮೆ ನಾಣ್ಯಗಳನ್ನು, ಅದೂ ತೆಳುವಾದ ಬೆಳ್ಳಿಯ ನಾಣ್ಯಗಳನ್ನು, ಕೆಲವೊಮ್ಮೆ, ಸೀಸ ಹಾಗೂ ಮಿಶ್ರಲೋಹದ ಗುರುತು ಬಿಲ್ಲೆಗಳನ್ನು ಬಳಸಿಕೊಂಡು ವ್ಯವಹಾರವನ್ನು ನಿರ್ವಹಿಸುತ್ತಿದ್ದರು. ಅಂದರೆ ಅಲ್ಲಿ ವ್ಯಾಪಾರವೂ ತುಂಬಾ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿತ್ತು. ಬುಡಕಟ್ಟಿನವರೊಂದಿಗೆ ಸಾಟಿಯ ವಿನಿಮಯ ಮಾಡುತ್ತಿದ್ದ ವರ್ತಕರಿಗೆ ತುಂಬಾ ದೊಡ್ಡ ಮೊತ್ತದ ಲಾಭ ದೊರಕುತ್ತಿತ್ತು. ನಾಣ್ಯದ ಕೀಳ್ಬೆರಕೆಯನ್ನು ಚಾಣಕ್ಯನೇ ಪ್ರಾರಂಭಿಸಿದ" ಎನ್ನುತ್ತಾರೆ(ಕೊಸಾಂಬಿ ೨೦೧೧: ೨೬೦).

"ವ್ಯಾಪಾರಿಗಳ ಬೌದ್ಧಧರ್ಮವನ್ನು ಸ್ವೀಕರಿಸುವುದರ ಜೊತೆಗೆ ರಾಜಾಶ್ರಯ ಪಡೆದು ತಮ್ಮ ವ್ಯಾಪಾರವನ್ನು ಉತ್ತರದವರು ದಕ್ಷಿಣ ಭಾರತಕ್ಕೆ ವಿಸ್ತರಿಸಿದರು. ಬೌದ್ಧ ಕೇಂದ್ರಗಳನ್ನು ವ್ಯಾಪಾರದ ಮುಖ್ಯ ಕೇಂದ್ರಗಳನ್ನಾಗಿ ವರ್ತಕರು ಮಾಡಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದ ಮಸ್ಕಿ ಒಂದು ಬೌದ್ಧ ಕೇಂದ್ರವಾಗಿತ್ತು. ಇದು ಇತರ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು"(ತಾಳ್ತಜೆ ೧೯೮೮: ೫೪-೭೦). ಕ್ರಿ.ಶ. ೧ನೆಯ ಶತಮಾನದಿಂದಲೂ ದಕ್ಷಿಣ ಭಾರತ ರೋಮ್ ನಗರದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಈ ಸಂದರ್ಭದಲ್ಲಿ ಈ ಪ್ರದೇಶ ಕೂಡ ರೋಮ್‌ನೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು ಎಂಬುದಕ್ಕೆ ಲಿಂಗಸೂಗೂರಿನಲ್ಲಿ ದೊರೆತ ಚಿನ್ನದ ನಾಣ್ಯ ಪುಷ್ಟೀಕರಿಸುತ್ತದೆ(ಖಂಡೋಬರಾವ್ ೨೦೦೨: ೨೭-೨೯). ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡ ವರ್ತಕ ಸಂಘಗಳು ಈ ಅಂಶವನ್ನು ಪಷ್ಟೀಕರಿಸುತ್ತವೆ. ಅವು ವ್ಯಾಪಾರದಲ್ಲಿ ಪ್ರಾಬಲ್ಯವನ್ನು ಸಾಧಿಸಿದ್ದವು.

ವಸಾಹತು ಕಾಲಘಟ್ಟದಲ್ಲಿ ಈ ಪ್ರದೇಶ ಇಂಗ್ಲೆಂಡ್‌ನೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. "೧೮೫೩ ಮೇ ೨೧ರ ಬೀರಾರ್ ಒಪ್ಪಂದದ ಪ್ರಕಾರ ರಾಯಚೂರು ದೋ-ಅಬ್ ಪ್ರದೇಶ ವಸಾಹತುಶಾಹಿಗಳ ವ್ಯಾಪ್ತಿಗೆ ಸೇರಿತು. ಈ ಪ್ರದೇಶದ ಹತ್ತಿಗೆ ಇಂಗ್ಲೆಂಡ್ ಮಾರುಕಟ್ಟೆಯಲ್ಲಿ ಭಾರೀ ಬೇಡಿಕೆಯಿತ್ತು. ಹಾಗಾಗಿ ಇಲ್ಲಿ ಬೆಳೆದ ಹತ್ತಿಯನ್ನು ರಾಯಚೂರು, ಬಳ್ಳಾರಿ, ಧಾರವಾಡ ಮೂಲಕ ಸಾಗಿ ಕುಮಟಾ ಬಂದರು ಮೂಲಕ ಬಾಂಬೆಗೆ ಕಳುಹಿಸಲಾಗುತ್ತಿತ್ತು. ಅಲ್ಲಿಂದ ಇಂಗ್ಲೆಂಡಿಗೆ ರವಾನಿಸಲಾಗುತ್ತಿತ್ತು" ಎಂಬುದು ತಿಳಿದುಬರುತ್ತದೆ(ಜೆ.ಜಿ.ಮೆಡ್ಲಿಕಾಬ್ ೧೮೬೨: ೨೭೫).

ಹೀಗೆ ರಾಯಚೂರು ದೋ-ಅಬ್ ಪ್ರದೇಶ ಹೊಂದಿರುವ ವರ್ತಕ-ವ್ಯಾಪಾರ ಸಂಬಂಧಗಳನ್ನು ಕುರಿತು ಅಧ್ಯಯನಗಳು ನಡೆದಿವೆ. ಇಷ್ಟೆಲ್ಲಾ ಅಧ್ಯಯನಗಳು ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿದವರ

ಪರವಾಗಿದ್ದವು. ಆದರೂ ಈ ಪ್ರದೇಶದ ವರ್ತಕ-ವ್ಯಾಪಾರ ಸಂಬಂಧ ಸಿಂಧೂ ನಾಗರಿಕತೆಯ ಕಾಲದಿಂದ ನಿಜಾಮರ ಕಾಲದವರೆಗೆ ವ್ಯಾಪಾರ ಸಂಬಂಧಗಳು ಹೆಚ್ಚುತ್ತಾ ನಡೆದವು.

**೩.೪.೧.೪.೨. ವರ್ತಕರ ಪ್ರಭಾವ**

ವ್ಯಾಪಾರವನ್ನು ವೃತ್ತಿಯನ್ನಾಗಿಸಿಕೊಂಡವರನ್ನು ವರ್ತಕರು ಎಂಬ ಹೆಸರಿನಿಂದ ಕರೆಯಲಾಗಿದೆ. ಹಾಗೆಯೇ ಸಾರ್ಥವಾಹರೆಂದೂ ಕರೆಯಲಾಗುತ್ತಿತ್ತು. ವರ್ತಕರ ಉಲ್ಲೇಖ ಸಿಂಧೂ ನಾಗರಿಕತೆಯಿಂದ ನಿಜಾಮರ ಕಾಲದವರೆಗೆ ಕಂಡುಬರುತ್ತದೆ. ಕರ್ನಾಟಕದ ಸಂದರ್ಭದಲ್ಲಿ ಕ್ರಿ.ಶ. ೭-೮ನೆಯ ಶತಮಾನಗಳಲ್ಲಿ ಇವರ ಉಲ್ಲೇಖವಿದೆ.[೨೦೬] ಆದರೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕ್ರಿ.ಶ. ೧೦೧೮ರ ಮಸ್ಕಿ(೩೪) ಶಾಸನದ ಮೂಲಕ ವರ್ತಕರ ಉಲ್ಲೇಖ ಕಂಡುಬರುತ್ತದೆ.[೨೦೭] ಹಾಗೆಂದು ಅದಕ್ಕೂ ಪೂರ್ವದಲ್ಲಿ ಈ ಪ್ರದೇಶದಲ್ಲಿ ವರ್ತಕರಿರಲಿಲ್ಲವೆಂದಲ್ಲ. ಆದರೆ ಶಾಸನದಲ್ಲಿ ಮಾತ್ರ ೧೦೧೮ರಲ್ಲಿ ಕಂಡುಬರುವುದು. ಅದಕ್ಕೂ ಮುಂಚೆ ಅಂದರೆ ಸಿಂಧೂನಾಗರಿಕತೆ ಕಾಲದಿಂದ ವರ್ತಕರ ಪ್ರಭಾವವಿತ್ತು. ಕ್ರಿ.ಶ. ೧೦ರಿಂದ ೧೨ನೆಯ ಶತಮಾನದವರೆಗೆ ವರ್ತಕರು ಭಾರೀ ಪ್ರಮಾಣದಲ್ಲಿ ಗುರುತಿಸಿಕೊಂಡು ಭೂದಾನ ಮಾಡುವಷ್ಟು ಶಕ್ತರಾಗಿದ್ದರು. ನಂತರದಲ್ಲಿ ವಸಾಹತುಶಾಹಿಗಳ ಪ್ರಭಾವ ಹೆಚ್ಚಾಯಿತು. ಈ ವರ್ತಕರ ಪ್ರಭಾವ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅಧಿಕವಾಗಿತ್ತು. ಇವರನ್ನು ಕುರಿತು ಸಿಂಧೂ ನಾಗರಿಕತೆಯಿಂದ ನಿಜಾಮರ ಕಾಲದವರೆಗೆ ಈ ಪ್ರದೇಶ ವರ್ತಕರ ಪ್ರಭಾವವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ವ್ಯಾಪಾರ ಪದ್ಧತಿ ಸಿಂಧೂ ನಾಗರಿಕತೆಯ ಕಾಲದಿಂದ ನಿರಂತರವಾಗಿ ನಡೆದುಕೊಂಡು ಬಂದುದಾಗಿದೆ. ಬಹುತೇಕವಾಗಿ ಈ ಪ್ರದೇಶ ಚಿನ್ನ, ಬೆಳ್ಳಿ, ಮೇದಶಿಲೆಯ ಕಚ್ಚಾ ವಸ್ತುಗಳು, ಕಬ್ಬಿಣ, ತಾಮ್ರದ ಕುರುಹುಗಳ ಜೊತೆಗೆ ಇನ್ನಿತರ ಹಲವಾರು ಅವಶೇಷಗಳಿಂದಾಗಿ ಹೆಸರುವಾಸಿಯಾಗಿತ್ತು. ಹಾಗೆಯೇ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಮಧ್ಯದ ಬಯಲಿನ ಈ ಪ್ರದೇಶ ಭೂ ಮತ್ತು ಖನಿಜ ಸಂಪನ್ಮೂಲಗಳಿಂದಾಗಿ ದೇಶ-ವಿದೇಶಗಳ ವರ್ತಕರನ್ನು ಆಕರ್ಷಿಸಿತು. ಈ ವರ್ತಕರು ವ್ಯಾಪಾರದಿಂದ ಬಂದ ಲಾಭದಿಂದಾಗಿ ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿದ್ದರು. ಪರ್ಯಾಯ ಶಕ್ತಿಯಾಗಿ ಗುರುತಿಸಿಕೊಂಡಿದ್ದರು. ರಾಜ್ಯದ ಆಡಳಿತವನ್ನು ನಿರ್ವಹಿಸುವಷ್ಟು ಸಾಮರ್ಥ್ಯವನ್ನು ಹೊಂದಿದ್ದರು, ಪ್ರಭಾವಿಯಾಗಿ ಬೆಳೆದಿದ್ದರು. ಅಲ್ಲದೆ ತಮ್ಮ ಹಿತ ರಕ್ಷಣೆಗಾಗಿ ವರ್ತಕರ ಸಂಘಗಳನ್ನು ಸಹ ಕಟ್ಟಿಕೊಂಡಿದ್ದರು. ಈ ವರ್ತಕರಲ್ಲಿ ಎರಡು ಪ್ರಕಾರಗಳಿವೆ. ಅವೆಂದರೆ ಒಂದು ವಿನಿಮಯ ವರ್ತಕರು ಮತ್ತು ಎರಡು ಉತ್ಪಾದಕ ವಿನಿಮಯ ವರ್ತಕರು. ವರ್ತಕರ ಸಂಘಗಳು ಕ್ರಿ.ಶ. ೭ನೆಯ ಶತಮಾನದ ಸಂದರ್ಭದಲ್ಲಿ ಇದ್ದವು ಎಂಬುದಾಗಿ ತಿಳಿದುಬರುತ್ತದೆ.[೨೦೮] ವ್ಯಾಪಾರದ ಲಾಭದಿಂದಾಗಿ ಆರ್ಥಿಕವಾಗಿ ಉನ್ನತ ಮಟ್ಟಕ್ಕೆ ತಲುಪಿದ್ದರು. ರಕ್ಷಣೆ, ವೃತ್ತಿ, ಸೌಕರ್ಯ, ಸಾಮಾಜಿಕ ಸ್ಥಾನಮಾನ, ವ್ಯಾಪಾರದ ಆಗುಹೋಗುಗಳು ಮತ್ತು ದಾನ-ಧರ್ಮ ನೀಡುವುದು ಮುಂತಾದ ವಿಚಾರಗಳನ್ನು ಕುರಿತು ಪ್ರತ್ಯೇಕವಾದ ಸಭೆಗಳನ್ನು ಸೇರುತ್ತಿದ್ದ ಬಗೆಗಿನ ಉಲ್ಲೇಖ ಕ್ರಿ.ಶ ೧೧೫೪ರ ಗಬ್ಬೂರು(೪) ಶಾಸನದಿಂದ ತಿಳಿದುಬರುತ್ತದೆ.[೨೦೯] ಈ ಹಿನ್ನೆಲೆಯಲ್ಲಿ ವರ್ತಕರ ಪ್ರಭಾವವನ್ನು ಕುರಿತು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

### ೩.೪.೧.೪.೨.೧. ವಿನಿಮಯ ವರ್ತಕರು

ಕೇವಲ ವಿನಿಮಯವನ್ನೇ(ವ್ಯಾಪಾರ) ವೃತ್ತಿಯನ್ನಾಗಿಸಿಕೊಂಡವರನ್ನು ವಿನಿಮಯ ವರ್ತಕರೆಂದು ಕರೆಯುತ್ತಾರೆ. ಇವರು ಉತ್ಪಾದಕ ವಸ್ತುಗಳನ್ನು ಪೂರೈಕೆ ಮಾಡುವ ಕಾರ್ಯವನ್ನು ಹೊಂದಿದ್ದರು. ಉತ್ಪಾದಕ ಮತ್ತು ಗ್ರಾಹಕರ ನಡುವೆ ಕೊಂಡಿಯಂತಿದ್ದರು. ವಿನಿಮಯ ವರ್ತಕರೆಂದರೆ ಮುಂಮರಿ ದಂಡ,[೨೧೦] ಸೆಟ್ಟಿ-ಬಣ್ಣಂಜಿಗ,[೨೧೧] ಸೆಟ್ಟಿಗುತ್ತ,[೨೧೨] ನಕರ,[೨೧೩] ವಡ್ಡ ವ್ಯವಹಾರಿ,[೨೧೪] ನಾನಾದೇಶಿ,[೨೧೫] ಗಾತ್ರಿಗ[೨೧೬] ಮುಂತಾದವರು ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡವರಾಗಿದ್ದರು. ಇವರು ಈ ಪ್ರದೇಶದಲ್ಲಿ ಮಧ್ಯಕಾಲೀನ ಸಂದರ್ಭದಲ್ಲಿ ನಗರ ವ್ಯವಸ್ಥೆ ಕಾಣಿಸಿಕೊಳ್ಳುವುದಕ್ಕೆ ಕಾರಣರಾದರು. ಈ ವ್ಯಾಪಾರಸ್ಥರು ಆಂತರಿಕ ಮತ್ತು ಬಾಹ್ಯ ವ್ಯಾಪಾರವನ್ನು ನಡೆಸುತ್ತಿದ್ದರು. ಭೂ ಮತ್ತು ಜಲಮಾರ್ಗಗಳ ಮೂಲಕ ವ್ಯಾಪಾರ ನಡೆಸುತ್ತಿದ್ದ ಮಾಹಿತಿ ಇರುವುದು ಕಂಡುಬರುತ್ತದೆ. ಈ ಪ್ರದೇಶ ಸಮುದ್ರ ವ್ಯಾಪಾರದೊಂದಿಗೆ ಸಂಬಂಧ ಹೊಂದಿದ್ದಿತು. ಸಿಂಧೂನಾಗರಿಕತೆಯ ಸಂದರ್ಭದಲ್ಲಿ ಆಮದು ಮತ್ತು ರಫ್ತುಗಳು ಸಮುದ್ರ ಮಾರ್ಗದ ಮೂಲಕವೇ ನಡೆಯುತ್ತಿತ್ತು. ಹಟ್ಟಿ ಚಿನ್ನದ ಗಣಿಯಿಂದ ಚಿನ್ನವನ್ನು ಹೊನ್ನಾವರ[೨೧೭] ಬಂದರಿನ ಮೂಲಕ ಸರಬರಾಜು ಮಾಡಲಾಗುತ್ತಿತ್ತೆಂದು ತಿಳಿದುಬರುತ್ತದೆ. ನಿಜಾಮರ ಕಾಲದಲ್ಲಿ ಬ್ರಿಟಿಷರು ರಾಯಚೂರು ಪ್ರದೇಶವನ್ನು ನಿಜಾಮರಿಂದ ಕಸಿದುಕೊಂಡು ಇಲ್ಲಿ ಬೆಳೆದ ಹತ್ತಿಯನ್ನು ಇಂಗ್ಲೆಂಡಿಗೆ ಸಾಗಿಸುತ್ತಿದ್ದರು. ಬಹು ಬೇಡಿಕೆಯನ್ನು ಹೊಂದಿದ್ದ ರಾಯಚೂರು ಹತ್ತಿಯನ್ನು ಸಮುದ್ರ ಮಾರ್ಗದ ಮೂಲಕವೇ ಸಾಗಿಸಲಾಗುತ್ತಿತ್ತು. ಹತ್ತಿಯನ್ನು ಮೊದಲು ಬಳ್ಳಾರಿ, ಧಾರವಾಡ, ಕುಮಟಾವರೆಗೆ ಭೂಮಾರ್ಗದಲ್ಲಿ ಸಾಗಿಸಿದರೆ, ಕುಮಟಾದಿಂದ ಬಾಂಬೆಗೆ ಸಮುದ್ರ ಮಾರ್ಗದಿಂದ ಸರಬರಾಜು ಮಾಡಲಾಗುತ್ತಿತ್ತು ಎಂದು ತಿಳಿದುಬರುತ್ತದೆ.[೨೧೮] ಈ ಮಧ್ಯದ ಕಾಲಾವಧಿಯಲ್ಲಿ ಈ ಪ್ರದೇಶ ಬಹುತೇಕವಾಗಿ ಗೋವಾ, ಹೊನ್ನಾವರ, ಭಟ್ಕಳ, ಕುಮಟಾ ಮುಂತಾದ ಬಂದರುಗಳ ಮೂಲಕ ವ್ಯಾಪಾರ ವಹಿವಾಟು ನಡೆಸುತ್ತಿತ್ತೆಂಬುದು ತಿಳಿದುಬರುತ್ತದೆ.

ವಿನಿಮಯ ವರ್ತಕರು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕ್ರಿ.ಶ.೧೧ರಿಂದ ೧೩ನೆಯ ಶತಮಾನದವರೆಗೆ ಆರ್ಥಿಕ ಚಟುವಟಿಕೆಗಳನ್ನು ನಡೆಸುವಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸಿದರು. ಕ್ರಿ.ಶ.೧೪ರಿಂದ ನಿಜಾಮರ ಕಾಲದವರೆಗೆ ಈ ಪ್ರದೇಶದಲ್ಲಿ ಬಣಜಿಗರು ಮತ್ತು ನಕರರೆಂದು ಕರೆಯಿಸಿಕೊಂಡಿದ್ದ ವೈಶ್ಯರು ವ್ಯಾಪಾರ ಕ್ಷೇತ್ರದಲ್ಲಿ ಹಿಡಿತವನ್ನು ಸಾಧಿಸಿದ್ದರು. ಈ ಎರಡು ವರ್ತಕ ಸಮುದಾಯಗಳ ಪ್ರಭಾವ ಈ ಪ್ರದೇಶದಲ್ಲಿ ಅಧಿಕವಾಗಿದೆ. ಅಲ್ಪಸಂಖ್ಯಾತರಾದ ಇವರು ಈ ಪ್ರದೇಶದ ಆರ್ಥಿಕತೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವವರಾಗಿದ್ದರು. ಇವರು ಲೇವಾದೇವಿ ವ್ಯವಹಾರ ನಡೆಸುತ್ತಿದ್ದರೆಂದು ಮೌಖಿಕವಾಗಿ ತಿಳಿದುಬರುತ್ತದೆ. ಕೆಲವು ಬಡಜನರು ತಮ್ಮ ಯಾವುದೋ ಕಾರಣಕ್ಕಾಗಿ ಇವರಲ್ಲಿ ಬಂಗಾರ ಬೆಳ್ಳಿಯ ಆಭರಣಗಳನ್ನು ಅಡವು ಇಡುತ್ತಿದ್ದರು. ಈ ಸಾಲವನ್ನು ತೀರಿಸಲು ಆಗದ ಬಡಜನರ ಆಭರಣಗಳು ಇವರಿಗೆ ದಕ್ಕುತ್ತಿದ್ದವು. ಹಾಗೆಯೇ ಕೆಲವರು ಸಾಲಗಳಲ್ಲಿ ಹೊಲಗಳನ್ನೇ ಇವರಿಗೆ ಬಿಟ್ಟಿರುವುದು ಸಹ ಜನಸಾಮಾನ್ಯರಲ್ಲಿ ಕೇಳಿಬರುತ್ತದೆ. ಇದು ಸಹ ಮೌಖಿಕವಾಗಿ ತಿಳಿದುಬರುವ ಸಂಗತಿಯಾಗಿದೆ.

ವರ್ತಕರು ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಅಧಿಕಾರ ಮತ್ತು ಸವಲತ್ತುಗಳನ್ನು ಹೊಂದಿದ್ದರು. ಇವರು ನಗರ ಮತ್ತು ಗ್ರಾಮೀಣ ವ್ಯಾಪಾರದ ಮೇಲೆ ಪ್ರಭಾವವನ್ನು ಹೊಂದಿದ್ದರು. ಈ ಪ್ರದೇಶದಲ್ಲಿ

ವೈಶ್ಯರು ಹೊಂದಿದ ಶ್ರೀಮಂತಿಕೆಯನ್ನು ಕುರಿತು ಮುದಗಲ್ ಶಾಸನ ಉಲ್ಲೇಖಿಸುತ್ತದೆ.[೨೯] ಈ ವರ್ತಕರು ಪ್ರಭಾವಿತರಾಗಿ ಬೆಳೆದಂತೆಲ್ಲ ಇವರ ರಕ್ಷಣೆಗೆ ಬೇಕಾದ ವ್ಯವಸ್ಥೆಯ ಅಗತ್ಯ ಉಂಟಾಯಿತು. ಈ ಹಿನ್ನೆಲೆಯಲ್ಲಿ ಈ ವಿನಿಮಯ ವರ್ತಕರು ಸಂಘಗಳನ್ನು ರಚಿಸಿಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಸಂಘಗಳು ರಚನೆಗೊಳ್ಳಬೇಕಾದರೆ ವೃತ್ತಿಗಳು ಮೊದಲೇ ರೂಪುಗೊಂಡಿರಬೇಕು. ಎಲ್ಲ ವೃತ್ತಿಗಳಿಗೂ ಸಂಘಗಳನ್ನು ರಚಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಕೆಲವೊಂದು ಪ್ರಮುಖ ವೃತ್ತಿಯವರು ಮಾತ್ರ ಸಂಘಗಳನ್ನು ರಚಿಸಿಕೊಳ್ಳುತ್ತಿದ್ದರು. ಹೀಗೆ ಸಮಾನ ವೃತ್ತಿಯವರು ತಮ್ಮ ಸಮಾಜದ ಅಥವಾ ಸಮುದಾಯದ ಜನರೊಂದಿಗೆ ಸೇರಿಕೊಂಡು ಕಟ್ಟಿದ ಶ್ರೇಣಿಗಳೇ ಸಂಘಗಳು. ಅವು ಈ ಕೆಳಗಿನಂತಿವೆ: ಅಯ್ಯಾಹೊಳೆ ಐನೂರ್ವರು,[೩೦] ಮುಂಮರಿದಂಡ,[೩೧] ಸೆಟ್ಟಿಗುತ್ತ,[೩೨] ಗವರೆ–ಗಾತ್ರಿಗ,[೩೩] ಸೆಟ್ಟಿಬಣಂಜಿಗ,[೩೪] ವಡ್ಡ ವ್ಯವಹಾರಿ,[೩೫] ನಾನಾದೇಶಿ,[೩೬] ನಖರ,[೩೭] ನಖರ ಅರವತ್ತೊಕ್ಕಲು,[೩೮] ಬೀರವಣಿಗೆ,[೩೯] ಮಾಲೆಗಾರ ಅರವತೊಕ್ಕಲು,[೪೦] ಬೋಗಾರ ಮಹಾನಖರ,[೪೧] ಮಿಂಡಗುದ್ದಲಿ,[೪೨] ಮೂವತ್ತಾರು ಬೀಡುಗಳು[೪೩] ಮುಂತಾದವು.

ಈ ವರ್ತಕರು ಹೀಗೆ ತಮ್ಮ ಸಂಘಗಳನ್ನು ರಚಿಸಿಕೊಂಡು ರಕ್ಷಣೆಯನ್ನು ಪಡೆದುಕೊಂಡರು. ಅಲ್ಲದೆ ಇವರು ಪ್ರತ್ಯೇಕ ಸಭೆಗಳನ್ನು ಸೇರುತ್ತಿದ್ದರೆಂಬುದು ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಕಲ್ಲೂರು ಅಗ್ರಹಾರದ ಹತ್ತಿರ ಗವರೇಶ್ವರ ದೇವಸ್ಥಾನದ ಬಳಿಯಲ್ಲಿ ಸಭೆ ಸೇರಿ, ಗಬ್ಬೂರಿನ ಪ್ರಸನ್ನ ದೇವರಿಗೆ ಪೂಜೆಗಾಗಿ ಭಾಗ ಕೊಡಬೇಕೆಂದು ನಿರ್ಣಯಿಸಿರುವುದು ಗಬ್ಬೂರು(೪), ೧೧೫೪ರ ಶಾಸನದಿಂದ ತಿಳಿದುಬರುತ್ತದೆ.[೪೪] ಹೀಗೆ ವರ್ತಕರು ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿ ಸಾಮಾಜಿಕ ಧಾರ್ಮಿಕವಾಗಿಯೂ ಮೇಲ್‌ಸ್ತರದಲ್ಲಿದ್ದರು.

### ೩.೪.೧.೪.೨.೨. ಉತ್ಪಾದಕ ವಿನಿಮಯ ವರ್ತಕರು

ಉತ್ಪಾದನೆ ಮತ್ತು ಪೂರೈಕೆ ಕಾರ್ಯಗಳೆರಡನ್ನೂ ಜೊತೆ ಜೊತೆಯಾಗಿ ನಿರ್ವಹಿಸುತ್ತಿದ್ದ ವರ್ತಕರನ್ನು ಉತ್ಪಾದಕ–ವಿನಿಮಯ ವರ್ತಕರೆಂದು ಕರೆಯಲಾಗಿದೆ. ಇವರೂ ಈ ಪ್ರದೇಶದಲ್ಲಿ ನಗರ ವ್ಯವಸ್ಥೆ ಕಾಣಿಸಿಕೊಳ್ಳಲು ಕಾರಣರಾದರು. ಇವರು ವಿನಿಮಯ ವರ್ತಕರಂತೆ ಪ್ರಭಾವಿಯಾಗಿರಲಿಲ್ಲ ವೆಂದರೂ ಆರ್ಥಿಕವಾಗಿ ಈ ಪ್ರದೇಶದ ಅಭಿವೃದ್ಧಿಯಲ್ಲಿ ಕಾಣಿಸಿಕೊಂಡಿದ್ದರು. ಆಂತರಿಕ ವ್ಯಾಪಾರವನ್ನೇ ಹೆಚ್ಚಾಗಿ ನಡೆಸುತ್ತಿದ್ದರು. ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿದ ಕುಶಲಕರ್ಮಿಗಳಾಗಿದ್ದರು. ಉತ್ಪಾದನೆ ಮತ್ತು ಮಾರಾಟ ಎರಡನ್ನೂ ಮಾಡುತ್ತಿದ್ದವರು ತಮ್ಮ ಹಿತರಕ್ಷಣೆಗಾಗಿ ಸಂಘಗಳನ್ನು ಕಟ್ಟಿಕೊಂಡಿರುವುದು ಕಂಡುಬರುತ್ತದೆ. ಕೆಲವೇ ವೃತ್ತಿಗಳವರು ಮಾತ್ರ ಸಂಘಗಳನ್ನು ಕಟ್ಟಿಕೊಂಡಿರುವುದು ಗೋಚರಿಸುತ್ತದೆ. ಹೀಗೆ ಕಟ್ಟಿಕೊಂಡ ವೃತ್ತಿ ಸಂಘಗಳೆಂದರೆ ತೆಲ್ಲಿಗಗೊತ್ತಳಿ,[೪೫] ಜೇಡ ಗೊತ್ತಳಿ,[೪೬] ಮೇಳಿ ಸಾಸಿರ್ವರು.[೪೭] ಈ ಮೂರು ಸಂಘಗಳು ಇಲ್ಲಿದ್ದ ಬಗ್ಗೆ ತಿಳಿದುಬರುತ್ತದೆ. ಇವರಂತೆ ವೃತ್ತಿಯಲ್ಲಿ ತೊಡಗಿಸಿಕೊಂಡಿದ್ದ ಬಡಗಿಗಳು,[೪೮] ಕಮ್ಮಾರರು,[೪೯] ಕುಂಬಾರರು,[೫೦] ಅಕ್ಕಸಾಲಿಗರು,[೫೧] ಕಂಚುಗಾರರು,[೫೨] ಮಾಲೆಗಾರರು,[೫೩] ಮೇದಾರರು,[೫೪] ಸಿಂಪಿಗರು[೫೫] ಮುಂತಾದವರು ಗ್ರಾಮಸೇವಕ ರಾಗಿ ಕೃಷಿ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಇವರು ವೃತ್ತಿ ಸಂಘಗಳನ್ನು ಈ ಪ್ರದೇಶದಲ್ಲಿ ರಚಿಸಿಕೊಂಡಿರಲಿಲ್ಲ ಎಂಬುದು ತಿಳಿದುಬರುತ್ತದೆ.

ಹೀಗೆ ಉತ್ಪಾದಕ–ವಿನಿಮಯ ವರ್ತಕರು ತಮ್ಮ ತಮ್ಮ ವೃತ್ತಿಗಳಲ್ಲಿ ಕೌಶಲ್ಯತೆಯನ್ನು ಬಳಸಿಕೊಂಡು ಆರ್ಥಿಕ ಬದಲಾವಣೆ ಬಯಸಿದರು. ಇವರು ಗ್ರಾಮೀಣ ಮತ್ತು ನಗರ ಪ್ರದೇಶಗಳನ್ನು ಪರಸ್ಪರ ಒಂದು ಗೂಡಿಸುವಂತೆ ಮಾಡಿದರು. ಇದು ನಗರ ಕೇಂದ್ರಗಳು ಹುಟ್ಟಿಕೊಳ್ಳಲು ಅವಕಾಶ ಮಾಡಿಕೊಟ್ಟರು. ಇವರು ಕೆಲವು ಸಂದರ್ಭಗಳಲ್ಲಿ ದಾನ ನೀಡುವಷ್ಟು ಪ್ರಾಬಲ್ಯವನ್ನು ಹೊಂದಿದ್ದರು. ಸಂಘಗಳನ್ನು ಹೊಂದಿದ್ದವರು ಸರಕಾರದ ಕೃಪೆಗೆ ಪಾತ್ರರಾಗಿದ್ದರು. ಅಲ್ಲಿಂದ ಹಲವು ಸವಲತ್ತುಗಳನ್ನು ಪಡೆದುಕೊಂಡಿರುವುದು ತಿಳಿದುಬರುತ್ತದೆ.

### ೩.೪.೧.೪.೩. ವ್ಯಾಪಾರ ಕೇಂದ್ರಗಳು

ಕೃಷಿ ಆಧಾರಿತ ಅರ್ಥ ವ್ಯವಸ್ಥೆ ಹೆಚ್ಚುವರಿ ಉತ್ಪಾದನೆಗೆ ಅವಕಾಶ ಮಾಡಿಕೊಟ್ಟಿದ್ದು ಪೇಟೆ–ಪಟ್ಟಣಗಳು ಕಾಣಿಸಿಕೊಳ್ಳಲು ಪ್ರಮುಖ ಕಾರಣವಾಗಿದೆ. ಅಲ್ಲದೆ ಇಲ್ಲಿನ ಭೌಗೋಳಿಕ ಸನ್ನಿವೇಶವೂ ಸಹ ಮುಖ್ಯವಾಗಿರುತ್ತದೆ. ಈ ಎರಡು ಅಂಶಗಳು ರಾಯಚೂರು ದೋ–ಅಬ್ ಪ್ರದೇಶದಲ್ಲಿ ವ್ಯಾಪಾರ ಕೇಂದ್ರಗಳ ಸ್ಥಾಪನೆಗೆ ಅನುಕೂಲಗಳಾಗಿದ್ದವು. "ರಾಜ್ಯದ ಆರ್ಥಿಕತೆಯಲ್ಲಿ ಆಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿತ್ತು. ಆಂತರಿಕ ವ್ಯಾಪಾರದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡೂ ಪರಸ್ಪರ ಒಂದುಗೂಡುವ ಕೆಲಸ ಮಾಡುತ್ತಿದ್ದವು. ಈ ಕಾರಣದಿಂದಾಗಿ ಅನೇಕ ಗ್ರಾಮೀಣ ಪ್ರದೇಶಗಳು ಪೇಟೆ–ಪಟ್ಟಣಗಳಾಗಿಯೂ ಪರಿವರ್ತನೆಗೊಂಡವು. ಆಂತರಿಕ ವ್ಯಾಪಾರ ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿದ್ದಲ್ಲದೆ ಸಾಮಾಜಿಕ ಪರಿವರ್ತನೆಗೂ ಕಾರಣವಾಯಿತು" ಎನ್ನುತ್ತಾರೆ(ರೈ ೨೦೦೪: ೯೧). ಹೀಗೆ ಹಳ್ಳಿಗಳು ಪಟ್ಟಣಗಳಾಗಿ ಪ್ರಮುಖ ವ್ಯಾಪಾರ ಕೇಂದ್ರಗಳಾಗಿ ಗುರುತಿಸಿಕೊಂಡಿದ್ದವು. ಗಬ್ಬೂರು,[೨೯೬] ಕರಡಕಲ್,[೨೯೭] ಮುದಗಲ್,[೨೯೮] ಮಸ್ಕಿ,[೨೯೯] ಬಳಗಾನೂರು,[೩೦೦] ಮೊಸಳಿಕಲ್–೩೦೦,[೩೦೧] ಮೊರಟ–೩೦೦,[೩೦೨] ರಾಯಚೂರು,[೩೦೩] ಮಾಡಗಿರಿ,[೩೦೪] ಮುಕ್ಕುಂದೆ,[೩೦೫] ಮಾನ್ವಿ,[೩೦೬] ಗುಂಜಹಳ್ಳಿ,[೩೦೭] ದೇವದುರ್ಗ,[೩೦೮] ಮಲಿಯಾಬಾದ್,[೩೦೯] ಹೊಸಪೇಟೆ,[೩೧೦] ಚಂದನಕೇರಿ,[೩೧೧] ಗುಡಗುಂಟಿ,[೩೧೨] ಗೋರ್ಕಲು,[೩೧೩] ಕುರುಡಿ,[೩೧೪] ಸಿರವಾರ,[೩೧೫] ಕವಿತಾಳ,[೩೧೬] ಸಾಲಗುಂದೆ,[೩೧೭] ಕಲ್ಲೂರು[೩೧೮] ಇನ್ನೂ ಮುಂತಾದ ಪಟ್ಟಣಗಳು ವ್ಯಾಪಾರ ಕೇಂದ್ರಗಳಾಗಿ ದಿನನಿತ್ಯದ ಉಪಯುಕ್ತ ವಸ್ತುಗಳನ್ನು ತಲುಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಇತರೆ ಗ್ರಾಮೀಣ ಹಳ್ಳಿಗಳಿಗೆ ಇವು ಆಧಾರ ಸ್ತಂಭಗಳಾಗಿದ್ದವು. ಈ ಪ್ರದೇಶಗಳೆಲ್ಲವು ವರ್ತಕರಿಂದ ಆಮದಾದ ಸಾಮಾಗ್ರಿಗಳ ವಿತರಣೆ ಕಾರ್ಯ ಈ ಕೇಂದ್ರಗಳಿಂದಲೇ ನಡೆಯುತ್ತಿದ್ದವು. ಹಂತ ಹಂತವಾಗಿ ವ್ಯಾಪಾರ ವಿಸ್ತರಿಸಿದಂತೆಲ್ಲಾ ಸಣ್ಣ ಹಳ್ಳಿಗಳು ದೊಡ್ಡ ಪಟ್ಟಣಗಳಾಗಿ ಬದಲಾದವು. ಇದರಲ್ಲಿ ವರ್ತಕರ ಪಾತ್ರ ಮಹತ್ವದ್ದು.

ಈ ವ್ಯಾಪಾರ ಕೇಂದ್ರಗಳಲ್ಲಿ ಪ್ರತಿ ಹಳ್ಳಿಗಳಲ್ಲಿ ಮಾರುಕಟ್ಟೆ ವ್ಯವಸ್ಥೆ ಅಂಗಡಿ, ಸಂತೆ, ಪೇಟೆ, ಪಟ್ಟಣಗಳ ಮೂಲಕ ವಿವಿಧ ಬಗೆಯ ವಸ್ತುಗಳನ್ನು ಮಾರಲಾಗುತ್ತಿತ್ತು. ಅದು ಬಹುತೇಕವಾಗಿ ಅಂಗಡಿಗಳು ಹುಲ್ಲು ಮಾಳಗಿ(ಗುಡಿಸಲು),[೩೧೯] ಮಾಳಿಗೆ ಅಂಗಡಿ,[೩೨೦] ಹುಲ್ಲಿನ ಅಂಗಡಿಯ ರೂಪದಲ್ಲಿದ್ದವು. ತಾಂತ್ರಿಕತೆ ಗೊತ್ತಿರುವ ರೀತಿಯಲ್ಲಿ ವ್ಯಾಪಾರವನ್ನು ನಡೆಸಲಾಗುತ್ತಿತ್ತು. ಸ್ಥಳೀಯವಾಗಿದ್ದ ವರ್ತಕರು ಶ್ರೀಮಂತರಾಗಿದ್ದರು. ತಾವು ತಂದಿರುವ ವಸ್ತುಗಳನ್ನು ಸುರಕ್ಷಿತವಾಗಿಡಲು ಮಾಳಿಗೆ ಮನೆಗಳನ್ನು ಹೆಚ್ಚಾಗಿ ಬಳಸುತ್ತಿದ್ದರು. ಅದು ಗೌರವಕ್ಕೆ ತಕ್ಕಂತೆ ಕಟ್ಟಿಸುತ್ತಿದ್ದರು. ಸಂತೆಯಂತೂ

ವಾರಕ್ಕೊಮ್ಮೆ ನಡೆಸಲಾಗುತ್ತಿತ್ತು. ಸ್ಥಳೀಯರಲ್ಲದೆ ಬೇರೆ ಊರಿನ ವ್ಯಾಪಾರಿಗಳೂ ಭಾಗವಹಿಸುತ್ತಿದ್ದರು. ಸಂತೆ ನಡೆಯುವ ಸ್ಥಳದ ಸುತ್ತಮುತ್ತಲಿನ ಹಳ್ಳಿಗಳ ಜನರು ಸಂತೆ ಮಾಡಿಕೊಂಡು ಹೋಗುತ್ತಿದ್ದರು. ಈಗಂತೂ ಈ ಪ್ರದೇಶದಲ್ಲಿ ಸಂತೆಗಳಿಗೆ ಬಹುಬೇಡಿಕೆಯಿದೆ. ಪ್ರತಿಯೊಬ್ಬರು ಸಂತೆಯಲ್ಲಿ ವಸ್ತುಗಳನ್ನು ಕೊಳ್ಳುವರು. ಪೇಟೆ-ಪಟ್ಟಣಗಳಲ್ಲಿ ಖಾಯಂ ಆಗಿ ಒಂದೇ ಕಡೆ ವ್ಯಾಪಾರವನ್ನು ಮಾಡುವುದಾಗಿತ್ತು. ನಿಗದಿತ ಸ್ಥಳದ ಮೂಲಕ ವ್ಯಾಪಾರವನ್ನು ನಡೆಸಬೇಕಾಗಿತ್ತು. ಹೀಗೆ ವರ್ತಕರು ಆರ್ಥಿಕವಾಗಿ ನಡೆಯುವ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಬಂದ ಲಾಭದಿಂದ ದಾನ ಮಾಡುವಷ್ಟು ಸಾಮರ್ಥ್ಯ ಹೊಂದಿದ್ದರು.

ಈ ಪ್ರದೇಶದಲ್ಲಿ ವಿವಿಧ ಬಗೆಯ ವಸ್ತುಗಳನ್ನು ಮಾರಾಟ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಸ್ಥಳೀಯವಾಗಿ ಉತ್ಪಾದನೆಗೊಂಡ ವಸ್ತುಗಳ ಜೊತೆಗೆ ಆಮದು ಮಾಡಿಕೊಂಡಿರುವ ಪದಾರ್ಥಗಳನ್ನು ಮಾರಲಾಗುತ್ತಿತ್ತು. ಇಲ್ಲಿ ಮೆಣಸು, ಶುಂಠಿ, ಹಿಪ್ಪಲಿ, ಸಕ್ಕರೆ, ಅರಸಿಣ, ಅಲ್ಲಾ, ಸಾಸಿವೆ, ಜೀರಿಗೆ ಮುಂತಾದ ಸಾಂಬಾರ ಪದಾರ್ಥಗಳನ್ನು ಹೆಚ್ಚಾಗಿ ಮಾರಾಟ ಮಾಡಲಾಗುತ್ತಿತ್ತು.[೨೫] ಹಾಗೆಯೇ ಉಪ್ಪು, ಅಡಕೆ, ಕಾಡು ಮತ್ತು ಭತ್ತ, ಕಾಣಿ ಮುಂತಾದವನ್ನು ಸಹ ಮಾರುತ್ತಿದ್ದರು.[೨೬] ಈ ಪ್ರದೇಶದ ಶಾಸನಗಳಲ್ಲಿ ಅಧಿಕ ಪ್ರಮಾಣದಲ್ಲಿ ಉಲ್ಲೇಖವಾಗಿರುವ ಮಾರಾಟ ವಸ್ತುವೆಂದರೆ ವೀಳ್ಯದೆಲೆ. ಇದಕ್ಕೆ ಅನೇಕ ಶಾಸನಗಳು ಆಧಾರವಾಗಿವೆ.[೨೭] ಭತ್ತದ ವ್ಯಾಪಾರ ಕೇಂದ್ರವೂ ಸಹ ಮಾಡಗಿರಿಯಲ್ಲಿದ್ದದ್ದು ಕಂಡುಬರುತ್ತದೆ.[೨೮] ಇಲ್ಲಿ ಭತ್ತವನ್ನು ಅಧಿಕವಾಗಿ ಬೆಳೆಯುತ್ತಿದ್ದರೆಂಬುದು ಅರ್ಥವಾಗುತ್ತದೆ.

ಸಿರವಾರದ ಶಾಸನದಲ್ಲಿ ಹಾನಿಯಾಗಲಿ, ಲಾಭವಾಗಲಿ ೫ರ ಲೆಕ್ಕದಲ್ಲಿ ನೀಡಬೇಕು. ಪಂಚಕ(೫) ವನ್ನು ನೀಡದೆ ಹೋದಲ್ಲಿ ದಸ(೧೦)ರ ದಂಡ ನೀಡಬೇಕು. ದಶವನ್ನು ನೀಡದಿದ್ದರೆ ವೀಸಕ(೨೦)ವನ್ನು ನೀಡಬೇಕು. ಇವು ನೀಡದೆ ಊರನ್ನು ಪ್ರವೇಶಿಸಿದರೆ ತೆರಿಗೆಯನ್ನು ದ್ವಿಗುಣ, ತ್ರಿಗುಣದಲ್ಲಿ ನೀಡಬೇಕು ಎಂದು ಉಲ್ಲೇಖಿಸಲಾಗಿದೆ.[೨೯] ಇದು ವರ್ತಕರ ಮೇಲೆ ಹಾಕುವ ತೆರಿಗೆ ಮಾತ್ರವೆನಿಸುತ್ತದೆ. ಇದನ್ನು ಗಮನಿಸಿದರೆ ವರ್ತಕರೂ ನಿಗದಿಪಡಿಸಿದ ತೆರಿಗೆಯನ್ನು- ವ್ಯಾಪಾರದಲ್ಲಿ ಲಾಭವಾಗಲಿ, ನಷ್ಟವಾಗಲಿ ಸಲ್ಲಿಸಲೇಬೇಕಿತ್ತು ಎಂಬುದು ಕಟ್ಟುನಿಟ್ಟಿನ ಕಟ್ಟಳೆ ಆಗಿದ್ದಿತ್ತೆಂದು ಸ್ಪಷ್ಟವಾಗುತ್ತದೆ.

ಈ ಪ್ರದೇಶದಲ್ಲಿನ ವರ್ತಕರ ಮೇಲೆ ಕೆಲವು ತೆರಿಗೆಗಳನ್ನು ವಿಧಿಸಲಾಗಿತ್ತು. ಗಾಣದೆರೆ, ಬೀರವಣ, ಮಾಲಿಗೆದೆರೆ, ವಡ್ಡರಾವುಳ, ಹನ್ನವಣ, ಹೆಜ್ಜುಂಕ, ಅಂಗಡಿದೆರೆ ಇನ್ನೂ ಮುಂತಾದವನ್ನು ವಸೂಲಿ ಮಾಡಲಾಗುತ್ತಿತ್ತೆಂದು ತಿಳಿದುಬರುತ್ತದೆ. ಅಲ್ಲದೆ ವರ್ತಕರು ವ್ಯಾಪಾರದ ವಸ್ತುಗಳನ್ನು ಎತ್ತಿನ ಬಂಡಿ, ಎತ್ತು, ಕತ್ತೆ, ಕುದುರೆ ಮುಂತಾದವು ಪ್ರಾಣಿಗಳ ಮೇಲೆ ಸಾಗಿಸಲಾಗುತ್ತಿತ್ತು. ಕೆಲವು ಸಲ ಸ್ವತಃ ಹೆಗಲ ಮೇಲೆ ಹೊತ್ತುಕೊಂಡು ಹೋಗಬೇಕಾಗಿತ್ತು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಂಚರಿಸುತ್ತಾ, ಅಲ್ಲಲ್ಲಿ ತಮ್ಮ ಸರಕುಗಳನ್ನು ಮಾರುತ್ತಿದ್ದರು. ಅವರೆಲ್ಲ ಸದಾ ಗುಂಪುಗಳಲ್ಲೆ ಸಂಚರಿಸುತ್ತಿದ್ದರು. ಆದರೂ ಅವರಿಗೆ ದರೋಡೆಕೋರರ, ಕಳ್ಳರ ಕಾಟ ತಪ್ಪುತ್ತಿರಲಿಲ್ಲ. ಕಾಡುಗಳಲ್ಲಿ ವ್ಯಾಪಾರಿಗಳ ಬಂಡಿಗಳಿಗೆ ಕಾದು ಕುಳಿತಿರುತ್ತಿದ್ದ ಕಳ್ಳರು ಅವರನ್ನು ಅಡ್ಡಗಟ್ಟಿ ದೋಚುತ್ತಿದ್ದರು. ಬಂಡಿಗಳಲ್ಲದೆ ಎತ್ತುಗಳನ್ನು ಕದ್ದೊಯ್ಯುತ್ತಿದ್ದರು. ಪ್ರಭುತ್ವದ ರಕ್ಷಣೆ ಇದ್ದರೂ ಕಳ್ಳರ ಹೊಡೆತ, ಇರಿತದಿಂದ ತಪ್ಪಿಸಿಕೊಂಡು ಜೀವ ಉಳಿಸಿಕೊಳ್ಳುವುದು ವ್ಯಾಪಾರಿಗಳಿಗೆ ತುಂಬಾ ಕಷ್ಟವಾಗಿ ಅವರ ಜೀವನ ಸದಾ ಅಪಾಯ ದಲ್ಲಿರುತ್ತಿತ್ತು. ಹಾಗಾಗಿ ಕೆಲವು ವರ್ತಕರು ಸೈನ್ಯವನ್ನು ಹೊಂದಿದ್ದರು. ಹಾಗೆಯೇ ಈ ಪ್ರದೇಶದಲ್ಲಿ

ಬಿಲ್ಲಮುನ್ನೂರ್ವರು[೨೬] ಎಂಬುವವರ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತದೆ. ಇವರದು ಬಿಲ್ಲುಗಾರರ ಸಂಘವೆಂದು ತಿಳಿದುಬರುತ್ತದೆ. ಅವರು ವರ್ತಕರಿಗೆ ಸೈನಿಕರಾಗಿ ಸೇವೆಸಲ್ಲಿಸಿರಬೇಕೆಂದು ಅನಿಸುತ್ತದೆ. ಆದರೆ ರಾಜಾರಾಮ ಹೆಗಡೆಯವರು ಅವರು ಬಿಲ್ಲುಗಾರರಲ್ಲ, ಸೈನಿಕರೂ ಅಲ್ಲ ಬದಲಾಗಿ ಬಿಲ್ಲ ಎಂಬುದು ಅವರ ಕುಲನಾಮವೆಂದು ಹೇಳಲು ಪ್ರಯತ್ನಿಸಿದ್ದಾರೆ. ಇವರು ಮಧ್ಯಕಾಲದ ಪಟ್ಟಣಗಳಲ್ಲಿ ಬಿಲ್ಲರು ಏಳಿಗೆ ಹೊಂದಿದ ಜಾತಿಯಾಗಿದ್ದರೆಂದು ತರ್ಕಿಸಿದ್ದಾರೆ.[೨೭] ರಾಜಾರಾಮ ಹೆಗಡೆಯವರ ಜಾತಿ ತರ್ಕವನ್ನು ಒಪ್ಪಬಹುದಾಗಿದೆ. ಏಕೆಂದರೆ ಈ ಪ್ರದೇಶದಲ್ಲಿ ಗಬ್ಬೂರಿನಲ್ಲಿರುವ ಶಾಸನದಲ್ಲಿ ಬಿಲ್ಲ ಮುನ್ನೂರ್ವರು ಬಾಡುಕಾಯಿ ಮಾರುವವರಾಗಿದ್ದರು. ತರಕಾರಿ ಕಾಯಿಪಲ್ಲೆ ಮಾರುವ ಇವರು ಪೂಜೆ–ಪುನಸ್ಕಾರಕ್ಕೆ ಅರವಾನ ಭತ್ತ ನೀಡುವ ಬಗ್ಗೆ ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಬಿಲ್ಲ ಮುನ್ನೂರ್ವರು ಸೈನಿಕ ಬಿಲ್ಲುಗಾರರಲ್ಲ, ಅವರು ವರ್ತಕರಾಗಿದ್ದರೆಂದು ತಿಳಿಯಬಹುದಾಗಿದೆ.

**೩.೪.೧.೪.೪. ವ್ಯಾಪಾರ ವಿಸ್ತೀರ್ಣತೆ**

ಈ ಪ್ರದೇಶ ವರ್ತಕರ ವ್ಯಾಪಾರದ ಮೂಲಕ ತನ್ನ ವಿಸ್ತೀರ್ಣತೆಯನ್ನು ದೇಶ–ವಿದೇಶಗಳವರೆಗೆ ವಿಸ್ತರಿಸಿಕೊಂಡಿತ್ತು. ಈ ಪ್ರದೇಶದಲ್ಲಿನ ಬೆಲೆಬಾಳುವ ಮತ್ತು ದಿನನಿತ್ಯದ ಉಪಯೋಗದ ವಸ್ತುಗಳು ಬೇರೆ ಬೇರೆ ಪ್ರದೇಶಗಳ ವರ್ತಕರನ್ನು ಆಕರ್ಷಿಸಿದ್ದವು. ಈ ಪ್ರದೇಶದ ವರ್ತಕರು ವ್ಯಾಪಾರದಲ್ಲಿ ಮತ್ತಷ್ಟು ಪ್ರೋತ್ಸಾಹ ಹೊಂದಿ ತಮ್ಮ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಂಡರು.

ಈ ಪ್ರದೇಶ ಸಿಂಧೂ ನಾಗರಿಕತೆಯ ಲೋಥಲ್ ಮತ್ತು ಇತರ ನಗರಗಳಿಗೆ ಹಟ್ಟಿ ಚಿನ್ನದ ಗಣಿಯಿಂದ ಚಿನ್ನವನ್ನು ಮತ್ತು ಮಸ್ಕಿ, ಪಿಕ್ಲಿಹಾಳಗಳಿಂದ ಬಿಳಿ ಮೇದಶಿಲೆಯ ಮಣಿಗಳ ತಯಾರಿಕೆಗೆ ಬೇಕಾದ ಕಚ್ಚಾವಸ್ತುಗಳನ್ನು ರಫ್ತು ಮಾಡುತ್ತಿತ್ತು. ಹಾಗೆಯೇ ಸಿಂಧೂ ಕಣಿವೆಯ ನಗರಗಳಲ್ಲಿ ಸಿದ್ಧಪಡಿಸುತ್ತಿದ್ದ ಮೇದಶಿಲೆಯ ಮಣಿಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಇದು ಸಿಂಧೂ ನಾಗರಿಕತೆಯೊಂದಿಗೆ ವ್ಯಾಪಾರ ಸಂಬಂಧಗಳನ್ನು ಸೂಚಿಸುತ್ತದೆ. ಅಲ್ಲದೆ ಈ ವ್ಯಾಪಾರ ಜಲಮಾರ್ಗದ ಮೂಲಕ 'ಹೊನ್ನಾವರ'ದಿಂದ ನಡೆಯುತ್ತಿದ್ದುದು ಕಂಡುಬರುತ್ತದೆ.[೨೮] ಹಾಗೆಯೇ ಮುಂದುವರೆದು ಕ್ರಿಪೂ.೧೦೦೦ದಿಂದ ಕ್ರಿಪೂ. ೨೦೦ರ ಕಾಲಾವಧಿಯಲ್ಲಿ ಈ ಪ್ರದೇಶ ತನ್ನ ಖನಿಜ ನಿಕ್ಷೇಪಗಳಿಂದ ಮತ್ತು ಇತರ ವಸ್ತುಗಳಿಂದಾಗಿ ಉತ್ತರಾಪಥದ ವರ್ತಕರನ್ನು ಆಕರ್ಷಿಸಿತು. ಹಾಗಾಗಿ ಉತ್ತರಾಪಥದ ವರ್ತಕರು ದಕ್ಷಿಣಾ ಪಥದತ್ತ ವ್ಯಾಪಾರ ಮಾಡಲು ಪ್ರವೇಶಿಸಿದರು. ಮುಂದೆ ಕ್ರಿಪೂ. ೬–ನೆಯ ಶತಮಾನದಲ್ಲಿ ಬೌದ್ಧಮತ ಹುಟ್ಟಿಕೊಂಡಿತು. ಅದು ತನ್ನ ಮತ ಪ್ರಚಾರಕ್ಕಾಗಿ ಭಿಕ್ಷುಗಳನ್ನು ದೇಶದ ನಾನಾ ಪ್ರದೇಶಗಳಿಗೆ ಕಳುಹಿಸುತ್ತಿತ್ತು. ಈ ಹಿನ್ನೆಲೆಯಲ್ಲಿ ಬೌದ್ಧ ಭಿಕ್ಷುಗಳು ಮತ ಪ್ರಚಾರಕ್ಕಾಗಿ ಕಾಡಿನೊಳಗೆ ವಾಸಿಸುತ್ತಿದ್ದ ಜನರ ಮನ ಪರಿವರ್ತನೆ ಮಾಡಲು ಅರಣ್ಯಗಳಲ್ಲಿ ಪ್ರಯಾಣಿಸುತ್ತಿದ್ದರು. ಇವರ ಮಾರ್ಗಗಳನ್ನು ವರ್ತಕರು ತಮ್ಮ ವ್ಯಾಪಾರ ಮಾರ್ಗಗಳನ್ನಾಗಿ ಮಾಡಿಕೊಂಡರು. ಆರಂಭದಲ್ಲಿ ವರ್ತಕರು ಬೌದ್ಧ ಭಿಕ್ಷುಗಳ ಜೊತೆಯಲ್ಲಿ ಓಡಾಡಿದರು. ನಂತರ ಬೌದ್ಧಮತವನ್ನು ವರ್ತಕರು ಸ್ವೀಕರಿಸಿದರು.[೨೯] ಆಗ ಅವರು ಬೌದ್ಧಮತದ ಭಾಗವಾಗಿ ಕಾಣಿಸಿಕೊಂಡರು. ಯಾಕೆ ವರ್ತಕರು ಬೌದ್ಧ ಮತವನ್ನು ಸ್ವೀಕರಿಸಿದರು? ಅವರ ಉದ್ದೇಶವೇನಾಗಿತ್ತು ಎಂಬುದು ಕುತೂಹಲಕ್ಕೆ ಎಡೆಮಾಡಿ ಕೊಡುತ್ತದೆ. ಈ ಅಂಶವನ್ನು ಗಮನಿಸಿದಾಗ ವರ್ತಕರು ಬೌದ್ಧ ಮತವನ್ನು ಸ್ವೀಕರಿಸುವುದು ಅನಿವಾರ್ಯವಾಗಿತ್ತು. ಕಾಡಿನಲ್ಲಿ ವ್ಯಾಪಾರ ಮಾರ್ಗಗಳಿದ್ದವು. ವರ್ತಕರಾಗಿ ಕಾಡಿನಲ್ಲಿ ಸಂಚರಿಸಿದರೆ ಕಳ್ಳಕಾಕರ ಭಯವಿತ್ತು. ಕಳ್ಳಕಾಕರಿಂದ ತಪ್ಪಿಸಿಕೊಳ್ಳಲು ಬೌದ್ಧಮತವನ್ನು ಸ್ವೀಕರಿಸಬೇಕಾಯಿತು.

ಇದು ಒಂದು ಕಡೆಯಾದರೆ ಮತ್ತೊಂದು ಧರ್ಮದ ಹೆಸರಿನಲ್ಲಿ ವ್ಯಾಪಾರ ನಡೆಸಿದರೆ ಸಮಸ್ಯೆಗಳು ತಲೆದೋರುವುದು ವಿರಳ ಎಂಬುದಾಗಿ ಭಾವಿಸಿರಬೇಕು. ಈ ವೇಳೆಗಾಗಲೇ ಬೌದ್ಧಮತ ಕಾಡಿನ ಜನರೊಂದಿಗೆ ಬೆರೆತು, ಕಾಡಿನಲ್ಲಿಯೇ ಭಿಕ್ಷುಗಳು ವಾಸಿಸಲು ಆರಂಭಿಸಿದರು. ಈ ಮತ ಅಂದು ಜನರ ಭಾಗವಾಗಿ ಪ್ರಚಾರ ಪಡೆದಿತ್ತು. ಈ ಮತವನ್ನು ಅನುಸರಿಸಿ ವ್ಯಾಪಾರ ಮಾಡುತ್ತಿದ್ದ ವರ್ತಕರು ತಮ್ಮ ಲಾಭದ ಹಿನ್ನೆಲೆಯಲ್ಲಿ ಬೌದ್ಧವಿಹಾರಗಳನ್ನು ನಿರ್ಮಿಸಿ ಕೊಡಲು ಆರಂಭಿಸಿದರು. ಹೀಗೆ ಬೌದ್ಧ ವಿಹಾರಗಳನ್ನು ನಿರ್ಮಿಸಿಕೊಡುವುದರ ಮೂಲಕ ವ್ಯಾಪಾರ ಕೇಂದ್ರಗಳನ್ನಾಗಿ ಮಾಡಿಕೊಂಡರು. ಈ ವರ್ತಕರು ತಮ್ಮ ನಿಜ ಸ್ವರೂಪವನ್ನು ಹೊರಗೆಡವದೆ ಮತಧರ್ಮದ ಹೆಸರಿನಲ್ಲಿ ವ್ಯಾಪಾರ ನಡೆಯುವಂತೆ ತಂತ್ರಗಾರಿಕೆಯನ್ನು ರೂಪಿಸಿರುವುದು ಕಂಡುಬರುತ್ತದೆ. ಇದು ಕಾಡಿನ ಜನರಿಂದ ಯಾವುದೇ ರೀತಿಯ ತೊಂದರೆಯಾಗದಂತೆ ವರ್ತಕರು ತಮಗೆ ತಾವು ರೂಪಿಸಿಕೊಂಡ ಮಾರ್ಗವಾಗಿದೆ. ಈ ತಂತ್ರದ ಹಿಂದೆ ಆರ್ಥಿಕವಾಗಿ ವ್ಯಾಪಾರ ಕ್ಷೇತ್ರದಲ್ಲಿ ಪ್ರಭಾವಿಯಾಗಿ ಗುರುತಿಸಿಕೊಳ್ಳಬೇಕಿತ್ತು. ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳಲು ಅನುಸರಿಸಿದ ಮಾರ್ಗವಾಗಿದೆ. ಇದು ಅವರ ಮಹತ್ವಾಕಾಂಕ್ಷೆಯ ಉದ್ದೇಶವಾಗಿತ್ತೆಂದು ತಿಳಿದುಬರುತ್ತದೆ. ಈ ರೀತಿಯಾಗಿ ವರ್ತಕರು ಗುಡ್ಡಗಾಡುಗಳಿಂದ ಕೂಡಿದ ದಕ್ಷಿಣಾಪಥವನ್ನು ಪ್ರವೇಶಿಸಿದರು. ಆ ಸಂದರ್ಭದಲ್ಲಿ ರಾಯಚೂರು ದೋ–ಅಬ್ ಪ್ರದೇಶಕ್ಕೂ ವ್ಯಾಪಾರಕ್ಕೆ ಬಂದಿರುವುದು ಇಲ್ಲಿನ ಮಸ್ಕಿ ಶಾಸನದಿಂದ ತಿಳಿದುಬರುತ್ತದೆ. ಇದು ಕ್ರಿಪೂ. ಮೂರನೆಯ ಶತಮಾನದ ವೇಳೆಗೆ ಬೌದ್ಧ ಕೇಂದ್ರವಾಗಿ ಮತ್ತು ವ್ಯಾಪಾರ ಕೇಂದ್ರವಾಗಿಯೂ ಗುರುತಿಸಿಕೊಂಡಿರುವುದಾಗಿ ತಿಳಿದುಬರುತ್ತದೆ. ಈ ಪ್ರದೇಶದ ಮಸ್ಕಿಯಲ್ಲಿ ಬುದ್ಧನ ಕಾಲದ ಕೆಲವು ಅವಶೇಷಗಳು ಕಂಡುಬಂದಿವೆ. ಅವುಗಳಲ್ಲಿ ಹರಳಿನಲ್ಲಿ ಕೆತ್ತಿದ ಬುದ್ಧನ ತಲೆಯ ಸೂಕ್ಷ್ಮ ಪ್ರತಿರೂಪ ಮುಖ್ಯವಾದದ್ದು. ಇದರ ಕಾಲ ಕ್ರಿಪೂ. ೩೦೦ರಿಂದ ಕ್ರಿಪೂ. ೨೦೦ ಎಂದು ತಿಳಿದುಬರುತ್ತದೆ.[೨೦] ಹಾಗಾಗಿ ಮಸ್ಕಿ ಬೌದ್ಧ ಕೇಂದ್ರವಾಗಿ ಗುರುತಿಸಿಕೊಂಡಿತ್ತು.

ವರ್ತಕರಲ್ಲಿ ಪ್ರಬಲವಾಗಿರುವ ಕೆಲವರು ಕ್ರಿಪೂ.೫ನೆಯ ಶತಮಾನದ ಕಾಲಕ್ಕೆ ತಮ್ಮ ಕಾವಲಿಗಾಗಿ ಮತ್ತು ರಕ್ಷಣೆಯ ದೃಷ್ಟಿಯಿಂದ ಕಾವಲು ಪಡೆಯನ್ನು ಹೊಂದಿದ್ದರೆಂಬುದಾಗಿ ತಿಳಿದುಬರುತ್ತದೆ.[೨೧] ಹಾಗಾದರೆ ಕಾವಲು ಪಡೆಯಲ್ಲಿರುವ ಜನರು ಎಲ್ಲಿಯವರು ಕಾಡಿನ ಜನರನ್ನೇ ಬಳಸಿಕೊಳ್ಳುತ್ತಿದ್ದರೇ, ಏಕೆ ಅವರನ್ನು ನೇಮಿಸಿಕೊಳ್ಳುತ್ತಿದ್ದರು ಎಂಬ ಪ್ರಶ್ನೆಗಳು ಎದುರಾಗುತ್ತವೆ. ಪ್ರಬಲರಾಗಿದ್ದ ಸಾರ್ಥವಾಹರಿಗೆ ಬೆಂಗಾವಲು ಪಡೆಯಾಗಿ ಸೇವೆ ಸಲ್ಲಿಸುವವರು ಆ ಕಾಡಿನಲ್ಲಿ ವಾಸಿಸುವ ಜನರೇ ಆಗಿರಬೇಕು. ಏಕೆಂದರೆ ಈ ಜನರು ಬೇಟೆಗಾರರಾಗಿದ್ದರು. ಮೇಲಾಗಿ ಬೇಟೆ ನಾಯಿಗಳನ್ನು ಹೊಂದಿ, ಬಿಲ್ಲು ಬಾಣಗಳನ್ನು ಹೊಂದಿದ್ದರು. ಹಾಗಾಗಿ ಅವರನ್ನು ಕಾವಲು ಪಡೆಗೆ ಸೇರಿಸಿಕೊಂಡಿರಬೇಕು. ಅಲ್ಲದೆ ಅವರನ್ನೇ ನೇಮಿಸಿಕೊಳ್ಳಲು ಅವರಿಗೆ ಕಾಡಿನ ಸಂಪೂರ್ಣ ಪರಿಚಯವಿರುತ್ತಿತ್ತು. ಕೆಲವು ಆಯಕಟ್ಟಿನ ಸ್ಥಳಗಳ ಬಗ್ಗೆಯೂ ಅವರಿಗೆ ತಿಳಿದಿರುತ್ತಿತ್ತು. ಹಾಗಾಗಿ ಅವರನ್ನೇ ನೇಮಕ ಮಾಡಿಕೊಂಡಿದ್ದರೆನಿಸುತ್ತದೆ. ಮುಗ್ಧರಾಗಿದ್ದ ಜನರಿಂದ ರಕ್ಷಣೆ ಪಡೆದು, ಪ್ರಮುಖ ವ್ಯಾಪಾರ ಮಾರ್ಗಗಳ ಬಗ್ಗೆ ಮಾಹಿತಿಯನ್ನು ತಿಳಿದುಕೊಂಡು ಪ್ರಬಲರಾಗಿರುವುದು ಜನಸಾಮಾನ್ಯರ ಕೊಡುಗೆಯೇ ಆಗಿದೆ. ಇದರಿಂದ ಸರಾಗವಾಗಿ ಪ್ರಯಾಗ, ಪಾಟಲಿಪುತ್ರ, ಸೋನ್‌ಕಣಿವೆ, ತಕ್ಷಶಿಲೆ, ಮಧ್ಯ ಪ್ರದೇಶ ಇನ್ನೂ ಮುಂತಾದ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧ ವಿಸ್ತರಿಸಿಕೊಂಡಿತು.

ಕ್ರಿ.ಪೂ. ೫–೪ನೆಯ ಶತಮಾನದ ವೇಳೆಗೆ ಪಂಚಮಾರ್ಕ್ ಮಾಡಿದ ನಾಣ್ಯಗಳ ಬಳಕೆ ಕಂಡುಬರುತ್ತದೆ. ರಾಯಚೂರಿನ ನಗರದ ರೈಲ್ವೆ ನಿಲ್ದಾಣದ ಬಳಿ ನೆಲ ಅಗೆಯುವಾಗ ಈ ಬಗೆಯ ಪಂಚ್‌ಮಾರ್ಕ್ ಮಾಡಿದ ೬೩ ಬೆಳ್ಳಿ ನಾಣ್ಯಗಳು ಸಿಕ್ಕಿವೆ. ಇವು ಕ್ರಿ.ಪೂ. ಮೂರನೆಯ ಶತಮಾನಕ್ಕಿಂತ ಮುಂಚಿನವು ಎನ್ನಲಾಗಿದೆ. ಅಲ್ಲದೆ ಮಸ್ಕಿಯಲ್ಲಿ ಉತ್ಖನನ ಸಂದರ್ಭದಲ್ಲಿ ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ದೊರೆತಿವೆ. ಈ ನಾಣ್ಯಗಳು ಮೌರ್ಯರ ಕಾಲಕ್ಕೂ ಪೂರ್ವದವು. ಮಸ್ಕಿಯಲ್ಲಿ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಜನಗಳ ವಸತಿ ಇದ್ದುದರಿಂದ ಆ ಕಾಲದ ಕೂಲಿ ಕಾರ್ಮಿಕರಿಗೆ ನೀಡಿದ ಹಣವಾಗಿದೆಯೆಂದು ಪಿ.ಎಲ್.ಗುಪ್ತ ಅಭಿಪ್ರಾಯ ಪಟ್ಟಿರುವುದು ಕಂಡುಬರುತ್ತದೆ.[೨೮೨] ಈ ಅಂಶವನ್ನು ಗಮನಿಸಿದಾಗ ವರ್ತಕರು ನಾಣ್ಯಗಳನ್ನು ಟಂಕಿಸುವಷ್ಟು ಮುಂದುವರೆದಿರುವುದು ಸ್ಪಷ್ಟವಾಗುತ್ತದೆ. ಇದು ಈ ಪ್ರದೇಶದ ವ್ಯಾಪಾರದ ಸ್ಥಿತಿಯನ್ನು ಸೂಚಿಸುತ್ತದೆ. ಅಲ್ಲದೆ ವರ್ತಕರ ಪ್ರಭಾವ ಈ ಪ್ರದೇಶದಲ್ಲಿ ಗಾಢವಾಗಿತ್ತು. ಆದರೆ ನಾಣ್ಯಗಳನ್ನು ಟಂಕಿಸುವ ಟಂಕಸಾಲೆಗಳ ಕುರುಹುಗಳೂ ಅಷ್ಟಾಗಿ ದೊರೆಯದಿರುವುದು, ಉತ್ತರದಲ್ಲಿ ಟಂಕಿಸಿದ ನಾಣ್ಯಗಳು ಈ ಪ್ರದೇಶದಲ್ಲಿ ಚಲಾವಣೆ ಯಲ್ಲಿದ್ದಿದ್ದನ್ನು ಸೂಚಿಸುತ್ತದೆ. ಇದು ರಾಯಚೂರು ಉತ್ತರಾಪಥದ ವ್ಯಾಪಾರ ಸಂಬಂಧವನ್ನು ಹೊಂದಿರುವುದು  ಕಾಣುತ್ತದೆ. ಅಲ್ಲದೆ ವ್ಯಾಪಾರಿಗಳು ಮಸ್ಕಿಯಲ್ಲಿನ ಜನರಿಗೆ ಕೂಲಿಯನ್ನು ಕೊಟ್ಟ ಹಣ ವ್ಯಾಪಾರಿಗಳ ಸೇವೆಯನ್ನು ಅಥವಾ ಕೆಲಸವನ್ನು ಮಾಡಿದ ಸೂಚನೆಯಾಗಿದೆ. ಮಾಡಿದ ಕೆಲಸಕ್ಕೆ ಕೂಲಿಯನ್ನು ಕೊಡುವುದನ್ನು ಗಮನಿಸಿದರೆ ವರ್ತಕರ ಸರಕುಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಿರಬೇಕು. ಅದಕ್ಕೆ ಪ್ರತಿಯಾಗಿ ಕೂಲಿ ಹಣ ಕೊಟ್ಟಿರಬೇಕು. ಆದರೆ ಸರಕುಗಳನ್ನು ಸಾಗಿಸಿದವರು ಇಲ್ಲಿನ ಜನಸಾಮಾನ್ಯರಾಗಿದ್ದಾರೆ. ಹೀಗೆ ವರ್ತಕರ ಪ್ರತಿಯೊಂದು ಕೆಲಸದಲ್ಲಿಯೂ ಜನಸಾಮಾನ್ಯರ ಪಾತ್ರವಿರುವುದನ್ನು ಗಮನಿಸಬಹುದಾಗಿದೆ.

ಸಿಂಧೂ ನಾಗರಿಕತೆಯ ಕಾಲದಿಂದ ಮೌರ್ಯರ ಕಾಲದವರೆಗೂ ವರ್ತಕರಿಗೆ ಯಾವುದೇ ನೀತಿ, ನಿಯಮ, ಕಟ್ಟಳೆಗಳು ಇರಲಿಲ್ಲ, ಅಡೆತಡೆಗಳೂ ಇರಲಿಲ್ಲ. ಹಾಗಾಗಿ ಈ ಪ್ರದೇಶದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದ ವರ್ತಕರು ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿದ್ದರು. ಆದರೆ ಮೌರ್ಯರ ಕಾಲಕ್ಕೆ ರಾಯಚೂರು ದೋ–ಅಬ್ ಪ್ರದೇಶದಲ್ಲಿ ವ್ಯಾಪಾರ ಹೆಚ್ಚಿನ ಪ್ರಮಾಣದಲ್ಲಿ ವ್ಯಾಪಿಸಿತಾದರೂ ವ್ಯಾಪಾರಿಗಳಿಗೆ ತೊಂದರೆಯಾಯಿತು. ಪ್ರಭುತ್ವ ವರ್ತಕರ ಮೇಲೆ ಹತೋಟಿಯನ್ನು ಸಾಧಿಸತೊಡಗಿತು. ಇದರಿಂದ ವರ್ತಕರ ಸ್ವಾಯತ್ತತೆ ಕ್ಷೀಣಿಸಿತು. ಆದರೂ ವರ್ತಕರು ಪ್ರಭುತ್ವದ ನಿಯಮಗಳಿಗನುಗುಣವಾಗಿ ಮುಂದುವರೆದರು. ಮೌರ್ಯರು ಆದಾಯವನ್ನು ತರುವ ಕೈಗಾರಿಕೆಗಳಾದ ವ್ಯಾಪಾರ, ವಾಣಿಜ್ಯ, ನೇಕಾರಿಕೆ, ಗಣಿಗಾರಿಕೆ ಮುಂತಾದ ಕೈಗಾರಿಕೆಗಳ ಮೇಲೆ ಹಿಡಿತವನ್ನು ಸಾಧಿಸಿದ್ದರು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ಹಟ್ಟಿ ಚಿನ್ನದ ಕೈಗಾರಿಕೆ ಮತ್ತು ಅದರ ಸುತ್ತಮುತ್ತಲಿನ ಗಣಿಗಳನ್ನು ಗುರುತಿಸಿಕೊಂಡು ಅದರ ಮೇಲೆ ಹತೋಟಿಯನ್ನು ಸಾಧಿಸಲು ಅಶೋಕನು ಮಸ್ಕಿಯಲ್ಲಿ ಉದ್ದೇಶ ಪೂರ್ವಕವಾಗಿ ಶಾಸನವನ್ನು ಹೊರಡಿಸಿದನು.[೨೮೩] ಇದು ಅವನ ವಸಾಹತುಶಾಹಿ ಧೋರಣೆಯನ್ನು ಸ್ಪಷ್ಟಪಡಿಸುತ್ತದೆ. ಹಾಗೆಯೇ ಕರ್ನಾಟಕದಲ್ಲಿ ಕಂಡುಬರುವ ಅಶೋಕನ ಶಾಸನಗಳು ಚಿನ್ನದ ನಿಕ್ಷೇಪ ಹೊಂದಿರುವ ಪ್ರದೇಶಗಳಲ್ಲಿವೆ. ಇಲ್ಲಿ ಮುಖ್ಯವಾಗಿ ಗಣಿಗಾರಿಕೆಯಲ್ಲಿ ಕೆಲಸ ಮಾಡುವವರು

ಯಾರಾಗಿದ್ದರು, ಅವರು ಸ್ಥಳೀಯರೇ ಅಥವಾ ಯುದ್ಧದಲ್ಲಿ ಸೋತ ಸೈನಿಕ ಗುಲಾಮರೇ ಎಂಬ ಪ್ರಶ್ನೆ ಎದುರಾಗುತ್ತದೆ. ಕ್ರಿಪೂ. ೩ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಮಸ್ಕಿಯಲ್ಲಿ ಕಂಡುಬಂದಿರುವ ನಾಣ್ಯಗಳನ್ನು ಇಲ್ಲಿಯ ಜನರಿಗೆ ನೀಡಿದ ಕೂಲಿಯ ಹಣವೆಂದು ಅಭಿಪ್ರಾಯ ಪಡಲಾಗಿದೆ. ಈ ಹಿನ್ನೆಲೆಯಲ್ಲಿ ಮೌರ್ಯ ಪೂರ್ವದಲ್ಲಿ ಈ ಪ್ರದೇಶದಲ್ಲಿ ಕೂಲಿ ಮಾಡುವ ಜನರಿದ್ದರೆಂಬ ಅಂಶವು ಕಂಡುಬಂದಿದೆ. ಈ ಆಧಾರದ ಮೇಲೆ ಈ ಗಣಿಗಾರಿಕೆಯಲ್ಲಿ ಇಲ್ಲಿನ ಸ್ಥಳೀಯ ಕೂಲಿಕಾರ್ಮಿಕರೇ ಕೆಲಸ ಮಾಡಿರಬೇಕೆಂದು ಎನಿಸುತ್ತದೆ. ಕ್ರಿಪೂ. ೮ನೆಯ ಶತಮಾನಕ್ಕಿಂತಲೂ ಹಿಂದಿನಿಂದಲೇ ಹಟ್ಟಿ ಚಿನ್ನದ ಗಣಿಗಾರಿಕೆ ನಡೆದಿರುವ ಬಗ್ಗೆ ಎಫ್.ಆರ್. ಅಲ್ಚಿನ್ ಅವರು ಸುಳಿವನ್ನು ನೀಡುತ್ತಾರೆ.[೨೪೪] ಇದಕ್ಕೂ ಹಿಂದೆ ಸಿಂಧೂ ನಾಗರಿಕತೆಯ ಸಂದರ್ಭದಲ್ಲಿ ಗಣಿಗಾರಿಕೆ ನಡೆದಿತ್ತು. ಈ ಅಂಶವನ್ನು ಗಮನಿಸಿದಾಗ ರಾಜಪ್ರಭುತ್ವ ವ್ಯವಸ್ಥೆ ಇಲ್ಲದ ಕಾಲದಲ್ಲಿ ಇಲ್ಲಿ ಗಣಿಗಾರಿಕೆ ನಡೆದಿತ್ತು. ಅಲ್ಲಿ ಕೆಲಸ ಮಾಡಿದವರು ಹೆಚ್ಚು ಕಡಿಮೆ ಸ್ಥಳೀಯರೇ ಆಗಿದ್ದರು. ಇಲ್ಲಿನ ಜನರಿಗೆ ಗಣಿಗಾರಿಕೆಯ ತಂತ್ರಜ್ಞಾನ ತಿಳಿದಿತ್ತು. ಇದನ್ನು ಸಿಂಧೂ ನಾಗರಿಕತೆಯ ಕಾಲದಿಂದಲೂ ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಹಟ್ಟಿ ಚಿನ್ನದ ಗಣಿಯಲ್ಲಿ ಈ ಪ್ರದೇಶದ ಸ್ಥಳೀಯರೇ ಕೆಲಸ ಮಾಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಅಶೋಕ ತನ್ನ ಯುದ್ಧ ಖೈದಿಗಳಾಗಿದ್ದ ಸೈನಿಕ ಗುಲಾಮರನ್ನು ಹಟ್ಟಿ ಚಿನ್ನದ ಗಣಿಗಾರಿಕೆಯಲ್ಲಿ ಕೆಲಸ ಮಾಡಲು ತೊಡಗಿಸಿದ್ದನೇ ಎನ್ನುವ ಪ್ರಶ್ನೆ ಕೂಡ ಎದುರಾಗುತ್ತದೆ. ಅಶೋಕನು ಸೈನಿಕ ಗುಲಾಮರನ್ನು ಗಂಗಾಬಯಲು ಪ್ರದೇಶದಲ್ಲಿ ಕಾಡನ್ನು ಕಡಿಸಿ ಕೃಷಿ ಭೂಮಿಯನ್ನು ಸಿದ್ಧಪಡಿಸಲು ಬಳಸಿಕೊಂಡಿದ್ದನು. ಹಾಗೆಯೇ ಇಲ್ಲಿಯೂ ಸೈನಿಕ ಗುಲಾಮರನ್ನು ಗಣಿಗಾರಿಕೆಯಲ್ಲಿ ಕೆಲಸ ಮಾಡಲು ತೊಡಗಿಸಿರಬೇಕು. ಏಕೆಂದರೆ ಲೋಹೋದ್ಯಮದಲ್ಲಿ ಸಿದ್ಧಿ ಪಡೆದ ದೊಡ್ಡ ಸಮುದಾಯವೊಂದನ್ನು ಸುಲಭದಲ್ಲಿ ತನ್ನ ಹಿಡಿತದಲ್ಲಿರಿಸಿಕೊಳ್ಳುವುದು ಮತ್ತು ಆರ್ಥಿಕ ಲಾಭ ಪಡೆದುಕೊಳ್ಳುವುದು ಅಶೋಕನಿಗಿರುವ ಬಹುದೊಡ್ಡ ಆಸಕ್ತಿಯಾಗಿತ್ತು.[೨೪೫] ಇದು ಅವನ ಆರ್ಥಿಕ ದೃಷ್ಟಿಕೋನವನ್ನು ವ್ಯಕ್ತಪಡಿಸುತ್ತದೆ. ಹಾಗಾಗಿ ಮಸ್ಕಿಯನ್ನು ಸುವರ್ಣಗಿರಿ ಎಂದು ಕರೆದಿರಬೇಕು. ಸೈನಿಕ ಗುಲಾಮರನ್ನು ಮತ್ತು ಸ್ಥಳೀಯ ಕುಶಲಕರ್ಮಿಗಳನ್ನು ಗಣಿಗಾರಿಕೆಗೆ ಬಳಸಿಕೊಂಡನೆಂದು ತಿಳಿದುಕೊಳ್ಳಬಹುದಾಗಿದೆ. ಇದು ವರ್ತಕ ಮತ್ತು ಪ್ರಭುತ್ವಕ್ಕೆ ಜನಸಾಮಾನ್ಯರು ಸಲ್ಲಿಸಿದ ಬಹುದೊಡ್ಡ ಕೊಡುಗೆಯಾಗಿತ್ತು ಎಂಬುದರಲ್ಲಿ ಎರಡು ಮಾತಿಲ್ಲ.

ಕ್ರಿ.ಶ. ೧-೨ನೆಯ ಶತಮಾನದಲ್ಲಿ ಈ ಪ್ರದೇಶ ರೋಮ್‌ನೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಇದಕ್ಕೆ ಲಿಂಗಸೂಗೂರಿನಲ್ಲಿ ದೊರೆತ ಚಿನ್ನದ ನಾಣ್ಯ ಸಾಕ್ಷಿಯಾಗಿದೆ.[೨೪೬] ಈ ಪ್ರದೇಶದಲ್ಲಿ ದೊರೆತಂತೆ ದಕ್ಷಿಣ ಭಾರತದಲ್ಲಿ ಸುಮಾರು ೧೫೦ ರೋಮನ್ ನಾಣ್ಯ ನಿಧಿಗಳು ದೊರೆತಿವೆ. ಈ ಸಂದರ್ಭದಲ್ಲಿ ದಕ್ಷಿಣ ಭಾರತ ಮತ್ತು ರೋಮ್‌ನ ನಡುವೆ ವ್ಯಾಪಾರ ಸಂಬಂಧ ಹೆಚ್ಚಿನ ಪ್ರಮಾಣದಲ್ಲಿ ನಡೆಯಿತು. ಸಾಮಾನ್ಯ ಜನರು ಬಳಸುತ್ತಿದ್ದ ದಿನಬಳಕೆಯ ವಸ್ತುಗಳದ್ದಲ್ಲ, ಬದಲಿಗೆ ಭೋಗ ವಸ್ತುಗಳದ್ದಾಗಿತ್ತು. ಕ್ರಿ.ಶ. ೧೫೦ರಲ್ಲಿ ಗ್ರೀಕ್ ಪ್ರವಾಸಿ ಟಾಲೆಮಿ ಕರ್ನಾಟಕದ ಒಳನಾಡಿನ ಸ್ಥಳಗಳನ್ನು ಗುರುತಿಸಿದ್ದು, ಈ ಪ್ರದೇಶದ ಮುದಗಲ್ ಅನ್ನೂ ಉಲ್ಲೇಖಿಸಿದ್ದಾನೆ.[೨೪೭] ಈಗ ಮುದಗಲ್ ಎಂದಿನಂತೆ ಪಟ್ಟಣವಾಗಿಯೇ ಇದೆ.

ರೋಮ್‌ನೊಂದಿಗೆ ದಕ್ಷಿಣ ಭಾರತದ ವ್ಯಾಪಾರ ಸಂಬಂಧ ಕ್ರಿ.ಶ. ೩ನೆಯ ಶತಮಾನದ ನಂತರ ನಿಂತು ಹೋಯಿತು. ಹಾಗೆಯೇ ಈ ಪ್ರದೇಶ ಆರ್ಥಿಕ ಚಟುವಟಿಕೆ ಮತ್ತು ವ್ಯಾಪಾರದ ಚಟುವಟಿಕೆಗಳು ಹೇಗಿದ್ದವು ಎಂಬುದು ಅಸ್ಪಷ್ಟವಾಗಿದೆ. ಕ್ರಿ.ಶ.೩-೧೦ನೆಯ ಶತಮಾನದವರೆಗೆ ಈ ಪ್ರದೇಶದ ವ್ಯಾಪಾರವನ್ನು ಕುರಿತು ತಿಳಿಸುವ ಕುರುಹುಗಳ ಅಭಾವವಿದೆ. ಹಾಗೆಂದು ವ್ಯಾಪಾರದ ಚಟುವಟಿಕೆಗಳು ನಡೆದಿಲ್ಲವೆಂದು ಹೇಳಲಾಗದು. ಕ್ರಿ.ಶ.೭-೮ನೆಯ ಶತಮಾನದಲ್ಲಿ ಕಂಡುಬರುವ ಅಯ್ಯವೊಳೆ ಐನೂರ್ವರು ಎಂಬ ವರ್ತಕರು ಈ ಪ್ರದೇಶದಲ್ಲಿ ವ್ಯಾಪಾರದ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಿರಬೇಕೆಂದು ಊಹಿಸುವ ಸಾಧ್ಯತೆಯಿದೆ. ಪಲ್ಲವರು ಮತ್ತು ಬಾದಾಮಿ ಚಾಲುಕ್ಯರ ನಡುವಿನ ಘರ್ಷಣೆಗೆ ರಾಯಚೂರು ದೋ-ಅಬ್ ಪ್ರದೇಶ ಕಾರಣವಾಗಿತ್ತು. ಈ ಹಿನ್ನೆಲೆಯಲ್ಲಿ 'ಅಯ್ಯವೊಳೆ ಐನೂರ್ವರು' ಈ ಪ್ರದೇಶದಲ್ಲಿ ಕ್ರಿ.ಶ. ೭-೮ನೆಯ ಶತಮಾನದಿಂದ ವ್ಯಾಪಾರದಲ್ಲಿ ತೊಡಗಿರಬೇಕು. ಆದರೆ ವರ್ತಕರು ಶಾಸನಾಧಾರಿತ ಉಲ್ಲೇಖ ಕಂಡುಬರುವುದು ಮಾತ್ರ ಕ್ರಿ.ಶ. ೧೦೧೮ರ ಮಸ್ಕಿ(೩೪) ಶಾಸನದ ಮೂಲಕ ಮೊದಲಿಗೆ ಕಾಣಿಸಿಕೊಳ್ಳುತ್ತದೆ. ಹೀಗೆ ವ್ಯಾಪಾರವು ದೇಶ, ವಿದೇಶಗಳಿಗೆ ವ್ಯಾಪಿಸಿಕೊಂಡಿತ್ತು.

ಕ್ರಿ.ಶ. ೧೦೧೮ರ ನಂತರ ಈ ಪ್ರದೇಶದಲ್ಲಿ ಕಂಡುಬರುವ ವರ್ತಕರು ದೇಶ, ವಿದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರೂ ಕೃಷಿ ಉತ್ಪನ್ನಗಳ ಹೆಚ್ಚಳದಿಂದಾಗಿ ಆಂತರಿಕ ವ್ಯಾಪಾರಗಳು ಅಧಿಕಗೊಂಡವು. ಸ್ಥಳೀಯವಾಗಿಯೇ ವಿವಿಧ ವರ್ತಕರು ವ್ಯಾಪಾರವನ್ನು ಸಂತೆ, ಅಂಗಡಿ, ಪೇಟೆ, ಪಟ್ಟಣಗಳ ಮೂಲಕ ನಡೆಸುತ್ತಿರುವುದು ಮುಕ್ಕುಂದಿ(೧೦) ಕ್ರಿ.ಶ.೦೧೫೮೫ರ ಶಾಸನದಿಂದ ತಿಳಿದುಬರುತ್ತದೆ.[೨೨] ಇದಕ್ಕೆ ಪೂರಕವಾಗಿ ಕ್ರಿ.ಶ. ೧೫೨೦ರಲ್ಲಿ ರಾಯಚೂರು ಕೋಟೆ ಮುತ್ತಿಗೆಯ ಸಂದರ್ಭದಲ್ಲಿ ವ್ಯಾಪಾರವನ್ನು ಕುರಿತು ನ್ಯೂನಿಜ್‌ನ ಕೆಲವು ಮಾತುಗಳು ಹೀಗಿವೆ. "ದಂಡು ಬೀಡುಬಿಟ್ಟಿದ್ದ ಪಾಳೆಯವನ್ನು ಬೀದಿಗಳಾಗಿ ವಿಂಗಡಿಸಿದ್ದರು. ಪ್ರತಿಯೊಬ್ಬ ದಳವಾಯಿಯ ತಂಡಕ್ಕೂ ಬೇರೆ ಬೇರೆ ಅಂಗಡಿಗಳಿದ್ದುವು. ಇಲ್ಲಿ ಕುರಿ, ಮೇಕೆ, ಹಂದಿ, ಕೋಳಿ, ಮೊಲ ಮತ್ತು ಪಕ್ಷಿಗಳ ಮಾಂಸವನ್ನು ಹೇರಳವಾಗಿ ಮಾರುತ್ತಿದ್ದರು. ಯಾರಿಗಾದರೂ ತಾವು ವಿಜಯನಗರದಲ್ಲಿರುವಂತೆ ಭಾಸವಾಗುತ್ತಿತ್ತು. ಅಕ್ಕಿ ಮತ್ತು ಇತರ ದವಸ ಧಾನ್ಯ ಯಥೇಚ್ಛವಾಗಿ ಸಿಗುತ್ತಿದ್ದವು. ಚಿನ್ನದ ಒಡವೆಗಳನ್ನೂ, ವಜ್ರ, ವೈಢೂರ್ಯ, ಮುತ್ತು, ಮಾಣಿಕ್ಯಗಳನ್ನೂ ಮಾರುವ ಅಂಗಡಿಗಳೇ ಬೇರೆ ಇದ್ದುವು. ಹತ್ತಿಯ ಬಟ್ಟೆಗಳನ್ನು ಮಾರುವ ವರ್ತಕರು ಅಸಂಖ್ಯಾತರಾಗಿದ್ದರು" ಎಂದು ತಿಳಿದುಬರುತ್ತದೆ(ನಾಗೇಗೌಡ ೨೦೦೬: ೩೬೮-೩೭೯). ನ್ಯೂನಿಜ್‌ನ ಈ ಮಾತುಗಳು ವರ್ತಕರು ಎಷ್ಟು ಪ್ರಭಾವಿಗಳಾಗಿದ್ದರು ಎಂಬುದನ್ನು ತಿಳಿಸುತ್ತದೆ. ಅಲ್ಲದೆ ಮಧ್ಯಕಾಲೀನ ಸಂದರ್ಭದಲ್ಲಿ ವ್ಯಾಪಾರದ ಚಟುವಟಿಕೆಗಳು ನಡೆದಿದ್ದವೆಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ಮುಂದುವರೆದು ಟೊಮ್ ಪೀರೆಸ್ ಎಂಬ ಪ್ರವಾಸಿ ತನ್ನ ಪ್ರವಾಸ ವರದಿಯಲ್ಲಿ ಡೆಕ್ಕನ್ ರಾಜ್ಯ ಕುರಿತು ಈ ರೀತಿ ವಿವರಣೆಯನ್ನು ನೀಡುತ್ತಾನೆ. ಈಗ ನಾನು ಮಹತ್ವವೂ ಯುದ್ಧ ಪ್ರಿಯವೂ ಆದ ಡೆಕ್ಕನ್ ರಾಜ್ಯದ ವರ್ಣನೆ ಮಾಡುತ್ತೇನೆ. ಈ ರಾಜ್ಯದಲ್ಲಿ ದವಸಧಾನ್ಯ ಸಮೃದ್ಧಿಯಾಗಿ ಬೆಳೆಯುತ್ತವೆ. ಭೂಮಿಯನ್ನು ಚೆನ್ನಾಗಿ ಕೃಷಿ ಮಾಡುತ್ತಾರೆ. ಕ್ಯಾಂಬೆ ರಾಜ್ಯಕ್ಕಿಂತ ಈ ರಾಜ್ಯ ದೊಡ್ಡದು. ಇಲ್ಲಿಯ ಜನ ಬಹುಶೂರರು. 'ಕನರಾ'(ಕನ್ನಡ) ನಾಡಿನ ಜನರಂತೆ ಇಲ್ಲಿಯ ಸೇವಕರು ಬಹು ಕಷ್ಟಪಟ್ಟು ದುಡಿಯುವರು. ಈ ರಾಜ್ಯದಲ್ಲಿ ಬಿಳಿಯ ಜನ

ಅನೇಕರಿದ್ದಾರೆ. ಈ ರಾಜ್ಯವನ್ನು ರೂಮೆಗಳು, ತುರುಕರು ಹಾಗೂ ಪರ್ಶಿಯನರುಗಳು ಸುಮಾರು ೨೫೦ ವರ್ಷಗಳ ಹಿಂದೆ ವಿಧರ್ಮಿಗಳಿಂದ ಗೆದ್ದುಕೊಂಡರು. ಕ್ಯಾಂಬೆ ರಾಜ್ಯದಲ್ಲಿರುವಂತೆ ಇಲ್ಲಿಯೂ ಒಳನಾಡಿನಲ್ಲಿ ಅನೇಕ ನಗರಗಳೂ ಸಮುದ್ರ ತೀರದಲ್ಲಿ ಬಂದರುಗಳೂ ಇವೆ. ಡೆಕ್ಕನ್ನಿನಲ್ಲಿ ೨೦ ಪಟ್ಟಣಗಳಿವೆ. ಇವುಗಳಲ್ಲಿ ಜನಭರಿತವಾದವೆಂದರೆ; ಬೀದರ, ಬಿಜಾಪುರ, ಸೊಲ್ಲಾಪುರ, ರಾಯಚೂರು, ಸಗರ, ಕಲ್ಬುರ್ಗಿ ಮುಂತಾದವುಗಳಾಗಿವೆ(ನಾಗೇಗೌಡ-೪ ೨೦೦೬:೪೧). ಇವನ ವರದಿ ಈ ಪ್ರದೇಶದ ಹೆಚ್ಚುವರಿ ಉತ್ಪಾದನೆಯನ್ನು ಉಲ್ಲೇಖಿಸುತ್ತದೆ. ರಾಯಚೂರು ಜನಭರಿತ ಪ್ರದೇಶವಾಗಿ ವ್ಯಾಪಾರಿ ಕೇಂದ್ರವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ನಿಜಾಮರ ಕಾಲಕ್ಕೆ ಬಂದರೆ ವ್ಯಾಪಾರ-ವಹಿವಾಟು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿತ್ತು. ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ರಾಯಚೂರಿನಲ್ಲಿ ಗಂಜನ್ನು ನಿರ್ಮಿಸಿದನು. ಹೈದರಾಬಾದ್ ನಿಜಾಮ ಹೈದರಾಬಾದ್ ಕೃಷಿ ಉತ್ಪನ್ನ ಮಾರುಕಟ್ಟೆ ಕಾಯ್ದೆ ೧೯೨೮ರ ಅನುಸಾರ ೧೮೦೨-೧೯೩೪ನೆಯ ಇಸ್ವಿಯಲ್ಲಿ ರಾಯಚೂರಿನಲ್ಲಿದ್ದ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಆಹಾರ ಧಾನ್ಯ, ಎಣ್ಣೆಬೀಜ ಹಾಗೂ ಹತ್ತಿಯ ಮಾರಾಟ ನಿಯಂತ್ರಣವನ್ನು ಕ್ರಮಬದ್ಧಗೊಳಿಸಿದನು(ವಾರ್ಷಿಕವರದಿ ೨೦೦೮-೦೯:೧). ಇದಕ್ಕೂ ಮುಂಚೆ ಈ ಮಾರುಕಟ್ಟೆ ಕಾರ್ಯನಿರ್ವಹಿಸುತ್ತಿತ್ತಾದರೂ ಯಾವುದೇ ಕಾಯ್ದೆ ಕಟ್ಟಳೆಗಳಿಗೆ ಒಳಗಾಗಿರಲಿಲ್ಲವೆನಿಸುತ್ತದೆ. ಈ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ರಾಜೇಂದ್ರಗಂಜ್ ಎಂದು ಕರೆಯುತ್ತಾರೆ. ಈ ಗಂಜ್‌ನ ಮೂಲಕ ಈ ಪ್ರದೇಶದಲ್ಲಿ ಬೆಳೆದ ವಸ್ತುಗಳನ್ನು ಖರೀದಿಸಲಾಗುತ್ತಿತ್ತು. ಈ ಗಂಜ್‌ನಲ್ಲಿ ತೊಡಗಿಕೊಂಡಿರುವ ದಲ್ಲಾಳಿಗಳೆಲ್ಲರೂ ಮೇಲ್ವರ್ಗಕ್ಕೆ ಸೇರಿದವರಾಗಿದ್ದಾರೆ. ಹೀಗೆ ಹಂತ ಹಂತವಾಗಿ ವ್ಯಾಪಾರವೂ ಪರಿಸ್ಥಿತಿಗನುಗುಣವಾಗಿ ವಿಸ್ತರಿಸಿಕೊಳ್ಳುತ್ತಾ ಬಂದಿತು. ಈ ಸಂದರ್ಭದಲ್ಲಿ ವರ್ತಕರು ದಾನ-ಧರ್ಮಗಳನ್ನು ಮಾಡುವಷ್ಟು ಆರ್ಥಿಕವಾಗಿ ಸಬಲರಾಗಿದ್ದರು. ವರ್ತಕರು ಪ್ರಭುತ್ವಕ್ಕೆ ಆರ್ಥಿಕವಾಗಿ ಸಹಾಯ ಮಾಡುವಷ್ಟು ಸುಧಾರಿಸಿದ್ದರು.

**೩.೪.೧.೪.೫. ವ್ಯಾಪಾರ ಮಾರ್ಗಗಳು**

ಈ ಪ್ರದೇಶ ಸಿಂಧೂ ನಾಗರಿಕತೆಯ ಕಾಲದಿಂದ ನಿಜಾಮ ಕಾಲದವರೆಗಿನ ದೀರ್ಘ ಕಾಲಾವಧಿಯಲ್ಲಿ ದೇಶ-ವಿದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ವಿಸ್ತರಿಸಿಕೊಳ್ಳಲು ಕೆಲವು ವ್ಯಾಪಾರ ಮಾರ್ಗಗಳು ಸಹಕಾರಿಯಾಗಿದ್ದವು. ಅವು ಭೂ ಮತ್ತು ಜಲ ಮಾರ್ಗಗಳಾಗಿದ್ದವು. ಇವುಗಳ ಮೂಲಕ ಸಿಂಧೂ ಕಣಿವೆ ನಗರಗಳು, ಪ್ರಯಾಗ, ತಕ್ಷಶಿಲೆ, ಸೋನ್ ಕಣಿವೆ, ಪಾಟಲಿಪುತ್ರ, ಪುಣೆ, ಮಹಾರಾಷ್ಟ್ರದ ಪೌನಿದೇವ್‌ಟೇಕ್ ಸಾಲು, ಮಧ್ಯಪ್ರದೇಶ ಮತ್ತು ರೋಮ್ ದೇಶ ಮುಂತಾದ ಪ್ರದೇಶಗಳೊಂದಿಗೆ ರಾಯಚೂರು ದೋ-ಅಬ್ ಪ್ರದೇಶ ತನ್ನ ವ್ಯಾಪಾರ ಸಂಬಂಧವನ್ನು ವಿಸ್ತರಿಸಿಕೊಂಡಿತು. ಹೀಗೆ ವಿಸ್ತರಿಸಿಕೊಳ್ಳಲು ಕಾರಣವಾದ ಪ್ರಮುಖ ವ್ಯಾಪಾರ ಮಾರ್ಗಗಳ ವಿವರಗಳನ್ನು ತಿಳಿದುಕೊಳ್ಳುವುದು ಅಗತ್ಯವಿದೆ.

೧. ರಾಯಚೂರು ದೋ-ಅಬ್ ಪ್ರದೇಶ-ನಾಗಾರ್ಜುನ ಸಾಗರ- ಆಂಧ್ರಪ್ರದೇಶ-ನಾಗಪುರ-ಜಬಲಪುರದ ಬುಂದೇಲಖಂಡ- ಪ್ರಯಾಣಗ ತಲುಪುತ್ತಿತ್ತು.[೫೯]

೨. ರಾಯಚೂರು ದೋ-ಅಬ್ ಪ್ರದೇಶ-ಕೃಷ್ಣಾ ಮತ್ತು ಭೀಮಾನದಿಗಳ ಸಂಗಮ-ಭೀಮಾನದಿಯ ಎಡದಂಡೆಯ ಮೂಲಕ-ಅಹಮ್ಮದ ನಗರ-ಪುಣೆ ಸೇರುತ್ತಿತ್ತು.[೬೦]

೩. ರಾಯಚೂರು ದೋ–ಅಬ್ ಪ್ರದೇಶ–ಆಂಧ್ರಪ್ರದೇಶ–ವಿದರ್ಭದ–ಮಹಾರಾಷ್ಟ್ರದ ಪೌನಿದೇವ ಟೇಕ್ ಸಾಲು ತಲುಪುತ್ತಿತ್ತು.[೯೧]

೪. ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿ–ಕೊಪ್ಪಳ–ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳೊಂದಿಗೆ ನೇರ ಸಂಪರ್ಕ ಹೊಂದಿತ್ತು.[೯೨]

೫. ರಾಯಚೂರು ದೋ–ಅಬ್ ಪ್ರದೇಶ–ಕೃಷ್ಣಾನದಿ ಮುಖಜಭೂಮಿ ಅಂದರೆ ಗೋದಾವರಿ–ಕೃಷ್ಣ ನದಿಬಯಲು ಪ್ರದೇಶ–ಕಳಿಂಗದ ತೊಸಾಲಿ–ಸಹಸ್ರಾಮದವರೆಗೆ–ಸೋನ್ ಕಣಿವೆ ತಲುಪುತ್ತಿತ್ತು.[೯೩]

೬. ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿ–ಸಹ್ಯಾದ್ರಿ–ಕರಾವಳಿ–ತೆಕ್ಕಲಕೋಟೆ–ಹಳ್ಳೂರು–ಶ್ರೀಶೈಲ ಗುಡ್ಡದ ಸಾಲು–ಗುಂಟೂರು–ಕರ್ನೂಲು–ಮೆಹಬೂಬನಗರ ಜಿಲ್ಲೆ ತಲುಪುತ್ತಿತ್ತು.[೯೪]

೭. ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿಯಿಂದ–ಮಹಾರಾಷ್ಟ್ರಕ್ಕೆ ಮಾರ್ಗವಿತ್ತು.[೯೫]

೮. ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿ–ರಾಮ್‌ಘಡ–ವೀರಾಪುರಂ–ಕೌಂಡಿನ್ಯಾಪುರ–ನೇವಾಸೆ–ನಗರಿ–ರಾಮ್ ತಕ್ಷಶಿಲೆಗೆ ಸೇರುತ್ತಿತ್ತು.[೯೬]

೯. ರಾಯಚೂರು ದೋ–ಅಬ್ ಪ್ರದೇಶದ ಮಸ್ಕಿ–ಕರ್ನೂಲು–ಆಂಧ್ರಪ್ರದೇಶ ಮಧ್ಯಪ್ರದೇಶಕ್ಕೆ ತಲುಪುತ್ತಿತ್ತು.[೯೭]

೧೦. ರಾಯಚೂರು ದೋ–ಅಬ್ ಪ್ರದೇಶದ ಹಟ್ಟಿ ಚಿನ್ನದ ಗಣಿಯಿಂದ ಹೊನ್ನಾವರ ಬಂದರು ಮೂಲಕ ಸಿಂಧೂ ನಗರಗಳಿಗೆ ಜಲ ಮಾರ್ಗವಿದ್ದಿತು.[೯೮]

೧೧. ರಾಯಚೂರು ದೋ–ಅಬ್ ಪ್ರದೇಶದ ಲಿಂಗಸೂಗೂರು–ರೋಮ್‌ಗೆ ಜಲ ಮಾರ್ಗದ ಮೂಲಕ ವ್ಯಾಪಾರ ಸಂಬಂಧವಿತ್ತು.[೯೯]

೧೨. ರಾಯಚೂರು ದೋ–ಅಬ್ ಪ್ರದೇಶ–ಪಾಟಲಿಪುತ್ರ ತಲುಪುತ್ತಿತ್ತು.[೧೦೦]

೧೩. ರಾಯಚೂರು ದೋ–ಅಬ್ ಪ್ರದೇಶ–ಹರಿಹರ–ಕಾವೇರಿನದಿಗೆ ತಲುಪುತ್ತಿತ್ತು.[೧೦೧]

೧೪. ರಾಯಚೂರು ದೋ–ಅಬ್ ಪ್ರದೇಶ–ಆಂಧ್ರಪ್ರದೇಶ–ಕಳಿಂಗ–ಉತ್ತರ ಬಂಗಾಳ ವಿಂಧ್ಯಗಂಗಾ ಬಯಲು ಪ್ರದೇಶ ತಲುಪುತ್ತಿತ್ತು.[೧೦೨]

೧೫. ರಾಯಚೂರು ದೋ–ಅಬ್ ಪ್ರದೇಶ–ಆಂಧ್ರಪ್ರದೇಶ–ಕಳಿಂಗ–ಮಧ್ಯಪ್ರದೇಶ–ಪಾಟಲಿಪುತ್ರ ತಲುಪುತ್ತಿತ್ತು.[೧೦೩]

೧೬. ರಾಯಚೂರು ದೋ–ಅಬ್ ಪ್ರದೇಶ–ಬಳ್ಳಾರಿ–ಧಾರವಾಡ–ಕುಮಟಾ ಬಂದರು–ಅಲ್ಲಿಂದ ಬಾಂಬೆಗೆ–ಇಂಗ್ಲೆಂಡಿಗೆ ಜಲಮಾರ್ಗ. ಈ ರೀತಿಯಾಗಿ ಈ ಪ್ರದೇಶ ವ್ಯಾಪಾರ ಮಾರ್ಗಗಳನ್ನು ಹೊಂದಿದ್ದಿತು.[೧೦೪]

ರಾಯಚೂರು ದೋ–ಅಬ್ ಪ್ರದೇಶ ಹೊಂದಿದ ವ್ಯಾಪಾರ ಸಂಬಂಧಗಳಿಂದಾಗಿ ಈ ಪ್ರದೇಶದಿಂದ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ, ಸಾಂಬಾರ ಪದಾರ್ಥಗಳು ಮುಂತಾದವನ್ನು ಆಮದು ಮತ್ತು ರಫ್ತು ಮಾಡಲಾಗುತ್ತಿತ್ತು. ಈ ವಸ್ತುಗಳ ಉತ್ಪಾದನೆಯಲ್ಲಿ ಸರಕುಗಳನ್ನು ಒಂದು ಸ್ಥಳದಿಂದ ಸಾಗಿಸುತ್ತಿದ್ದವರು, ಗಣಿಗಾರಿಕೆಯಲ್ಲಿ ದುಡಿಯುತ್ತಿದ್ದವರು ಈ ಪ್ರದೇಶದ ಸಾಮಾನ್ಯ ಜನರು ಎಂಬುದಾಗಿ ತಿಳಿದುಬರುತ್ತದೆ.

ಈ ಶ್ರಮಜೀವಿಗಳ ಚರಿತ್ರೆ ವಿಸ್ಮೃತಿಗೆ ಸಿಲುಕಿದೆ. ವರ್ತಕರು ಆರ್ಥಿಕ ಪ್ರಾಬಲ್ಯ ಸಾಧಿಸುವಲ್ಲಿ ಈ ಜನರ ಪಾತ್ರ ಪ್ರಮುಖವಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ.

ರಾಯಚೂರು ದೋ-ಅಬ್ ಪ್ರದೇಶವು ಸಿಂಧೂ ನಾಗರಿಕತೆಯ ಸಮಕಾಲೀನ ಪ್ರಮುಖ ಸ್ಥಳವಾಗಿದೆ. ಸಿಂಧೂ ನಾಗರಿಕತೆಯ ಜನರಿಗೆ ಈ ಪ್ರದೇಶ ಹಟ್ಟಿ ಚಿನ್ನದ ಗಣಿಯಿಂದ ಚಿನ್ನವನ್ನು ಮತ್ತು ಮಸ್ಕಿ, ಪಿಕ್ಲಿಹಾಳಗಳಿಂದ ಮೇದಶ್ಶಿಲೆಯ ಕಚ್ಚಾವಸ್ತುಗಳನ್ನು ರಫ್ತು ಮಾಡಲಾಗುತ್ತಿತ್ತೆಂದು ತಿಳಿದುಬರುತ್ತದೆ. ಅಲ್ಲದೆ ಮಸ್ಕಿಯ ಆ ಸಂದರ್ಭದಲ್ಲಿ ನಗರ ಸಂಸ್ಕೃತಿಯ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ವ್ಯಾಪಾರ-ಸಂಬಂಧವನ್ನು ಈ ಸಂದರ್ಭದಲ್ಲಿ ರಾಯಚೂರು ದೋ-ಅಬ್ ಮತ್ತು ಸಿಂಧೂನಾಗರಿಕತೆಗಳು ಹೊಂದಿದ್ದವು. ಹಾಗಾಗಿ ಭಾರತದ ಚರಿತ್ರೆಯಲ್ಲಿ ಸಿಂಧೂ ನಾಗರಿಕತೆಯ ಕಾಲವನ್ನು ಮೊದಲ ನಗರೀಕರಣ ಎಂದು ಗುರುತಿಸಿದಂತೆ, ಮಸ್ಕಿಯೂ ಸಹ ಕರ್ನಾಟಕದ ಸಂದರ್ಭದಲ್ಲಿ ಮೊದಲ ನಗರೀಕರಣದ ಕೇಂದ್ರವಾಗಿತ್ತೆಂದು ಗುರುತಿಸಬಹುದಾಗಿದೆ. ಅಲ್ಲದೆ ಮಸ್ಕಿಯು ಒಂದು ನಗರ ಕೇಂದ್ರವಾಗಿತ್ತೆಂದು ತಿಳಿಯಬಹುದಾಗಿದೆ. ನಗರೀಕರಣದ ಹಂತಗಳನ್ನು ಮೂರು ಹಂತಗಳಲ್ಲಿ ಗುರುತಿಸಲಾಗಿದೆ. ೧. ಸಿಂಧೂನಾಗರಿಕತೆ ಒಂದನೆಯ ಹಂತ ೨. ಕ್ರಿಪೂ. ೬ರಿಂದ ಕ್ರಿಶ. ೩ನೆಯ ಶತಮಾನದವರೆಗೆ ಶಾತವಾಹನರ ಕಾಲದಲ್ಲಿ ವಿಶೇಷವಾಗಿ ಬೆಳೆದು ಬಂದಿತು. ಇದು ಎರಡನೆಯ ಹಂತದ ನಗರೀಕರಣ, ಇನ್ನೂ ಮೂರನೆಯದಾಗಿ ಕ್ರಿಶ. ೧೦ರಿಂದ ೧೨ನೆಯ ಶತಮಾನ ೩ನೆಯ ಹಂತದ ನಗರೀಕರಣ. ಇವುಗಳಲ್ಲಿ ವರ್ತಕ ವ್ಯಾಪಾರ ಸಂಬಂಧಗಳು ಹೆಚ್ಚಾಗಿ ಕಂಡುಬರುತ್ತವೆ(ರೈ ೨೦೧೩: ಉಪನ್ಯಾಸ). ಈ ಹಿನ್ನೆಲೆಯಲ್ಲಿ ಈ ಪ್ರದೇಶ ಎರಡು ಮತ್ತು ಮೂರನೆಯ ಹಂತದ ನಗರೀಕರಣವನ್ನು ಹೊಂದಿತ್ತು.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕರ್ನಾಟಕದಲ್ಲಿ ಕಂಡುಬರುವಂತೆ ಇಲ್ಲಿನ ಸಂದರ್ಭಕ್ಕೆ ಅನುಗುಣವಾಗಿ ಪ್ರಥಮ ನಗರೀಕರಣವನ್ನು ಕಾಣಬಹುದಾಗಿದೆ. ಈ ಕಾಲವನ್ನು ಕ್ರಿಪೂ. ೬ನೆಯ ಶತಮಾನದಿಂದ ಕ್ರಿಶ.೩ನೆಯ ಶತಮಾನದವರೆಗೆ ಗುರುತಿಸಲಾಗಿದೆ. ಮೌರ್ಯರರ ಕಾಲದಲ್ಲಿ ಮಸ್ಕಿಯು ಜನಭರಿತ ಕೇಂದ್ರವಾಗಿತ್ತು. ಮಸ್ಕಿಯೂ ಸಹ ಕರ್ನಾಟಕದ ಸಂದರ್ಭದಲ್ಲಿ ಮೊದಲ ನಗರೀಕರಣದ ಕೇಂದ್ರವಾಗಿತ್ತೆಂದು ಗುರುತಿಸಬಹುದಾಗಿದೆ. ಬೇರೆ ಬೇರೆ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಅಲ್ಲದೆ ಮಸ್ಕಿಯೂ ಹೆಚ್ಚಿನ ಸಂಖ್ಯೆಯನ್ನು ಹೊಂದಿರುವ ಕಾರಣಕ್ಕೆ ಮೌರ್ಯರ ಅರಸ ಅಶೋಕನು ಇಲ್ಲಿ ಒಂದು ಶಾಸನವನ್ನು ಕೆತ್ತಿಸಿದನು. ಹಾಗೆಯೇ ಈ ಶಾಸನವು ಭಾರತದ ಸಂದರ್ಭದಲ್ಲಿಯೂ ಮಹತ್ವದ ಸ್ಥಾನವನ್ನು ಪಡೆದಿದೆ. ಇದಕ್ಕೆ ಅಶೋಕನು ತನ್ನ ಹೆಸರನ್ನು ಪೂರ್ಣವಾಗಿ ಉಲ್ಲೇಖಿಸಿರುವುದೇ ಕಾರಣ. ಮುದಗಲ್ಲು ಸಹ ವ್ಯಾಪಾರ ಕೇಂದ್ರವಾಗಿತ್ತು. ಈ ಕೇಂದ್ರವನ್ನು ಕುರಿತು ಟಾಲೆಮಿಯು ತನ್ನ'ಪೆರಿಪ್ಲಸ್' ಎಂಬ ಕೃತಿಯಲ್ಲಿ ಕರ್ನಾಟಕದ ಒಳನಾಡು ಪಟ್ಟಣಗಳಲ್ಲಿ ಒಂದಾದ ಪಟ್ಟಣವೆಂದು ದಾಖಲಿಸಿರುವುದು ತಿಳಿದುಬರುತ್ತದೆ. ಕರ್ನಾಟಕದ ಆರಂಭದ ನಗರೀಕರಣವು ರಾಯಚೂರು ದೋ-ಅಬ್ ಪ್ರದೇಶದಲ್ಲಿತ್ತು. ಕ್ರಿಪೂ. ೬ನೆಯ ಶತಮಾನದಿಂದ ಕ್ರಿಶ.ಮೂರನೆಯ ಶತಮಾನದವರೆಗೆ ಉತ್ತರಾಪಥದೊಂದಿಗೆ, ಮೌರ್ಯರ ಕಾಲದಲ್ಲಿ ಹಾಗೂ ಇಲ್ಲಿ ದೊರೆತ ರೋಮನ್ ನಾಣ್ಯಗಳು ಈ ಪ್ರದೇಶ ದೇಶಿಯ ವಿದೇಶಿಯ ವ್ಯಾಪಾರ ಸಂಬಂಧ ಹೊಂದಿತ್ತೆಂದು ಗುರುತಿಸ ಬಹುದಾಗಿದೆ. ಈ ಕಾಲಾವಧಿಯಲ್ಲಿ ನಗರೀಕರಣದ ಪ್ರಕ್ರಿಯೆ ಚುರುಕಿನಿಂದ ಕೂಡಿತ್ತೆಂದು ಹೇಳಬೇಕಾಗುತ್ತದೆ. ಕ್ರಿಶ. ೧೦ರಿಂದ ೧೨ನೆಯ ಶತಮಾನದವರೆಗೆ ಈ ಪ್ರದೇಶದಲ್ಲಿ ದ್ವಿತೀಯ

ನಗರೀಕರಣ ಉಂಟಾಗುತ್ತದೆ. ಕ್ರಿ.ಶ. ಹತ್ತನೆಯ ಶತಮಾನದ ನಂತರ ಈ ಪ್ರದೇಶದಲ್ಲಿ ಅಲ್ಲಲ್ಲಿ ಕೆಲವು ಗ್ರಾಮಗಳು ಪಟ್ಟಣ ಪ್ರದೇಶಗಳಾಗಿ ರೂಪುಗೊಂಡವು. ಇದಕ್ಕೆ ಇಲ್ಲಿ ದೊರೆಯುವ ಶಾಸನಗಳು, ಸ್ಮಾರಕಗಳು ಮತ್ತು ಸಾಹಿತ್ಯಿಕ ಆಕರಗಳು ಈ ಕುರಿತು ಮಾಹಿತಿಯನ್ನು ನೀಡುತ್ತವೆ. ಈ ಪಟ್ಟಣಗಳ ಹುಟ್ಟಿಗೆ ಕೃಷಿಯ ವಿಸ್ತರಣೆ, ಹೆಚ್ಚುವರಿ ಉತ್ಪಾದನೆ, ಕೃಷಿಯೇತರ ಚಟುವಟಿಕೆಗಳ ಆರಂಭ, ಮಾರುಕಟ್ಟೆ ವ್ಯವಸ್ಥೆ ಮುಂತಾದವು ಹಳೆಯ ಪಟ್ಟಣಗಳ ಪುನರ್‌ನಿರ್ಮಾಣ ಹಾಗೂ ಹೊಸ ಪಟ್ಟಣಗಳ ಹುಟ್ಟಿಗೆ ಕಾರಣವಾದವು. ಈ ರೀತಿಯಾಗಿ ಕಾಣಿಸಿಕೊಂಡ ಪಟ್ಟಣಗಳೆಂದರೆ, ಗಬ್ಬೂರು, ಕರಡಕಲ್, ಮುದಗಲ್, ಮಸ್ಕಿ, ಬಳಗಾನೂರು, ಮೊಸಳಿಕಲ್-೩೦೦, ಮೊರಟ-೩೦೦, ರಾಯಚೂರು, ಮೂಡಗಿರಿಸ ಮುಕ್ಕುಂದೆ, ಮಾನ್ವಿ, ಗುಂಜಹಳ್ಳಿ, ದೇವದುರ್ಗ, ಮಲಿಯಾಬಾದ್, ಹೊಸಪೇಟೆ, ಚಂದನಕೇರಿ, ಗುಡಗುಂಟಿ, ಲಿಂಗಸೂಗೂರು, ಗೋರ್ಕಲ್, ಕುರುಡಿ, ಸಿರವಾರ, ಕವಿತಾಳ, ಸಾಲಗುಂದೆ, ಕಲ್ಲೂರು ಮತ್ತು ದಿದ್ದಿಗೆ ಇನ್ನೂ ಮುಂತಾದವು ಪ್ರಮುಖ ಪಟ್ಟಣಗಳಾಗಿದ್ದವೆಂದು ತಿಳಿದುಬರುತ್ತದೆ. ಈ ಪಟ್ಟಣಗಳೆಲ್ಲವೂ ನಗರೀಕರಣದ ಪ್ರಭಾವಕ್ಕೆ ಒಳಗಾದರೂ ದೊಡ್ಡ ದೊಡ್ಡ ನಗರಗಳಾಗಿ ಯಾಕೆ ರೂಪುಗೊಳ್ಳಲಿಲ್ಲ ಎಂಬುವ ಪ್ರಶ್ನೆ ಎದುರಾಗುತ್ತದೆ. ರಾಯಚೂರು ದೋ-ಅಬ್ ಪ್ರದೇಶದಲ್ಲಿನ ಪಟ್ಟಣಗಳು ದೊಡ್ಡ ದೊಡ್ಡ ನಗರಗಳಾಗಿ ರೂಪುಗೊಳ್ಳದಿರುವುದಕ್ಕೆ ಮೂರು ಪ್ರಮುಖ ಕಾರಣಗಳನ್ನು ಗುರುತಿಸಬಹುದಾಗಿದೆ. ಅವೆಂದರೆ, ಮೊದಲನೆಯ ಕಾರಣವೆಂದರೆ, ಈ ಪ್ರದೇಶದಲ್ಲಿನ ಉತ್ಪಾದನಾ ಸರಕುಗಳ ರಫ್ತಿಗಾಗಿ ಹತ್ತಿರದಲ್ಲಿ ಬಂದರುಗಳು ಇಲ್ಲದಿರುವುದು. ಎರಡನೆಯದ್ದು, ಚಿಕ್ಕ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳು ಇಲ್ಲದಿರುವುದು. ಇನ್ನೊಂದು ಮೂರನೆಯದ್ದು, ಈ ಪ್ರದೇಶದ ಅರ್ಥವ್ಯವಸ್ಥೆಯು ಪ್ರಧಾನವಾಗಿ ಗ್ರಾಮೀಣವಾಗಿದ್ದು, ಪಟ್ಟಣಗಳು ಇದ್ದರೂ ಅವು ವಾಣಿಜ್ಯ ಕೇಂದ್ರವೆಂಬುದಕ್ಕಿಂತ ಸೈನ್ಯ ಬಿಡಾರವಾಗಿ ಕಾರ್ಯ ನಿರ್ವಹಿಸಿದ್ದೇ ಹೆಚ್ಚು. ಇಡೀ ಸನ್ನಿವೇಶವು ಕಾಣಿಕೆ ಅಥವಾ ಕರಗಳ ರೂಪದಲ್ಲಿ ಕೃಷಿ ಮಿಗಿತಾಯ ವಸೂಲು ಮಾಡುತ್ತಿದ್ದ ಸರ್ವಾಧಿಕಾರಿ ರಾಜ್ಯದ ಪ್ರಭಾವದಲ್ಲಿತ್ತು. ಹಾಗಾಗಿ ರಾಯಚೂರು ದೋ-ಅಬ್ ಪ್ರದೇಶ ನಗರವಾಗಿ ರೂಪುಗೊಳ್ಳಲಿಲ್ಲ.

ಈ ಪ್ರದೇಶ ವರ್ತಕರ ಮೂಲಕ ಪರಸ್ಪರ ವಿನಿಮಯ ಕೇಂದ್ರವಾಗಿ ರೂಪುಗೊಳ್ಳುವುದರ ಜೊತೆಗೆ ಉತ್ಪಾದನಾ ವರ್ತಕರ ಕಾರ್ಯ ಚಟುವಟಿಕೆಗಳಿಂದಾಗಿ ಉತ್ಪಾದಕ ವಿನಿಮಯ ಕೇಂದ್ರವಾಗಿ ಕಾಣಿಸಿಕೊಂಡಿದೆ. ಸಿಂಧೂ ನಾಗರಿಕತೆಯ ಕಾಲದಿಂದ ವರ್ತಕರು ಮೌರ್ಯರ ಕಾಲಾವಧಿಯವರೆಗೆ ಯಾವುದೇ ಕಟ್ಟಳೆಗಳಿಗೆ ಸಿಲುಕದೆ ಸ್ವತಂತ್ರರಾಗಿದ್ದರು. ಪ್ರಭುತ್ವದ ಪ್ರವೇಶದಿಂದಾಗಿ ವರ್ತಕರಿಗೆ ತೊಂದರೆಯಾಯಿತು. ಇದನ್ನು ಪರಿಹರಿಸಿಕೊಳ್ಳುತ್ತ ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿ, ಪ್ರತ್ಯೇಕವಾಗಿ ವರ್ತಕರ ಸಭೆಗಳನ್ನು ನಡೆಸಿರುವುದು ಈ ಪ್ರದೇಶದಲ್ಲಿ ವರ್ತಕರ ಪ್ರಭಾವ ಕಾಣುತ್ತದೆ. ಅಲ್ಲದೆ ಭೂದಾನ ಮಾಡಿದ್ದು ಸಹ ಕಂಡುಬರುತ್ತದೆ. ಆರ್ಥಿಕತೆಯ ಮೂಲಕ ಪ್ರಾಬಲ್ಯವನ್ನು ಸಾಧಿಸಿದ ವರ್ತಕರು ರಾಜಕೀಯವಾಗಿ ಅನೇಕ ಸ್ಥಾನ ಮಾನಗಳನ್ನು ಪಡೆದರು. ಈ ಎರಡು ಶಕ್ತಿಗಳ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಪ್ರಬಲ ಕೃಷಿಗಾರರು ಮತ್ತು ವ್ಯಾಪಾರಸ್ಥರು ರೂಪಿಸಿದ ಒಂದು ಪ್ರಬಲ ವ್ಯವಸ್ಥೆ ಸೃಷ್ಟಿಯಾಯಿತು.

**೩.೪.೨. ಸಾಮಾಜಿಕತೆ**

ಈ ಪ್ರದೇಶ ಸಾಮಾಜಿಕವಾಗಿ ಚಾತುರ್ವರ್ಣ ವ್ಯವಸ್ಥೆಗೆ ಸಿಲುಕಿದ ಪ್ರದೇಶವಾಗಿದೆ. ಸಿಂಧೂ ನಾಗರಿಕತೆ ಕಾಲದಿಂದ ನಿಜಾಮರ ಕಾಲದವರೆಗಿನ ದೀರ್ಘಾವಧಿಯಲ್ಲಿ ಸಮಾಜ ಹಂತ ಹಂತವಾಗಿ

ಸಾಮಾಜಿಕ ರಾಜಕೀಯ ಪಲ್ಲಟಗಳಿಗೆ ಒಳಗಾಗಬೇಕಾಯಿತು. ಇಲ್ಲಿನ ಸಮಾಜದಲ್ಲಿ ಬೇಟೆ, ಪಶುಸಂಗೋಪನೆ, ಕೃಷಿ, ಉದ್ದಿಮೆ ಮುಂತಾದವನ್ನು ಆಧರಿಸಿ ಹೊಸ ವ್ಯವಸ್ಥೆ ರಚನೆಗೊಳ್ಳುತ್ತಿತ್ತು. ಇದನ್ನು ಗಮನಿಸಿದಾಗ ಅಂದಿನ ಸಮಾಜ ಏಕರೂಪದ್ದಾಗಿರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಈ ಪ್ರದೇಶ ಮೌರ್ಯರ ಅಧೀನಕ್ಕೊಳಪಡುವ ಮುನ್ನವೇ ಉತ್ತರ ಭಾರತದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಆ ಮೂಲಕ "ವ್ಯಾಪಾರಿಗಳು ಮತ್ತು ಪ್ರಸಾರಕರು, ಸಾಂಸ್ಕೃತಿಕ ಮುಖಂಡರು ಮುಖ್ಯವಾಗಿ ಬ್ರಾಹ್ಮಣರು ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ ಹೋಗಿ ಬಂದಿದ್ದಾರೆ. ಈ ರೀತಿಯ ಎರಡೂ ಕಡೆಯ ನಿರಂತರ ಸಂಪರ್ಕಗಳಿಂದಾಗಿ ದೇಶದಲ್ಲಿ ಒಂದು ಸಮನ್ವಯ ಸಂಸ್ಕೃತಿ ರೂಪುಗೊಂಡಿದೆ" ಎಂದು ಆರ್.ಎಸ್. ಶರ್ಮ ಅವರು ತಿಳಿಸುತ್ತಾರೆ(ಶರ್ಮ ೨೦೧೦:೩೦). ಉತ್ತರಭಾರತದ ಪ್ರಭಾವ ದಕ್ಷಿಣ ಭಾರತದ ಮೇಲೆ ಬೀರಿರುವ ಸಾಧ್ಯತೆ ಇದೆ. ಹೀಗಿರುವಾಗ ರಾಯಚೂರು ದೋ-ಅಬ್ ಪ್ರದೇಶದ ಮೇಲೆಯೂ ವರ್ಣಾಶ್ರಮ ಪದ್ಧತಿ ಯಥಾವತ್ತಾಗಿ ಜಾರಿಗೊಂಡಿರಬಹುದಾಗಿದೆ.

ವಿಜಯ್ ಪೂಣಚ್ಚ ತಂಬಂಡ ಅವರು ಸಾಮಾಜಿಕ ವ್ಯವಸ್ಥೆಯನ್ನು ಕುರಿತು"ಭಾರತದ ಬಹು ಬಗೆಯ ಸಾಮಾಜಿಕ ಸಂಕಥನಗಳಲ್ಲಿ ಕಂಡುಬರುವ ಸಮುದಾಯಗಳ ಅಂತರ್ ಸಂಬಂಧಗಳು, ಅವುಗಳ ಬಹುತ್ವದ ವಿನ್ಯಾಸಗಳು, ಐಡೆಂಟಿಟಿ ಮತ್ತು ಭಿನ್ನತೆಗಳನ್ನು ರೂಪಿಸುವ ಸೈದ್ಧಾಂತಿಕತೆಗಳು, ಇನ್ನೂ ಜೀವಂತಿಕೆಯಿರುವ ಜನರ ನಂಬುಗೆ ಮತ್ತು ಆಚರಣೆಗಳ ಮೂಲಕ ವ್ಯಕ್ತವಾಗುತ್ತಿರುವ ಸಾಮಾಜಿಕ ಸಂಘರ್ಷಗಳ ವಿನ್ಯಾಸಗಳು ಯುರೋಪಿನ ಸಾಂಪ್ರದಾಯಿಕ ವಿದ್ವತ್ ಲೋಕದ ವಿದ್ವಾಂಸರಿಗೆ ಪರಿಚಯವಿರಲಿಲ್ಲ. ಅಗಾಧವಾಗಿರುವ ಈ ಆಕರಗಳ ಸಮೂಹ ಯುರೋಪಿನ ಚರಿತ್ರೆಗಿರುವ ಆಕರಗಳಿಗಿಂತ ಅತಿ ಶ್ರೀಮಂತವಾಗಿವೆ ಎಂದು ಪಾರ್ಥ ಚಟರ್ಜಿ ಅವರು ಅಭಿಪ್ರಾಯಪಟ್ಟಿದ್ದಾರೆ. ಇಷ್ಟೊಂದು ಅಗಾಧ ಪ್ರಮಾಣದ ಆಕರಗಳನ್ನು ನಿಗೂಢ ಜಗತ್ತಿನ ಅಸಂಗತಗಳೆಂದು ವಸಾಹತುಶಾಹಿ ಎತ್ನೋಗ್ರಾಫರ್‌ಗಳು ಅವಲೋಕಿಸಿದರು. ರಾಷ್ಟ್ರೀಯವಾದಿಗಳು ಬಹುತ್ವ ಸಂಸ್ಕೃತಿಯ ಆಕರಗಳನ್ನು ಮತ್ತು ವಿನ್ಯಾಸಗಳನ್ನು ಗಮನಿಸುತ್ತ ವಿವಿಧತೆಯಲ್ಲಿ ಏಕತೆ ಎಂದರೆ ಸಬಾಲ್ಟರ್ನ್ ಅಧ್ಯಯನಕಾರರಿಗೆ ಆರಂಭದಲ್ಲಿ ಇದೊಂದು ಸವಾಲಾಗಿ ಕಂಡಿತು. ಆದರೆ ಸಮಸ್ಯೆ ಇದ್ದದ್ದು ಭಾರತದ ಆಕರಗಳಲ್ಲಲ್ಲ. ಬದಲಿಗೆ ಆಮದು ಮಾಡಿಕೊಂಡ ವಿಚಾರಗಳಿಗೆ ಎಂಬುದು ಅವರಿಗೆ ನಂತರ ಸ್ಪಷ್ಟವಾಗುತ್ತಾ ಹೋಯಿತು ಎಂಬುದನ್ನು ಮನವರಿಕೆ ಮಾಡಿಕೊಡುತ್ತಾ, ಮೂಲೆಗೊತ್ತಲ್ಪಟ್ಟ ಸಮುದಾಯಗಳ ವರ್ಗಗಳ ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಗಳಿಂದಾಗಿ ಇತಿಹಾಸದ ಇನ್ನೊಂದು ಮಗ್ಗಲನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಈ ಮೂಲಕ ಭಾರತದ ಜನಸಂಖ್ಯೆಯ ಬಹುಸಂಖ್ಯಾತರ ಅಂದರೆ ಕೆಳಸಮುದಾಯಗಳ ಜನರು ಬೆರಳೆಣಿಕೆ ಸಂಖ್ಯೆಯಲ್ಲಿರುವ ಬಲಾಢ್ಯರು ರೂಪಿಸಿದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗೆ ಚಾರಿತ್ರಿಕವಾಗಿ ನಲುಗಿ ಹೋಗಿರುವ ಪ್ರಕ್ರಿಯೆಯನ್ನು ಅರಿಯಬೇಕಾಗಿದೆ ಮತ್ತು ಅಭ್ಯಸಿಸಬೇಕಾಗಿದೆ" ಎಂದು ವಿಜಯ್ ಪೂಣಚ್ಚ ತಂಬಂಡ ಅವರು ಒತ್ತಿ ಹೇಳಿರುವುದು ಗಮನಾರ್ಹವಾಗಿದೆ(ತಂಬಂಡ ೨೦೦೯: ೫೭-೬೧).

ಕೆಳವರ್ಗಗಳ ಅಧ್ಯಯನಗಳ ಅಗತ್ಯತೆಯನ್ನು ಕುರಿತು ಒತ್ತಿ ಹೇಳಿದವರಲ್ಲಿ ಭಾರತದ ಕರ್ನಾಟಕದ ಸಂದರ್ಭದಲ್ಲಿ ವಿದ್ವತ್ ವಲಯದಲ್ಲಿ ಸಂಚಲನವನ್ನು ಸೃಷ್ಟಿಸಿದವರಲ್ಲಿ ವಿಜಯ್ ಪೂಣಚ್ಚ ತಂಬಂಡ ಅವರು ಮುಖ್ಯರೆನಿಸುತ್ತಾರೆ. ಕೆಳವರ್ಗಗಳ ಬಗೆಗಿನ ಕಾಳಜಿ ಮತ್ತು ಕಳಕಳಿ ಅವರ ವಿಚಾರಗಳ ಮೂಲಕ ಗಮನ ಸೆಳೆಯುತ್ತವೆ. ಹಾಗೆಯೇ ಮುಂದುವರೆದು ಮೋಹನ್‌ಕೃಷ್ಣ ರೈ ಅವರು "ಸಾಮಾಜಿಕ

ಸಂರಚನೆಯ ಶ್ರೇಣೀಕೃತ ಸಮಾಜ ವ್ಯವಸ್ಥೆಯ ಭಿನ್ನ ಸ್ವರೂಪವನ್ನು ತಿಳಿಸುವ ಪ್ರಯತ್ನ ಕಂಡುಬರುತ್ತದೆ. ಪ್ರತಿಯೊಂದು ವ್ಯವಸ್ಥೆಯೊಳಗೆ ಆಂತರಿಕ ಭಿನ್ನತೆ, ಬಿಕ್ಕಟ್ಟುಗಳು ಕಾಣಿಸಿಕೊಂಡು ಸಾಮಾಜಿಕ ರಚನೆ ಭಿನ್ನ ಸ್ವರೂಪವನ್ನು ಪಡೆದುಕೊಳ್ಳಲಾರಂಭಿಸಿತು. ಸಾಮಾಜಿಕವಾದ ಮತ್ತು ಧಾರ್ಮಿಕ ಆಚರಣೆಗೆ ಸಂಬಂಧಿಸಿದ ಅಂಗೀಕೃತ ಅಂತರಗಳು ಏರ್ಪಟ್ಟವು. ನೂತನವಾಗಿ ಉದಯಿಸುತ್ತಿದ್ದ ಸಾಮಾಜಿಕ ವ್ಯವಸ್ಥೆ ಒಟ್ಟು ಸಮಾಜದ ಮೇಲೆ ತನ್ನ ಮುದ್ರೆಯನ್ನು ಒತ್ತಿ ಸಾಮಾಜಿಕ ಹಿಡಿತವನ್ನು ಸಾಧಿಸುವಲ್ಲಿ ಯಶಸ್ವಿಯಾಯಿತು. ಈ ರೀತಿಯಾಗಿ ರೂಪಗೊಂಡ ಸಾಮಾಜಿಕ ರಚನೆ ಅನೇಕ ರೀತಿಯ ಪ್ರಕ್ರಿಯೆಗಳನ್ನು ಎದುರಿಸಬೇಕಾಗಿ ಬಂತು. ಆದರೆ ಈ ಪ್ರಕ್ರಿಯೆಗಳು ಶಾಶ್ವತ ಪರಿಣಾಮ ಬೀರುವಲ್ಲಿ ಎಡವಿ ಸಾಮಾಜಿಕ ಗೊಂದಲವನ್ನಷ್ಟೇ ಹುಟ್ಟುಹಾಕಿದವು. ಈ ಗೊಂದಲಗಳು ಶ್ರೇಣಿಕೃತ ಸಮಾಜ ವ್ಯವಸ್ಥೆಯನ್ನು ಇನ್ನಷ್ಟು ಬಿಗಿಗೊಳಿಸಿದವು. ಉತ್ಪಾದನೆ ಮತ್ತು ಹಂಚಿಕೆಯ ವಿಧಾನಗಳ ಪೂರಕವಾಗಿಯೇ ಇದ್ದವು" ಎಂಬುದಾಗಿ ಅಭಿಪ್ರಾಯಪಡುತ್ತಾರೆ(ರೈ ೨೦೦೪: ೫೯).

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿನ ವೈರುಧ್ಯಗಳನ್ನು ತಿಳಿದುಕೊಳ್ಳುವ ಅವಶ್ಯವಿದೆ. ಅದರ ಸ್ವರೂಪದ ಒಳನೋಟಗಳನ್ನು ಇಲ್ಲಿ ಅರಿಯಲು ಪ್ರಯತ್ನಿಸಲಾಗಿದೆ.

**೩.೪.೨.೧. ಜಾತಿಪದ್ಧತಿ**

ಸಮಾಜವನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಲಾಗಿತ್ತು. ಅದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಎಂದು. ವರ್ಣವ್ಯವಸ್ಥೆ ಮೇಲ್ನೋಟಕ್ಕೆ ಕಂಡಂತೆ ಇರಲಿಲ್ಲ. ಅದರೊಳಗೆ ಭಿನ್ನತೆಗಳು, ವೈರುಧ್ಯಗಳು ತುಂಬಿಕೊಂಡಿದ್ದವು. ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿನ ಜಾತಿ ವ್ಯವಸ್ಥೆಯನ್ನು ಕುರಿತು ಸಂಕ್ಷಿಪ್ತವಾಗಿ ಅಭ್ಯಸಿಸಲಾಗಿದೆ.

ರಾಯಚೂರು ದೋ-ಅಬ್ ಪ್ರದೇಶದ ಸಾಮಾಜಿಕ ವ್ಯವಸ್ಥೆಯನ್ನು ಅವಲೋಕಿಸಿದಾಗ ಪ್ರಾಗೈತಿಹಾಸಿಕ ಕಾಲದ ಮಾನವನ ಜೀವನ ಅಲೆಮಾರಿ ಸ್ವರೂಪದ್ದಾಗಿತ್ತು. ಯಾವುದೇ ಜಾತಿ ಸ್ವರೂಪದಿಂದ ಕೂಡಿರಲಿಲ್ಲ. ಸಮಾಜ ಎಂಬುದರ ಕಲ್ಪನೆಯೇ ಇರಲಿಲ್ಲ. "ಈ ಪ್ರದೇಶವು ಕ್ರಿಪೂ. ೨೩೦೦-೮೦೦ರವರೆಗಿನ ಕಾಲಾವಧಿಯಲ್ಲಿ ಜನವಸತಿ ಕೇಂದ್ರವಾಗಿತ್ತು. ಸಿಂಧೂ ಸಂಸ್ಕೃತಿಯೊಂದಿಗೆ ಸಾಮ್ಯತೆಯನ್ನು ಹೊಂದಿತ್ತು. ಹೆಚ್ಚಾಗಿ ಗ್ರಾಮಗಳು ಇದ್ದವು. ಕೃಷಿ ಮತ್ತು ಪಶುಸಂಗೋಪನೆ ಮುಖ್ಯ ಕಸಬುಗಳಾಗಿದ್ದವು ಮತ್ತು ಸಿಂಧೂ ನಗರಗಳಿಗೆ ಹಲವಾರು ಕಚ್ಚಾವಸ್ತುಗಳನ್ನು ನಾಗರಿಕತೆ ಚಟುವಟಿಕೆಗಳಿಗೆ ಪೂರೈಸಲಾಗುತ್ತಿತ್ತೆಂದು ಅ.ಸುಂದರ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ(ಸುಂದರ ೧೯೯೮: ೪೩-೪೪). ಇದಕ್ಕೆ ಎಸ್.ಆರ್. ರಾವ್ ಅವರ ಅಭಿಪ್ರಾಯ ಹೊಂದಾಣಿಕೆಯಾಗುತ್ತದೆ. ಹಾಗೆಯೇ ಮುಂದುವರೆದು ರಾವ್ ಅವರು ರಾಯಚೂರು ಜಿಲ್ಲೆಯ ಬೆಟ್ಟದ ಇಳಿಜಾರು ಪ್ರದೇಶಗಳಲ್ಲಿ ಜನರು ಸ್ಥಿರವಾಗಿ ನೆಲೆಸಿದ್ದರು ಎನ್ನುತ್ತಾ, ಪಿಕ್ಲಿಹಾಳ ಅಂದಿನ ಸಣ್ಣ ಗ್ರಾಮವಾಗಿತ್ತು. ಇದರಂತೆ ಅನೇಕ ಸಣ್ಣ ಸಣ್ಣ ಗ್ರಾಮಗಳಲ್ಲಿ ಜನರು ವಾಸಿಸುತ್ತಿದ್ದರು. ಇವರು ಗುಹೆಗಳಲ್ಲಿ ವಾಸಮಾಡುವುದನ್ನು ತೊರೆದು ಬೆಟ್ಟಗಳಲ್ಲಿ ವೃತ್ತಾಕಾರದ ಮತ್ತು ಆಯತಾಕಾರದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು ಎಂದು ಅಂದಿನ ಜನರ ವಸತಿ ವ್ಯವಸ್ಥೆಯನ್ನು ಕುರಿತು ಗಮನ ಸೆಳೆಯುತ್ತಾರೆ(ರಾವ್ ೧೯೯೪: ೨೦೪-೦೫). ಗುಹೆಗಳಲ್ಲಿ ವಾಸಿಸುತ್ತಿದ್ದ ಜನರು ಗುಡಿಸಲುಗಳಲ್ಲಿ ವಾಸಿಸುತ್ತಿರುವುದನ್ನು ಗಮನಿಸಿದರೆ ಸಾಮಾಜಿಕ ಜೀವನದ ಸ್ಥಿತ್ಯಂತರ ಪ್ರಕ್ರಿಯೆಯಾಗಿದೆ ಎನಿಸುತ್ತದೆ. ಈ ಸಂದರ್ಭದಲ್ಲಿ ಯಾವುದೇ ಬಗೆಯ ಜಾತಿ ಪದ್ಧತಿಯ ಸುಳಿವೇ ಇರಲಿಲ್ಲ.

ಸಿಂಧೂ ನಾಗರಿಕತೆ ಕಾಲಘಟ್ಟದ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಪದ್ಧತಿ ಈಗಲೂ ಮುಂದುವರೆದಿರುವುದನ್ನು ಗಮನಿಸಬಹುದಾಗಿದೆ. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬಹುತೇಕ ಗ್ರಾಮಗಳು ಗುಡ್ಡಗಳಲ್ಲಿಯೇ ಇರುವುದು ಗಮನಾರ್ಹ. ಉದಾಹರಣೆಗೆ ರಾಯಚೂರು, ಮಸರಕಲ್, ದೇವದುರ್ಗ, ಕರಿಗುಡ್ಡ, ನವಿಲುಗುಡ್ಡ, ಮುಂಡರಗಿ, ಗಲಗ, ಸುಣ್ಣದಕಲ್ಲು, ಕೊತ್ತದೊಡ್ಡಿ, ಅರಕೇರಿ, ಕ್ಯಾದಿಗ್ಗೇರಿ, ಅಡಕಲಗುಡ್ಡ, ಅನವಾರ, ಆಕಳಕುಂಪಿ, ಶಾವಂತಗಲ್, ವಡವಟ್ಟಿ, ಕುರಕುಂದ, ನವಲಕಲ್ಲು, ಕಸನದೊಡ್ಡಿ, ಹುಸೇನಪುರ, ಹಣಗಿ, ಪಾತಾಪುರ, ಮುರ್ಕಿಗುಡ್ಡ, ಕೋಟೆಕಲ್ಲು, ಗುರುಗುಂಟಾ, ಗುಂತಗೋಳ, ಜಲದುರ್ಗ, ಮುದಗಲ್ಲು, ಗೊಲಪಲ್ಲಿ, ಚಿಂಚೋಡಿ, ಬುಂಕಲದೊಡ್ಡಿ, ಗವಿಗಟ್ಟು ಮಲ್ಲಾಪುರ, ರಾಮದುರ್ಗ, ದೇವರಗುಡ್ಡ, ನೀರಮಾನ್ವಿ, ಮಸ್ಕಿ ಇನ್ನು ಮುಂತಾದ ಗ್ರಾಮಗಳು ಪ್ರಸ್ತುತ ಕಾಲದಲ್ಲಿ ಗುಡ್ಡಗಳ ಮೇಲೆಯೇ ಇವೆ. ಇತ್ತೀಚೆಗೆ ಜಾಗತೀಕರಣದ ಪ್ರಭಾವದಿಂದಾಗಿ ಗುಡ್ಡದಿಂದ ರಸ್ತೆಗಳ ಪಕ್ಕದಲ್ಲಿ ಗ್ರಾಮಗಳು ನಿರ್ಮಾಣಗೊಳ್ಳುತ್ತಿವೆ.

ಡಿ.ಡಿ. ಕೊಸಾಂಬಿ ಅವರು "ಕ್ರಿಪೂ. ಆರನೆಯ ಶತಮಾನದ ಸಂದರ್ಭದಲ್ಲಿ ಕೃಷ್ಣಾ-ತುಂಗಭದ್ರಾ ನದಿ ಕಣಿವೆ ಪ್ರದೇಶಗಳಲ್ಲಿ ದೊಡ್ಡ ಶಿಲಾಯುಗದ ಹಲವಾರು ತಂಡಗಳಿದ್ದವು. ಅವು ನಿಧಾನವಾಗಿ ಋತುಮಾನಕ್ಕನುಗುಣವಾಗಿ ಒಳ್ಳೆಯ ಮೇವು ಮತ್ತು ನೀರನ್ನು ಹುಡುಕಿಕೊಂಡು ಅಲೆದಾಡುತ್ತಿದ್ದವೆಂದು ಹೇಳುವುದರ ಜೊತೆಗೆ ಜನರಿಗೆ ಕಬ್ಬಿಣ, ತಾಮ್ರದ ಬಳಕೆ ತಿಳಿದಿರಲಿಲ್ಲ. ಈ ಪ್ರದೇಶದ ಮೂಲನಿವಾಸಿಗಳಿಗೆ ಲೋಹವನ್ನು ತೆಗೆಯುವ ಕಲೆ ಗೊತ್ತಿರಲಿಲ್ಲ. ಅದಕ್ಕೆ ಬೇಕಾದ ಸ್ಫೂರ್ತಿ ಮತ್ತು ತಂತ್ರಜ್ಞಾನ ಎರಡೂ ಉತ್ತರದಿಂದ ಬಂದಿತೆಂದು" ತಿಳಿಸುತ್ತಾರೆ(ಕೊಸಾಂಬಿ ೨೦೧೨: ೭೧-೭೨). ಆದರೆ ಇಲ್ಲಿ ಚಿನ್ನದ ಗಣಿಗಾರಿಕೆ ನಡೆದಿತ್ತು. ಕಬ್ಬಿಣದ ಬಳಕೆಯೂ ಗೊತ್ತಿತ್ತು. ಹಾಗಾಗಿ ಲೋಹಗಳನ್ನು ತೆಗೆಯುವ ಸ್ಫೂರ್ತಿ ಮತ್ತು ತಂತ್ರಜ್ಞಾನ ಈ ಎರಡೂ ಅಂಶಗಳು ಉತ್ತರದಿಂದ ಬಂದಂತವುಗಳಲ್ಲ. ಬದಲಾಗಿ ಇಲ್ಲಿಯ ಜನರಿಗೆ ಈ ಮೊದಲೇ ತಿಳಿದಿತ್ತೆಂದು ಹೇಳಬಹುದಾಗಿದೆ. ಈ ಕಾಲದಲ್ಲಿ ಜಾತಿ ಪದ್ಧತಿ ಇರಲಿಲ್ಲ.

ಕ್ರಿಪೂ. ೩ನೆಯ ಶತಮಾನದ ವೇಳೆಗೆ ಈ ಪ್ರದೇಶದಲ್ಲಿ ಬೌದ್ಧಮತದ ಪ್ರವೇಶವಾಗುತ್ತದೆ. ಇಲ್ಲಿ ಮತ್ತೊಂದು ಸಂಗತಿಯೆಂದರೆ ಬೌದ್ಧಮತ ಪ್ರವೇಶ ಪಡೆಯಲು ಕಾರಣವೇನು ಎಂಬುದು. ವೈದಿಕಮತ ಈ ಪ್ರದೇಶದಲ್ಲಿ ಇದ್ದಿತು ಎಂದು ಊಹಿಸಬಹುದಾಗಿದೆ. ಚಾತುರ್ವರ್ಣ ವ್ಯವಸ್ಥೆ ಈ ಕಾಲಘಟ್ಟದಲ್ಲಿದ್ದಿರಬೇಕು. ಆದರೆ ಮಾಹಿತಿಯ ಕೊರತೆಯಿದೆ. ಹಂತ ಹಂತವಾಗಿ ಚಾತುರ್ವರ್ಣ ವ್ಯವಸ್ಥೆ ಚಾರಿತ್ರಿಕ ಕಾಲಘಟ್ಟದುದ್ದಕ್ಕೂ ಬೆಳೆಯುತ್ತ, ತಾರತಮ್ಯ ಮೇಲು-ಕೀಳು ಎಂಬ ಭಾವನೆಗಳನ್ನು ಬಿತ್ತುತ್ತಾ ಬಂದಿರುವುದು ಗೋಚರಿಸುತ್ತದೆ.

ಮಾನವ ಜೀವಿ ಅಂದ ಮೇಲೆ ಸಂಘಜೀವಿಯಾಗಿರುತ್ತಾನೆ. ಸಮಾಜದಲ್ಲಿ ಅವನ ಪಾತ್ರ ಮಹತ್ವಪೂರ್ಣದ್ದಾಗಿದೆ. ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆನಿಂತ ಸ್ಥಳದಲ್ಲಿ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡನು. ಆರ್ಥಿಕವಾಗಿ ಮುಂದುವರೆದವನು ಆ ಗ್ರಾಮದ ಮುಂಖಡನಾಗಿರಬೇಕು. ಇವನಿಗೆ ಸಹಾಯಕನಾಗಿ ಪುರೋಹಿತರನ್ನು ನೇಮಿಸಿಕೊಂಡಿರಬೇಕು. ಜೋತಿಷ್ಯ, ಪಂಚಾಂಗ, ಯಂತ್ರ, ತಂತ್ರ ಮುಂತಾದ ಜ್ಞಾನಗಳನ್ನು ಪಡೆದ ಬ್ರಾಹ್ಮಣರು ಪುರೋಹಿತರಾಗಿ ಗುರುತಿಸಿಕೊಂಡರು. ವ್ಯಾಪಾರ ಮತ್ತು ಕೃಷಿಯಲ್ಲಿ ತೊಡಗಿಕೊಂಡವರು ವೈಶ್ಯರು. ಇವರು ರೈತರಾಗಿ, ವ್ಯಾಪಾರಿಗಳಾಗಿ

ರಾಜ್ಯದ ಆದಾಯಕ್ಕೆ ಕಾರಣರಾದವರು. ಈ ಮೇಲಿನ ಮೂರು ವರ್ಗಗಳಿಗೆ ಬೆನ್ನೆಲುಬಾಗಿ ನಿಂತವರು ಶೂದ್ರರು. ಈ ಶೂದ್ರರು ಸಾಮಾಜಿಕ ಶ್ರೇಣೀಕರಣದಲ್ಲಿ ಕೊನೆಯ ಸ್ಥಾನದಲ್ಲಿ ಉಳಿದುಕೊಂಡರು.

ಸಾಮಾಜಿಕ ಸಂರಚನೆಯಲ್ಲಿ ವರ್ಣಗಳು ಒಂದಿಲ್ಲೊಂದು ಕಾರಣಕ್ಕಾಗಿ ಸಹಕಾರದಿಂದ ಇರಬೇಕಿತ್ತು. ಸಾಮಾಜಿಕ ಸಂಬಂಧಗಳು ಒಂದನ್ನೊಂದು ಅವಲಂಬಿಸಿದ್ದವೆಂದೆ ಹೇಳಬಹುದು. ರಾಜಕೀಯ ಅಸ್ತಿತ್ವಕ್ಕಾಗಿ ವಿವಿಧ ಅರಸುಮನೆತನಗಳು ಉದಾರವಾಗಿ ಹೆಚ್ಚು ಹೆಚ್ಚು ದಾನ ನೀಡಲಾರಂಭಿಸಿದವು. ಅರಸರಷ್ಟಲ್ಲದೆ ರಾಣಿಯರು, ಮಹಾಮಂಡಳೇಶ್ವರರು, ಸಾಮಂತರು, ದಂಡನಾಯಕರು, ಅಧಿಕಾರಿವರ್ಗ ಮತ್ತು ಜನಸಾಮಾನ್ಯರಲ್ಲಿ ಕೆಲವರು ದಾನ ನೀಡಿದ ಉಲ್ಲೇಖಗಳು ದೊರೆಯುತ್ತವೆ.[೩೦೫] ಈ ದಾನದ ಪ್ರಭಾವದಿಂದಾಗಿ ಬ್ರಾಹ್ಮಣರು ಮತ್ತು ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ಭೂದಾನವನ್ನು ಪಡೆದರು. ಆ ಮೂಲಕ ಅರಸರು ಮತ್ತು ರೈತರ ನಡುವೆ ಹೊಸ ಭೂಮಾಲಿಕ ವರ್ಗ ಸೃಷ್ಟಿಯಾಯಿತು. ಬ್ರಾಹ್ಮಣರು ಮತ್ತು ದೇವಾಲಯಗಳು ಆಡಳಿತ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು, ಹಾಗೆಯೇ ಆರ್ಥಿಕ ಚಟುವಟಿಕೆಯ ಕೇಂದ್ರವೂ ಆಗಿದ್ದವು. ಬ್ರಾಹ್ಮಣರು ಮತ್ತು ದೇವಾಲಯಗಳಿಗೆ ಒಂದೊಂದು ಗ್ರಾಮವನ್ನೇ ದಾನವಾಗಿ ನೀಡಿದ ಉಲ್ಲೇಖಗಳು ಶಾಸನಗಳಿಂದ ತಿಳಿದುಬರುತ್ತದೆ.[೩೦೬] ಇಲ್ಲಿ ಭೂಮಿಯೇ ಪ್ರಧಾನವಾಗಿರುವುದರಿಂದ ಕೃಷಿ ಚಟುವಟಿಕೆ ಹೆಚ್ಚಾಗಿ ನಡೆಯುತ್ತಿತ್ತೆಂದು ಹೇಳಬಹುದಾಗಿದೆ. ಇನ್ನೊಂದು ಮುಖ್ಯವಾದ ಸಂಗತಿಯೆಂದರೆ ಅಗ್ರಹಾರ, ಬ್ರಹ್ಮಪುರಿಗಳ ಸ್ಥಾಪನೆ. ಬ್ರಾಹ್ಮಣರು ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲುಸ್ತರದಲ್ಲಿರುವುದರಿಂದ ಸಮಾಜದಿಂದ ಪ್ರತ್ಯೇಕವಾಗಿ ವಾಸಿಸಿರುವುದನ್ನು ಇಲ್ಲಿನ ಅಗ್ರಹಾರ, ಬ್ರಹ್ಮಪುರಿಗಳಿಂದ ತಿಳಿದುಬರುತ್ತದೆ, ಪ್ರತ್ಯೇಕತೆಯನ್ನು ಬಯಸಿರುವುದು ಸಹ ಗೋಚರಿಸುತ್ತದೆ. ಬ್ರಾಹ್ಮಣರು ತಾವು ಮೇಲಿನವರೆಂದೇ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು, ಜನಸಾಮಾನ್ಯರೊಂದಿಗೆ ಬೆರೆಯುತ್ತಿರಲಿಲ್ಲ. ಸಮಾಜವನ್ನು ತಮ್ಮ ಇಚ್ಚೆಯಂತೆ ನಡೆಯುವಂತೆ ಮಾಡಿಕೊಂಡಿದ್ದರೆನಿಸುತ್ತದೆ. ನಿಜಾಮರ ಕಾಲಕ್ಕೆ ಇವರನ್ನು ಕುಲಕರ್ಣಿ, ಶಾನುಭೋಗ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು.[೩೦೭]

ವರ್ತಕರಾಗಿದ್ದ ವೈಶ್ಯರು, ಶೂದ್ರವರ್ಗದೊಂದಿಗೆ ಸಂಬಂಧವನ್ನು ಹೊಂದಿರುವುದು ಕಾಣಿಸುತ್ತದೆ. ಅಂಗಡಿಗೆ ಬೇಕಾಗುವ ವಸ್ತುಗಳನ್ನು ಖರೀದಿಸಿದ ಸ್ಥಳದಿಂದ ಅಂಗಡಿ ಇರುವ ಸ್ಥಳಕ್ಕೆ ತರಲು ದುಡಿಯುವ ವರ್ಗದ ಮೂಲಕ ತರಿಸಲಾಗುತ್ತಿತ್ತು. ಇವರು ಜನಸಾಮಾನ್ಯರೊಡನೆ ಒಡನಾಟವನ್ನು ಹೊಂದಿದ್ದರು. ಇವರು ಆರ್ಥಿಕವಾಗಿ ಬಲಾಢ್ಯರಾಗಿದ್ದರು ಎಂಬುದಕ್ಕೆ ಮುದಗಲ್ ಶಾಸನವೇ ಸಾಕ್ಷಿ. ಜನಸಾಮಾನ್ಯರೊಂದಿಗೆ ಇವರು ಬೆರೆಯುತ್ತಿದ್ದರೆಂದೇ ಹೇಳಬೇಕಾಗುತ್ತದೆ. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಈ ಪ್ರದೇಶದಲ್ಲಿ ಅಲ್ಪ ಸಂಖ್ಯಾತರಾಗಿ ಕಂಡುಬಂದರೂ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದರು. ಬ್ರಾಹ್ಮಣರು ಮತ್ತು ದೇವಾಲಯಗಳು ಭೂಮಾಲಿಕರಾಗಿ ಪರಿವರ್ತನೆಯಾದ ಮೇಲೆ ಉಳಿಗಮಾನ್ಯ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತ್ತು. ಆ ಮೂಲಕ ಈ ಜನರು ಜೀತ ಪದ್ಧತಿ, ಬಿಟ್ಟಿ ಪದ್ಧತಿಗೆ ಬಲಿಯಾಗಬೇಕಾಯಿತು.

ಸಮಾಜ ಎಂದ ಮೇಲೆ ಎಲ್ಲರ ಸಹಕಾರ ಅವಶ್ಯವಾಗಿತ್ತು. ಕೃಷಿಯೇ ಪ್ರಧಾನವಾಗಿದ್ದ ಈ ಪ್ರದೇಶದಲ್ಲಿ ಕುಶಲಕರ್ಮಿಗಳು ತಮ್ಮ ಕೌಶಲ್ಯದ ಮೂಲಕ ಗಮನಸೆಳೆದಿದ್ದರು. ಚಾತುರ್ವರ್ಣ ವ್ಯವಸ್ಥೆ ಮುಂದುವರಿದರೂ ಕುಶಲಕರ್ಮಿಗಳ ಸೇವೆ ಅಗತ್ಯವಾಗಿತ್ತು. ಹಾಗಾಗಿ ಕೆಲವರನ್ನು ಗ್ರಾಮ

ಸೇವಕರೆಂದು ಕರೆಯಲಾಗುತ್ತದೆ. ಕಮ್ಮಾರ, ಬಡಿಗ, ಕುಂಬಾರ, ಅಕ್ಕಸಾಲಿಗ, ನೇಕಾರ, ಅಗಸರು, ಗಾಣಿಗರು, ಮೇದರು ಮುಂತಾದವರು ಗ್ರಾಮೀಣ ಸಮಾಜಕ್ಕೆ ಆಧಾರ ಸ್ಥಂಭಗಳಾಗಿದ್ದರು. ಸಮಾಜದ ಅವಿಭಾಜ್ಯ ಅಂಗವಾಗಿದ್ದರು. ಕೆಳವರ್ಗಗಳಲ್ಲಿಯೂ ಜಾತಿ ವ್ಯವಸ್ಥೆಯಿತ್ತು. ವರ್ತಮಾನದಲ್ಲಿ ಹಿಂದುಳಿದ ವರ್ಗವೆಂದು ಗುರುತಿಸಿಕೊಂಡಿರುವ ಜಾತಿಗಳು ಕೆಳಜಾತಿಗೆ ಸೇರಿದ ಹೊಲೆಯ, ಮಾದಿಗ, ಕೊರವರು, ವಡ್ಡರು ಮುಂತಾದವರನ್ನು ಕನಿಷ್ಟವಾಗಿ ನೋಡುತ್ತಿದ್ದವು. ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂದು ವಿಂಗಡಿಸಿದ್ದರೂ ಕೆಳಜಾತಿಗಳಲ್ಲಿ ಶೂದ್ರರಲ್ಲಿಯೇ ಜಾತಿಪದ್ಧತಿ ಇರುವುದು ಕಂಡುಬರುತ್ತದೆ. ಕೃಷಿಗೂಲಿಯಾಗಲಿ, ದಿನದ ಯಾವುದೇ ಕೂಲಿಯಾಗಲಿ ಮಾಡುತ್ತಿದ್ದ ಜನರನ್ನು ಗಮನಿಸಿದಾಗ ಕೆಲವು ಒಳಸುಳಿವುಗಳು ಸಿಗುತ್ತವೆ. ಕೆಲಸ ಮಾಡಿದ ಜನರು ಮಧ್ಯಾಹ್ನದ ಊಟದ ಸಮಯದಲ್ಲಿ ಎಲ್ಲರೂ ಊಟ ಮಾಡುವಾಗಲೂ ಜಾತಿ ಪ್ರಧಾನವಾಗಿ ಕಂಡುಬರುತ್ತದೆ. ಎಲ್ಲರೂ ಕೂಲಿಕಾರರೇ ಆದರೂ ಬೇರೆ ಬೇರೆ ಜಾತಿಯವರು ಎಂಬ ಕಾರಣಕ್ಕೆ ತಾವು ತಂದಿರುವ ಬುತ್ತಿಗಳನ್ನು ಪ್ರತ್ಯೇಕವಾಗಿಯೇ ಇಡುತ್ತಾರೆ. ಆಯಾ ಜಾತಿಯವರೇ ಕೂಡಿಕೊಂಡು ಊಟ ಮಾಡುತ್ತಾರೆ. ಈ ಪದ್ಧತಿ ಈಗಲೂ ಗ್ರಾಮೀಣ ಪ್ರದೇಶಗಳಲ್ಲಿ ಜೀವಂತವಾಗಿರುವುದನ್ನು ಗಮನಿಸಬಹುದಾಗಿದೆ. ವೈಶ್ಯರನ್ನು ವರ್ಣಾಶ್ರಮ ವ್ಯವಸ್ಥೆಯಲ್ಲಿ ರೈತಾಪಿ ವರ್ಗಕ್ಕೆ ಸೇರಿಸಿರುವುದು ಕಂಡುಬರುತ್ತದೆ ಆದರೆ ಈ ಪ್ರದೇಶದಲ್ಲಿ ಕಂಡುಬರುವ ಶಾಸನಗಳನ್ನು ಅವಲೋಕಿಸಿದಾಗ ವರ್ತಕರಾಗಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ಇವರು ವ್ಯಾಪಾರ ಮಾರ್ಗಗಳಲ್ಲಿ, ಕೆಲವು ಪ್ರಮುಖ ಹಳ್ಳಿಗಳಲ್ಲಿ ನೆಲೆಸಿ ಅಂಗಡಿಗಳ ಮೂಲಕ ವ್ಯಾಪಾರ ನಡೆಸುತ್ತಿದ್ದರು. ಇವರು ಹಳ್ಳಿಗಳನ್ನು ಪಟ್ಟಣಗಳನ್ನಾಗಿ ಪರಿವರ್ತಿಸಲು ಕಾರಣರಾದರು ಎನ್ನಬಹುದು. ಇವರು ದೊಡ್ಡ ಶ್ರೀಮಂತರಾಗಿದ್ದರು. ಬೆಳ್ಳಿ, ಬಂಗಾರ, ಆಭರಣ ಮುಂತಾದ ಸಂಪತ್ತನ್ನು ಹೇರಳವಾಗಿ ಹೊಂದಿದ್ದರು. ವೈಶ್ಯರನ್ನು ಮುದಗಲ್ ಶಾಸನದಲ್ಲಿ ಕುಬೇರನ ವಂಶಕ್ಕೆ ಹೋಲಿಸಲಾಗಿದೆ. ಬಹುತೇಕವಾಗಿ ಈ ಪ್ರದೇಶದಲ್ಲಿ ವ್ಯಾಪಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡವರಾಗಿದ್ದರು. ಇವರನ್ನು ಶಾಸನಗಳಲ್ಲಿ ನಖರರೆಂದು ಕರೆಯಲಾಗಿದೆ. ರಾಜರು, ಸಾಮಂತರಂತೆ ಭೂದಾನವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿದ್ದರು. ನಖರ ಅರವತ್ತೊಕ್ಕಲು, ನಖರ ಎಂಬ ವ್ಯಾಪಾರ ಸಂಘಗಳನ್ನು ಕಟ್ಟಿಕೊಂಡಿದ್ದರು.[೩೦೮] ಕುಟುಂಬವನ್ನು ಬಹಳ ಜಾಗ್ರತಿಯಿಂದ ನೋಡಿಕೊಳ್ಳುವವರಾಗಿದ್ದರು. ಕೌಟುಂಬಿಕವಾಗಿ ಈ ಸಮುದಾಯದಲ್ಲಿ ಯಾರಾದರು ಮೈನೆರೆದರೆ, ಜವಳ ಕಾರ್ಯಕ್ರಮ(ಹುಟ್ಟು ಕೂದಲನ್ನು ತೆಗೆಯುವುದು) ಮದುವೆ, ಸೀಮಂತ, ಮಗನ ನಾಮಕರಣ, ಹುಟ್ಟು ಹಬ್ಬ ಮುಂತಾದ ಕಾರ್ಯಕ್ರಮಗಳನ್ನು ಆಚರಿಸಿದರೆ ಇವರು ನಖರೇಶ್ವರ ಮತ್ತು ಚನ್ನಕೇಶವ ದೇವರುಗಳಿಗೆ ಕಾಣಿಕೆ, ಭೂದಾನ ಮತ್ತು ಹಣದ ರೂಪದಲ್ಲಿ ದಾನ ಮಾಡುತ್ತಿದ್ದರು ಎಂಬುದಾಗಿ ಮಾನ್ವಿ ತಾಲೂಕಿನ ಗೂಗೇಬಾಳ(೧೨೧)-ಕ್ರಿ.ಶ. ೧೧೭೪ರ ಶಾಸನ, ಸಿಂಧನೂರು ತಾಲೂಕಿನ ಬಳಗಾನೂರು(೩೮)-ಕ್ರಿ.ಶ. ೧೧೮೨ರ ಶಾಸನ ಹಾಗೂ ಲಿಂಗಸೂಗೂರು ತಾಲೂಕಿನ ಮುದಗಲ್ (೪೯)-ಕ್ರಿ.ಶ.೧೨೧೫ರ ಶಾಸನಗಳಲ್ಲಿ ನಖರರ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸಂಗತಿಗಳನ್ನು ವಿವರಿಸಲಾಗಿದೆ. ಇವು ನಖರರನ್ನು ಕುರಿತು ತಿಳಿಸುವ ಬಹು ಮುಖ್ಯ ಶಾಸನಗಳಾಗಿವೆ.[೩೦೯] ಇವುಗಳಲ್ಲದೆ ಈ ಪ್ರದೇಶದಲ್ಲಿ ಇನ್ನೂ ಅನೇಕ ಶಾಸನಗಳು ಲಭ್ಯವಿವೆ. ವೈಶ್ಯರ ಪ್ರಭಾವವನ್ನು ಈ ಪ್ರದೇಶದಲ್ಲಿ ರಾಯಚೂರು, ಬಳಗಾನೂರು, ಕರಡಕಲ್, ಮುದಗಲ್, ಕವಿತಾಳ, ಕಪಗಲ್, ಸಾಲಗುಂದಿ ಹಾಗೂ ಮುಕ್ಕುಂದಿ ಮುಂತಾದ ಸ್ಥಳಗಳಲ್ಲಿ ಈಗಲೂ ವೈಶ್ಯರು ಹೆಚ್ಚಿನ ಪ್ರಮಾಣದಲ್ಲಿರುವುದು ಕಂಡುಬರುತ್ತದೆ.

ಇವರೊಂದಿಗೆ ಕರಡಿಕಲ್ಲು ೩೦೦ರ ಸೆಟ್ಟಿಗುತ್ತ, ಮುಂಮರಿದಂಡ ಮುಂತಾದವರು ಸಹ ವ್ಯಾಪಾರಸ್ಥ ರಾಗಿದ್ದು, ವೈಶ್ಯರೆಂದು ಮುದಗಲ್(೪೯)೧೨೧೫ರ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ವರ್ತಕರಾಗಿದ್ದ ನಖರರ(ವೈಶ್ಯರ) ಮೇಲೆ ವ್ಯಾಪಾರ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಅಂಗಡಿದೆರೆ ಎಂಬ ತೆರಿಗೆಯನ್ನು ಕಟ್ಟುತ್ತಿದ್ದರು. ಅಲ್ಲದೆ ಇಲ್ಲಿ ನಡೆಯುವ ಮಹಾಜನರ ಮದುವೆಗಳಿಗೆ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಇವರು ವ್ಯಾಪಾರವನ್ನು ಅಂಗಡಿಗಳ ಮೂಲಕ ನಡೆಸುತ್ತಿದ್ದರು. ಮಾಳಿಗೆ ಮನೆಗಳನ್ನು ಹೊಂದಿದ್ದರು. ಮುಕ್ಕುಂದಿಯಲ್ಲಿ ಹೊಸದಾದ ಪೇಟೆಯ ರಚನೆಯನ್ನು ಮಾಡಲಾಗಿತ್ತು. ಆ ಪೇಟೆಯಲ್ಲಿ ಊರಿನ ಮೇಲ್ವವರ್ಗದ ಅಂಗಡಿದಾರರು ಮಾತ್ರ ವ್ಯಾಪಾರವನ್ನು ನಡೆಸಬಹುದಾಗಿತ್ತು.[೬೦] ಇದರಂತೆ ಕರಡಿಕಲ್‌ನಲ್ಲಿಯೂ ಅಂಗಡಿಯ ಬೀದಿಯಿತ್ತು. ಈ ಬೀದಿಯಲ್ಲಿ ವ್ಯಾಪಾರಸ್ಥರಿಗೆ ಮಾತ್ರ ಪ್ರವೇಶವಿತ್ತು. ಕೆಳಜಾತಿಯವರಿಗೆ ಪ್ರವೇಶವಿರಲಿಲ್ಲ. ಕರಡಿಕಲ್‌ನಲ್ಲಿ ಅಂಗಡಿಗಳು ಹುಲ್ಲಿನ ಅಂಗಡಿ, ಮಾಳಿಗೆ ಅಂಗಡಿಗಳಿದ್ದವು. ಪ್ರತಿ ವರ್ಷ ಮಾಳಿಗೆ ಅಂಗಡಿಗೆ ಎರಡು ಪಣವಡ್ಡ, ಹುಲ್ಲಿನ ಅಂಗಡಿಗೆ ಎರಡು ಪಣವಡ್ಡ ಎಂಬ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಇವರು ಯಾವುದೇ ಧಾನ್ಯಗಳನ್ನು ಮಾರಿದರೆ ಅದಕ್ಕೂ ಕೆಲವು ಸುಂಕಗಳನ್ನು ನೀಡಬೇಕಿತ್ತು. ಅಲ್ಲದೆ ಸಾರಿಗೆ ವ್ಯವಸ್ಥೆ ಆಗ ಎತ್ತು, ಕತ್ತೆ, ಕುದುರೆ, ಕೋಣಗಳ ಮೂಲಕ ನಡೆಯುತ್ತಿತ್ತು. ಇವುಗಳನ್ನು ವ್ಯಾಪಾರಸ್ಥರು ಸರಕುಗಳನ್ನು ಸಾಗಿಸಲು ಬಳಸುತ್ತಿದ್ದರು. ಈ ಪ್ರಾಣಿಗಳು ಹೊರುತ್ತಿದ್ದ ಭಾರದ ಆಧಾರದ ಮೇಲೆ ಸುಂಕವನ್ನು ವಿಧಿಸಲಾಗುತ್ತಿತ್ತು ಎಂದು ಕರಡಿಕಲ್(೬)–ಕ್ರಿ.ಶ. ೧೦೭೯ರ ಶಾಸನದಿಂದ ತಿಳಿದುಬರುತ್ತದೆ.[೬೧] ಇಷ್ಟೆಲ್ಲಾ ಬಹುವಿಧವಾಗಿ ತೆರಿಗೆಗಳನ್ನು ವಿಧಿಸಿದರೂ ಹೆಚ್ಚಿನ ಪ್ರಮಾಣದಲ್ಲಿ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಆರ್ಥಿಕವಾಗಿ ಬಲಾಢ್ಯರಾಗಿದ್ದ ಇವರು ಪ್ರಭುತ್ವದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಪಟ್ಟಣ ಸ್ವಾಮಿಗಳಾಗಿ ಕಾರ್ಯನಿರ್ವಸುತ್ತಿದ್ದರು. ಇದಕ್ಕೆ ಮುಕ್ಕುಂದಿ(೧೪) ಕ್ರಿ.ಶ. ೧೫೫೬ರ ಶಾಸನ ಸಾಕ್ಷಿಯಾಗಿದೆ.[೬೨] ರಾಜ್ಯಾಡಳಿತದ ಸೂತ್ರಧಾರರಾಗಿದ್ದ ಮಹಾಜನರ ಪಾದ ಪೂಜೆಗಾಗಿ ಭೂಮಿಯನ್ನು ಖರೀದಿಸಿ ದಾನ ಮಾಡುತ್ತಿದ್ದರು. ಇವರು ಆಡಳಿತಾತ್ಮಕವಾಗಿಯೂ ಯಾವುದೇ ಅಡಚಣೆ ಬರದಂತೆ ಅನುಸರಿಸುವ ನೀತಿಯನ್ನು ದಾನ ನೀಡುವುದರ ಮೂಲಕ ವ್ಯಕ್ತಪಡಿಸುತ್ತಿದ್ದರು. ಇವರು ಯಾವುದೇ ಕಾರ್ಯ ಮಾಡಿದರೂ ಅದರ ಹಿಂದೆ ಬಲವಾದ ಉದ್ದೇಶವನ್ನು ಹೊಂದಿರುತ್ತಿದ್ದರು. ನಖರೇಶ್ವರ ಇವರ ಕುಲದೇವರು. ಮಹಾಜನರ ಪಾದಪೂಜೆಗೆ ಭೂದಾನ ಮಾಡಿದುದುಕ್ಕೆ ಬಳಗಾನೂರು(೩೭)– ಕ್ರಿ.ಶ. ೧೧೭೫ರ ಶಾಸನ ಆಧಾರವಾಗಿದೆ.[೬೩] ಹೀಗೆ ವಿವಿಧ ಮೂಲಗಳಿಂದ ಆದಾಯವನ್ನು ಹೊಂದಿದ್ದ ನಖರರಿಗೆ ಹಲವು ಕಟ್ಟಳೆಗಳನ್ನು ವಿಧಿಸಲಾಗಿತ್ತು. ಇದು ವೈಶ್ಯರನ್ನು ಅಧೀನಕ್ಕೊಳಪಡಿಸುವ ತಂತ್ರವಾಗಿತ್ತೆನ್ನಬಹುದು. ವೀಸ, ದಸ ಮತ್ತು ಪಂಚದ(೨೦–೧೦–೫), ಲೆಕ್ಕದಲ್ಲಿ(ತೆರಿಗೆಯನ್ನು) ನೀಡುವುದು ಹಾನಿಯಾಗಲಿ, ಲಾಭವಾಗಲಿ ೫ರ ಲೆಕ್ಕದಲ್ಲಿ ನೀಡಬೇಕು ದಶವನ್ನು(೧೦) ನೀಡದಿದ್ದಲ್ಲಿ ವೀಸಕವನ್ನು(೨೦) ನೀಡಬೇಕು. ಇವು ನೀಡದೆ ಊರಿಗೆ ಪ್ರವೇಶಿಸಿದರೆ ತೆರಿಗೆಯನ್ನು ದ್ವಿಗುಣ, ತ್ರಿಗುಣದಲ್ಲಿ ನೀಡಬೇಕು ಎಂದು ಸಿರವಾರದ ೨೦೦ ಜನ ಮಹಾಜನರು ನಿರ್ಣಯಿಸಿದ ಕಟ್ಟಳೆಯಾಗಿದೆ. ಇದು ಮಾನ್ವಿ ತಾಲೂಕಿನ ಸಿರವಾರ(೭೫)–ಕ್ರಿ.ಶ. ೯ನೆಯ ಶತಮಾನದ ಶಾಸನದಿಂದ ತಿಳಿದು ಬರುತ್ತದೆ.[೬೪] ಇದನ್ನು ಗಮನಿಸಿದರೆ ಬ್ರಾಹ್ಮಣರು ಮತ್ತು ವೈಶ್ಯರ ನಡುವಿನ ಸಂಬಂಧಗಳು ಉತ್ತಮವಾಗಿರಲಿಲ್ಲವೆನಿಸುತ್ತದೆ. ಆ ಕಾರಣಕ್ಕಾಗಿ ಈ ಬಗೆಯ ನಿಯಮಗಳನ್ನು ವಿಧಿಸಲಾಗಿತ್ತೆಂದು ತಿಳಿಯಬಹುದು. ಇಂತಹ ಕಟ್ಟಳೆಗಳನ್ನು ಮೀರುವ ಪ್ರಯತ್ನಗಳನ್ನು ವೈಶ್ಯರು ದಾನ ಧರ್ಮಗಳನ್ನು

ನೀಡುವುದರ ಮೂಲಕ ಬಗೆಹರಿಸಿಕೊಳ್ಳುತ್ತಿದ್ದರು. ಆದರೂ ವೈಶ್ಯರು ತಮ್ಮ ವ್ಯಾಪಾರ ಧರ್ಮವನ್ನು ಬಿಡುತ್ತಿರಲಿಲ್ಲ. ಇವರು ವೈದಿಕ ಸಂಪ್ರದಾಯಗಳಲ್ಲಿ ನಂಬಿಕೆಯನ್ನು ಇಟ್ಟುಕೊಂಡವರಾಗಿದ್ದರು. ಇವರು ವಿಜಯನಗರೋತ್ತರ ಕಾಲದಲ್ಲಿ ಈ ಪ್ರದೇಶದ ವ್ಯಾಪಾರದ ಮೇಲೆ ಪ್ರಭುತ್ವವನ್ನು ಸಾಧಿಸಿದ್ದರು. ಕೆಲವರು ಗ್ರಾಮಮಟ್ಟದಲ್ಲಿ ಅಂಗಡಿಗಳನ್ನು ಹೊಂದಿದ್ದರೆ, ಇನ್ನೂ ಕೆಲವರು ಪಟ್ಟಣಗಳಲ್ಲಿ ವ್ಯಾಪಾರಸ್ಥ ರಾಗಿದ್ದರು. ನಂತರ ನಿಜಾಮನ ಕಾಲಕ್ಕೆಲ್ಲ ಇವರಲ್ಲಿ ಕೆಲವರು ಹಳ್ಳಿಗಳನ್ನು ತೊರೆದು ಪಟ್ಟಣಗಳನ್ನು ಸೇರಿಕೊಂಡರು. ಆಗ ವ್ಯಾಪಾರದಿಂದ ಸಂಪಾದಿಸಿದ ಸಂಪತ್ತನ್ನು ಪಟ್ಟಣದ ವ್ಯಾಪಾರದಲ್ಲಿ ತೊಡಗಿಸಿ ಕೊಂಡರು. ಹಳ್ಳಿಗಳಲ್ಲಿದ್ದವರಲ್ಲಿ ನಿಜಾಮನು ಲೆವಿಯನ್ನು ವಸೂಲಿ ಮಾಡುತ್ತಿದ್ದನು.

ಇನ್ನು ಅನೇಕರು ಸಮಾಜದಲ್ಲಿ ಅಸ್ತಿತ್ವವೇ ಇಲ್ಲದ ರೀತಿಯಲ್ಲಿ ಜೀವನ ಸಾಗಿಸುತ್ತಿದ್ದರು. ಅದರಲ್ಲಿ ಅಸ್ಪೃಶ್ಯರೆಂದು ಕರೆಯಿಸಿಕೊಂಡವರ ಜೀವನ ಗತಿ ಅತ್ಯಂತ ಶೋಚನಿಯವಾಗಿತ್ತು. ಈ ಪ್ರದೇಶದಲ್ಲಿ ಕೆಳವರ್ಗಗಳ ಸ್ಥಿತಿ ಚಿಂತಾಜನಕ ಸ್ವರೂಪವನ್ನು ಪಡೆದಿತ್ತು. ಚರಿತ್ರೆ ಬರವಣಿಗೆಯಲ್ಲಿ ಕಡೆಗಣಿಸಲ್ಪಟ್ಟ ಕೆಳವರ್ಗಗಳು ರಾಜಪ್ರಭುತ್ವದ ವ್ಯವಸ್ಥೆಯಲ್ಲಿ ತುಳಿತಕ್ಕೊಳಪಟ್ಟಿದ್ದವು. ನಿಕೃಷ್ಟವಾದ ಜೀವನವನ್ನು ಸಾಗಿಸುತ್ತಿದ್ದವು. ಇಂಥವುಗಳ ತಲಸ್ಪರ್ಶಿ ಅಧ್ಯಯನವನ್ನು ಕೈಗೊಂಡವರಲ್ಲಿ ಡಿ.ಡಿ.ಕೊಸಾಂಬಿ, ಆರ್.ಎಸ್.ಶರ್ಮ, ರೋಮಿಲಾ ಥಾಪರ್, ಸುಮಿತ್ ಸರ್ಕಾರ್, ಕರ್ನಾಟಕದ ಸಂದರ್ಭದಲ್ಲಿ ಎಸ್.ಶೆಟ್ಟರ್, ಬಿ.ಸುರೇಂದ್ರರಾವ್, ಎಸ್. ಚಂದ್ರಶೇಖರ್, ಎಸ್.ಎ. ಬಾರಿ, ಅಶೋಕ ಶೆಟ್ಟರ್, ವಿಜಯ್ ಪೂಣಚ್ಚ ತಂಬಂಡ, ಕೆ. ಮೋಹನ್‌ಕೃಷ್ಣ ರೈ ಮುಂತಾದ ಚರಿತ್ರೆಕಾರರು. ಚರಿತ್ರೆಯನ್ನು ಸಾಮಾಜಿಕ ಮತ್ತು ಆರ್ಥಿಕ ನೆಲೆಗಟ್ಟಿನಿಂದ ನಿರ್ಮಿಸುವ ಪ್ರಯತ್ನದಲ್ಲಿ ಅಲಕ್ಷಿತವರ್ಗದ ಜನರಿಗೆ ನ್ಯಾಯವನ್ನು ಒದಗಿಸುವತ್ತ ಸಾಗಿದ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥಗಳು ಈ ಹಿನ್ನೆಲೆಯಲ್ಲಿ ಸ್ವಲ್ಪ ಮಟ್ಟಿನ ಕೆಲಸ ಮಾಡಿರುವುದು ಕಂಡುಬರುತ್ತದೆ.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕೆಳವರ್ಗಗಳ ಸ್ಥಿತಿ ಅತ್ಯಂತ ಕನಿಷ್ಠಕರವಾಗಿತ್ತು. ಅಸ್ಪೃಶ್ಯತೆ ಎಂಬುದು ತಾಂಡವಾಡುತ್ತಿದ್ದಿತು. ಕೆಳಜಾತಿಗೆ ಸೇರಿದ ಹೊಲೆ ಮಾದಿಗರು ಪ್ರತಿಯೊಂದು ಊರಿನ ಹೊರಗಡೆ ವಾಸಿಸಬೇಕಿತ್ತು. ವರ್ತಮಾನದಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಹೊಲೆಮಾದಿಗರ ಕೇರಿಗಳು ಪ್ರತ್ಯೇಕವಾಗಿಯೇ ಇವೆ. ಇವರು ಸವರ್ಣೀಯರನ್ನು ಮುಟ್ಟಿಸಿಕೊಳ್ಳುವಂತಿರಲಿಲ್ಲ. ಅಧಿಕಾರಿಶಾಹಿ ವರ್ಗ ಸಾಮಾಜಿಕ ಸಂರಚನೆಯನ್ನು ತಮಗೆ ಪರಿಸ್ಥಿತಿಗನುಗುಣವಾಗಿ ಪರಿವರ್ತಿಸ ಲಾಗುತ್ತಿತ್ತು. ಈ ಪ್ರದೇಶದಲ್ಲಿ ಅಸ್ಪೃಶ್ಯರ ಸ್ಥಿತಿ ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಕೆಳಮಟ್ಟದ್ದಾಗಿತ್ತು ಎಂಬುದಕ್ಕೆ ಶಾಸನ ಪಾಠ ಹೀಗಿದೆ. "ಕೀಲುಕುಲದವರು ತಮ್ಮ ಮದುವೆಯ ಬಂಡಿಯನ್ನು ಅಂಗಡಿಯ ಬೀದಿಯೊಳಗೆ ತರಬಾರದೆಂದೂ ಹಾಗೇನಾದರೂ ಬಂದರೆ ಹನ್ನೆರಡು ಗದ್ಯಾಣ ಹೊನ್ನನ್ನು ದಂಡವಾಗಿ ಕೊಡಬೇಕೆಂದು ಕಟ್ಟಳೆ ವಿಧಿಸಲಾಗಿದೆ" ಹಾಗೆಯೇ ಮುಂದುವರೆದು ಬಡಿದವನಿಗೆ ಹನ್ನೆರಡು ಪಣದಂಡ, ಎಂಜಲು ಉಗಿದರೆ, ಚಪ್ಪಲಿಯಲ್ಲಿ ಹೊಡೆದರೆ ಆರು ಪಣದಂಡ ಇರಿದವನಿಗೆ ಮೂರು ಗದ್ಯಾಣದಂಡ, ಇನ್ನೂ ಕೆಲವು ತಪ್ಪುಗಳಿಗೆ ಕೆಲವು ಪಣವನ್ನು ನಿಗದಿಗೊಳಿಸಿ ದಾನ ಬಿಡಲಾಗಿದೆ ಎಂದು ಕರಡಕಲ್(೬) ಕ್ರಿ.ಶ. ೧೧೭೭ಶಾಸನದಿಂದ ತಿಳಿದುಬರುತ್ತದೆ.

ಮೊದಲಿನ ಅಂಶವನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ಜಾತಿ ಪದ್ಧತಿ ಅಸ್ತಿತ್ವದಲ್ಲಿದ್ದಿತು. ವರ್ತಕರು ಬೀದಿಯ ರಚನೆ ಮಾಡಿಕೊಂಡವರು. ಈ ಬೀದಿಯಲ್ಲಿ ಬಹುತೇಕ ವರ್ತಕರು ತಮ್ಮ

ಅಂಗಡಿಗಳನ್ನು ಹೊಂದಿದ್ದರು. ಮೇಲಿನ ಮೂರು ವರ್ಣದವರು ಸಾಮಾಜಿಕ ವ್ಯವಸ್ಥೆಯಲ್ಲಿ ಉತ್ತಮ ಸ್ಥಾನಮಾನವನ್ನು ಹೊಂದಿದ್ದರು. ಇವರು ತಮ್ಮ ಬೀದಿಗಳ ಪಕ್ಕದಲ್ಲಿಯೆ ದೇವಾಲಯಗಳನ್ನು ಹೊಂದಿದ್ದರು. ಆ ದೇವಾಲಯಗಳಿಗೆ ಹೋಗಬೇಕಾದರೆ ಈ ಅಂಗಡಿ ಬೀದಿಯಲ್ಲಿಯೇ ಹೋಗಬೇಕಿತ್ತು. ಪ್ರತಿ ಗ್ರಾಮದಲ್ಲಿಯೂ ಮದುವೆಯಾದ ಹೊಸತರದಲ್ಲಿ ಮೆರವಣಿಗೆ ಮಾಡುವುದು ಸಹಜ ಪ್ರಕ್ರಿಯೆ. ಈ ಮೆರವಣಿಗೆ ಊರಿನ ಮುಖ್ಯ ಬೀದಿಯಲ್ಲಿ ದೇವಾಲಯಕ್ಕೆ ಹೋಗಿ ಬರುವ ಸಂಸ್ಕೃತಿ ಇರುತ್ತದೆ. ಆಗ ಬಂಡಿಯ ಮೇಲೆ ಮೆರವಣಿಗೆ ಮಾಡುತ್ತಿದ್ದಿರಬೇಕು. ಇದಕ್ಕೆ ಅವಕಾಶ ನೀಡದಿರುವುದು ಕಂಡುಬರುತ್ತದೆ. ಇದು ಕೆಳಜಾತಿಗಳ ಜನರ ಸಾಮಾಜಿಕ ಜೀವನವನ್ನು ಅತ್ಯಂತ ಕನಿಷ್ಟಕರವಾಗಿ ಅಂದಿನ ಸಮಾಜ ನೋಡುತ್ತಿತ್ತೆಂಬುದಕ್ಕೆ ಬಲವಾದ ಸಾಕ್ಷಿಯಾಗಿದೆ. ಎರಡನೆಯ ಅಂಶವನ್ನು ಅವಲೋಕಿಸಿದಾಗ ಕರಡಿಕಲ್‌ನ ಅಂಗಡಿ ಬೀದಿಯಲ್ಲಿರುವ ವ್ಯಾಪಾರಸ್ಥರು ಆಗಾಗ ಬಡಿದಾಡುತ್ತಿದ್ದಿರಬೇಕು. ಅದಕ್ಕೆ ಯಾರೂ ಪರಸ್ಪರ ಗುದ್ದಾಡಬಾರದೆಂದು ಈ ಬಗೆಯ ನಿಯಮಗಳನ್ನು ಜಾರಿಗೊಳಿಸಿರುವುದು ಕಂಡುಬರುತ್ತದೆ. ಇದು ಮೇಲ್ವರ್ಗದವರು ಹೊರಡಿಸಿದ ಕಟ್ಟಳೆಯಾಗಿ ಕಂಡುಬರುತ್ತದೆ.

ಈ ಪ್ರದೇಶದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಅತ್ಯಂತ ಹಿಂದುಳಿದ ಕೆಳಜಾತಿಗಳ ಜನಜೀವನ ಕೆಳಮಟ್ಟದ್ದಾಗಿತ್ತು. ಇವರು ಮೇಲ್ವರ್ಗದಿಂದ ತುಳಿತಕ್ಕೊಳಪಟ್ಟಿದ್ದು, ಇವರನ್ನು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲೇಳದಂತೆ ಮಾಡಿರುವುದು ಕಂಡುಬರುತ್ತದೆ. ನಿಜಾಮರ ಆಳ್ವಿಕೆಯಲ್ಲಿ ಬ್ರಾಹ್ಮಣರು ಮತ್ತು ಲಿಂಗಾಯತರು ಭೂಮಾಲಿಕರಾಗಿ ಕಂಡುಬರುತ್ತಾರೆ. ಈ ಪ್ರದೇಶದಲ್ಲಿ ಇವರ ಪ್ರಭಾವ ಅಧಿಕವಾಗಿದೆ. ಈ ಕಾಲಕ್ಕೆ ಸ್ಥಳೀಯವಾಗಿ ಒಂದೇ ಕಡೆ ನೆಲೆಸಿದ ಕೆಲವು ಜನ ಹೊಲೆಯ-ಮಾದಿಗ ಜನಾಂಗದವರಿಗೆ ಇನಾಂ ಭೂಮಿಗಳು ಸಿಕ್ಕಿವೆ. ಹಾಗೆಯೇ ಸ್ವಂತ ಭೂಮಿಯನ್ನು ಹೊಂದಿರುವವರೂ ಇದ್ದಾರೆ. ದೊಡ್ಡ ಪ್ರಮಾಣದ ಜಮೀನುಗಳಿಲ್ಲದೆ ಎರಡು ಎಕರೆಯಿಂದ ನಾಲ್ಕು ಎಕರೆಯ ಭೂಮಿಯನ್ನು ಹೊಂದಿರುವುದು ಕಂಡುಬರುತ್ತದೆ. ಸ್ಥಳೀಯವಾಗಿ ಒಂದೇ ಕಡೆ ಯಾರು ವಾಸಿಸಿರುವರೋ ಅಂತಹ ಕೆಳಜಾತಿಗಳ ಜನರು ಭೂಮಿಯನ್ನು ಹೊಂದಿರುವುದು ಕಂಡುಬರುತ್ತದೆ. ಹೊಟ್ಟೆಪಾಡಿಗಾಗಿ ಊರಿಂದ ಊರಿಗೆ, ಸುಗ್ಗಿಗಾಗಿ ತಿರುಗಾಡುವ ಬಹುಪಾಲು ಜನರಿಗೆ ಭೂಮಿಯಿಲ್ಲದ್ದು ಗೋಚರಿಸುತ್ತದೆ. ತಿರುಗಾಟ ಸಾಕಾಗಿ ಎಲ್ಲಾದರೂ ಒಂದು ಕಡೆ ನೆಲೆಸಿದಾಗ ಭೂಮಿಯಿಲ್ಲದ್ದಕ್ಕಾಗಿ ಹೊಟ್ಟೆಪಾಡಿಗಾಗಿ ಅನಿವಾರ್ಯವಾಗಿ ಜೀತದಾಳುಗಳಾಗಿ ದುಡಿಯಲು ಆರಂಭಿಸಿದರು. ಅದು ಹಾಗೆಯೇ ಮುಂದುವರೆಯಿತು. ಈ ಜೀತದ ಪದ್ಧತಿಗೆ ಹೆಚ್ಚಾಗಿ ಒಳಗಾದವರೆಂದರೆ ಹೊಲೆಯ, ಮಾದಿಗರು, ವಡ್ಡರು, ಬೇಡರು, ಲಂಬಾಣಿಗಳು ಮುಂತಾದ ಜಾತಿಗಳ ಜನಗಳಾಗಿದ್ದರು. ಅಸ್ಪೃಶ್ಯತಾ ನಿವಾರಣೆಗಾಗಿ ೧೨ನೆಯ ಶತಮಾನದಲ್ಲಿ ವಚನಕಾರರು, ನಂತರದಲ್ಲಿ ದಾಸರು, ತತ್ವಪದಕಾರರು ಮುಂತಾದ ಸಮಾಜ ಸುಧಾರಕರು ಜಾತಿ ವ್ಯವಸ್ಥೆಯನ್ನು, ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಆದರೆ ಯಾವುದೇ ಬದಲಾವಣೆಯಾಗದೆ ಹಾಗೆಯೇ ಇಂದಿಗೂ ಮುಂದುವರೆದು ಕೊಂಡು ಬಂದಿದೆ.

**೩.೪.೨.೨. ಶಿಕ್ಷಣ**

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಶಿಕ್ಷಣ ಎಲ್ಲ ವರ್ಗಗಳಿಗೆ ಸಿಗುತ್ತಿರಲಿಲ್ಲ. ಅವಕಾಶ ಸಿಕ್ಕವರು ಶಿಕ್ಷಣ ಪಡೆದರೆಂದು ಹೇಳಬಹುದು. ಮೇಲು-ಕೀಳುಗಳ ಮಧ್ಯ ಬ್ರಾಹ್ಮಣರೇ ಹೆಚ್ಚು ವಿದ್ಯಾವಂತರಾಗಿರುವುದು ಕಂಡುಬರುತ್ತದೆ. ಹಾಗೆಂದು ಕೆಳಜಾತಿಗಳಿಗೆ ಸೇರಿದವರನ್ನು ಅಕ್ಷರ

ಜ್ಞಾನವಿಲ್ಲದವರೆಂದು ಹೇಳಲು ಬರುವುದಿಲ್ಲ. ಪ್ರಮಾಣ ಹೆಚ್ಚು ಕಡಿಮೆ ಇರಬಹುದು. ಆದರೆ ತಳ್ಳಿಹಾಕುವಂತಿಲ್ಲ. ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಬ್ರಾಹ್ಮಣರ ಪ್ರಭಾವವಿರುವುದನ್ನು ಅಲ್ಲಗಳೆಯುವಂತಿಲ್ಲ. ಸಾಮಾಜಿಕ ಶ್ರೇಣೀಕರಣದಲ್ಲಿ ಕೆಳಜಾತಿಗೆ ಸೇರಿದ ಜನರ ಜೀವನ ನಿರ್ವಹಣೆಯೇ ಕಷ್ಟದ ಸಂಗತಿಯಾಗಿತ್ತು. ಶಿಕ್ಷಣವನ್ನು ಅಗ್ರಹಾರ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನಗಳ ಮೂಲಕ ನೀಡಲಾಗುತ್ತಿತ್ತು. ಈ ಕುರಿತು ಅನೇಕ ಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಅಗ್ರಹಾರಗಳ ಸ್ಥಾಪನೆಯನ್ನು ಹೆಚ್ಚಾಗಿ ಕಾಣಬಹುದಾಗಿದೆ.

ಬ್ರಾಹ್ಮಣರು ಇರುವ ಪ್ರದೇಶಗಳನ್ನು ಅಗ್ರಹಾರಗಳು ಎಂಬುದಾಗಿ ಕರೆಯಲಾಗುತ್ತಿತ್ತು. ಬ್ರಾಹ್ಮಣರಿಗೆ ವಾಸಿಸಲು ದಾನದ ರೂಪದಲ್ಲಿ ಆ ಪ್ರದೇಶಗಳನ್ನು ನೀಡಲಾಗುತ್ತಿತ್ತು. ಇಂತಹ ಗ್ರಾಮಗಳನ್ನು ಬ್ರಾಹ್ಮಣರೇ ನೋಡಿಕೊಳ್ಳುತ್ತಿದ್ದರು. ಇವರಿಗೆ ಸರ್ಕಾರದಿಂದ ಸಕಲ ಸವಲತ್ತುಗಳು ಲಭಿಸುತ್ತಿದ್ದವು. ಅಧ್ಯಾಪನ ಮಾಡುವುದು ಅವರ ವೃತ್ತಿಯಾಗಿತ್ತು. ಅವರು ಅಗ್ರಹಾರಗಳ ಮೂಲಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಅಗ್ರಹಾರಗಳು ಈ ಪ್ರದೇಶದಲ್ಲಿ ಕ್ರಿ.ಶ. ೯ರಿಂದ೧೬ನೆಯ ಶತಮಾನದವರೆಗೆ ಅಸ್ತಿತ್ವದಲ್ಲಿದ್ದವು. ಕ್ರಿ.ಶ. ೯ ರಿಂದ ೧೨ನೆಯ ಶತಮಾನದವರೆಗೆ ಅಗ್ರಹಾರಗಳ ಸ್ಥಾಪನೆ ಮೇಲಿಂದ ಮೇಲೆ ನಡೆಯಿತು. ಈ ಸಂದರ್ಭದಲ್ಲಿ ಬ್ರಾಹ್ಮಣರು ಮಹಾಜನರಾಗಿ ಕಾಣಿಸಿಕೊಂಡಿದ್ದರು. ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಅಗ್ರಹಾರಗಳಿಗೆ ಪ್ರಭುತ್ವ ಸಹಕಾರ ನೀಡಿತು. ವಿಜಯನಗರೋತ್ತರ ಕಾಲದಲ್ಲಿ ಶಿಕ್ಷಣದಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಬಿಜಾಪುರ ಆದಿಲ್‌ಷಾಹಿಗಳು, ಮೊಗಲರು ಮತ್ತು ನಿಜಾಮರ ಆಳ್ವಿಕೆ ಕಂಡುಬರುವುದರಿಂದ ಸಾಂಪ್ರದಾಯಿಕ ಶಿಕ್ಷಣಕ್ಕೆ ಧಕ್ಕೆ ಉಂಟಾಯಿತು. ಮುಸ್ಲಿಂ ಅರಸರ ಕಾಲದಲ್ಲಿ ಉರ್ದು ಮತ್ತು ಪರ್ಶಿಯನ್ ಭಾಷೆಗಳನ್ನು ರಾಜ್ಯ ಮತ್ತು ಆಡಳಿತ ಭಾಷೆಗಳನ್ನಾಗಿ ಜಾರಿಗೆ ತಂದಿರುವುದರಿಂದ ಉರ್ದು ಭಾಷೆಯನ್ನು ಕಲಿಸಲು ಶಾಲೆಗಳನ್ನು ಪ್ರಾರಂಭಿಸಿದರು. ಅವನ್ನು ಮದರಸಾ ಎಂದು ಕರೆಯುವರು. ಆದರೆ ಮುಸ್ಲಿಂ ಶಿಕ್ಷಣ ನೀಡುವ ಕೇಂದ್ರಗಳ ಉಲ್ಲೇಖ ಇಲ್ಲಿನ ಶಾಸನಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ನಿಜಾಮನ ಕಾಲದಲ್ಲಿ ಉರ್ದು ಶಿಕ್ಷಣ ಮುಂದುವರೆಯಿತು. ಹಾಗೆಂದು ಕನ್ನಡದ ಶಿಕ್ಷಣವಿರಲಿಲ್ಲವೆಂದಲ್ಲ ಉರ್ದುವಿನ ಜೊತೆಗೆ ಕನ್ನಡವನ್ನು ಕಲಿಯಲು ನಿಜಾಮನು ಅವಕಾಶ ಕಲ್ಪಿಸಿಕೊಟ್ಟಿದ್ದನು. ನಿಜಾಮರ ಕಾಲದಲ್ಲಿ ಬ್ರಾಹ್ಮಣರ ಪ್ರಭಾವ ಸ್ವಲ್ಪ ಕಡಿಮೆಯಾಯಿತೆನ್ನಬಹುದು. ಈ ಕಾಲದಲ್ಲಿ ಲಿಂಗಾಯತರ ಜೊತೆಗೆ ಹಿಂದುಳಿದ ವರ್ಗಗಳ ಜನರು ಶಿಕ್ಷಣ ಪಡೆಯಲು ಅನುಕೂಲವಾಯಿತು. ನಿಜಾಮನ ಆಡಳಿತವಿದ್ದಾಗ್ಯೂ ಇಲ್ಲಿ ಕ್ರೈಸ್ತ ಮಿಷನರಿಗಳಿಂದ ಶಿಕ್ಷಣ ನೀಡುವುದು ಆರಂಭವಾಗುತ್ತದೆ. ಕ್ರೈಸ್ತರು ಈ ಪ್ರದೇಶದ ಕುರುಬರು, ಬೆಸ್ತರು, ನೇಕಾರರು ಮುಂತಾದವರನ್ನು ಮತಾಂತರಗೊಳಿಸಿ ಶಿಕ್ಷಣ ನೀಡಿದರು. ಹಂತ ಹಂತವಾಗಿ ಸಾಮಾಜಿಕ ವ್ಯವಸ್ಥೆ ಪಲ್ಲಟಗೊಳ್ಳುತ್ತ ಬಂದಂತೆಲ್ಲಾ ಶಿಕ್ಷಣ ಪಡೆಯುವ ಅವಕಾಶಗಳು ಸ್ವಲ್ಪ ಪ್ರಮಾಣದಲ್ಲಿ ಲಭಿಸಿದವು. ಈ ಪ್ರದೇಶದಲ್ಲಿರುವ ಶಿಕ್ಷಣ ಕೇಂದ್ರಗಳೆಂದರೆ ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಚರ್ಚ್‌ಗಳು, ನಿಜಾಮ್ ಶಾಲೆಗಳು, ದೇವಾಲಯಗಳು ಮುಂತಾದವು.

* **ಅಗ್ರಹಾರಗಳು:** ದಿದ್ದಿಗೆ,[೨೧೫] ಬೆಳಗುರ್ಕಿ,[೨೧೬] ಸಾಲಗುಂದಿ,[೨೧೭] ಮುಕ್ಕುಂದಿ,[೨೧೮] ಒಳಬಳ್ಳಾರಿ,[೨೧೯] ಬಳಗಾನೂರು,[೨೨೦] ಸಿಂಧನೂರು[೨೨೧] ಇವು ಸಿಂಧನೂರು ತಾಲೂಕಿಗೆ ಸೇರಿದವುಗಳಾಗಿವೆ. ತಲೇಖಾನ್,[೨೨೨] ಬನ್ನಿಗೋಳ,[೨೨೩] ಮುದಗಲ್,[೨೨೪] ಮೇದಿನಾಪುರ[೨೨೫] ಇವು ಲಿಂಗಸೂಗೂರು ತಾಲೂಕಿಗೆ ಸೇರಿವೆ. ತಡಕಲ್,[೨೨೬] ಕಲ್ಲೂರು,[೨೨೭] ಕುರುಡಿ[೨೨೮] ಹಿರೇಕೊಟ್ನೆಕಲ್,[೨೨೯] ತುಪ್ಪದೂರು,[೨೩೦] ಮುಂತಾದವು

ಮಾನವಿ ತಾಲೂಕಿಗೆ ಸೇರುತ್ತವೆ. ಗಬ್ಬೂರು[೩೩೧] ದೇವದುರ್ಗದ ವ್ಯಾಪ್ತಿಗೆ ಸೇರಿದೆ. * **ಬ್ರಹ್ಮಪುರಿಗಳು:** ಗಬ್ಬೂರು(ದೇವದುರ್ಗ ತಾಲೂಕು),[೩೩೨] ಕರಡಿಕಲ್ಲು,[೩೩೩] ಮುದಗಲ್,[೩೩೪](ಲಿಂಗಸೂಗೂರು ತಾಲೂಕು), ಬಲ್ಲಟಗಿ,[೩೩೫] ಅತ್ತನೂರು[೩೩೬](ಮಾನವಿತಾಲೂಕು), * **ಚರ್ಚ್‌ಶಾಲೆಗಳು:** ರಾಯಚೂರು ಹಾಗೂ ಮುದಗಲ್(ಲಿಂಗಸೂಗೂರು ತಾಲೂಕು).[೩೩೭] * **ನಿಜಾಮ ಶಾಲೆಗಳು:** ಪ್ರಾಥಮಿಕ ಶಾಲೆಗಳು ಹೋಬಳಿಗೆ ಒಂದರಂತೆ ಇದ್ದವು. ಹೈಸ್ಕೂಲ್ ಮಾತ್ರ ಜಿಲ್ಲಾ ಕೇಂದ್ರವಾದ ರಾಯಚೂರಿನಲ್ಲಿತ್ತು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಗುಲ್ಬರ್ಗಾ, ಹೈದರಾಬಾದ್‌ಗೆ ಹೋಗಬೇಕಿತ್ತು. ಹೀಗೆ ಈ ಪ್ರದೇಶದಲ್ಲಿ ಶಿಕ್ಷಣ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಆರ್ಥಿಕವಾಗಿ ಸ್ವಲ್ಪ ಉತ್ತಮವಾಗಿರುವವರು ಶಿಕ್ಷಣ ಪಡೆಯುತ್ತಿದ್ದರು. ಜನಸಾಮಾನ್ಯರಿಗೂ ಶಿಕ್ಷಣ ಪಡೆಯುವ ಅವಕಾಶಗಳು ದೊರೆತವು.

### ೩.೪.೨.೩. ಮಹಿಳೆಯರ ಸ್ಥಾನಮಾನಗಳು

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಆರ್ಥಿಕ ವ್ಯವಸ್ಥೆಯ ಮೂಲ ಉತ್ಪಾದನಾ ಶಕ್ತಿಯೆಂದರೆ ಮಹಿಳೆಯರೇ ಆಗಿದ್ದಾರೆ. ಆರ್ಥಿಕವಾಗಿ ಪ್ರಬಲರಾಗಿರುವವರು ಅಲ್ಪಸಂಖ್ಯಾತರು, ಬಹುಸಂಖ್ಯಾತರು ಬಡತನದ ಬೇಗೆಯಲ್ಲಿ ಬೆಂದವರೆ ಆಗಿದ್ದರು. ಮಹಿಳೆಯರು ಸ್ವತಂತ್ರರಾಗಿರಲಿಲ್ಲ. ಆರ್.ಎಸ್.ಶರ್ಮ ಅವರು ಗುರುತಿಸಿರುವಂತೆ "ಜೀವನ ಹೊರೆಯಲು ಕೆಳವರ್ಣಗಳ ಮಹಿಳೆಯರು ಸ್ವತಃ ತಾವೇ ದುಡಿಯುತ್ತಿದ್ದುದರಿಂದ ಸ್ವಲ್ಪ ಮಟ್ಟಿಗೆ ಅವರು ತಮ್ಮ ಗಂಡಂದಿರಿಂದ ಸ್ವತಂತ್ರರಾಗಿರುತ್ತಿದ್ದರೆಂದು ತೋರುತ್ತದೆ. ಉಚ್ಚವರ್ಣದವರ ಮಡದಿಯರಿಗೆ ಸಾಮಾಜಿಕ ಗೌರವವಿರುತ್ತಿತ್ತಾದರೂ ತಮ್ಮ ಜೀವನೋಪಾಯವನ್ನು ಕಂಡುಕೊಳ್ಳಲು ಅಸಮರ್ಥರಾಗಿದ್ದುದರಿಂದ ಅವರು ಹೆಚ್ಚು ಅಸ್ವತಂತ್ರ ರಾಗಿದ್ದರು" ಎಂಬ ಮಾತು ಅಕ್ಷರಶಃ ಈ ಪ್ರದೇಶದಲ್ಲಿ ಜಾರಿಯಲ್ಲಿತ್ತು. ಇಂತಹ ಸ್ಥಿತಿಯಲ್ಲಿದ್ದರೂ ಅವರು ನಾವು ಮೇಲ್ವರ್ಗದವರು ಎಂಬುದನ್ನು ಮಾತ್ರ ಬಿಡುತ್ತಿರಲಿಲ್ಲ. ೧೨ನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಹಾಗೂ ಸಾಮಾಜಿಕ ವೈಚಾರಿಕ ಚಿಂತನೆಯಿಂದ ಮಹಿಳೆಯರ ಸ್ಥಾನಮಾನಗಳು ಹೆಚ್ಚಲಿಲ್ಲ. ಬದಲಾಗಿ ಕುಸಿದವೆಂದು ಹೇಳಬಹುದು.

### ೩.೪.೨.೩.೧. ಬಹುಪತ್ನಿತ್ವ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬಹುಪತ್ನಿತ್ವ ಪದ್ಧತಿ ಇತ್ತು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳ ವಿವಿಧ ಅರಸರು ಬಹುಪತ್ನಿಯರನ್ನು ಹೊಂದಿದ್ದರು. ಅದು ಅವರಿಗೆ ಪ್ರತಿಷ್ಠೆಯ ಸಂಕೇತವಾಗಿತ್ತು. ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಶಾಸನಗಳು ಇಲ್ಲಿ ಆರಂಭದಲ್ಲಿ ಸಿಗುವುದರಿಂದ ಮತ್ತು ಅದಕ್ಕೂ ಪೂರ್ವದಿಂದಲೂ ಯಾವ ತೊಂದರೆಯೂ ಇಲ್ಲದಂತೆ ನಿಜಾಮರ ಕಾಲದವರೆಗೆ ಬಹುಪತ್ನಿತ್ವ ವ್ಯವಸ್ಥಿತವಾಗಿ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಅಂದು ಈ ಪದ್ಧತಿಯನ್ನು ಒಪ್ಪಿಕೊಳ್ಳಲಾಗಿತ್ತು. ಈ ಪದ್ಧತಿ ಈ ಪ್ರದೇಶದಲ್ಲಂತೂ ಬಹುತೇಕವಾಗಿ ಎಲ್ಲ ವರ್ಗಗಳಲ್ಲಿಯೂ ಕಂಡುಬರುತ್ತದೆ. ಅದು ಆರ್ಥಿಕವಾಗಿ ಸಬಲರಾಗಿರುವವರಿಗೆ ಮಾತ್ರ ಇಂತಹ ಅವಕಾಶಗಳಿದ್ದವು. ಹಾಗೆಂದು ಬಡತನದಲ್ಲಿದ್ದವರು ಬಹು ಪತ್ನಿಯರನ್ನು ಹೊಂದಿಲ್ಲವೆಂದು ಹೇಳಲೂ ಬರುವುದಿಲ್ಲ. ಇದೊಂದು ಸಂಕೀರ್ಣ ಸ್ಥಿತಿಯಾಗಿದೆ. ಬಹುಪತ್ನಿತ್ವವನ್ನು ರಾಜ ಪ್ರಭುತ್ವದ ಲಕ್ಷಣ ವೆಂಬುದಾಗಿ ಪರಿಗಣಿಸಲಾಗಿತ್ತು. ಚಕ್ರವರ್ತಿಗಳು ಮತ್ತು ಇತರ ಸಾಮಂತರು ಅನೇಕ ಮಂದಿ ರಾಣಿಯರನ್ನು ಹೊಂದಿರುತ್ತಿದ್ದರು. ಅದೊಂದು ಪ್ರತಿಷ್ಠೆಯ ವಿಷಯವೂ ಆಗಿತ್ತು. ಕಲ್ಯಾಣ ಚಾಲುಕ್ಯರ ಇಮ್ಮಡಿ ಜಯಸಿಂಹನು ಸೋಮಲಾದೇವಿ ಮತ್ತು ಬಿಜ್ಜಲದೇವಿ ಎಂಬ ಇಬ್ಬರು ಪತ್ನಿಯರನ್ನು

ಹೊಂದಿದ್ದನು. ಇವನಂತೆ ತ್ರೈಲೋಕ್ಯಮಲ್ಲನು ಇಬ್ಬರನ್ನು, ಭುವನೈಕ ಮಲ್ಲನು, ತ್ರಿಭುವನಮಲ್ಲನು ಮೂರು ಜನರನ್ನು, ಸೋಮೇಶ್ವರನು ನಾಲ್ವರನ್ನು, ಆರನೆಯ ವಿಕ್ರಮಾದಿತ್ಯನು ಐದು ಜನರನ್ನು ಪತ್ನಿಯರನ್ನಾಗಿ ಹೊಂದಿದ್ದರು.[೩೩೮] ಇವರಂತೆ ವಿಜಯನಗರದ ಅರಸರಂತೂ ಅನೇಕ ಪತ್ನಿಯರನ್ನು ಹೊಂದಿದ್ದರು.[೩೩೯] ವಿಜಯನಗರೋತ್ತರ ಕಾಲದಲ್ಲಿನ ಪಾಳೆಯಗಾರರು ಇಬ್ಬರಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿದ್ದರು.[೩೪೦] ಹಾಗೆಯೇ ಮುಸ್ಲಿಂರಲ್ಲಂತೂ ಹೆಚ್ಚಿನ ಜನರನ್ನು ಪತ್ನಿಯರನ್ನಾಗಿ ಹೊಂದಿದ್ದರು. ಇದು ಮುಂದುವರೆದು ಸ್ಥಳೀಯ ಪ್ರಬಲ ಮುಖಂಡರು ಇಬ್ಬರಿಗಿಂತ ಹೆಚ್ಚು ಜನ ಪತ್ನಿಯರನ್ನು ಹೊಂದಿದ್ದರು. ಹೀಗೆ ಅಧಿಕಾರದಲ್ಲಿದ್ದವರು ಸಾಮಾನ್ಯವಾಗಿ ಬಹು ಪತ್ನಿತ್ವವನ್ನು ಅಳವಡಿಸಿಕೊಂಡಿದ್ದರು. ಇನ್ನೊಂದು ಮುಖ್ಯವಾದ ಸಂಗತಿಯೆಂದರೆ ಬಹುಪತ್ನಿಯರನ್ನು ಹೊಂದಿದ್ದರೂ ಅನೇಕ ಜನ ಉಪಪತ್ನಿಯರನ್ನು ಹೊಂದಿರುತ್ತಿದ್ದರು.

ಈ ಪ್ರದೇಶದಲ್ಲಿ ಕಂಡುಬರುವ ಶಾಸನಗಳಲ್ಲಿ ಅನೇಕ ಮಹಿಳೆಯರ ಉಲ್ಲೇಖಗಳು ಕಂಡುಬರುತ್ತವೆ. ಅವು ಅಧಿಕಾರಶಾಹಿ ವರ್ಗಕ್ಕೆ ಸೇರಿದ ಮಹಿಳೆಯರನ್ನು ಮಾತ್ರ ಉಲ್ಲೇಖಿಸುತ್ತವೆ. ಆದರೆ ಅಧಿಕಾರಿ ವರ್ಗ ಅಸ್ತಿತ್ವವನ್ನು ಹೊಂದಲು ಕಾರಣವಾದ ಶ್ರಮಿಕ ವರ್ಗದ ಮಹಿಳೆಯರ ಉಲ್ಲೇಖಗಳು ಎಲ್ಲಿಯೂ ದಾಖಲಾಗದೆ ಚರಿತ್ರೆ ಬರವಣಿಗೆಯಿಂದ ಹೊರಗುಳಿದಿದೆ. ರಾಜಮನೆತನದ ಸ್ತ್ರೀಯರಲ್ಲಿ ಕೆಲವರು ಆಡಳಿತವನ್ನು ನಡೆಸುತ್ತಿದ್ದರಲ್ಲದೆ, ದಾನ ನೀಡುವ ಪರಂಪರೆಯನ್ನೂ ಇವರಲ್ಲಿ ಕಾಣಬಹುದು. ಈ ಪ್ರದೇಶದ ವಿವಿಧ ಆಡಳಿತ ಕೇಂದ್ರಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಕೆಲಸವನ್ನು ಮಾಡುತ್ತಿದ್ದರು. ಈ ಪ್ರದೇಶದಲ್ಲಿ ಸುಮಾರು ೫೦ ಜನ ಮಹಿಳೆಯರ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತದೆ.[೩೪೧] ಆದರೆ ಅವರ್‍ಯಾರು ಜನಸಾಮಾನ್ಯರಲ್ಲ. ಅವರು ಅರಸರು, ಸಾಮಂತರು ಮತ್ತು ಮಹಾಜನ ಬ್ರಾಹ್ಮಣರ ಪತ್ನಿಯರಾಗಿದ್ದರು. ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವದ ಪ್ರಯತ್ನ ಈ ವ್ಯವಸ್ಥೆಯನ್ನು ಸಮಾಜದಲ್ಲಿ ಒಪ್ಪಿತವಾಗಿಸಲು ಬೇಕಾದ ಎಲ್ಲಾ ಮಿಥ್ಯೆಗಳನ್ನು ಈ ಎರಡು ವರ್ಗಗಳು ಸೃಷ್ಟಿಸಿಕೊಂಡವು. ಆದರೂ ಕೆಳಜಾತಿಗೆ ಸೇರಿದ ಒಬ್ಬ ಮಹಿಳೆಯ ಉಲ್ಲೇಖ ಕಂಡುಬರುತ್ತದೆ. ಹಲಗೆ ಬಾರಿಸುವ ಎಳಮೋಜೆಸನ ಮಗಳು ಸೋಮಕ್ಕ ಎಂಬುವವಳು ಭೂದಾನ ಮಾಡಿದ ಉಲ್ಲೇಖ ಮಸ್ಕಿ(೪೩) ಕ್ರಿ.ಶ. ೧೩ನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ.[೩೪೨]

ಬಾಲ್ಯವಿವಾಹ, ಬಹುಪತ್ನಿತ್ವ, ಸತಿ ಪದ್ಧತಿ, ದೇವದಾಸಿ ಪದ್ಧತಿಗಳಂತಹ ಅನಿಷ್ಟ ಪದ್ಧತಿಗಳೇ ಜ್ವಲಂತ ಸಮಸ್ಯೆಗಳಾಗಿದ್ದವು. ಸಮಾಜದಲ್ಲಿ ಪುತ್ರ ಸಂತಾನವಾದಾಗ ತೋರಿಸುತ್ತಿದ್ದ ಸಂಭ್ರಮ, ಹೆಣ್ಣುಮಗು ಜನನವಾದಾಗ ಕಂಡುಬರುತ್ತಿರಲಿಲ್ಲ. ಮಹಿಳೆಯರಿಗೆ ವಿದ್ಯಾಭ್ಯಾಸವನ್ನು ಕಡೆಗಣಿಸಲಾಗಿತ್ತು. ಮೇಲ್ವರ್ಗ ಮಹಿಳೆಯರಲ್ಲಿ ಶಿಕ್ಷಣ ಪಡೆದವರೂ ವಿರಳ. ಅಂದಿನ ಮಹಿಳೆಯರಿಗೆ ಅಡುಗೆ ಮನೆಯೇ ಪಾಠಶಾಲೆಯಾಗಿತ್ತು. ಬಹುತೇಕ ಮಹಿಳೆಯರು ಅನಕ್ಷರಸ್ಥರಾಗಿದ್ದರು. ಶ್ರಮಿಕ ವರ್ಗದ ಮಹಿಳೆಯರು ಶಿಕ್ಷಣ ಪಡೆಯುವುದು ದೂರದ ಮಾತಾಗಿತ್ತು. ಹೆರಿಗೆಯಾದ ಮೂರೇ ದಿನಗಳಲ್ಲಿ ದುಡಿಯಲು ಹೋಗಬೇಕಿತ್ತು.

### ೩.೪.೨.೩.೨. ಸತಿ ಪದ್ಧತಿ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಸತಿ ಪದ್ಧತಿ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಕ್ಯಾದಿಗ್ಗೇರಿ, ಅರಕೇರಿ, ದೇವದುರ್ಗ, ರಾಯಚೂರು ಮುಂತಾದ ಸ್ಥಳಗಳಲ್ಲಿ ಕಂಡು ಬರುವ ವೀರಗಲ್ಲುಗಳು ಈ ಪದ್ಧತಿಗೆ ಪ್ರಮುಖ ಸಾಕ್ಷಿಗಳಾಗಿವೆ. ಇದು ಸ್ತ್ರೀಯರನ್ನು ಅನುಮಾನಿಸುವ,

ಗುಮಾನಿಯಿಂದ ನೋಡುವ ಕ್ರಮವಾಗಿದೆ. ಯುದ್ಧದಲ್ಲಿ ಗಂಡ ಸತ್ತರೆ ಹೆಂಡತಿ ಸಾಯಬೇಕು ಎಂಬುದು ಸ್ತ್ರೀಯರನ್ನು ಶೋಷಣೆಗೆ ಒಳಪಡಿಸುವ ಅತ್ಯಂತ ಮಹಾಕೂಪವಾಗಿದೆ. ಕಾಲ ನಂತರದಲ್ಲಿ ಇದು ಮರೆಯಾದರೂ ಅಲ್ಲೊಂದು ಇಲ್ಲೊಂದು ಇಂತಹ ಘಟನೆಗಳು ನಡೆದಿರಬಹುದು. ಇವರು ಸತ್ತ ಮೇಲೆ ಸಮಾಧಿ ಕಟ್ಟಿಸಿ, ದೇವರೆಂದು ಪೂಜಿಸಲಾಯಿತು. ಕಾಲಾಂತರದಲ್ಲಿ ಇದು ಬದಲಾಗಿ ವಿಧವೆಯಾಗಿ ಬದುಕುವ ಪ್ರಯತ್ನ ಮಾಡಿದಳು. ಪುರುಷರಂತೆ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸುವ ಪ್ರಯತ್ನ ಮಾಡಿದರೂ ಮಹಿಳೆಯನ್ನು ಸಮಾಜದಿಂದ ಹೊರಗೆ ಇದ್ದವಳೆಂಬಂತೆ ಬಿಂಬಿಸಲಾಯಿತು. ಯಾವುದೇ ಶುಭ ಕಾರ್ಯಗಳಲ್ಲಿ ಭಾಗವಹಿಸದಂತೆ ಮಾಡಲಾಯಿತು. ಇದಲ್ಲದೆ ಬಂಜೆ ಸ್ತ್ರೀಯರನ್ನಂತೂ ತೀರ ಕೆಟ್ಟದಾಗಿ ನೋಡಲಾಗುತ್ತಿತ್ತು. ಶೋಷಣೆಯ ಮಡುವಿಗೆ ಸಿಲುಕಿದ ಮಹಿಳೆಯರ ಜೀವನ ಅತ್ಯಂತ ಯಾತನಮಯ ವಾಗಿತ್ತು. ಒಟ್ಟಾರೆಯಾಗಿ ಗಂಡನಿಲ್ಲದ ಹೆಂಡತಿ ಈ ಭೂಮಿಯ ಮೇಲೆ ಬದುಕಬಾರದೆಂಬ ಧೋರಣೆ ಇದರಿಂದ ವ್ಯಕ್ತವಾಗುತ್ತದೆ. ಇದು ವಾಸ್ತವವಲ್ಲ, ಬದಲಾಗಿ ಪೂರ್ವಕಲ್ಪನೆಯಾಗಿದೆ.

**೩.೪.೨.೩.೩. ದೇವದಾಸಿ ಪದ್ಧತಿ**

ಅಂದಿನ ಸಮಾಜದಲ್ಲಿ ಹೆಣ್ಣಿನ ಶೋಷಣೆ ಎಷ್ಟು ತೀವ್ರವಾಗಿತ್ತು ಎನ್ನುವುದಕ್ಕೆ ಶಾಸನ ಮತ್ತು ಸಾಹಿತ್ಯಕೃತಿಗಳಲ್ಲಿ ಸಿಗುವ ದೇವದಾಸಿ, ಪಾತರ, ಬಸವಿ, ಸೂಳೆ ಮುಂತಾದ ಪದಗಳು ಸಾಕ್ಷಿಯಾಗಿವೆ.[೩೪೩] ಈ ಪದ್ಧತಿಗೆ ಬಲಿಯಾದವರಲ್ಲಿ ಕೆಳಜಾತಿಗೆ ಸೇರಿದ ಹೊಲೆಯರು, ಮಾದಿಗರು, ದೊಂಬರು, ವಡ್ಡರು(ಭೋವಿ), ಬೇಡರು, ಕೊರವರು, ಕುರುಬರು, ಗೊಲ್ಲರು, ಕಬ್ಬೇರರು ಮುಂತಾದ ಜಾತಿಗಳಿಗೆ ಸೇರಿದವರಾಗಿದ್ದರು. ಈ ಮಹಿಳೆಯರನ್ನು ದೇವಾಲಯಗಳ ಸೇವೆಗಾಗಿ ಬಿಡಲಾಗುತ್ತಿತ್ತು. ಈ ಉದ್ದೇಶಕ್ಕಾಗಿಯೇ ದೇವಾಲಯಗಳಲ್ಲಿ ಅಂಗಭೋಗ–ರಂಗಭೋಗಗಳ ಸೇವೆಯನ್ನು ಹೆಚ್ಚಿಸಲಾಯಿತು. ರಂಗಭೋಗದ ಉಲ್ಲೇಖ ಕ್ರಿ.ಶ. ೧೦೯೬ರಲ್ಲಿ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಕಂಡುಬರುತ್ತದೆ.[೩೪೪] ಈ ವೇಳೆಗಾಗಲೇ ಈ ಪ್ರದೇಶದಲ್ಲಿ ಈ ಪದ್ಧತಿ ಜಾರಿಯಲ್ಲಿತ್ತೆನ್ನಬಹುದು. "ರಂಗಭೋಗ ಎಂದರೆ ನೃತ್ಯ, ಗೀತೆ, ವಾದ್ಯ ಮುಂತಾದವುಗಳಿಂದ ಕೂಡಿರುತ್ತದೆ. ನೃತ್ಯ ಮಾಡುವ ದೇವದಾಸಿಯರೇ ಮುಂದೆ ವೇಶ್ಯಾವಾಟಿಕೆಗೆ ಬಲಿಯಾಗುತ್ತಾರೆ. ವೇಶ್ಯಾವಾಟಿಕೆ ಒಂದು ವೃತ್ತಿಯಾಗಿತ್ತು. ವೇಶ್ಯವಾಟಿಕೆಯ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು ಎಂಬುದು ತಿಳಿದುಬರುತ್ತದೆ. ಹಾಗೆಯೇ ಇವರು ಸಂಘ ಸಂಸ್ಥೆಗಳಿಗೆ ದಾನ–ಧರ್ಮ ನೀಡುತ್ತಿದ್ದರು ಎಂಬುದು ತಿಳಿದುಬರುತ್ತದೆ"(ಶ್ರೀನಿವಾಸರಾವ್ ೧೯೫೬:೬). "ಲೈಂಗಿಕವಾಗಿ ನಡೆಯುತ್ತಿದ್ದ ಇವರ ವೃತ್ತಿ ಅಪರಾಧವಾಗಿರಲಿಲ್ಲ. ಅದು ಅವರು ಹೊಟ್ಟೆಪಾಡಿಗಾಗಿ ಮಾಡುವ ವೃತ್ತಿಯಾಗಿತ್ತು. ಇದು ವಿಜಯನಗರ ಕಾಲಕ್ಕೆ ಬರುವ ವೇಳೆಗೆ ಸಾರ್ವಜನಿಕ ಸಂಸ್ಥೆಯಾಗಿ ವೇಶ್ಯಾವಾಟಿಕೆ ನಡೆಯುತ್ತಿತ್ತು. ವೇಶ್ಯೆಯರು ರಾಜಬೀದಿಗಳಲ್ಲಿ ನೆಲೆಸುವಂತಾಗಿದ್ದರು. ವಿಜಯನಗರದಲ್ಲಿ ಇದಕ್ಕೆ ಸಂಪೂರ್ಣ ಬೆಂಬಲ ದೊರೆಯಿತು. ಈ ಪ್ರದೇಶದಲ್ಲಿ ರಾಯಚೂರು, ದೇವದುರ್ಗ, ಮುದಗಲ್ ಮುಂತಾದವು ವೇಶ್ಯಾವಾಟಿಕೆಗೆ ಪ್ರಸಿದ್ಧಿಯನ್ನು ಪಡೆದಿದ್ದವು"(ಶ್ರೀನಿವಾಸರಾವ್ ೧೯೫೬: ೨೪). ಇಪ್ಪತ್ತು ಸಾವಿರ ವೇಶ್ಯೆಯರು ೧೫೨೧ರಲ್ಲಿ ನಡೆದ ರಾಯಚೂರು ಕೋಟೆಯ ಮುತ್ತಿಗೆಯ ಸಂದರ್ಭದಲ್ಲಿ ಭಾಗವಹಿಸಿದ್ದರೆಂಬುದು ನ್ಯೂನಿಜ್‌ನ ಪ್ರವಾಸ ವರದಿಯಿಂದ ತಿಳಿದುಬರುತ್ತದೆ(ನಾಗೇಗೌಡ ೨೦೦೬: ೩೬೭). ನಂತರದಲ್ಲಿ ಸಂಸ್ಥಾನಿಕರ ಕಾಲದಲ್ಲಿ ಈ ವೃತ್ತಿ ಮುಂದುವರೆದಿತ್ತು. ದೇವದುರ್ಗ ಮತ್ತು ರಾಯಚೂರುಗಳು ಸೂಳೆಯರಿಗಾಗಿ ಹೆಸರುವಾಸಿಯಾಗಿದ್ದವು. ಇತ್ತೀಚಿನವರೆಗೆ ದೇವದುರ್ಗದ ಸೂಳೆಯರು ಎಂಬ ನುಡಿಗಟ್ಟು ಬಳಕೆಯಲ್ಲಿತ್ತು. ಇದು ವಾಸ್ತವ ಕೂಡಾ ಆಗಿತ್ತು. ನಿಜಾಮರ

ಆಳ್ವಿಕೆಯಲ್ಲಿ ಸ್ಥಳೀಯವಾಗಿರುವ ಪ್ರಭಾವಿ ನಾಯಕರು ಪ್ರತಿ ಗ್ರಾಮದಲ್ಲಿ ದೇವದಾಸಿ ಪದ್ಧತಿ ಜಾರಿಗೆ ತಂದರು. ರಾಯಚೂರು ದೋ–ಅಬ್ ಪ್ರದೇಶದಲ್ಲಿ ಪ್ರತಿ ಹಳ್ಳಿಗಳಲ್ಲಿಯೂ ದೇವದಾಸಿಯರು ಇದ್ದರೆಂದರೆ ತಪ್ಪಾಗಲಿಕ್ಕಿಲ್ಲ. ಈ ಪದ್ಧತಿ ಸಾಮಾಜಿಕ ಮನ್ನಣೆ ಪಡೆದಿತ್ತು. ದೇವದಾಸಿಯರಾಗಲು ಕೆಲವು ಅರ್ಹತೆಗಳನ್ನು ಹೊಂದಬೇಕಿತ್ತು. ನೃತ್ಯ, ಸಂಗೀತ, ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಪಡೆದಿರಬೇಕಿತ್ತು. ಇವರ ಉಪಜೀವನಕ್ಕಾಗಿ ಅರಸರು ರಂಗಭೋಗಕ್ಕೆಂದು ಭೂದಾನ ಮಾಡುತ್ತಿದ್ದದ್ದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ದೇವದಾಸಿಯರು ಶಿಕ್ಷಣವಂತರಾಗಿದ್ದರೆಂದು ಹೇಳಬಹುದಾಗಿದೆ. ಕಾಲಾನಂತರದಲ್ಲಿ ಈ ಪದ್ಧತಿ ರಾಜಾಶ್ರಯವಿಲ್ಲದೆ, ವೇಶ್ಯ ವೃತ್ತಿಯಾಗಿ ಪರಿವರ್ತನೆಯಾಗಿರಬೇಕು. ವಚನ ಸಾಹಿತ್ಯ, ದಾಸ ಸಾಹಿತ್ಯ ಮತ್ತು ತತ್ವಪದಗಳು ಮಹಿಳೆಯರನ್ನು ಪ್ರೋತ್ಸಾಹಿಸಿದವು. ಆದರೆ ಇವರ ಪ್ರಯತ್ನ ಸಂಪ್ರದಾಯಬದ್ಧ ಸಾಮಾಜಿಕ ವ್ಯವಸ್ಥೆಯಲ್ಲಿ ವಿಫಲವಾಯಿತು.

### ೩.೪.೨.೪. ವೈಚಾರಿಕ ಸಾಹಿತ್ಯದ ಪ್ರಭಾವ

ವೈಚಾರಿಕ ಸಾಹಿತ್ಯ ಕ್ರಿ.ಶ. ೬ನೆಯ ಶತಮಾನದಿಂದ ಆಧುನಿಕ ಕಾಲದವರೆಗೆ ತನ್ನ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದೆ. ಇಂತಹ ಸಾಹಿತ್ಯವನ್ನು ಕುರಿತು ಅಧ್ಯಯನ ನಡೆಸಿದ ಅಧ್ಯಯಕಾರ ರೆಂದರೆ, ಶಾಂತರಸ, ಬಸವಲಿಂಗ ಸೊಪ್ಪಿಮಠ, ಬಸವರಾಜ ಸಬರದ, ಮ.ನ. ಜವರಯ್ಯ, ಅನ್ನಪೂರ್ಣ ಜಾಲವಾದಿ, ದಸ್ತಗಿರಿಸಾಬ್‌ದಿನ್ನಿ, ರಾಜಶ್ರೀ ಇಲ್ಲೂರು, ಶೈಲಜಾ ಉಡಚಣ, ಸ್ವಾಮಿರಾವ್ ಕುಲಕರ್ಣಿ, ರಮಾಕಲ್ಲೂರಕರ್, ಶಕುಂತಲಾ ಶೆಟ್ಟಿ, ನಾಗರಾಜು ಹೀರಾ, ರಮೇಶ ಮೂಲಗಿ, ಸರ್ವಮಂಗಳ ಸಕ್ರಿ, ಜಯಲಕ್ಷ್ಮೀ ಮಂಗಳಮೂರ್ತಿ, ನಾಗರತ್ನ ಟಿ.ಎಸ್, ಅಕ್ಕಮಹಾದೇವಿ ಇನ್ನೂ ಮುಂತಾದವರು ಈ ನಿಟ್ಟಿನಲ್ಲಿ ಚಿಂತನೆ ಮಾಡಿದವರು.

ಈ ಮೂಲಕ ಈ ಪ್ರದೇಶದ ವೈಚಾರಿಕ ಸಾಹಿತ್ಯ ಬೆಳೆದ ಬಗೆಯನ್ನು ಚರ್ಚಿಸಿರುವುದು ಕಂಡು ಬರುತ್ತದೆ. ಈ ಎಲ್ಲರ ಅಧ್ಯಯನಗಳನ್ನು ಗಮನಿಸಿದಾಗ ಬಸವಪೂರ್ವ ಯುಗದಿಂದಲೂ ಅನೇಕ ಜನ ಜ್ಞಾನಿಗಳು ಈ ಪ್ರದೇಶದಲ್ಲಿ ನೆಲೆಸಿ ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸಲು ಪ್ರಯತ್ನಿಸಿದರೆಂದು ತಿಳಿದುಬರುತ್ತದೆ. ಇಲ್ಲಿನ ಸಾಹಿತ್ಯವನ್ನು ನಾಲ್ಕು ಬಗೆಯಲ್ಲಿ ವಿಂಗಡಿಸಿಕೊಳ್ಳಲಾಗಿದೆ. ೧. ಬಸವ ಪೂರ್ವಯುಗದ ಶರಣ ಸಾಹಿತ್ಯ ೨. ವಚನ ಸಾಹಿತ್ಯ ೩. ದಾಸ ಸಾಹಿತ್ಯ ೪. ತತ್ವ ಪದಕಾರರ ಸಾಹಿತ್ಯ. ಇವುಗಳನ್ನು ಕುರಿತು  ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

### ೩.೪.೨.೪.೧. ಬಸವ ಪೂರ್ವ ಯುಗದ ಶರಣ ಸಾಹಿತ್ಯ

ಬಸವಪೂರ್ವ ಯುಗದ ಶರಣರಾದ ಜಾಲಹಳ್ಳಿಯ ಜಯಶಾಂತಲಿಂಗೇಶ್ವರ(ಕ್ರಿ.ಶ.೬ನೆಯ ಶತಮಾನ), ಶಿವಜಾತ ಒಡೆಯರು ಕರಡಕಲ್(ಕ್ರಿ.ಶ. ೯೭೫–೧೦೪೦), ಕರಡಕಲ್ ಭಿಲ್ಲಮರಾಯ(ಕ್ರಿ.ಶ. ೧೦೧೪–೧೦೭೬), ಚಿತ್ತಾಪುರದ ಢಕ್ಕೆಯ ಮಾರಯ್ಯ(ಕ್ರಿ.ಶ. ೧೧೩೬–೬೮), ನವಿಲೆಯ ಶಂಕರ ದಾಸಿಮಯ್ಯ(ಕ್ರಿ.ಶ. ೧೧೦೦), ಆದಯ್ಯ–ಮಾಳಗುಂಡಮ್ಮ(ಕ್ರಿ.ಶ. ೧೧೦೦), ಪುರದ ನಾಗಣ್ಣ (ಕ್ರಿ.ಶ. ೧೧೬೦) ಮುಂತಾದವರು ತಮ್ಮ ಸಾಹಿತ್ಯದ ಮೂಲಕ ಗಮನ ಸೆಳೆದಿದ್ದರೆಂದು ತಿಳಿದುಬರುತ್ತದೆ(ಹೀರಾ ೨೦೦೨: ೩೦–೫೩).

### ೩.೪.೨.೪.೨. ವಚನ ಸಾಹಿತ್ಯ

ಈ ಪ್ರದೇಶದಲ್ಲಿ ೧೨ನೆಯ ಶತಮಾನದ ವಚನ ಸಾಹಿತ್ಯದಲ್ಲಿ ತೊಡಗಿಸಿಕೊಂಡವರೆಂದರೆ; ಆಯ್ದಕ್ಕಿ ಮಾರಯ್ಯ, ಆಯ್ಕಕ್ಕಿ ಲಕ್ಕಮ್ಮ, ಗಬ್ಬೂರಿನ ಬಿಬ್ಬಿಬಾಚಯ್ಯ, ಅಜಗಣ್ಣ–ಮುಕ್ತಾಯಕ್ಕ, ಚೆನ್ನವೀರ

ಶರಣರು, ಉಳಿಮೇಶ್ವರದ ಚಿಕ್ಕಯ್ಯ, ಸುಂಕಣ್ಣ ಮೊದಲಾದವರು ಗೋಚರಿಸುತ್ತಾರೆ(ಹೀರಾ ೨೦೦೨: ೫೫–೫೭). ಇವರು ಈ ಪ್ರದೇಶವನ್ನೇ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಶರಣ ಸಾಹಿತ್ಯದಲ್ಲಿ ನುಡಿದಂತೆ ನಡೆಯಲು ಪ್ರಯತ್ನಿಸಿದವರು. 'ಕಾಯಕ'ದ ಪರಿಕಲ್ಪನೆಯನ್ನು ನೀಡಿದ ಕೀರ್ತಿ ಈ ಕ್ಷೇತ್ರಕ್ಕೆ ಸಲ್ಲುತ್ತದೆ. ಹಾಗೆಯೇ ದಾಸೋಹ ಕುರಿತು ಆಸಕ್ತಿಯನ್ನು ತಳೆದಿದ್ದರು. ಈ ಎರಡು ಪರಿಕಲ್ಪನೆಗಳು ಕ್ರಮವಾಗಿ ಕಾಯಕವನ್ನು ಗಮನಿಸಿದರೆ ಪ್ರತಿಯೊಬ್ಬ ಮನುಷ್ಯನು ದುಡಿದು ಊಟ ಮಾಡಬೇಕು ಎಂಬುದು ಸರಿ. ದಾಸೋಹ ಎಂದರೆ, ದುಡಿದದ್ದನ್ನು ಜಂಗಮರಿಗೆ ಉಣ ಬಡಿಸುವುದು, ಸಮಾನ ಹಂಚಿಕೆ ಮಾಡುವುದು ಎಂದರ್ಥ. ಆದರೆ ಈ ಎರಡು ಪರಿಕಲ್ಪನೆಗಳು ಸಮಾಜದ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನು ಬೀರಿದವು ಎನಿಸುತ್ತದೆ. ದುಡಿಯದೇ ಕೂಡಿಡುವರ ಸಂಖ್ಯೆ ಹೆಚ್ಚಾಗಿತ್ತೆಂದು ತಿಳಿದುಬರುತ್ತದೆ. ಕೂಡಿಡುವವರನ್ನು ಕಂಡು ದಾಸೋಹ ಮಾಡಿರೆಂದು ತಿಳಿಹೇಳಿರಬೇಕು. ದಾಸೋಹ ಮಾಡಿಸಬೇಕೆಂದು ಜಂಗಮರಿಗೆ(ಅಯ್ಯನವರು) ಮತ್ತು ಬ್ರಾಹ್ಮಣರಿಗೆ ಊಟ ಹಾಕಿಸುವ ಪ್ರವೃತ್ತಿ ಬೆಳೆಯಿತೇ ಹೊರತು, ಬದಲಾವಣೆ ಕಾಣಲಿಲ್ಲ. ಆದರೂ ವಚನ ಸಾಹಿತ್ಯ ಹೊಸ ಬಗೆಯ ಧಾರ್ಮಿಕ ಸಮಾಜವನ್ನು ಕಟ್ಟಲು ಬಯಸಿದ್ದು ಗಮನಾರ್ಹ. ಈ ಸಾಹಿತ್ಯದ ಮೂಲಕ ಸಾಮಾಜಿಕ ಸಮಾನತೆ, ಭಾತೃತ್ವ ಮತ್ತು ಸ್ವಾತಂತ್ರ್ಯ ಮುಂತಾದ ವಿಚಾರಗಳನ್ನು ಬಿತ್ತರಿಸುವ ಮುಖೇನ ಸಾಮಾಜಿಕ ಬದಲಾವಣೆಯನ್ನು ಬಯಸಿತು. ಆದರೆ ಅದು ಗೆಂಟ್ ವಿ.ವಿ. ಬೆಲ್ಜಿಯಂನ ಬಾಲಗಂಗಾಧರ ಎಸ್.ಎನ್ ಮತ್ತು ಅವರ ಗುಂಪಿನಿಂದ ಇತ್ತೀಚೆಗೆ ತೀವ್ರವಾಗಿ ತರಾಟೆಗೊಳಗಾಗಿದೆ. ಇದಕ್ಕೆ ಪ್ರತಿಕ್ರಿಯೆ ನೀಡಿದ ಇನ್ನೊಂದು ಗುಂಪು ವಚನ ಸಾಹಿತ್ಯದ ಪರವಾಗಿ ವಾದಿಸಿದೆ.

ಒಟ್ಟಾರೆಯಾಗಿ ವಚನ ಸಾಹಿತ್ಯದ ಮೂಲ ಉದ್ದೇಶಗಳನ್ನು ಬದಿಗೊತ್ತಿ ತಮಗೆ ಬೇಕಾದ ರೀತಿಯಲ್ಲಿ ಪರಿವರ್ತಿಸಿಕೊಂಡು ಪ್ರಚಾರ ಮಾಡುತ್ತಿರುವುದು ಕಂಡುಬರುತ್ತದೆ. ಜನಪರವಾದ ಅತ್ಯಂತ ಕೆಳಮಟ್ಟದ ಜನರನ್ನು ದೃಷ್ಟಿಯಲ್ಲಿಕೊಂಡು ಸಮಾನತೆ ಸಾರಲು ಬಯಸಿದ ಶರಣರ ಸಂಕಲ್ಪ ವಿಫಲವಾಯಿತೆಂದು ಹೇಳಬಹುದಾಗಿದೆ.

### ೩.೪.೨.೪.೩. ದಾಸ ಸಾಹಿತ್ಯ

ಈ ಪ್ರದೇಶದಲ್ಲಿ ವಚನ ಸಾಹಿತ್ಯದ ನಂತರ ಹೆಚ್ಚು ಪ್ರವರ್ಧಮಾನಕ್ಕೆ ಬಂದದ್ದು ದಾಸ ಸಾಹಿತ್ಯ. ಶಿವಶರಣರ ಚಳವಳಿಯ ಕಾವು ಆರುತ್ತಿರುವ ಸಮಯದಲ್ಲಿ ಅದರ ಬೆನ್ನ ಹಿಂದೆಯೇ ಭಾಗವತ ಪಂಥದ ಹರಿದಾಸರ ದಂಡು ದೌಡಾಯಿಸಿತು. ಅದ್ವೈತ ಸಿದ್ಧಾಂತದಲ್ಲಿ ವೀರಶೈವ ಮತ ಗಮನ ಸೆಳೆದರೆ, ದಾಸ ಸಾಹಿತ್ಯ ಭಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿತು. ಈ ಪ್ರದೇಶ 'ಹರಿದಾಸರ ತವರು ಮನೆ', 'ಹರಿದಾಸರ ತೊಟ್ಟಿಲು' ಎಂದು ಪ್ರಸಿದ್ಧಿಯನ್ನು ಪಡೆಯಿತು. 'ದಾಸ ಚತುಷ್ಟಯ'ರೆಂದು ಪ್ರಸಿದ್ಧರಾದ ಪುರಂದರದಾಸ, ವಿಜಯದಾಸ, ಗೋಪಾಲದಾಸ ಮತ್ತು ಜಗನ್ನಾಥದಾಸರಲ್ಲಿ ಪುರಂದರದಾಸರನ್ನು ಹೊರತು ಪಡಿಸಿ, ಉಳಿದ ಮೂವರು ಈ ಪ್ರದೇಶಕ್ಕೆ ಸೇರಿದವರಾಗಿದ್ದಾರೆ.

ಈ ಪ್ರದೇಶದ ಸಾಹಿತ್ಯವನ್ನು ಕುರಿತು ನಾಗರತ್ನ ಟಿ.ಎನ್. ಅಕ್ಕಮಹಾದೇವಿ, ಜಯಲಕ್ಷ್ಮಿ ಮಂಗಳಮೂರ್ತಿ, ಸ್ವಾಮಿರಾವ್ ಕುಲಕರ್ಣಿ ಹನುಮಂತರಾವ್ ಗೋರೆಬಾಳ, ಪ್ರಾಣೇಶದಾಸ ಮುಂತಾದವರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಈ ಸಾಹಿತ್ಯದ್ದು ಭಕ್ತಿ ಪ್ರಧಾನವಾಗಿದ್ದ ಕೀರ್ತನೆ, ಸುಳಾದಿ, ಉಪಭೋಗ, ಬಯಲಾಟ, ಕೋಲಾಟ, ಒಗಟುಗಳು, ಗೀತಪದ, ಲಾವಣಿ ಮುಂತಾದವುಗಳ ಮೂಲಕ ಜನರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದೆ. ಆದರೆ ಈ ದಾಸ

ಸಾಹಿತ್ಯದಲ್ಲಿ ತೊಡಗಿಕೊಂಡವರಲ್ಲಿ ಬಹುತೇಕರು ಬ್ರಾಹ್ಮಣರಾಗಿದ್ದಾರೆ. ಇವರ ಸಿದ್ಧಾಂತವು ಕೂಡ ದ್ವೈತವಾಗಿರುವುದರಿಂದ ಬ್ರಾಹ್ಮಣರು ತಮ್ಮ ವಲಯದಲ್ಲಿ ಇತರರನ್ನು ಸೇರಿಸಿಕೊಳ್ಳುವುದು ವಿರಳ. ಆದರೂ ರಾಮದಾಸನಂಥ ಬೆರಳೆಣಿಕೆಯ ಜನ ಈ ಸಾಹಿತ್ಯಕ್ಕೆ ಮಾರು ಹೋಗಿರುವುದು ಕಂಡುಬರುತ್ತದೆ.

ಕ್ರಿ.ಶ. ೧೭ರಿಂದ ೨೦ನೆಯ ಶತಮಾನದವರೆಗೆ ಈ ಪ್ರದೇಶದಲ್ಲಿ ಅನೇಕ ದಾಸರು ತಮ್ಮ ಸಾಹಿತ್ಯದ ಮುಖೇನ ಪ್ರಸಿದ್ಧಿಯನ್ನು ಪಡೆದಿದ್ದರು. ವಿಜಯದಾಸ(೧೬೮೭-೧೭೫೫), ಜಗನ್ನಾಥ ದಾಸ(೧೭೨೮-೧೮೦೯), ಗೋಪಾಲದಾಸ(೧೭೧೭-೧೭೬೭), ರಾಮದಾಸ(೧೮೮೨-೧೯೯೩೨), ಶಾಮಸುಂದರದಾಸ(೧೮೯೬-೧೯೬೮), ಹಾಗೆಯೇ ಸುಮಾರು ೪೦ ಜನ ದಾಸರು ೨೦ನೆಯ ಶತಮಾನದ ಅವಧಿಯವರೆಗೆ ಗೋಚರಿಸುತ್ತಾರೆ(ಮಂಗಳಮೂರ್ತಿ ೨೦೦೨: ೪೫-೪೬). ದಾಸ ಸಾಹಿತ್ಯ ಬ್ರಾಹ್ಮಣರ ಸ್ವತ್ತಾಗಿ ಪರಿಣಮಿಸಿತು. ಜನಸಾಮಾನ್ಯರನ್ನು ಮುಟ್ಟುವ ಪ್ರಯತ್ನ ಕಂಡರೂ ಅದರ ತೀವ್ರತೆ ಇಡೀ ಜಿಲ್ಲೆಯನ್ನು ದಾಸಮಯವನ್ನಾಗಿಸಬಹುದಿತ್ತು. ಆದರೆ ವೈದಿಕ ವಿಚಾರಗಳು ಅವರ ಅಂತರಾಳದಲ್ಲಿ ಹಾಗೆಯೇ ಮುಂದುವರೆದಿರಬೇಕು. ಹಾಗಾಗಿ ಮೇಲು-ಕೀಳು ಎಂಬ ಭಾವನೆ, ಅಸ್ಪೃಶ್ಯತೆಯನ್ನು ಮುಂದುವರೆಸಿಕೊಂಡು ಬಂದಿದ್ದು, ಶ್ರೇಷ್ಠತಾ ಮನೋಭಾವನೆಯನ್ನು ಹೊಂದಿದ್ದರೆಂದು ಹೇಳಬಹುದಾಗಿದೆ(ಮಾಹಿತಿಗಾಗಿ ನೋಡಿ: ಮಂಗಳಮೂರ್ತಿ(೨೦೦೪) ಅವರ ಆಧುನಿಕ ದಾಸ ಸಾಹಿತ್ಯ ಮತ್ತು ಹೆದ್ದೊರೆ(೨೦೦೨)ಯಲ್ಲಿನ ಲೇಖನವನ್ನು ಗಮನಿಸಬಹುದು).

### ೩.೪.೨.೪.೪. ತತ್ವಪದಕಾರರ ಸಾಹಿತ್ಯ

ರಾಯಚೂರು ದೋ-ಅಬ್ ಪ್ರದೇಶ ವಚನ ಮತ್ತು ದಾಸ ಸಾಹಿತ್ಯದ ಮೂಲಕ ತತ್ವಜ್ಞಾನಿಗಳನ್ನು ಸೃಷ್ಟಿಸಿತು. ಅವರು ಯಾವುದೇ ಪಂಥಕ್ಕೆ ಸೇರದೆ ಸ್ವತಂತ್ರವಾಗಿ ತಮ್ಮ ಅನುಭವದ ಮೂಲಕ ಅನೇಕ ತತ್ವಪದಗಳನ್ನು ರಚಿಸಿದರು. ಬಹುತೇಕವಾಗಿ ಈ ಪ್ರದೇಶದಲ್ಲಿ ಮೇಲಿನ ಎರಡು ಸಾಹಿತ್ಯಗಳಿಗಿಂತ ತತ್ವ ಪದಕಾರರ ಸಾಹಿತ್ಯ ಹೆಚ್ಚು ಪ್ರಸಿದ್ಧಿಗೆ ಬಂದಿದ್ದಿತು. ಅವು ಜನಮಾನಸದಲ್ಲಿ ಅಭಿವ್ಯಕ್ತಿಗೊಂಡವು. ಜನರನ್ನು ತತ್ವಜ್ಞಾನದ ಕಡೆ ಗಮನ ಸೆಳೆಯುವಂತೆ ಮಾಡಿರುವ ಸಾಹಿತ್ಯವೆಂದರೆ ತತ್ವಪದಕಾರರ ಸಾಹಿತ್ಯವಾಗಿದೆ. ಕೆಲವರು ಪದಗಳನ್ನು ರಚಿಸಿದರೆ, ಇನ್ನೂ ಕೆಲವರು ಪದಗಳನ್ನು ಹಾಡುವ ಮೂಲಕ ತತ್ವ ಜ್ಞಾನವನ್ನು ತಿಳಿಯಪಡಿಸುತ್ತಿದ್ದರು. ಮತ್ತೆ ಕೆಲವರು ತತ್ವಜ್ಞಾನವನ್ನು ಕುರಿತು ಅಧ್ಯಯನ ಮತ್ತು ಬೋಧನೆ ಮಾಡುತ್ತಿದ್ದರು.

ಹೀಗೆ ಎಲ್ಲಾ ಬಗೆಯ ಜ್ಞಾನವನ್ನು ಪಡೆದವರು ಈ ಪ್ರದೇಶದಲ್ಲಿ ನೆಲೆಸಿದ್ದರು. ಇವರನ್ನು ಕುರಿತು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ಶಾಂತರಸ, ಬಸವಲಿಂಗ ಸೊಪ್ಪಿಮಠ ಪ್ರಮುಖರಾಗಿದ್ದಾರೆ. ಅವರ ಜಾಡಿನಲ್ಲಿ ಬಸವರಾಜ ಸಬರದ ಅವರು ೨೨ ಜನ ತತ್ವ ಪದಕಾರರನ್ನು ಗುರುತಿಸಿದ್ದಾರೆ. ನಾಗರಾಜ ಹೀರಾ ಅವರು ಈ ೨೨ ಜನರನ್ನು ಹೊರತುಪಡಿಸಿ ಇನ್ನೂ ೩೧ ಜನ ತತ್ವಪದಕಾರರನ್ನು ಪತ್ತೆ ಹಚ್ಚುವ ಕಾರ್ಯ ಮಾಡಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಕೆಲವು ವಚನಕಾರರನ್ನು ಹೊಸದಾಗಿ ಸೇರಿಸಲು ಪ್ರಯತ್ನಿಸಲಾಗಿದೆ. ಅವರೆಂದರೆ ಕಕ್ಕಲದೊಡ್ಡಿಯ ನಿತ್ಯಾನಂದರು(ಬಸವರಾಜಪ್ಪ ಬೆನಕನ್) ಮತ್ತು ಶಿವಕುಮಾರ ಬೆನಕನ್, ಎಸ್. ವೀರಕುಮಾರ ಆಲ್ಕೋಡ ಹಾಗೆಯೇ ಮುಂದುವರೆದು ಆಲ್ಕೋಡದಲ್ಲಿದ್ದ ಡಾ. ಬಿ.ಆರ್. ಭೀಡ್ ಅವರು ಶ್ರೀ ಅರವಿಂದರ ಅನುಯಾಯಿಗಳಾಗಿ ಈ ಭಾಗದಲ್ಲಿ ತತ್ವ ಪ್ರಚಾರದಲ್ಲಿ ತೊಡಗಿದ್ದಾರೆ. ಇವರು ಈಗ ರಾಯಚೂರಿನಲ್ಲಿದ್ದು, ಆಯುರ್ವೇದ ವೈದ್ಯಾಧಿಕಾರಿಗಳಾಗಿ ಸೇವೆ ಸಲ್ಲಿಸಿ, ಇತ್ತೀಚೆಗೆ ನಿವೃತ್ತರಾಗಿದ್ದಾರೆ. ಇನ್ನು ಅನೇಕ ಜನರು ತತ್ವಜ್ಞಾನಿಗಳು ಈ ಪ್ರದೇಶದಲ್ಲಿ ಕಂಡುಬರುತ್ತಾರೆ(ಹೆಚ್ಚಿನ ವಿವರಗಳಿಗಾಗಿ: ಬಸವರಾಜ ಸಬರದ(೨೦೦೦) ಅವರ

ಹೈದರಾಬಾದ್ ಕರ್ನಾಟಕದ ತತ್ವಪದಗಳು ಹಾಗೂ ನಾಗರಾಜ ಹೀರಾ(೨೦೦೨) ಅವರ ರಾಯಚೂರು ಪರಿಸರದ ಶರಣ ಸಾಹಿತ್ಯ: ಒಂದು ಅಧ್ಯಯನ ಎಂಬ ಕೃತಿಗಳನ್ನು ಗಮನಿಸಬಹುದಾಗಿದೆ).

ಒಟ್ಟಾರೆಯಾಗಿ ಯಾವುದೇ ಸಾಮಾಜಿಕ ಕಟ್ಟಳೆಗೆ ಸಿಲುಕದೆ ಜನರ ಮುಂದೆ ತಮ್ಮ ಅಭಿಪ್ರಾಯ ಗಳನ್ನು ಪದಗಳ ಮೂಲಕ ವ್ಯಕ್ತಪಡಿಸುತ್ತಿದ್ದರು. ಈ ಪ್ರದೇಶದಲ್ಲಿ ಕೂಡಲೂರು ಬಸವಲಿಂಗಪ್ಪನವರದು ದೊಡ್ಡ ಹೆಸರು ಹಾಗೂ ಸಿದ್ಧಪರ್ವತದ ಅಂಬಾಮಠದಲ್ಲಿರುವ ಚಿದಾನಂದಾವಧೂತರ ಹೆಸರು ಬಹುಪ್ರಸಿದ್ಧಿಯಾಗಿದೆ. ಹೀಗೆ ಇಲ್ಲಿರುವ ತತ್ವಜ್ಞಾನಿಗಳು ಜನ ಸಾಮಾನ್ಯರೊಂದಿಗೆ ಬೆರೆತು ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಲು ಪ್ರಯತ್ನಿಸಿದರೆಂದು ಹೇಳಬಹುದಾಗಿದೆ.

### ೩.೪.೩. ಧಾರ್ಮಿಕತೆ

ರಾಯಚೂರು ದೋ-ಅಬ್ ಪ್ರದೇಶ ಧಾರ್ಮಿಕ ಪ್ರಭುತ್ವಕ್ಕೆ ಒಳಗಾದ ಪ್ರಮುಖ ಕೇಂದ್ರವಾಗಿದೆ. ಇಲ್ಲಿ ಇಡೀ ಭಾರತದಲ್ಲಿರುವಂತೆ ಎಲ್ಲ ಮತಧರ್ಮಗಳ ಪ್ರಭಾವವಿರುವುದು ಕಂಡುಬರುತ್ತದೆ. ಧಾರ್ಮಿಕತೆಯು ರಾಜಪ್ರಭುತ್ವಕ್ಕಿಂತ ಬಲಿಷ್ಠವಾದದ್ದು. ಅರಸರನ್ನು ಇಲ್ಲಿನ ಶಾಸನಗಳು ದೇವರಿಗೆ ಹೋಲಿಸಿವೆ. ಉತ್ತರ ಭಾರತದಲ್ಲಿ ಹುಟ್ಟಿದ ಮತಧರ್ಮಗಳು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಆಶ್ರಯವನ್ನು ಪಡೆದವು, ಜೊತೆಗೆ ಬೆಳೆದವು. ಎಲ್ಲ ಕಡೆ ವ್ಯಾಪಿಸಿಕೊಂಡಿದ್ದ ವೈದಿಕ ಮತ ವರ್ಣ ವಿಭಜನೆಗೆ ಕಾರಣವಾಯಿತು. ಈ ವಿಭಜನೆಯೇ ಮುಂದೇ ಜೈನ ಮತ್ತು ಬೌದ್ಧ ಮತಗಳ ಉದಯಕ್ಕೆ ಕಾರಣವಾಯಿತು.ಇವು ಬ್ರಾಹ್ಮಣರ ಪ್ರಾಬಲ್ಯವನ್ನು ಪ್ರಶ್ನೆ ಮಾಡಿದವು. ಇವುಗಳ ಉದಯಕ್ಕೆ ಮೂಲ ಕಾರಣ ಈಶಾನ್ಯ ಭಾರತದಲ್ಲಿ ರೂಪಗೊಂಡ ನವೀನ ಕೃಷಿ ಅರ್ಥವ್ಯವಸ್ಥೆ ಎಂದು ಆರ್.ಎಸ್. ಶರ್ಮ ಅವರು ತಿಳಿಸುತ್ತಾರೆ. ಈಶಾನ್ಯ ಭಾರತದಂತೆ ರಾಯಚೂರು ದೋ-ಅಬ್ ಪ್ರದೇಶದ ಹೊಸ ಕೃಷಿ ವ್ಯವಸ್ಥೆ ಮತ್ತು ವರ್ತಕರ ಪ್ರಭಾವದಿಂದಾಗಿ ಮತಧರ್ಮಗಳು ಈ ಪ್ರದೇಶದಲ್ಲಿ ನೆಲೆಗೊಂಡಿರುವ ಸಾಧ್ಯತೆಗಳಿವೆ. ಈ ಪ್ರದೇಶದಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ, ಕಾಳಾಮುಖ ಮತಗಳು ಹಾಗೂ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳ ಪ್ರಭಾವ ಇರುವುದು ಗೋಚರಿಸುತ್ತದೆ. ಈ ಎಲ್ಲ ಮತಧರ್ಮಗಳು ಈ ಪ್ರದೇಶದಲ್ಲಿ ನೆಲೆಸಿವೆ ಎಂಬುದಕ್ಕೆ ಶಾಸನ ಮತ್ತು ಸಾಹಿತ್ಯ ಆಕರಗಳು ಪ್ರಭಾವಿಯಾಗಿವೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ಈ ಮೇಲಿನ ಮತಧರ್ಮಗಳನ್ನು ಕುರಿತು ಸಂಕ್ಷಿಪ್ತವಾಗಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

### ೩.೪.೩.೧. ವೈದಿಕ ಮತ

ಈ ಪ್ರದೇಶದಲ್ಲಿ ಈ ಮತದ ಪ್ರಭಾವ ಅಧಿಕವಾಗಿದ್ದಿತು. "ದಕ್ಷಿಣ ಭಾರತದಲ್ಲಿ ವಿದೇಶಿ ವಾಣಿಜ್ಯ ವ್ಯಾಪಾರ ವಿಪುಲವಾಗಿ ಬೆಳೆಯಿತು. ವಿಂಧ್ಯ ಪರ್ವತ ದಾಟಲು ಕಷ್ಟದಾಯಕವಾಗುವಷ್ಟು ದುರ್ಗಮವಲ್ಲ. ಹೀಗಾಗಿ ಉತ್ತರ, ದಕ್ಷಿಣ ಭಾಗಗಳ ನಡುವೆ ನಿರಂತರವಾದ ಸಂಪರ್ಕ ಬೆಳೆದಿದೆ. ಉತ್ತರದ ರಾಜರು ದಕ್ಷಿಣಕ್ಕೆ, ದಕ್ಷಿಣದ ರಾಜರು ಉತ್ತರಕ್ಕೆ ತಮ್ಮ ಅಧಿಕಾರದ ಕ್ಷೇತ್ರವನ್ನು ವ್ಯಾಪಿಸಿಕೊಳ್ಳಲು ಪ್ರಯತ್ನ ನಡೆಸಿದ್ದಾರೆ. ವ್ಯಾಪಾರಿಗಳು, ಮತ ಪ್ರಚಾರಕರು, ಸಾಂಸ್ಕೃತಿಕ ಮುಖಂಡರು ಮುಖ್ಯವಾಗಿ ಬ್ರಾಹ್ಮಣರು ಉತ್ತರದಿಂದ ದಕ್ಷಿಣಕ್ಕೆ ದಕ್ಷಿಣದಿಂದ ಉತ್ತರಕ್ಕೆ ಹೋಗಿಬಂದಿದ್ದಾರೆ. ಈ ರೀತಿಯ ಎರಡೂ ಕಡೆಯ ನಿರಂತರ ಸಂಪರ್ಕಗಳಿಂದಾಗಿ ದೇಶದಲ್ಲಿ ಒಂದು ಸಮನ್ವಯ ಸಂಸ್ಕೃತಿ ರೂಪುಗೊಂಡಿದೆ"(ಶರ್ಮ ೨೦೧೦: ೩೦) ಎಂದು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಬ್ರಾಹ್ಮಣರ ಪ್ರಭಾವ ಎಲ್ಲಾ ಕಡೆ ವ್ಯಾಪಿಸಿರುವುದರಿಂದ ಸಹಜವಾಗಿಯೇ ವೈದಿಕ ಮತದ ಛಾಯೆ ಈ ಪ್ರದೇಶದಲ್ಲಿ

ಮೂಡಿತ್ತು ಎಂದು ಗುರುತಿಸಬಹುದಾಗಿದೆ. ಬ್ರಾಹ್ಮಣರ ಉಲ್ಲೇಖಗಳಂತೂ ಸಾಕಷ್ಟು ದೊರೆಯುತ್ತವೆ. ಈ ಮತ ಸಮಾಜದ ಮೇಲೆ ಹಿಡಿತ ಸಾಧಿಸಿತ್ತು. ಈ ಪ್ರದೇಶದಲ್ಲಿ ಆರ್ಯ ಸಮಾಜ ಎಂಬ ಸಂಘಟನೆ ವೈದಿಕ ಮತದ ಉಳಿಯುವಿಕೆಗಾಗಿ ಹೋರಾಡಿತು ಎನ್ನಬಹುದು.

**೩.೪.೩.೨. ಬೌದ್ಧಮತ**

ಈ ಪ್ರದೇಶದಲ್ಲಿ ಬೌದ್ಧಮತ ಪ್ರಚಾರದಲ್ಲಿತ್ತು. ಕ್ರಿಪೂ. ೩ನೆಯ ಶತಮಾನಕ್ಕಿಂತ ಮುಂಚೆ ಇಲ್ಲಿ ಈ ಮತದ ಪ್ರವೇಶವಾಗಿರಬಹುದು. ವೈದಿಕ ಮತದ ವಿರುದ್ಧ ಸೆಟೆದು ನಿಂತು ಇದು ವರ್ಣ ವ್ಯವಸ್ಥೆಯನ್ನು ಎದುರಿಸಿದ ಕಾರಣ ಕೆಳಹಂತದ ಜನರ ಬೆಂಬಲವನ್ನು ಗಳಿಸಿತು. ಜಾತಿಗಳ ಬಗ್ಗೆ ಯಾವುದೇ ತಾರತಮ್ಯ ತೋರದೇ ಎಲ್ಲ ಜನರೂ ಬೌದ್ಧಮತ ಸೇರಬಹುದಾಗಿತ್ತು. ವೈದಿಕ ಪ್ರದೇಶಗಳ ಹೊರಗಿನ ಜನರಲ್ಲಿ ಬೌದ್ಧಮತ ಹೆಚ್ಚು ಜನಾಕರ್ಷವಾಗಿ ಪ್ರಚಾರ ಪಡೆಯಿತು. ಜನಸಾಮಾನ್ಯರನ್ನು ಆಕರ್ಷಿಸಲು ಸಂಸ್ಕೃತದ ಬದಲು ಪಾಲಿ ಭಾಷೆಯನ್ನು ಬಳಸಿತು. ಹಾಗಾಗಿ ಈ ಮತಕ್ಕೆ ಅನೇಕ ಜನರು ಸೇರಿದರು. ಗೌತಮಬುದ್ಧನು ಈ ಪ್ರದೇಶಕ್ಕೆ ಬಂದಿರುವುದರ ಬಗ್ಗೆ ಅಸ್ಪಷ್ಟತೆಯಿದೆ.

ಈ ಪ್ರದೇಶದಲ್ಲಿ ಈ ಮತಕ್ಕೆ ಸಹಕಾರ ದೊರತಿತ್ತು. ಇಲ್ಲಿಯ ಮಸ್ಕಿ ಎಂಬಲ್ಲಿ ಅಶೋಕನ ಶಾಸನ ಕಂಡುಬರುತ್ತದೆ.[೩೯೫] ಈ ಶಾಸನ ಭಾರತದ ಚರಿತ್ರೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿದೆ. ಹಾಗೆಯೇ ಇದರ ಉದ್ದೇಶ ಧರ್ಮ ಪ್ರಚಾರ. ಕಳಿಂಗ ಯುದ್ಧದ ನಂತರ ಬೌದ್ಧಮತವನ್ನು ಸೇರಿದ ಅಶೋಕನು ದೇಶಾದ್ಯಂತ ಶಾಸನಗಳನ್ನು ಹಾಕಿಸುವುದರ ಮೂಲಕ ಈ ಮತಕ್ಕೆ ಆಶ್ರಯ ನೀಡಿದ್ದಲ್ಲದೆ ಪ್ರಚಾರ ಕಾರ್ಯವನ್ನೂ ನಡೆಸಿದ. ಧರ್ಮ ವಿಜಯದ ಪರಿಕಲ್ಪನೆಯನ್ನು ಹುಟ್ಟುಹಾಕಿದನು. ಆದರೆ "ಕಳಿಂಗ ಯುದ್ಧದ ಪರಿಣಾಮವಾಗಿ ಅಶೋಕನು ತೀವ್ರ ಶಾಂತವಾದನೆಂದು ಭಾವಿಸುವುದು ತಪ್ಪು. ಏನೇ ಸಂದರ್ಭ ಒದಗಿದರೂ ಶಾಂತಿ ಎಂಬುದು ಶಾಂತಿ ನೀತಿಯಲ್ಲ, ಅವನದು ಪ್ರತಿಯಾಗಿ ಅದು ತನ್ನ ಸಾಮ್ರಾಜ್ಯವನ್ನು ಕ್ರೋಢೀಕರಿಸಿಕೊಳ್ಳಲು ಅವನು ಅನುಸರಿಸಿದ ಕಾರ್ಯಶೀಲ ನೀತಿ" ಎಂದು ಆರ್.ಎಸ್. ಶರ್ಮ ಅವರು ಅಶೋಕನ ನೀತಿಯನ್ನು ತರಾಟೆಗೆ ತೆಗೆದುಕೊಂಡಿದ್ದಾರೆ(ಶರ್ಮ ೨೦೧೦: ೧೩೬). ಇದು ಅವನ ಧರ್ಮಕೇಂದ್ರಿತ ರಾಜಕಾರಣವಾಗಿದೆ ಎನ್ನಬಹುದಾಗಿದೆ.

ಈ ಪ್ರದೇಶದಲ್ಲಿ ಬೌದ್ಧಮತ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಮಸ್ಕಿ(೨೯) ಶಾಸನ ಮತ್ತು ಮಸ್ಕಿಯಲ್ಲಿ ದೊರೆತ ಹರಳಿನಲ್ಲಿ ಕೆತ್ತಿದ ಬುದ್ಧನ ತಲೆಯ ಸೂಕ್ಷ್ಮ ಪ್ರತಿರೂಪ ಮುಖ್ಯವಾದುದಾಗಿದೆ. ಇದು ಬುದ್ಧನ ಕಾಲದ ಅವಶೇಷವಾಗಿದೆ. ಇದು ಕ್ರಿಪೂ. ೩೦೦ ರಿಂದ ಕ್ರಿಶ. ೨೦೦ರ ಕಾಲಾವಧಿಯದ್ದೆಂದು ತಿಳಿದುಬರುತ್ತದೆ(ಬಸವಪ್ಪ ೧೯೭೩: ೩೭೧). ಈ ಎರಡು ಅಂಶಗಳು ಬೌದ್ಧಮತವನ್ನು ಕುರಿತು ತಿಳಿಸುವ ಬಹುಮುಖ್ಯ ಆಕರಗಳಾಗಿವೆ.

ಮುಖ್ಯವಾಗಿ ಅಶೋಕನ ಕಾಲದ ವೇಳೆಗಾಗಲೇ ಮಸ್ಕಿ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಜೊತೆಗೆ ಹೆದ್ದಾರಿಗಳ ಮಾರ್ಗದಲ್ಲಿ ಮಸ್ಕಿ ಇದ್ದಿತು. ಇದಲ್ಲದೆ ಬಂಗಾರ ಸಿಗುವ ಭೂಮಿ ಇರುವ ಸ್ಥಳಗಳಲ್ಲಿಯೇ ಅಶೋಕನು ಶಾಸನಗಳನ್ನು ಹೊರಡಿಸಿದನು. ಈ ದೃಷ್ಟಿಯಿಂದ ಬೌದ್ಧಮತ ಬೆಳವಣಿಗೆ ಹೊಂದಲು ವ್ಯಾಪಾರವೇ ಕಾರಣವಾಗಿದೆ. ಈ ಮತದ ಅನುಯಾಯಿಗಳು ಹೆಚ್ಚಾಗಿ ವ್ಯಾಪಾರಿಗಳೇ ಆಗಿದ್ದರು. ಉತ್ತರದವರು ರಾಯಚೂರು ದೋ-ಅಬ್ ಪ್ರದೇಶದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಮಸ್ಕಿಯು ದೇಶ, ವಿದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿ, ವ್ಯಾಪಾರ

ಮಾರ್ಗಗಳನ್ನು ಹೆಚ್ಚಿಸಿಕೊಂಡಿತ್ತು. ದಕ್ಷಿಣ ಭಾರತದಲ್ಲೆಲ್ಲ ವ್ಯಾಪಾರದ ಕೇಂದ್ರಗಳು ಬೌದ್ಧ ಕೇಂದ್ರ ಗಳಾಗಿದ್ದದ್ದು ಗಮನಾರ್ಹ.

"ದಕ್ಷಿಣ ಭಾರತದಲ್ಲಿನ ಅರ್ಥವ್ಯವಸ್ಥೆಯ ಬದಲಾವಣೆ ಬೌದ್ಧಮತದ ಪತನಕ್ಕೆ ಕಾರಣವಾಯಿತು. ಗ್ರಾಮಾಂತರಗಳಲ್ಲಿ ಕೃಷಿ ಹೆಚ್ಚಾದಂತೆ ಈ ಕೃಷಿ ಉತ್ಪನ್ನಗಳಿಗೂ ರಾಜನಿಗೂ ನೇರವಾದ ಸಂಬಂಧ ಏರ್ಪಟ್ಟಿತು. ಹಳೆಯ ಕ್ರಮವಾದ ಸಾರ್ಥವಾಹರ ಪ್ರಭಾವ ಬರುಬರುತ್ತಾ ಕಡಿಮೆಯಾಯಿತು. ಅಲ್ಲದೆ ಹೊಸ ಗ್ರಾಮಗಳ ಹಾಗೂ ನಗರಗಳ ದೆಸೆಯಿಂದಾಗಿ ಹಳೆಯ ಕ್ರಮದ ಸಂಘರಾಮಗಳ ವ್ಯಾಪಾರದ ಹಿಡಿತ ಸಡಿಲವಾಯಿತು. ಸಾರ್ಥವಾಹರಿಗೆ ಬದಲಾಗಿ ಚಿಕ್ಕ ಚಿಕ್ಕ ವ್ಯಾಪಾರಿಗಳು ವ್ಯಾಪಾರ ಕ್ಷೇತ್ರದಲ್ಲಿ ಉದಿತರಾದರು. ಇದರಿಂದಾಗಿ ಈ ಹಿಂದಿನ ಪ್ರಬಲವಾದ ವ್ಯಾಪಾರ ಸಂಘಗಳು ಅದೃಶ್ಯವಾದುವು. ಕ್ರಿಶ. ೧೧ನೆಯ ಶತಮಾನದ ಕೊನೆಯವರೆಗೆ ಅಲ್ಪ ಸ್ವಲ್ಪವಾದರೂ ಇದ್ದ ಅರಮನೆಯ ಬೆಂಬಲವೂ ಇಲ್ಲವಾಗಿ, ಇನ್ನೊಂದೆಡೆಯಿಂದ ವ್ಯಾಪಾರದ ಹಿಡಿತ ಬೌದ್ಧೇತರರ ಪಾಲಾಗಿ ಅಲ್ಲೂ ಬರುವ ದೇಣಿಗೆಗಳು ನಿಂತು ಹೋಗಿ ವಿಹಾರಗಳು ದರಿದ್ರ ಸ್ಥಿತಿಗಿಳಿದವೆಂದು ತಿಳಿದುಬರುತ್ತದೆ"(ತಾಳ್ತಜೆ ೧೯೮೮: ೧೨೫-೧೨೬). ಹೀಗೆ ಈ ಮತ ರಾಜಾಶ್ರಯ ಪಡೆದು ಇಡೀ ಭರತಖಂಡದ ತುಂಬೆಲ್ಲಾ ವ್ಯಾಪಿಸಿಕೊಂಡಿತ್ತು. ಇದಕ್ಕೆ ಕಾರಣ ವೈದಿಕ ಮತದ ನ್ಯೂನ್ಯತೆಗಳು. ಈ ಮತ ಈ ಪ್ರದೇಶದಲ್ಲಿ ತನ್ನದೇ ಆದ ಪ್ರಭಾವ ಬೀರಿ ಪ್ರಚಾರವನ್ನು ಪಡೆಯಲು ಕಾರಣವೆಂದು ಹೇಳಬಹುದಾಗಿದೆ.

### ೩.೪.೩.೩. ಜೈನಮತ

ಈ ಪ್ರದೇಶದಲ್ಲಿ ಬೌದ್ಧಮತದಂತೆ ಜೈನಮತವೂ ಕೂಡಾ ಪ್ರಚಾರದಲ್ಲಿತ್ತು. ಈ ಮತವನ್ನು ಪೋಷಿಸುವಲ್ಲಿ ಈ ಪ್ರದೇಶದ ಪಾತ್ರವೂ ಇದೆ. ಇಲ್ಲಿನ ಅನೇಕ ಶಾಸನಗಳು ಜೈನಮತದ ಪ್ರಭಾವವನ್ನು ಕುರಿತು ಉಲ್ಲೇಖಿಸುತ್ತವೆ. ಅಲ್ಲಲ್ಲಿ ಜೈನರ ನೆಲೆಗಳಿವೆ. ಬೌದ್ಧರಂತೆ ಜೈನರು ಮೊದಲು ಬೆಟ್ಟಗುಡ್ಡಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಮತ ಪ್ರಚಾರ ಮಾಡಿದರು. ಜೈನಮತ ಕ್ರಿಪೂ. ೪ನೆಯ ಶತಮಾನದ ವೇಳೆಗೆ ಕರ್ನಾಟಕದಲ್ಲಿ ಪ್ರವೇಶಿಸಿರಬಹುದು. ಈ ಪ್ರದೇಶದಲ್ಲಿಯೂ ಕೂಡ ಅದೇ ಸಂದರ್ಭದಲ್ಲಿ ಬಂದಿರಬೇಕು. 'ಮೆಗಾಸ್ತಾನೀಸನು ತುಂಗಭದ್ರೆಯ ದಕ್ಷಿಣದಂಡೆಯ ಪ್ರದೇಶದಲ್ಲಿ ಕೆಲವು ಸನ್ಯಾಸಿಗಳನ್ನು ಕಂಡಿದ್ದನೆಂದು' ಹೇಳಿರುವುದು ಕಂಡುಬರುತ್ತದೆ(ತೆಲಗಾವಿ ೨೦೦೪: ೨೬). ಮೆಗಾಸ್ತಾನೀಸನ ಕಾಲ ಕ್ರಿಪೂ. ೩೦೨-೨೮೮. ಅಂದರೆ ಕ್ರಿಪೂ. ೩ನೆಯ ಶತಮಾನದ ವೇಳೆಗೆ ಜೈನ ಪ್ರವೇಶವಾಗಿರಬೇಕು. ಹಾಗೆಯೇ ಜೈನಮತದ ಒಂದು ಪಂಗಡವಾದ ಯಾಪನೀಯರು ರಾಯಚೂರು ಪ್ರದೇಶದಲ್ಲಿ ನೆಲೆಸಿದ್ದರೆಂದು ತಿಳಿದುಬರುತ್ತದೆ(ಹಂಪನಾ ೧೯೭೨: ೧೨೭). ಈ ಮತ ಬೌದ್ಧಮತದಂತೆ ಏಕಕಾಲಕ್ಕೆ ಈ ಪ್ರದೇಶದಲ್ಲಿ ಪ್ರಚಾರಕ್ಕೆ ಬಂದಿರಬಹುದು. ಈ ಪ್ರದೇಶದಲ್ಲಿ ಜೈನರ ನೆಲೆಗಳು ಪ್ರಸಿದ್ಧಿಯನ್ನು ಪಡೆದಿದ್ದವು. ಕೂಡ್ಲೂರು,[೩೪೬] ಗಬ್ಬೂರು,[೩೪೭] ಹಿರೇಹೆಸರೂರು,[೩೪೮] ಮಸ್ಕಿ,[೩೪೯] ದದ್ದಲ,[೩೫೦] ಬಲಟಗಿ[೩೫೧] ಮತ್ತು ಚಂದನಕೆರೆ[೩೫೨] ಪ್ರಮುಖವಾದವು. ಚಂದನಕೆರೆಯ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸುವ ಅವಶ್ಯಕತೆಯಿದೆ. ಈ ಮತದ ಪ್ರಭಾವ ಈ ಪ್ರದೇಶದಲ್ಲಿ ೧೨ನೆಯ ಶತಮಾನದವರೆಗೆ ಇದ್ದಿತು. ನಂತರ ವಚನ ಸಾಹಿತ್ಯದ ಪ್ರಭಾವದಿಂದಾಗಿ ಈ ಮತದ ಹಿನ್ನಡೆಯನ್ನು ಅನುಭವಿಸ ಬೇಕಾಯಿತು. ಅಲ್ಲದೆ ಈ ಮತದ ಅಹಿಂಸಾ ತತ್ವ ಮತ್ತು ಕಠಿಣವಾದ ನಿಯಮಗಳೂ ಅವನತಿಗೆ ಕಾರಣವಾದವು. ಆದರೆ ಕಲ್ಯಾಣ ಚಾಲುಕ್ಯರು ಈ ಮತಕ್ಕೆ ಉಳಿದ ಮತಗಳಂತೆಯೇ ಆದ್ಯತೆ ನೀಡಿದ್ದರು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಜೈನ, ಶೈವ, ವೈಷ್ಣವ, ಕಾಳಾಮುಖ ಮುಂತಾದ

ಮತಗಳು ಪೋಷಣೆಗೆ ಒಳಗಾದವು. ಏಕೆಂದರೆ ಧಾರ್ಮಿಕ ಪ್ರಭುತ್ವದ ಪ್ರಭಾವ ರಾಜಪ್ರಭುತ್ವದ ಮೇಲೆ ಗಾಢವಾಗಿತ್ತು. ಅನಿವಾರ್ಯವಾಗಿ ಮತಗಳಿಗೆ ರಕ್ಷಣೆ ನೀಡಬೇಕಾಯಿತು.

### ೩.೪.೩.೪. ಶೈವಮತ

ಕ್ರಿ.ಶ. ೧೨ನೆಯ ಶತಮಾನಕ್ಕೂ ಮುಂಚೆ ಶೈವ ಪರಂಪರೆ ಈ ನೆಲದಲ್ಲಿ ಅಂಕುರಗೊಂಡಿತ್ತು ಕ್ರಿ.ಶ. ೬ನೆಯ ಶತಮಾನದಿಂದಲೇ ಶೈವಮತ ಪ್ರಬುದ್ಧವಾಗಿ ಬೆಳೆದಿದ್ದಿತು. ಜಾಲಹಳ್ಳಿಯ ಜಯಶಾಂತಲಿಂಗೇಶ್ವರರ ಮೂಲಕ ಶೈವ ಪರಂಪರೆ ಹಂತಹಂತವಾಗಿ ಬೆಳೆದುಕೊಂಡು ಬಂದಿತು. ೧೨ನೆಯ ಶತಮಾನದಲ್ಲಿ ವಚನ ಚಳವಳಿಯ ಪ್ರಭಾವದಿಂದಾಗಿ ಈ ಮತಕ್ಕೆ ಬಲಬಂದಂತಾಯಿತು. ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ವಿಜಯನಗರ ಮತ್ತು ಸಾಮಂತರಸರು, ಸಂಸ್ಥಾನಿಕರು ಹಾಗೂ ಹೈದರಾಬಾದ್ ನಿಜಾಮರೂ ಶೈವ ಮಠ ದೇವಾಲಯಗಳಿಗೆ ಭೂಮಿಯನ್ನು ದಾನ ಮಾಡಿರುವುದುಂಟು.[೨೫೩] ಈ ಮತಕ್ಕೆ ಎಲ್ಲ ಕಡೆಯಿಂದಲೂ ಸಹಕಾರ ಇದ್ದಿತು. ರಾಯಚೂರು ದೋ-ಅಬ್ ಪ್ರದೇಶವೆಲ್ಲವೂ ಶೈವಮತದ ನೇತೃತ್ವವನ್ನು ಒಪ್ಪಿಕೊಂಡಿತು. ಈ ಮತ ಈ ಪ್ರದೇಶದಲ್ಲಿತ್ತೆಂಬುದಕ್ಕೆ ಅನೇಕ ಶಾಸನಗಳು, ಪ್ರತಿಯೊಂದು ಗ್ರಾಮದಲ್ಲಿನ ದೇವಾಲಯಗಳಲ್ಲಿ ಲಿಂಗ ಪ್ರತಿಷ್ಠಾಪನೆ, ಬಸವಣ್ಣನ ಮೂರ್ತಿ ಸ್ಥಾಪನೆ ಇವೆಲ್ಲವೂ ಆಧಾರವಾಗಿವೆ.

ಈ ಪ್ರದೇಶದಲ್ಲಿ ಶಾಸನ ಮತ್ತು ಸಾಹಿತ್ಯಿಕ ಉಲ್ಲೇಖಿತ ಕೆಲವು ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಗಬ್ಬೂರು,[೨೫೪] ನಾಗೋಲಿ,[೨೫೫] ದೇವದುರ್ಗ,[೨೫೬] ಮುಂಡರಗಿ,[೨೫೭] ಜಾಲಹಳ್ಳಿ,[೨೫೮] ಇವು ದೇವದುರ್ಗ ತಾಲೂಕಿಗೆ ಸೇರಿವೆ. ನವಿಲೆ,[೨೫೯] ಕರಡಕಲ್,[೨೬೦] ಅನ್ವರಿ,[೨೬೧] ಗುರುಗುಂಟಾ ಅಮರೇಶ್ವರ,[೨೬೨] ಮಸ್ಕಿ[೨೬೩] ಮುಂತಾದವು ಲಿಂಗಸೂಗೂರು ತಾಲೂಕಿಗೆ ಸೇರಿವೆ. ದೇವರಗುಡಿ,[೨೬೪] ಸಾಲಗುಂದಿ,[೨೬೫] ಮುಕ್ಕುಂದಿ,[೨೬೬] ಬಳಗಾನೂರು[೨೬೭] ಇವು ಸಿಂಧನೂರು ತಾಲೂಕಿನಲ್ಲಿವೆ. ಕಲ್ಲೂರು,[೨೬೮] ಕವಿತಾಳ,[೨೬೯] ಕುರುಡಿ,[೨೭೦] ಬಲ್ಲಟಗಿ,[೨೭೧] ಮಲ್ಲಟ,[೨೭೨] ಸಿರವಾರ,[೨೭೩] ಹರವಿ,[೨೭೪] ಇವು ಮಾನ್ವಿ ತಾಲೂಕಿಗೆ ಸೇರಿದವುಗಳಾಗಿವೆ. ಹಾಗೆಯೇ ಇಡಪನೂರು,[೨೭೫] ಅಲ್ಲೂರು,[೨೭೬] ಜೇಗರಕಲ್,[೨೭೭] ದೇವಸೂಗೂರು,[೨೭೮] ಕಲಮಲಾ,[೨೭೯] ರಾಯಚೂರು,[೨೮೦] ಸುಲ್ತಾನಪುರ,[೨೮೧] ಇವು ರಾಯಚೂರು ತಾಲೂಕು ವ್ಯಾಪ್ತಿಗೆ ಒಳಪಡುತ್ತವೆ. ವಚನಗಳನ್ನು ಅಪ್ಪಿಕೊಂಡು ಶೈವಮತವನ್ನು ಪೋಷಿಸುವಲ್ಲಿ ಈ ಪ್ರದೇಶ ಮಹತ್ವದ ಪಾತ್ರವಹಿಸಿದೆ.

### ೩.೪.೩.೫. ವೈಷ್ಣವ ಮತ

ಇಲ್ಲಿ ಈ ಮತದ ಪ್ರಭಾವವೇ ಹೆಚ್ಚೆಂಬಂತೆ ಕಂಡುಬರುತ್ತದೆ. ಅನೇಕ ಅಗ್ರಹಾರ, ಬ್ರಹ್ಮಪುರಿಗಳೆಲ್ಲವು ಬ್ರಾಹ್ಮಣರ ಅಧೀನದಲ್ಲಿದ್ದವು. ಕ್ರಿ.ಶ. ೧೨ನೆಯ ಶತಮಾನದ ವೇಳೆಗೆ ಈ ಪರಂಪರೆಯ ಕುರುಹುಗಳು ಲಭಿಸುತ್ತವೆ. ೧೭-೧೮ನೆಯ ಶತಮಾನದಲ್ಲಿ ದಾಸ ಸಾಹಿತ್ಯದ ತೀವ್ರತೆ ಹೆಚ್ಚಿತ್ತು. ಅನೇಕ ದಾಸವರೇಣ್ಯರು ಈ ಪ್ರದೇಶವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದರು. ಕೀರ್ತನೆ. ಸುಳಾದಿಗಳನ್ನು ರಚಿಸುವ ಮೂಲಕ ಜನರ ಮನಸೂರೆಗೊಳಿಸಿದ್ದರು. ಆದರೆ ಆ ಸಾಹಿತ್ಯ ಬ್ರಾಹ್ಮಣರನ್ನು ಕೇಂದ್ರೀಕರಿಸಿಕೊಂಡು ರಚಿಸಿರುವುದು ಕಂಡುಬರುತ್ತದೆ. ವೈಷ್ಣವರ ಪ್ರಭಾವ ಜನಸಾಮಾನ್ಯರಲ್ಲೂ ಮೂಡಿದೆ. ವೈಷ್ಣವ ಪರಂಪರೆಗೆ ಸೇರಿದ ರಂಗನಾಥ, ಕೇಶವ, ವಿಷ್ಣು, ಲಕ್ಷ್ಮೀನಾರಾಯಣ, ಗೋಪಾಲಕೃಷ್ಣ, ತಿರುಮಲ ಮುಂತಾದ ದೈವಗಳು ಜನಸಾಮಾನ್ಯರಿಂದ ಆಚರಣೆಗೊಳಗಾಗಿವೆ. ರಂಗನಾಥ ಮತ್ತು ಆಂಜನೇಯ ದೇವರುಗಳು ಹೆಚ್ಚು ಜನರ ಮನೆ ದೇವರುಗಳಾಗಿವೆ. ಬಹುತೇಕವಾಗಿ ಈ ಪ್ರದೇಶದಲ್ಲಿ ವೈಷ್ಣವ

ಪರಂಪರೆಯ ಬೇರುಗಳು ಜನರಿಗೆ ತಿಳಿಯದ ಹಾಗೆ ಮನಸೇರಿವೆ. ರಂಗನಾಥ ಮತ್ತು ಆಂಜನೇಯ ದೇವರು ಬಹುಸಂಖ್ಯಾತರ ದೇವತೆಗಳಾಗಿ ಗುರುತಿಸಿಕೊಂಡಿವೆ. ಈ ಪ್ರದೇಶ ವೈಷ್ಣವ ಪರಂಪರೆ ಎನ್ನುವುದಕ್ಕಿಂತ ವೈಷ್ಣವ ದೇವಾಲಯಗಳು ಇರುವ ಸ್ಥಳಗಳೆಂದರೆ ಸೂಕ್ತವೆನಿಸುತ್ತದೆ. ಈ ಪ್ರದೇಶದಲ್ಲಿ ಅಲ್ಲಲ್ಲಿ ವೈಷ್ಣವ ಕೇಂದ್ರಗಳಿವೆ. ಅವು; ಗಬ್ಬೂರು,[೩೮೧] ಕುರುಡಿ,[೩೮೨] ಬಲ್ಲಟಗಿ,[೩೮೪] ಮುಕ್ಕುಂದಿ,[೩೮೫] ಮಸ್ಕಿ[೩೮೬] ಬಳಗಾನೂರು,[೩೮೭] ದಿದ್ದಿಗಿ,[೩೮೮] ವಡವಟ್ಟಿ,[೩೮೯] ಜಾಲಹಳ್ಳಿ,[೩೯೦] ಮಾನಸಗಲ್[೩೯೧] ಮುಂತಾದವು. ಹೀಗೆ ಜನಸಾಮಾನ್ಯರಲ್ಲಿ ಪ್ರಚಾರದಲ್ಲಿತ್ತೆಂದು ತಿಳಿದುಬರುತ್ತದೆ. ಈ ಮತಕ್ಕೆ ರಾಜಪ್ರಭುತ್ವದ ಅರಸುಮನೆತನಗಳು ಭೂದಾನ, ಸವಲತ್ತುಗಳನ್ನು ಒದಗಿಸಿರುವುದು ಕಾಣುತ್ತದೆ.

**೩.೪.೩.೬. ಕಾಳಾಮುಖ ಮತ**

ರಾಯಚೂರು ದೋ-ಅಬ್ ಪ್ರದೇಶ ಶೈವಪಂಥದ ಕಾಳಾಮುಖರ ನೆಲೆಯಾಗಿತ್ತೆಂಬುದು ಬಲ್ಲಟಗಿ ಶಾಸನದಿಂದ ತಿಳಿದುಬರುತ್ತದೆ.[೩೯೨] ಈ ಪರಂಪರೆಯನ್ನು ಕುರಿತು ಅನೇಕ ಚರ್ಚೆಗಳು ನಡೆದಿವೆ, ನಡೆಯುತ್ತಿವೆ. ಕಾಳಾಮುಖರು ಇದ್ದರು ಎಂಬ ಸುಳಿವನ್ನು ಈ ಮೂಲಕ ನೀಡಲಾಗಿದೆ.

**೩.೪.೩.೭. ಇಸ್ಲಾಂಧರ್ಮ**

ರಾಷ್ಟ್ರಕೂಟರ ಕಾಲದಲ್ಲಿ ಸುಲೇಮಾನ್ ಎಂಬ ಪ್ರವಾಸಿಗ ಪ್ರವೇಶಿಸುವ ಮೂಲಕ ಮುಸ್ಲಿಂ ಧರ್ಮದ ಒಡನಾಟ ಪಡೆಯಿತೆಂದು ಹೇಳಬಹುದು. ಆದರೆ ಸುಲೇಮಾನ ಇಲ್ಲಿ ಯಾವುದೇ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಲ್ಲ, ಧರ್ಮ ಪ್ರಚಾರದ ಸುಳಿವು ಕೂಡ ತಿಳಿದುಬರುವುದಿಲ್ಲ. ಕ್ರಿ.ಶ. ೧೩ನೆಯ ಶತಮಾನದಿಂದ ಇಸ್ಲಾಂ ಧರ್ಮದ ಪ್ರಭಾವ ಸುಳಿದಾಡಿತು. ವಿಜಯನಗರ ಕಾಲಾವಧಿಯ ವೇಳೆಗೆ ಸಂಪೂರ್ಣವಾಗಿ ನೆಲೆನಿಂತಿತ್ತು. ಕ್ರಿ.ಶ. ೧೩೪೭ರಲ್ಲಿ ಗುಲ್ಬರ್ಗಾದಲ್ಲಿ ಬಹಮನಿ ರಾಜ್ಯ ಸ್ಥಾಪನೆಯಾಗುವ ಕಾಲಕ್ಕೆ ಈ ಪ್ರದೇಶದಲ್ಲಿ ಮುಸ್ಲಿಂ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರಬೇಕು. ಕ್ರಿ.ಪೂ.೧೩೪೭ರಿಂದ ಕ್ರಿ.ಶ ೧೯೪೮ರ ವರೆಗೆ ರಾಜಕೀಯ ಹಿನ್ನೆಲೆಯಲ್ಲಿ ಇಸ್ಲಾಂಧರ್ಮ ಪ್ರವರ್ಧಮಾನದಲ್ಲಿತ್ತೆಂದು ಹೇಳಬಹುದು. ಅದಕ್ಕೂ ಮುನ್ನ ದೆಹಲಿ ಸುಲ್ತಾನರ ದಾಳಿಗಳಿಂದಾಗಿ ಈ ಪ್ರದೇಶದಲ್ಲಿ ಈ ಧರ್ಮದ ಪ್ರಭಾವ ಹೆಚ್ಚಾಯಿತೆಂದು ಹೇಳಬಹುದು. ಕ್ರಿ.ಶ. ೧೩೪೭ರ ವೇಳೆಗೆ ಈ ಧರ್ಮದ ಪ್ರಭಾವ ಇದ್ದಿತೆಂದು ಹೇಳಬಹುದಾಗಿದೆ. ಈ ಧರ್ಮದ ಪ್ರಭುತ್ವ ಈ ಪ್ರದೇಶದಲ್ಲಿ ಕ್ರಿ.ಶ.೧೩೯೫ರ ರಾಯಚೂರು(೪೪) ಶಾಸನದಿಂದ ಆರಂಭವಾದದ್ದು ತಿಳಿದುಬರುತ್ತದೆ. ಈ ಧರ್ಮದ ಪ್ರಮುಖ ಕೇಂದ್ರಗಳು ರಾಯಚೂರು,[೩೯೩] ಮುದಗಲ್[೩೯೪] ಮತ್ತು ಮಾನ್ವಿ[೩೯೫] ಮುಂತಾದವು. ಅಲ್ಲದೆ ದೇವದುರ್ಗ, ಗೋಣವಾಟ್ಲ, ಗುರುಗುಂಟಾ, ಮಲಿಯಾಬಾದ್, ಜಲದುರ್ಗ ಮತ್ತು ಸುಲ್ತಾನಪುರಗಳು ಇಸ್ಲಾಂ ಧರ್ಮದ ನೆಲೆಗಳಾಗಿದ್ದವೆಂದು ತಿಳಿದುಬರುತ್ತದೆ(ನಾಗರಾಳ ೨೦೧೦:೧೨೦). ಇಸ್ಲಾಂ ಧರ್ಮದ ಕುರುಹುಗಳಾಗಿ ಈ ಪ್ರದೇಶದಲ್ಲಿ ಮಸೀದಿಗಳು, ದರ್ಗಾಗಳು, ಈದ್ಗಾ ಕಟ್ಟಡಗಳು, ಬುರುಜುಗಳು ಮುಂತಾದವು ಕಂಡುಬರುತ್ತವೆ. ಈ ಧರ್ಮ ಕೆಲವು ಪಟ್ಟಣಗಳಲ್ಲಿ ಮಾತ್ರ ಉತ್ತಮ ಸ್ಥಿತಿಯಲ್ಲಿತ್ತೆಂದು ಗುರುತಿಸಬಹುದಾಗಿದೆ. ಆದರೆ ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುವವರ ಸಂಖ್ಯೆ ಕಡಿಮೆಯೆಂದೇ ಹೇಳಬಹುದಾಗಿದೆ. ಈ ಧರ್ಮದ ತತ್ವಗಳ ಆಧಾರದ ಮೇಲೆ ಸುಲ್ತಾನರು ಆಳ್ವಿಕೆ ಮಾಡಬೇಕಾಯಿತು. ಅರಸರು ಅನೇಕ ಮಸೀದಿಗಳಿಗೆ ಭೂದಾನ ಮಾಡಿದ್ದು ಕಂಡುಬರುತ್ತದೆ. ಇದಕ್ಕೆ ರಾಯಚೂರು ದಫ್ತರಿ ಮಸೀದಿಯಲ್ಲಿರುವ ಕ್ರಿ.ಶ. ೧೯೪೮–೪೯ರ ಶಾಸನದಿಂದ ತಿಳಿದುಬರುತ್ತದೆ.[೩೯೬] ಈ ಪ್ರದೇಶದಲ್ಲಿ ಇಸ್ಲಾಂ ಧರ್ಮ ತನ್ನದೇಯಾದ ಪ್ರಭಾವವನ್ನು ಹೊಂದಿ, ರಾಜಪ್ರಭುತ್ವದ ಮೇಲೆ ಹಿಡಿತವನ್ನು ಸಾಧಿಸಿತ್ತೆಂದು ಹೇಳಬಹುದಾಗಿದೆ.

### ೩.೪.೩.೮. ಕ್ರಿಶ್ಚಿಯನ್ ಧರ್ಮ

ಈ ಧರ್ಮದ ಪ್ರಭಾವ ಈ ಪ್ರದೇಶದಲ್ಲಿ ಕ್ರಿ.ಶ. ೧೫೦೨ರಿಂದ ಪ್ರಚಾರದಲ್ಲಿದ್ದಿತು. ರಾಯಚೂರು ಮತ್ತು ಮುದಗಲ್‌ಗಳು ಇದರ ಪ್ರಮುಖ ಕೇಂದ್ರಗಳಾಗಿದ್ದವು. ಈ ಧರ್ಮ ನಿಧಾನವಾಗಿ ವಸಾಹತುಶಾಹಿ ಧೋರಣೆಯ ಅಸ್ತಿತ್ವಕ್ಕಾಗಿ ತನ್ನ ಬೇರುಗಳನ್ನು ಚಾಚಿಕೊಂಡಿತು. ಕ್ಯಾಥೋಲಿಕ್ ಪಂಥಕ್ಕೆ ಸೇರಿದ ಚರ್ಚ್‌ಗಳು ತಲೆ ಎತ್ತಿದ್ದವು. ಅವು ಬುದ್ದಿನ್ನಿ, ಹಿರೇಯರದಿಹಾಳ, ನಗನೂರು, ಪಾಮನಕಲ್ಲೂರು, ಆನೆಹೊಸೂರು, ಗುಡದನಾಳ, ತೊಂಡಿಹಾಳ, ಕವಿತಾಳ, ಜವಳಗೇರಾ ಮುಂತಾದ ಹಳ್ಳಿಗಳಾಗಿವೆ. ಈ ಧರ್ಮ ಬಡತನದ ನೆಪವನ್ನು ಮುಂದೆ ಮಾಡಿ ಮತಾಂತರ ಕಾರ್ಯಕ್ಕೆ ಇಳಿಯಿತು. ಆರಂಭದಲ್ಲಿ ನೇಕಾರರು, ಕಬ್ಬಲಿಗರು, ಕುರುಬರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರು. ಇದು ಹಂತ ಹಂತವಾಗಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿತು. ಈ ಪ್ರದೇಶದಲ್ಲಿ ಅನಕ್ಷರಸ್ಥರನ್ನು ಶಿಕ್ಷಣವಂತರನ್ನಾಗಿ ಮಾಡುತ್ತೇವೆಂದು ಶಾಲೆಗಳನ್ನು ಆರಂಭಿಸಿತು. ಚರ್ಚ್ ಆರಂಭದ ಕಾಲದಿಂದಲೂ ಮದ್ರಾಸ್, ಹೈದರಾಬಾದ್, ಗೋವಾ, ಮುಂಬೈ, ಬೆಳಗಾಂ ಮುಂತಾದ ಪ್ರದೇಶಗಳೊಂದಿಗೆ ತನ್ನ ಆಂತರಿಕ ಸಂಬಂಧವನ್ನು ಹೆಚ್ಚಿಸಿಕೊಂಡಿತು. ಈ ಮೂಲಕ ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್ ಸ್ಥಾಪನೆಗೆ ಕಾರಣವಾಯಿತು. ಹಾಗೆಯೇ ಕ್ರಿ.ಶ. ೧೮೫೭ರ ವೇಳೆಗೆ ಪ್ರಭಾವಿಯಾಗಿ ವ್ಯಾಪಿಸಿಕೊಂಡಿತು(ನಾಗರಾಳ ೨೦೧೧: ೨೫೦-೬೦). ಹೀಗೆ ಈ ಪ್ರದೇಶದಲ್ಲಿ ಸಣ್ಣ ಪ್ರಮಾಣದ ಚರ್ಚ್ ಸ್ಥಾಪನೆಯಾಗಿ ಆಡಳಿತದಲ್ಲಿ ಪ್ರಭಾವ ಬೀರುವ ಮಟ್ಟಕ್ಕೆ ಬೆಳೆಯಿತು(ಹೆಚ್ಚಿನ ವಿವರಣೆಗಾಗಿ ನೋಡಿ: ಮಹಾದೇವಪ್ಪ ನಾಗರಾಳ, ೨೦೧೧, ಅವರ ಮುದಗಲ್ ಒಂದು ಸಾಂಸ್ಕೃತಿಕ ಅಧ್ಯಯನ, ಗೋವರ್ಧನ ರೆಡ್ಡಿ ಅವರ ಲೇಖನ ರಾಚೂರು ಎಂಬ ಸ್ಮರಣ ಸಂಚಿಕೆ, ೨೦೦೭, ಪುಟ ೫೯-೬೨).

ಈ ರೀತಿಯಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ವೈದಿಕ, ಬೌದ್ಧ, ಜೈನ, ಶೈವ, ವೈಷ್ಣವ, ಕಾಳಾಮುಖ ಮತಗಳು, ಇಸ್ಲಾಂ, ಕ್ರೈಸ್ತ ಧರ್ಮಗಳು ತಮ್ಮ ಧಾರ್ಮಿಕ ಪ್ರಭುತ್ವವನ್ನು ಸಾಧಿಸಿದ್ದವು. ಈ ಮತಧರ್ಮಗಳು ವಿವಿಧ ಅರಸುಮನೆತನಗಳಿಂದ ಭೂದಾನಗಳನ್ನು ಪಡೆದಿದ್ದವು.

### ೩.೪.೪. ಸ್ಮಾರಕಗಳು

ಯಾವುದೇ ಒಂದು ಪ್ರದೇಶದ, ಕಾಲದ ಚರಿತ್ರೆಯ ಅಧ್ಯಯನ ನಡೆಸಲು ಸ್ಮಾರಕಗಳು ಬಹುಮುಖ್ಯ ಆಕರಗಳಾಗಿವೆ. ಈ ಸ್ಮಾರಕಗಳ ಮೂಲಕ ಆ ಪ್ರದೇಶದ ಜನಜೀವನವನ್ನು ಕುರಿತು ನಿರ್ಧರಿಸಬಹುದು. ಸ್ಮಾರಕಗಳು ಯಾವಾಗಲೂ ಪ್ರಭುತ್ವದ ನೆಲೆಯಿಂದಲೇ ರಚಿತಗೊಂಡಿರುತ್ತವೆ. ಆದರೆ ಪ್ರಜೆಗಳ ಜೀವನ ಸ್ಥಿತಿಯನ್ನು ಅರಿಯಲು ಯಾವ ಕುರುಹುಗಳು ಅಷ್ಟಾಗಿ ಲಭಿಸುವುದಿಲ್ಲ. ಏಕೆಂದರೆ ಜನಸಾಮಾನ್ಯರು ವಾಸಿಸುವ ಮನೆಗಳು ಗುಡಿಸಲುಗಳಾಗಿರುತ್ತಿದ್ದವು. ಅದರಲ್ಲಿ ಸ್ವಲ್ಪ ಸುಧಾರಿಸಿದವರು ಇದ್ದರೆ ಮಾಳಿಗೆ ಮನೆಗಳಾಗಿರುತ್ತಿದ್ದವು. ಈ ಮಾಳಿಗೆ ಮನೆಗಳು ಈ ಪ್ರದೇಶದಲ್ಲಿ ಮಣ್ಣಿನ ಎಳೆಗಳನ್ನು ಉಪಯೋಗಿಸಿಕೊಂಡು ನಿರ್ಮಾಣಗೊಳ್ಳುತ್ತಿದ್ದವು. ದೊಡ್ಡ ಮಳೆ ಬಂದರೆ ಈ ಮನೆಗಳು ಬಿದ್ದು ನಶಿಸಿಹೋಗುತ್ತಿದ್ದವು. ಇದರಿಂದಾಗಿ ಜನಸಾಮಾನ್ಯರನ್ನು ಕುರಿತು ಅಧ್ಯಯನ ಮಾಡುವುದು ತುಸು ಆಧಾರಗಳ ಕೊರತೆ ಎದ್ದು ಕಾಣಿಸುತ್ತದೆ. ಜನಸಾಮಾನ್ಯರ ಸ್ಮಾರಕಗಳು ಗ್ರಾಮದೇವತೆಗಳ ಗುಡಿಗಳು(ಕೆಲವು ಕಡೆ ಬಹುತೇಕವಾಗಿ ಕಟ್ಟೆಗಳ ಮೇಲೆ ಮೂರ್ತಿ ಇಟ್ಟು ಪೂಜಿಸುವುದು, ಮರಗಳಿಗೆ ಸೀರೆ ಸುತ್ತಿ ಪೂಜಿಸುವುದು, ಯಾವುದೇ ಆಕಾರವಿಲ್ಲದ ಕಲ್ಲಿಗೆ ಪೂಜಿಸುವುದು, ಹೀಗೆ ಗ್ರಾಮದೇವತೆಗಳ ಸ್ಥಿತಿಯಿತ್ತು), ಮನೆಗಳು ಅವು ಕಲ್ಲಿನಿಂದ ಗೋಡೆ ಕಟ್ಟಿದ್ದರೆ ಮಾತ್ರ ಕುರುಹುಗಳು ಲಭಿಸುತ್ತಿದ್ದವು.

ಮಣ್ಣಿನ ಗೋಡೆಗಳಿದ್ದರೆ ಕುರುಹುಗಳೇ ಇಲ್ಲದಂತಾಗುತ್ತದೆ. ಜನಸಾಮಾನ್ಯರ ಸಮಾಧಿಗಳು ಗೂಡಿನಾಕಾರದಲ್ಲಿ ಕಟ್ಟಲಾಗುತ್ತಿತ್ತು. ಅವು ಮಣ್ಣಿನಲ್ಲಿ ಕೆಲವು ಸಲ ಮುಳುಗಿರುತ್ತಿದ್ದವು, ಗುರುತೇ ಸಿಗುತ್ತಿರಲಿಲ್ಲ. ಈ ರೀತಿಯಾಗಿರುವ ಜನಸಾಮಾನ್ಯರ ಸ್ಮಾರಕಗಳು ಚರಿತ್ರೆಯಲ್ಲಿ ಪ್ರಧಾನವಾಗಿ ಗುರುತಿಸಿಕೊಳ್ಳಲಿಲ್ಲ. ಬದಲಾಗಿ ಪ್ರಭುತ್ವದ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಕೋಟೆ–ಕೊತ್ತಲು, ಅರಮನೆ ದೇವಾಲಯಗಳು ಮುಂತಾದವು ಚರಿತ್ರೆಯಲ್ಲಿ ಪ್ರಧಾನವಾದ ಸ್ಥಾನವನ್ನು ಹೊಂದಿದವು. ಆದರೆ ಇವುಗಳ ನಿರ್ಮಾಣಕ್ಕಾಗಿ ಶ್ರಮಿಸಿದ ಶ್ರಮಿಕ ವರ್ಗ ಮತ್ತು ಅವರ ವಾಸದ ನೆಲೆಗಳು ಎಂದಿಗೂ ಪ್ರಮುಖವಾಗಿ ಕಂಡುಬರಲಿಲ್ಲ.

ವಿಜಯ್ ಪೂಣಚ್ಚ ತಂಬಂಡ ಅವರು "ಕನ್ನಡ, ಕೊಡಗು ಮತ್ತು ತುಳು ನಾಡುಗಳಲ್ಲಿ ಮೆಜಾರಿಟಿ ಸಮುದಾಯಗಳಿಗೆ ಅದರಲ್ಲೂ ಕೆಳವರ್ಗದ ಜಾತಿಗಳಿಗೆ ಲಿಖಿತ ಚರಿತ್ರೆಗಳಿಲ್ಲ ಎನ್ನುವ ಹಿನ್ನೆಲೆಯಲ್ಲಿ ಅವರ ಚರಿತ್ರೆಯನ್ನು, ಈ ಮೂಲಕ ಕರ್ನಾಟಕದ ಚರಿತ್ರೆಯನ್ನು ವಿವರಿಸಬೇಕಾದರೆ ಮೌಖಿಕ ಆಕರಗಳು ಬಹಳ ಪ್ರಧಾನವಾದ ಪಾತ್ರವನ್ನು ವಹಿಸುತ್ತವೆ. ಅಂತಹ ಸಮುದಾಯಗಳ ಸಮಾಜದ ಸಾಂಸ್ಕೃತಿಕ ಇತಿಹಾಸವನ್ನು ಈ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಬೇಕಾಗುತ್ತದೆ. ಹೀಗಾಗಿ ಕರ್ನಾಟಕದ ಕೋಟ್ಯಾಂತರ ಜನ ವರ್ಗಗಳ ಅದರಲ್ಲೂ ಕರ್ನಾಟಕದ ಬಹುತೇಕ ಗ್ರಾಮೀಣ ಜನವರ್ಗಗಳು ತಮ್ಮ ನಂಬಿಕೆ, ಆಚರಣೆಗಳ ಮೂಲಕ ಕಂಡುಕೊಂಡ 'ಜನಪದ ಕಾವ್ಯಗಳು' ನೀಡುವ ಆಕರಗಳಿಂದ ಚರಿತ್ರೆಯ ಇನ್ನೊಂದು ಮಗ್ಗುಲನ್ನು ನೋಡುವ ಉದ್ದೇಶವನ್ನು ಅಳವಡಿಸಿಕೊಂಡಿರಬೇಕು. ಈ ಎಲ್ಲ ಜನಪದ ಕಾವ್ಯಗಳು ಬಹಳ ಮುಖ್ಯವಾಗಿ "ಜನಪದ ನಾಯಕರ" ಅಥವಾ "ಸಾಂಸ್ಕೃತಿಕ ವೀರರ" ಬಗ್ಗೆ ಮಾಹಿತಿಗಳನ್ನು ನೀಡುತ್ತವೆ. ಇದರ ಅರ್ಥ ಯಾರೋ ಒಬ್ಬ/ಒಬ್ಬಳು 'ಜನಪದ ನಾಯಕ' ಕೇಂದ್ರಿತ ಚರಿತ್ರೆಯನ್ನು ಬರೆಯುವುದು ಎಂದರ್ಥವಲ್ಲ. ಬದಲಿಗೆ ಕಾವ್ಯಗಳ ಮೂಲಕ ಸಿಗುವ ಮಾಹಿತಿಗಳಿಂದ ಕರ್ನಾಟಕದ ಸಾಂಸ್ಕತಿಕ ಚರಿತ್ರೆಯಲ್ಲಿ ಮೂಲೆಗೊತ್ತಲ್ಪಟ್ಟಿರುವ ಭಿನ್ನ ಭಿನ್ನ ಸಮುದಾಯಗಳ ಸಮಾಜದ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಬಹುದೆಂಬ" ವಾಸ್ತವಿಕ ನೆಲೆಗಟ್ಟಿನಲ್ಲಿ ತಿಳಿಸುವ ಪ್ರಯತ್ನ ಮಾಡಿದ್ದಾರೆ(ತಂಬಂಡ ೨೦೦೪: ೨–೩). ಇದು ಹೊಸ ಬಗೆಯ ಚರಿತ್ರೆಯನ್ನು ಕಟ್ಟಲು ಮಹತ್ವದ ಮಾರ್ಗಸೂಚಿಯಾಗಿದೆ. ಹಾಗೆಯೇ ಮುಂದುವರೆದು ಈಗಾಗಲೇ "ಒಪ್ಪಿತವಾಗಿರುವ" ಚರಿತ್ರೆಗಿಂತ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ರಚಿಸಲು ಲಿಖಿತ ಪರಂಪರೆಯಿಂದ ದೂರ ಇದ್ದ, ಇರುವ ಕರ್ನಾಟಕದ ಬಹುತೇಕ ಕೆಳವರ್ಗಗಳ ಸಮುದಾಯಗಳ ದೈನಂದಿನ ಜೀವನದ ಭಾಗವಾಗಿರುವ ಕೆಳವರ್ಗದ ಸಂಸ್ಕೃತಿ ಬಹುಮುಖ್ಯವಾಗಿದೆ. ಅಲ್ಲದೆ ಕೆಳವರ್ಗದ ಸಂಸ್ಕೃತಿಯನ್ನು ಬಹುತೇಕವಾಗಿ ಮೌಖಿಕ ಪರಂಪರೆಯಿಂದ ಬಂದ ಸಂಸ್ಕೃತಿ ಎಂದು ನಿರ್ಧರಿಸಲಾಗಿದೆ ಎಂಬ ಮಾತನ್ನು ಉಲ್ಲೇಖಿಸುತ್ತಾರೆ. ಈ ವಿಚಾರಕ್ಕೆ ಪೂರಕವಾಗಿ ಮೋಹನ್‌ಕೃಷ್ಣ ರೈ ಅವರು "ಪ್ರಭುತ್ವ ಕೇಂದ್ರಿತ ಚರಿತ್ರೆಯಲ್ಲಿ ಜನವರ್ಗಗಳ ಚರಿತ್ರೆ ಗೌಣವಾಗಿರುವುದಕ್ಕೆ ಪ್ರಭುತ್ವದ ಸ್ಮಾರಕಗಳನ್ನು ಕಟ್ಟಿಸಿದವರ ಹಿನ್ನೆಲೆಯಿಂದ ನೋಡಲಾಯಿತೆ ಹೊರತು ಕಟ್ಟಿದವರ ಹಿನ್ನೆಲೆಯಿಂದಲ್ಲ. ಸ್ಮಾರಕಗಳನ್ನು ಕಟ್ಟಿದ ಸಾವಿರಾರು ಕುಶಲಕರ್ಮಿಗಳು ಹಾಗೂ ಇನ್ನಿತರ ಕೂಲಿ ಕೆಲಸಗಾರರು ಅರಸ ಕೇಂದ್ರಿತ ಚರಿತ್ರೆಗೆ ಪ್ರವೇಶ ಪಡೆಯಲೇ ಇಲ್ಲ. ಅವರ ದುಡಿಮೆಯ ಲಾಭವನ್ನು ಪಡೆದುಕೊಂಡು ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳು ಪ್ರಚಾರವನ್ನು ಗಿಟ್ಟಿಸಿಕೊಂಡವು. ಕುಶಲಕರ್ಮಿಗಳು ರಾಜ ಅಥವಾ ಧರ್ಮದ ಮೂಲಕ ಸಮಾಜದಲ್ಲಿ ಗುರುತಿಸಿಕೊಳ್ಳಬೇಕಾದ ಒತ್ತಾಯಗಳಿಗೆ ಒಳಗಾಗಿದ್ದರು. ಪ್ರಜೆಗಳ ಸ್ಮಾರಕಗಳಾದ ಗ್ರಾಮ ದೇವತೆಗಳ ಗುಡಿಗಳು, ಮನೆಗಳು, ಮರಣ ಸ್ಮಾರಕಗಳು ಚರಿತ್ರೆ ನಿರ್ಮಾಣದ

ಆಕರಗಳೆ ಅಲ್ಲ ಎನ್ನುವ ಏಕಪಕ್ಷೀಯ ಧೋರಣೆಗೆ ಒಳಗಾಗಬೇಕಾಯಿತೆಂದು" ತಿಳಿಸುತ್ತಾರೆ(ರೈ ೨೦೦೪: ೧೯೦). ವಿಜಯ್ ಪೂಣಚ್ಚ ತಂಬಂಡ ಅವರು "ಬ್ರಾಹ್ಮಣರು ಬಹುತೇಕವಾಗಿ ಬಳಸುತ್ತಿದ್ದ ಸಂಸ್ಕೃತ ಭಾರತ ಉಪಖಂಡದ ನೂರಾರು ಭಾಷೆಗಳಲ್ಲಿ ಒಂದು ಎನ್ನುವುದು ಇಲ್ಲಿ ಮುಖ್ಯವಾದ ವಿಚಾರವಾದರೆ, "ಪುರಾತನ ಕಾಲದಲ್ಲಿ" ಜೈನ ಮತ್ತು ಬೌದ್ಧ ಬೌದ್ಧಿಕ ಪ್ರಪಂಚ ಶಕ್ತಿಯಾಗಿದ್ದುದು ಕೂಡ ಮುಖ್ಯವೇ. ಹಾಗೆಯೇ "ಮಧ್ಯಕಾಲೀನ ಭಾರತದಲ್ಲಿ" ಕನ್ನಡವೂ ಸೇರಿದಂತೆ ಉಳಿದ ದಕ್ಷಿಣ ಭಾರತೀಯ ಭಾಷೆಗಳು ಉರ್ದು, ಪರ್ಷಿಯನ್ ಮತ್ತು ಅರೇಬಿಕ್ ಭಾಷೆಗಳ ಅಕ್ಷರ ಪ್ರಪಂಚ ಹಾಗೂ ಅವುಗಳಿಂದ ಮೂಡಿಬಂದ ಅನೇಕ ಬಗೆಯ ಸಂವಾದಗಳನ್ನು ನಾವೀಗ ಅರ್ಥಮಾಡಿಕೊಳ್ಳುವ ಜರೂರಿದೆ. ಈ ಹಿನ್ನೆಲೆಯಲ್ಲಿ ಕನ್ನಡದ ಸಂದರ್ಭದಲ್ಲಿ ೧೨ನೆಯ ಶತಮಾನದ ವೀರಶೈವ ಬೌದ್ಧಿಕ ಪ್ರಪಂಚ ಹುಟ್ಟುಹಾಕಿದ ಅನೇಕ ಬಗೆಯ ಚರ್ಚೆಗಳೂ ಇದರಿಂದ ಹೊರತಲ್ಲ. ಆ ಕಾಲದಲ್ಲಿ 'ಭಾರತೀಯ' ಎನ್ನುವ ಚಿಂತನೆಯೊಂದಿತ್ತು ಎನ್ನುವ ವಾದ ಸಂದೇಹಾಸ್ಪದವಾಗಿ ಕಾಣುತ್ತದೆ. ೧೯ನೆಯ ಶತಮಾನದಲ್ಲಿ ಯುರೋಪಿನಾದ್ಯಂತ ಬೆಳೆದ ಉಗ್ರ ರಾಷ್ಟ್ರೀಯತೆಯ ಭಾವನೆಯಿಂದಾಗಿ ಯುರೋಪಿನ ಪ್ರತಿಯೊಂದು ದೇಶ ತನ್ನ ಸಾಂಸ್ಕೃತಿಕ ಅನನ್ಯತೆಯನ್ನು ಸ್ಥಾಪಿಸಲು ಮೌಖಿಕ-ಜಾನಪದ ವಾಙ್ಮಯವನ್ನು ಬಳಸಿಕೊಂಡಿತು" ಎಂದು ತಿಳಿಸುತ್ತಾರೆ(ತಂಬಂಡ ೨೦೦೪: ೫).

ವಿಜಯ್ ಪೂಣಚ್ಚ ತಂಬಂಡ ಅವರು ಹೇಳುವಂತೆ ಈ ಪ್ರದೇಶ ಕೆಳವರ್ಗಗಳ ಚರಿತ್ರೆಯನ್ನು ಅರಿಯಲು ಮೌಖಿಕ ಆಕರಗಳನ್ನು ಬಳಸಿಕೊಳ್ಳವುದು, ಆ ಮೂಲಕ ಈ ಪ್ರದೇಶದ ಅನನ್ಯತೆಯನ್ನು ತಿಳಿಯುವುದು ಬಹುಮುಖ್ಯವಾಗಿದೆ. ಕೆಳವರ್ಗಗಳ ಸಂಸ್ಕೃತಿಯನ್ನು ಅರಿಯಬೇಕಾದರೆ ಅವರ ಆಚರಣೆ, ನಂಬಿಕೆ, ದೈವಗಳನ್ನು ಕುರಿತು ಅಭ್ಯಸಿಸಿದರೆ ಮಾತ್ರ ಅವರ ಚರಿತ್ರೆ ತಿಳಿಯಬಹುದು. ಅಲ್ಲದೆ ಪ್ರಸ್ತುತ ಸಂದರ್ಭದಲ್ಲಿ ಕೆಳವರ್ಗಗಳ ಬದುಕನ್ನು ಅವರಿಂದ ನಿರ್ಮಾಣಗೊಂಡ ಪ್ರಭುತ್ವದ ಸ್ಮಾರಕಗಳು ಮತ್ತು ಕೆಳವರ್ಗಗಳ ವಾಸ್ತವ ಚರಿತ್ರೆಯನ್ನು ತಿಳಿಸುವ ಗ್ರಾಮದೇವತೆಗಳ ಗುಡಿಗಳು, ಮನೆಗಳು ಮತ್ತು ಸಮಾಧಿಗಳ ಮೂಲಕ ಅರಿಯಬಹುದಾಗಿದೆ.

ಈ ಅಧ್ಯಯನದಲ್ಲಿ ಚನ್ನಬಸಪ್ಪ ಎಸ್. ಪಾಟೀಲ್, ಸುಜಾತ ಮಲ್ಲನಗೌಡ, ರಡ್ಡೆಪ್ಪಹಳ್ಳಿ, ಮಹೇಶ, ಅಮರೇಶ, ಅಮರೇಶ ಯತಗಲ್, ಪದ್ಮಜಾ ದೇಸಾಯಿ, ಮಹಾದೇವಪ್ಪ ನಾಗರಾಳ, ಚಿತ್ರಗಾರ ಹೆಚ್.ಎನ್., ವಾಸುದೇವನ್ ಸಿ.ಎಸ್., ರಮೇಶ ಮೂಲಗೆ, ಚಂದ್ರಶೇಖರ ನಾರಣಾಪುರ ಮುಂತಾದವರ ಲೇಖನ, ಪುಸ್ತಕ ಹಾಗೂ ಅಭಿಪ್ರಾಯಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೆ ಚರಿತ್ರೆಯಲ್ಲಿ ದಾಖಲಾಗದೆ ಚರಿತ್ರೆಯ ವಿವಿಧ ಮಜಲುಗಳನ್ನು ತಿಳಿಸುವ ಜನಸಾಮಾನ್ಯರ ಸ್ಮಾರಕಗಳನ್ನು ಕ್ಷೇತ್ರಕಾರ್ಯದ ಮೂಲಕ ಅವಲೋಕಿಸಲಾಗಿದೆ.

ಈ ಅಧ್ಯಯನದಲ್ಲಿ ಸ್ಮಾರಕಗಳನ್ನು ಎರಡು ಬಗೆಯಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಒಂದು ಪ್ರಭುತ್ವದ ಸ್ಮಾರಕಗಳು, ಎರಡನೆಯದು, ಪ್ರಜೆಗಳ ಸ್ಮಾರಕಗಳು. ಈ ಸ್ಮಾರಕಗಳಿಗೆ ಐತಿಹ್ಯಗಳು ಮತ್ತು ಜನಪದ ಗೀತೆಗಳಿರುವುದು ಸಹ ಕಂಡುಬರುತ್ತದೆ. ಈ ಹಿನ್ನೆಲೆಯುಲ್ಲಿ ಸ್ಮಾರಕಗಳನ್ನು ಕುರಿತು ವಿಮರ್ಶಾತ್ಮಕವಾಗಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

### ೩.೪.೪.೧. ಪ್ರಭುತ್ವದ ಸ್ಮಾರಕಗಳು

ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಕಾಲದಿಂದ ನಿಜಾಮರ ಕಾಲದವರೆಗೆ ಅನೇಕ ಬೃಹತ್ ಮತ್ತು ಭವ್ಯಕಟ್ಟಡಗಳು ರಚಿತಗೊಂಡವು. ಅವುಗಳಲ್ಲಿ ಕೋಟೆ, ಕೊತ್ತಲು, ದೇವಾಲಯ, ಅರಮನೆ ಮುಂತಾದವು ಪ್ರಮುಖವಾದವು. ಈ ಪ್ರದೇಶದ ಕೋಟೆಗಳನ್ನು ಕುರಿತು ಅನೇಕ ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ೧೯೧೫ರಲ್ಲಿ ಬಷೀರುದ್ದೀನ್ ಅಹಮ್ಮದ್(ದೆಹಲಿಯಿಂದ ಬಂದ ಲೇಖಕ) ಉರ್ದುವಿನಲ್ಲಿ "ತಾರೆಫ್ ಬಿಜಾಪುರ" ಎಂಬ ಗ್ರಂಥವನ್ನು ೨ ಸಂಪುಟಗಳಲ್ಲಿ ಸಂಪಾದಿಸಿ ಮಾಹಿತಿಗಳನ್ನು ನೀಡಿರುವನು. ಈ ಗ್ರಂಥದಲ್ಲಿ ರಾಯಚೂರು ಕೋಟೆ ಕುರಿತಂತೆ ಛಾಯಾಚಿತ್ರ ಹಾಗೂ ಹಲವು ಕೋಟೆಗಳ ನಕಾಶೆ ಮಾದರಿ ಮತ್ತು ವಾಸ್ತುಶಿಲ್ಪದ ಚಿತ್ರಗಳನ್ನು ಒದಗಿಸಿರುವನು. ಈ ಕೃತಿಯಲ್ಲಿ ರಾಯಚೂರು ಕೋಟೆಯ ಬೆಟ್ಟವನ್ನು 'ಗುಬ್ಬೇರ ಬೆಟ್ಟ' ಎಂದು ಕರೆದಿರುವನು. ಇಂದಿಗೂ ಈ ಬೆಟ್ಟದ ಮೇಲೆ ಇವರು "ಪಂಚಬೀಬಿ ಮಕಬರಾ"(ಐದುಜನ ಗರತಿಯರ ಗೋರಿ) ಇರುವುದಾಗಿ ತಿಳಿದುಬರುತ್ತದೆ(ಕೃಷ್ಣಯ್ಯ ೧೯೯೨: ೬೩). ೧೯೨೯-೩೦ರಲ್ಲಿ ಹೈದರಾಬಾದ್ ಪುರಾತತ್ವ ಇಲಾಖೆ ರಾಯಚೂರು ಕೋಟೆಯ ಬಗ್ಗೆ ಮಾಹಿತಿ ನೀಡಿದರೆ, ೧೯೩೫-೩೬ರಲ್ಲಿ ಈ ಇಲಾಖೆಯವರು ಇನ್ನೊಂದು ಮಹತ್ವದ ಕೋಟೆಯಾದ ಮುದಗಲ್ ಕೋಟೆಯ ಬಗ್ಗೆ ವಿವರಣೆ ನೀಡಿದ್ದಾರೆ. ೧೯೫೮ ಮತ್ತು ೧೯೬೫ರಲ್ಲಿ ಸಿಡ್ನಿಟಾಯ್ ಎಂಬುವವರು 'ದಿ ಫೋರ್ಟಿಫೈಡ್ ಸಿಟೀಸ್ ಆಫ್ ಇಂಡಿಯಾ' ಕೃತಿಯಲ್ಲಿ ರಾಯಚೂರು ಕೋಟೆಯ ಬಗ್ಗೆ ಮಾಹಿತಿ ನೀಡಿರುವುದಾಗಿ ತಿಳಿದುಬರುತ್ತದೆ(ಸುಜಾತ ೨೦೦೦: ೪-೫). ೧೯೭೦ರಲ್ಲಿ ಅಭಿಶಂಕರ್ ಅವರ ಸಂಪಾದಕತ್ವದಲ್ಲಿ ಪ್ರಕಟವಾದ ರಾಯಚೂರು ಜಿಲ್ಲಾ ಗೆಜೆಟಿಯರ್‌ನಲ್ಲಿ ರಾಯಚೂರು ಮತ್ತು ಮುದಗಲ್ ಕೋಟೆಗಳ ಉಲ್ಲೇಖವಿದೆ. ೧೯೯೪ರಲ್ಲಿ ಚನ್ನಬಸಪ್ಪ ಎಸ್. ಪಾಟೀಲ್ ಅವರು ಹಿಂದೆ ಪತ್ತೆಹಚ್ಚಿದ ರಾಯಚೂರು, ಮುದಗಲ್‌ಗಳನ್ನು ಹೊರತುಪಡಿಸಿ ಮಲಿಯಾಬಾದ್, ಮಾನ್ವಿ, ಕಲ್ಲೂರು, ಮಲ್ಲಟ, ಕೋಟೆಕಲ್ಲು, ಮುಕ್ಕುಂದ, ರೌಡಕುಂದ, ದಿದ್ದಿಗಿ, ಜಲದುರ್ಗ, ಕೋಠಾ, ಮುದಬಾಳ, ವೆಂಕಟಾಪುರ, ಮಸ್ಕಿ, ಮೇಧರಾಯನ ಕೋಟ, ಹಾಲಬಾವಿ ಮತ್ತು ಸಂತೆಕಲ್ಲೂರು, ದೇವದುರ್ಗ, ಗಬ್ಬೂರು, ರಾಮದುರ್ಗ ಕೋಟೆಗಳನ್ನು ಶೋಧಿಸಿರುವುದು ಕಂಡುಬರುತ್ತದೆ(ಪಾಟೀಲ್ ೧೯೯೪: ೧-೧೧).

೧೯೯೭ರಲ್ಲಿ ರಡ್ಡೆಪ್ಪಹಳ್ಳಿ ಬಳಗಾನೂರು ಅವರು ಕೇವಲ ರಾಯಚೂರು ಕೋಟೆಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡಿರುವುದು ಕಂಡುಬರುತ್ತದೆ(ರಡ್ಡೆಪ್ಪ ಹಳ್ಳಿ ೧೯೯೭: ೮೦-೮೮). ಇದೇ ಬಗೆಯಲ್ಲಿ ೧೯೯೮ರಲ್ಲಿ ಸುಗುಣ ಶರ್ಮಾ ಅವರ "ಹಿಸ್ಟರಿ ಆಂಡ್ ಆಂಟಿಕ್ಯೂಟಿಸ್ ಆಫ್ ರಾಯಚೂರು ಫೋರ್ಟ್" ಎಂಬ ಕೃತಿ ರಚನೆಗೊಂಡಿರುವುದು ಕಂಡುಬರುತ್ತದೆ. ಕ್ರಿ.ಶ. ೨೦೦೦ರಲ್ಲಿ ಸುಜಾತ ಮಲ್ಲನಗೌಡ ಅವರು ಹೈದರಾಬಾದ್ ಪುರಾತತ್ವ ಇಲಾಖೆ ಮತ್ತು ಚನ್ನಬಸಪ್ಪ ಎಸ್. ಪಾಟೀಲರು ಗುರುತಿಸಿದ ಕೋಟೆಗಳನ್ನು ಬಿಟ್ಟು ಹೊಸದಾಗಿ ಗೊಲಪಲ್ಲಿ, ಗುಡಗುಂಟಿ, ಹೊನ್ನಹಳ್ಳಿ ಮತ್ತು ಕಲಮಂಗಿ ಕೋಟೆಗಳನ್ನು ಸೇರಿಸುತ್ತಾರೆ. ಮುಂದುವರೆದು ಮಹೇಶ ಗಬ್ಬೂರು ಅವರು ೨೦೦೬ರಲ್ಲಿ ರಾಮದುರ್ಗ, ಹುನಗುಂದಬಾಡ, ಕ್ಯಾದಿಗ್ಗೇರಿ ಮತ್ತು ಚಂದನಕೇರಿಗಳನ್ನು ಶೋಧಿಸಿದ್ದಾರೆ. ಇದಕ್ಕೆ ಅಮರೇಶ ಯತಗಲ್ ಅವರು ೨೦೦೭ರಲ್ಲಿ ಗುಂತಗೋಳದ ಕೋಟೆಯನ್ನು ಸೇರಿಸುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ದೇವದುರ್ಗ ತಾಲೂಕಿನಲ್ಲಿ ಗಲಗ ಹಾಗೂ ಮಾನ್ವಿ ತಾಲೂಕಿನ

ವಡವಟ್ಟಿಯಲ್ಲಿ ಕೋಟೆಗಳಿವೆ. ಇವನ್ನು ಗುರುತಿಸಿ ಹೊಸ ಸೇರ್ಪಡೆ ಮಾಡಲಾಗಿದೆ(ಕೋಟೆಗಳ ಮಾಹಿತಿಗಾಗಿ ನೋಡಿ: ಚನ್ನಬಸಪ್ಪ ಎಸ್. ಪಾಟೀಲ್(೧೯೫೪),ರಾಯಚೂರು ಜಿಲ್ಲೆಯ ಕೋಟೆಗಳು, ಸುಜಾತಮಲ್ಲನಗೌಡರ (೨೦೦೦) ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳ ಅಧ್ಯಯನ).

ದೇವಾಲಯಗಳನ್ನು ಕುರಿತು ಕೆಲವು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಶೈವ, ವೈಷ್ಣವ, ಜೈನ, ಕಾಳಾಮುಖ ಮತಗಳು, ಇಸ್ಲಾಂ, ಕ್ರೈಸ್ತ ಧರ್ಮಗಳು ಮುಂತಾದ ಮತಧರ್ಮಗಳಿಗೆ ಸೇರಿದ ದೇವಾಲಯಗಳೇ ಅಧ್ಯಯನಕ್ಕೊಳಗಾಗಿವೆ. ಸಣ್ಣ ಪುಟ್ಟ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಆದರೆ ಸಮಗ್ರವಾಗಿ ಇಡೀ ಜಿಲ್ಲೆಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡಿರುವುದು ವಿರಳ. ಆದರೂ ಬೆರಳೆಣಿಕೆಯ ಜನರು ದೇವಾಲಯಗಳ ಕುರಿತು ಗಮನ ಸೆಳೆದಿದ್ದಾರೆ.

ಚನ್ನಬಸಪ್ಪ ಎಸ್. ಪಾಟೀಲ್ ಅವರು ೧೯೫೪ರಲ್ಲಿ ರಾಯಚೂರು ಜಿಲ್ಲೆಯ ದೇವಾಲಯಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇವರು ಗಬ್ಬೂರು, ಕುರುಡಿ, ಹರವಿ, ಮಲ್ಲಟ, ಬಾಗಲವಾಡ, ಕವಿತಾಳ, ಬಳಗನೂರು, ಮುಕ್ಕುಂದ, ನವಲಿ, ಮುದಗಲ್ಲುಗಳನ್ನು ಗುರುತಿಸಿದರು. ಹೆಚ್.ಎನ್. ಚಿತ್ರಗಾರ ಅವರು ೨೦೧೦ರಲ್ಲಿ ರಾಯಚೂರು ಜಿಲ್ಲೆಯ ಪ್ರಾಚೀನ ದೇವಾಲಯಗಳು ಎಂಬ ಕೃತಿಯನ್ನು ಪ್ರಕಟಿಸಿದರು. ನಂತರ ಸಿ.ಎಸ್. ವಾಸುದೇವನ್ ಅವರು ೨೦೧೨ರಲ್ಲಿ ಕರ್ನಾಟಕದ ದೇವಾಲಯ ಕೋಶ ರಾಯಚೂರು ಜಿಲ್ಲೆ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಮೂರು ಜನರು ಜಿಲ್ಲೆಯನ್ನು ಕೇಂದ್ರವನ್ನಾಗಿಸಿಕೊಂಡು ದೇವಾಲಯಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಮುಂದುವರೆದು ತಾಲೂಕು ಮಟ್ಟದಲ್ಲಿ ಅನೇಕ ಪಿಎಚ್.ಡಿ., ಎಂ.ಫಿಲ್ ಸಂಶೋಧನಾ ಪ್ರಬಂಧಗಳು ದೇವಾಲಯಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿವೆ. ಅಮರೇಶ ಯತಗಲ್(೨೦೦೫), ಮಹೇಶ ಗಬ್ಬೂರು(೨೦೦೬), ತಿರುಪತಿ ಜಿ(೨೦೦೭), ಪದ್ಮಜಾ ದೇಸಾಯಿ(೨೦೦೮), ಗುಂಡಮ್ಮ(೨೦೦೯), ಅಮರೇಶ ಆಲ್ಕೋಡ(೨೦೦೯), ಶಿಲ್ಪ ಜೆ.ಎಂ.(೨೦೦೯), ಸಿದ್ಧರಾಮನಾಯಕ್(೨೦೧೦) ಮಹಾದೇವಪ್ಪ ನಾಗರಾಳ(೨೦೧೦) ಮುಂತಾದವರು ದೇವಾಲಯಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇವಲ್ಲದೆ ಸಣ್ಣಪುಟ್ಟ ಲೇಖನಗಳು ದೇವಾಲಯಗಳ ಬಗ್ಗೆ ಪ್ರಕಟಗೊಂಡಿವೆ. ಬಹುತೇಕವಾಗಿ ಈ ಪ್ರದೇಶದ ದೇವಾಲಯಗಳ ಪರಿಚಯ ಮಾಡಲಾಗಿದೆ. ಚನ್ನಬಸಪ್ಪ ಎಸ್. ಪಾಟೀಲ್, ಹೆಚ್.ಎನ್. ಚಿತ್ರಗಾರ, ಸಿ.ಎಸ್. ವಾಸುದೇವನ್ ಅವರ ದೇವಾಲಯಗಳ ಕುರಿತ ಅಧ್ಯಯನ ಪ್ರಭುತ್ವದ ಸ್ಮಾರಕಗಳ ಹಿನ್ನೆಲೆಯಲ್ಲಿರುವುದು ಸ್ಪಷ್ಟವಾಗಿದೆ. ಇವರು ಮಸೀದಿ, ಚರ್ಚ್‌ಗಳನ್ನು ಮತ್ತು ಕೆಳವರ್ಗಗಳು ಪೂಜಿಸುವ ದೇವಾಲಯಗಳನ್ನು ಕುರಿತು ಗಮನಹರಿಸದೇ ಇರುವುದು ಕಂಡುಬರುತ್ತದೆ. ಉಳಿದವರ ಅಧ್ಯಯನಗಳು ಪ್ರಭುತ್ವದ ಜೊತೆಗೆ ಪ್ರಜೆಗಳ ದೇವಾಲಯಗಳನ್ನು ಉಲ್ಲೇಖಿಸುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಅಲ್ಲದೆ ಬಸದಿ, ಮಸೀದಿ, ಚರ್ಚ್ ಹಾಗೂ ಕೆಳವರ್ಗಗಳು, ಆರಾಧಿಸುವ ಶಕ್ತಿದೇವತೆಗಳ ದೇವಾಲಯಗಳು ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಇದೆ.

ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಕಾಲದಿಂದ ನಿಜಾಮರ ಕಾಲದವರೆಗೆ ವಿವಿಧ ಅರಸು ಮನೆತನಗಳಿಂದ ಪ್ರಭುತ್ವದ ಸ್ಮಾರಕಗಳಾದ ಕೋಟೆಗಳು, ದೇವಾಲಯಗಳು ಮುಂತಾದವು ದೊಡ್ಡ ಪ್ರಮಾಣದಲ್ಲಿ ನಿರ್ಮಾಣಗೊಂಡಿವೆ. ಏಕೆಂದರೆ ರಾಜ್ಯಪ್ರಭುತ್ವ ದಾನ ಪ್ರಕ್ರಿಯೆಯನ್ನು ಅನಿಯಮಿತವಾಗಿ ಚಾಲನೆಗೆ ತಂದಿತು. ಇಷ್ಟಲ್ಲದೆ ಕೆರೆ, ಬಾವಿಗಳು ಸಹ ಪ್ರಭುತ್ವದ ಸ್ಮಾರಕಗಳಾಗಿವೆ. ಹೀಗೆ ಅವ್ಯಾಹತವಾಗಿ

ಒಂದರ ಹಿಂದೆ ಒಂದು ಅರಸು ಮನೆತನಗಳು ಕಟ್ಟಿಸಿದ ಈ ಸ್ಮಾರಕಗಳನ್ನು ನಿರ್ಮಾಣ ಮಾಡಿದವರ್ಯಾರು ಯಾಕೆ ಅವರನ್ನು ಚರಿತ್ರೆಯಲ್ಲಿ ದಾಖಲಿಸಲಿಲ್ಲ ಎಂಬಿತ್ಯಾದಿ ಪ್ರಶ್ನೆಗಳು ಹುಟ್ಟುತ್ತವೆ. ಪ್ರಭುತ್ವದ ಸ್ಮಾರಕಗಳನ್ನು ನಿರ್ಮಿಸಿದವರು ಕುಶಲಕಾರ್ಮಿಕರು ಎನ್ನುವುದಂತೂ ಸ್ಪಷ್ಟವಿದೆ. ಒಟ್ಟಾರೆಯಾಗಿ ದುಡಿಯುವ ವರ್ಗ ಎನ್ನಬಹುದು. ಆದರೂ ಕೆಲವು ಸಂದರ್ಭದಲ್ಲಿ ಕುಶಲಕರ್ಮಿಗಳಾದ ಕುಂಬಾರ, ಕಂಬಾರ, ಅಕ್ಕಸಾಲಿಗ, ಬಡಗಿ, ಕಂಚಗಾರ, ಮೇದಾರ ಮುಂತಾದವರ ಉಲ್ಲೇಖಗಳು ಬರುತ್ತವೆ. ಅಲ್ಲದೆ ಕೋಟೆಗಳನ್ನು, ದೇವಾಲಯಗಳನ್ನು, ಕೆರೆಗಳನ್ನು ನಿರ್ಮಾಣ ಮಾಡುವಾಗ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಲಾಗುತ್ತಿತ್ತು. ಆ ಕಲ್ಲುಗಳನ್ನು ಸಾಗಿಸುವುದು ಬಹು ಕಷ್ಟಕರವಾಗಿತ್ತು. ಅದಕ್ಕೆ ಬಂಡಿಯ ಸಹಾಯದಿಂದ ಸಾಗಿಸಲಾಗುತ್ತಿತ್ತು ಎಂಬುದಕ್ಕೆ ರಾಯಚೂರು ಕೋಟೆಯ ಬಸ್‌ನಿಲ್ದಾಣದ ಗೋಡೆಯಲ್ಲಿ ಕಲ್ಲು ಸಾಗಿಸುವ ಚಿತ್ರವನ್ನು ಕೆತ್ತಲಾಗಿದೆ. ಕಲ್ಲುಗಳು ಅಂದು ಮಹತ್ವದ ಸ್ಥಾನವನ್ನು ಪಡೆದಿದ್ದವು. ಈ ಕಲ್ಲುಗಳನ್ನು ಒಡೆಯುವವರು ಯಾರು ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಶಿಲ್ಪಿಗಳೆಂದು ಗುರುತಿಸಿಕೊಂಡಿದ ಪಾಂಚಾಳರು ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಉತ್ತಮ ಜ್ಞಾನ ಹೊಂದಿದ್ದರು. ಆದರೆ ಗುಡ್ಡಗಳಲ್ಲಿರುವ ಕಲ್ಲುಗಳನ್ನು ಹೊಡೆಯುತ್ತಿರಲಿಲ್ಲ. ಇಂತಹ ಕಷ್ಟದ ಕೆಲಸಕ್ಕೆ ಹೆಸರಾದ ವಡ್ಡರು ಕಲ್ಲು ಹೊಡೆಯುವ ಕೆಲಸದಲ್ಲಿ ಪ್ರಾವೀಣ್ಯತೆಯನ್ನು ಪಡೆದಿದ್ದರು. ಹಾಗಾಗಿ ಪ್ರಭುತ್ವದ ಸ್ಮಾರಕಗಳಿಗೆ ಬೇಕಾಗುವ ಕಲ್ಲುಗಳನ್ನು ಹೊಡೆಯುವವರು ವಡ್ಡರಾಗಿದ್ದರೆಂದು ಹೇಳಬಹುದು. ಹಾಗೆಯೇ ಮಣ್ಣು ವಡ್ಡರು ಎಂಬುವವರು ಕೆರೆಗಳನ್ನು ಕಟ್ಟುವಾಗ ದೊಡ್ಡ ಮಣ್ಣಿನ ಒಡ್ಡನ್ನು ನಿರ್ಮಿಸಿದರೆ, ಆ ಒಡ್ಡಿಗೆ ಕಲ್ಲನ್ನು ಜೋಡಿಸಿ, ಕಲ್ಲಿನ ಕಟ್ಟಡವನ್ನು ವಡ್ಡರು ಮಾಡುತ್ತಿದ್ದುದೇ ಹೆಚ್ಚು. ಕ್ರಿ.ಶ. ೧೨೯೪ಳರಲ್ಲಿ ಕಾಕತೀಯರಿಂದ ನಿರ್ಮಾಣವಾದ ಕೋಟೆಗೆ ಬಲಿಯಾದ 'ಬಾಲಸಂಗಮ್ಮ' "ಓರ್ವ ಕಟ್ಟಡ ಕಟ್ಟಿಸುತ್ತಿದ್ದ ಮೇಸ್ತ್ರಿಯ ಸೊಸೆ" ಎಂದು ತಿಳಿದುಬರುತ್ತದೆ(ಕೃಷ್ಣಯ್ಯ ೧೯೯೨: ೬೬). ಕಟ್ಟಡ ಕಟ್ಟಿಸುತ್ತಿದ್ದ ವಡ್ಡರಲ್ಲಿ, ವಡ್ಡರ ಕೆಲಸದಲ್ಲಿ ಪರಿಣಿತಿ ಹೊಂದಿದವರನ್ನು ಮೇಸ್ತ್ರಿಯೆಂದು ಕರೆಯಲಾಗುತ್ತಿತ್ತು. ಈ ಮೇಸ್ತ್ರಿ ತನ್ನ ಸೊಸೆಯನ್ನು ಬಲಿಕೊಡಲು ಇಚ್ಚೆ ಪಡದಿದ್ದರೂ ರಾಜಪ್ರಭುತ್ವದ ವ್ಯವಸ್ಥೆಯಲ್ಲಿ ಸೊಸೆಯನ್ನು ಬಲಿಗೊಡಲೇಬೇಕಾಯಿತು. ಇದು ದೌರ್ಜನ್ಯದ ಪರಮಾವಧಿಯಾಗಿತ್ತು.

ರಾಯಚೂರು ಕೋಟೆಯ ನವರಂಗ ದರವಾಜಾದ ಹೊರಭಾಗದ ಬಾಹರ್ ಕಿಲ್ಲದ ಹೊರಭಾಗದ ಸ್ಥಳದಲ್ಲಿ ಕೋಟೆಯ ಮೂಲೆಯೊಂದರಲ್ಲಿ 'ಬಾಲಸಂಗಮ್ಮ' ಎಂದು ಪೂಜಿಸುತ್ತಾರೆ. ಈ ಕೋಟೆಯ ಭಾಗವನ್ನು 'ಬಾಲಸಂಗಮ್ಮ'ನ ಕೋಟೆ ಎಂದು ಸ್ಥಳೀಯರು ಕರೆಯುವರು. ಈ ಕೋಟೆಗೆ ಬಲಿಯಾದ ಬಾಲಸಂಗಮ್ಮ ತುಂಬು ಗರ್ಭಿಣಿಯಾಗಿದ್ದಳೆಂದು ತಿಳಿದುಬರುತ್ತದೆ. ಅಲ್ಲದೆ ಇನ್ನಿಬ್ಬರು ದಂಪತಿಗಳ ಬಲಿಯಾದುದನ್ನು ಗಮನಿಸಬಹುದು. ನಾರಿ ಮಲ್ಲವ್ವ ಮತ್ತು ಬಸ್ಸರೆಡ್ಡಿ ಹೆಸರುಗಳನ್ನು ಜನಪದ ಗೀತೆಯಲ್ಲಿ ಕಾಣಬಹುದಾಗಿದೆ(ಹೆಚ್ಚಿನ ಮಾಹಿತಿಗಾಗಿ ನೋಡಿ: ಲಕ್ಷ್ಮೀದೇವಿಶಾಸ್ತ್ರಿ, ರಾಯಚೂರು ಕೋಟೆ ನರಬಲಿ ಪ್ರಸಂಗ(೨೦೦೫), ಎಸ್.ಎ. ಕೃಷ್ಣಯ್ಯ(ಸಂ), ಬಾಚಿಗೊಂಡನಹಳ್ಳಿ ಮತ್ತು ಏಣಿಗಿ ಬಸಾಪುರದ ಜನಪದ ಗೀತೆಗಳು,೧೯೯೨). ಕೋಟೆಗಳು ಸಪ್ತಾಂಗಗಳಲ್ಲಿ ಪ್ರಮುಖ ಸ್ಥಾನ ಹೊಂದಿದ್ದರೆ ರಾಜಪ್ರಭುತ್ವಕ್ಕೆ ಅದು ಅವಶ್ಯವಾಗಿತ್ತು. ಹಾಗಾಗಿ ಕೋಟೆಗಳ ನಿರ್ಮಾಣದಲ್ಲಿ ತೊಡಗಿಕೊಂಡರು. ಕೋಟೆಕಟ್ಟಿದವರು ಬೆಳಕಿಗೆ ಬರಲಿಲ್ಲ, ಬದಲಾಗಿ ಕಟ್ಟಿಸಿದವರೊಂದಿಗೆ ಕೋಟೆಗಳು ಗುರುತಿಸಿಕೊಂಡವು. ಕೋಟೆಗಳನ್ನು, ಅರಮನೆಗಳನ್ನು, ಕೆರೆ, ಬಾವಿಗಳನ್ನು ನಿರ್ಮಿಸಿದವರು ಚರಿತ್ರೆಯಲ್ಲಿ ಸ್ಥಾನ ಪಡೆಯಲಿಲ್ಲ.

### ೩.೪.೪.೨. ಪ್ರಜೆಗಳ ಸ್ಮಾರಕಗಳು

ಪ್ರಜೆಗಳ ಸ್ಮಾರಕಗಳಾದ ಗ್ರಾಮದೇವತೆಗಳು, ಗುಡಿ ಗುಂಡಾರಗಳು ಬರಹಗಳಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಜನಸಾಮಾನ್ಯರ ಸಾಂಸ್ಕೃತಿಕ ಚರಿತ್ರೆಯಲ್ಲಿ ಅವರು ಆಚರಿಸುವ ಆಚರಣೆಗಳು, ದೈವಗಳು ಬಹುಮುಖ್ಯವಾಗಿವೆ. ಆ ಬಗೆಯ ಸಾಂಸ್ಕೃತಿಕ ಪ್ರತೀಕಗಳೆಂದರೆ ಶಕ್ತಿದೇವತೆಗಳಾಗಿವೆ. ಅವು ಈ ಪ್ರದೇಶದಲ್ಲಿ ಪ್ರತಿ ಗ್ರಾಮದಲ್ಲೂ ಮಹತ್ವದ ಸ್ಥಾನವನ್ನು ಹೊಂದಿವೆ. ಯಲ್ಲಮ್ಮ, ಹುಲಿಗೆಮ್ಮ, ಬಾಗಮ್ಮ, ಮಾರೆಮ್ಮ, ಸುಂಕ್ಲಮ್ಮ, ದುರುಗಮ್ಮ, ಚೌಡಮ್ಮ, ಪಾಲಕಮ್ಮ, ಗೋಕುಲಸ್ವಾಮಿ, ಹುಚ್ಚಂಗೆಮ್ಮ, ಕೆಂಚಮ್ಮ, ಅಂಬಾದೇವಿ, ದ್ಯಾವಮ್ಮ, ಈರಣ್ಣದೇವರು, ತಾಯಮ್ಮ, ಕರಿಯಮ್ಮ, ಈರನಾಗಮ್ಮ, ಹಂಪಮ್ಮ, ಜಂಬಲಮ್ಮ, ನಿಂಗಮ್ಮ ಮುಂತಾದ ಶಕ್ತಿ ದೇವತೆಗಳು ಈ ಪ್ರದೇಶದಲ್ಲಿವೆ. ಇವುಗಳಲ್ಲಿ ನೀರಮಾನ್ವಿ ಯಲ್ಲಮ್ಮ, ಅರೋಲಿ ಹುಲಿಗೆಮ್ಮ, ರಾಯಚೂರಿನ ಕಂಚು ಮಾರೆಮ್ಮ, ಕುರುಕುಂದಿ ಯಲ್ಲಮ್ಮ, ಮಾತಪಳ್ಳಿ ಯಲ್ಲಮ್ಮ, ಊಟಿ ದುರುಗಮ್ಮ, ಬುಂಕಲದೊಡ್ಡಿ ದುರುಗಮ್ಮ, ಜಾಲಹಳ್ಳಿ ಉತ್ತಿನಯಲ್ಲಮ್ಮ, ಗಲಗಿನ ಕ್ಯಾದಿಗೆ ಯಲ್ಲಮ್ಮ, ಅರಕೇರಿ ಬಾಗಮ್ಮ, ಬಳಗಾನೂರು ಯಲ್ಲಮ್ಮ, ಅಂಬಾಮಠದ ಅಂಬಮ್ಮ ಮುಂತಾದವು ಪ್ರಮುಖವಾಗಿವೆ.

ಈ ಪ್ರದೇಶದಲ್ಲಿ ಗ್ರಾಮದೇವತೆಗಳ ಗುಡಿಗಳು ಗಿಡಗಳ ಮೂಲಕ ಆರಂಭವಾಗುತ್ತವೆ. ಆ ಗಿಡಗಳೆಂದರೆ ಈಚಲಗಿಡ, ಬೇವಿನಗಿಡ. ಇವು ಮಲ್ಲಮ್ಮನ ಪ್ರತೀಕಗಳಾಗಿವೆ. ಪುರಾತನ ಮತ್ತು ಈಗಿನ ಈ ದೇವತೆಗಳ ಗುಡಿಗಳ ರಚನೆ ಭಿನ್ನವಾಗಿಲ್ಲ. ಇತ್ತೀಚೆಗೆ ವೈದಿಕ ಪರಂಪರೆಯ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಆದರೆ ಆ ದೇವತೆಗಳ ಗುಡಿಗಳು ಆರಂಭದಲ್ಲಿ ಗಿಡಗಳಿಗೆ ಕುಂಕುಮ, ಬಂಡಾರ, ದಾರಗಳನ್ನು ಸುತ್ತುವುದರ ಮೂಲಕ ಪೂಜಿಸುವುದು ಆರಂಭವಾಗುತ್ತದೆ. ನಂತರ ಈ ದೇವತೆಗೆ ದೀಪ ಹಾಕಬೇಕು ಎಂಬ ಕಲ್ಪನೆ ಹುಟ್ಟಿಕೊಂಡಿತು. ಅದಕ್ಕೆ ಸಣ್ಣ ಕಲ್ಲುಗಳಿಂದ ಮಾಡ ಅಂದರೆ ಗೂಡುಗಳನ್ನು ಕಟ್ಟುತ್ತಾರೆ. ಕೆಲ ದಿನ, ತಿಂಗಳು, ವರ್ಷಗಳ ನಂತರ ಒಣಕಲ್ಲಿನ ಕಟ್ಟೆಯನ್ನು ಕಟ್ಟಿ ಅದೇ ಗಿಡಕ್ಕೆ ಪೂಜಿಸುವರು. ನಂತರ ಪೂಜೆ ಮಾಡಲು ಏನಾದರೂ ಕುರುಹು ಬೇಕೆಂದು ಕಟ್ಟಿಗೆಯಿಂದ ಗ್ರಾಮದೇವತೆಯ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಈ ದೇವತೆಗಳ ವಿಗ್ರಹಗಳನ್ನು ಹೆಚ್ಚಾಗಿ ಕೆತ್ತಿದವರು ಪಾಂಚಾಳ ಸಮುದಾಯಕ್ಕೆ ಸೇರಿದ ಬಡಗಿಗಳು ಎಂಬುದಾಗಿ ತಿಳಿದುಬರುತ್ತದೆ. ಹೀಗೆ ಪ್ರತಿಷ್ಠಾಪಿತ ದೇವತೆ ಬಯಲಿಗೆ ಕಾಣಬಾರದೆಂದು ಚೌಕಾಕಾರದ ಗೋಡೆಯನ್ನು ನಿರ್ಮಿಸಿ. ಅದರ ಒಳಗೆ ಶಿರಬಾಗಿ ಹೋಗುವಂತಿರುವ ಕಲ್ಲಿನ ಬಾಗಿಲನ್ನು ಇಡಲಾಗುತ್ತಿತ್ತು. ಕಾಲಾನಂತರದಲ್ಲಿ ದೇವರು ಮಳೆಗೆ ನೆನೆಯಬಾರದೆಂದು ತುಂಡು, ಜಂತೆಗಳಿಂದ ಕೂಡಿದ ಮಣ್ಣಿನ ಮಾಳಿಗೆಯ ಚೌಕಾಕಾರದ ಮನೆಯಂತೆ ಗುಡಿಗಳು ನಿರ್ಮಾಣಗೊಂಡವು. ಇತ್ತೀಚೆಗಂತೂ ವೈದಿಕದ ಪ್ರಭಾವದಿಂದಾಗಿ ಗೋಪುರಗಳನ್ನು ನಿರ್ಮಿಸುವುದು ಕಂಡುಬರುತ್ತದೆ.

ಗ್ರಾಮದೇವತೆಗಳ ಗುಡಿಗಳನ್ನು ಹೆಚ್ಚಾಗಿ ಜನರೇ ಕೂಡಿಕೊಂಡು ಕಟ್ಟುತ್ತಿದ್ದರು. ಪ್ರಭುತ್ವದ ಸಹಕಾರವಿಲ್ಲದೆ ಗುಡಿಗಳನ್ನು ಕೆಳವರ್ಗಗಳು ರಚಿಸಿಕೊಂಡರು. ಗ್ರಾಮದೇವತೆಗಳ ಗುಡಿಗಳನ್ನು ಮತ್ತು ವಿಗ್ರಹಗಳನ್ನು ಕಟ್ಟಿಗೆ, ಕಲ್ಲು ಮತ್ತು ಮಣ್ಣಿನಿಂದ ರಚಿಸಲಾಗುತ್ತಿತ್ತು. ಇವು ಕಾಲಾನಂತರ ಕಲ್ಲನ್ನು ಹೊರತುಪಡಿಸಿ ಕಟ್ಟಿಗೆ ಮಣ್ಣಿನ ಗುಡಿ ಮತ್ತು ಮೂರ್ತಿಗಳು ನಶಿಸಿಹೋಗಿರಬೇಕು. ಇವು ಬಹುಕಾಲದವರೆಗೆ ಉಳಿಯುವುದು ಕಷ್ಟಸಾಧ್ಯ. ಈ ಕಾರಣದಿಂದಾಗಿ ಹಲವಾರು ಗ್ರಾಮದೇವತೆಗಳ ಗುಡಿಗಳು ನಾಶವಾಗಿರಬೇಕು. ಆದರೂ ಪುರಾತನ ಕಾಲದ ದೇವಾಲಯವೊಂದು ಈ ಪ್ರದೇಶದ

ಬಳಗಾನೂರಿನಲ್ಲಿ ಕಂಡುಬರುತ್ತದೆ. ಅದು ಯಲ್ಲಮ್ಮನ ಗುಡಿ. ಇದರ ರಚನೆಯನ್ನು ಗಮನಿಸಿದರೆ ಸಾದಾ ಮನೆಯಂತಿದೆ. ಆದರೆ ಅದೇ ಗ್ರಾಮದಲ್ಲಿರುವ ಲಕ್ಷ್ಮೀನಾರಾಯಣ, ನಗರೇಶ್ವರ ದೇವಾಲಯಗಳು ವೈದಿಕತೆಯಿಂದ ಕೂಡಿವೆ. ಅವುಗಳಿಗೆ ದಾನ ದತ್ತಿಗಳು ನೀಡಿರುವುದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.[೬೭] ಒಂದು ಐತಿಹ್ಯದ ಪ್ರಕಾರ ಬಳಗಾನೂರಿನ ಯಲ್ಲಮ್ಮನ ಗುಡಿಯಿಂದ ಹಂಪಿ ವಿರೂಪಾಕ್ಷ ದೇವಾಲಯಕ್ಕೆ ಸುರಂಗ ಮಾರ್ಗವಿದೆಯಂತೆ, ಅದರಲ್ಲಿ ಬಂಗಾರದ ನಿಧಿ ಇದೆಯಂತೆ. ಅದನ್ನು ನೋಡಬೇಕಾದರೆ ಆರು ಜನ ಹೆಣ್ಣುಮಕ್ಕಳನ್ನು ಪಡೆದವರು ಮಾತ್ರ ನೋಡಬಹುದೆಂದು ತಿಳಿದುಬರುತ್ತದೆ. ಇದನ್ನು ಗಮನಿಸಿದರೆ ವಿಜಯನಗರದ ರಾಜಧಾನಿ ಹಂಪಿಯಲ್ಲಿ ಪಟ್ಟಣದ ಯಲ್ಲಮ್ಮನ ದೇವಾಲಯವಿದೆ. ಈ ಯಲ್ಲಮ್ಮ ವಿಜಯನಗರದ ಸೈನಿಕರಿಗೆ ಬರಗಾಲ ಬಂದಾಗ ಅನ್ನವನ್ನು ಹಾಕಿದ್ದಳಂತೆ ಎಂಬ ಮಾತು ಕೇಳಿಬರುತ್ತದೆ. ಅದರಂತೆ ಬಳಗಾನೂರಿನ ಯಲ್ಲಮ್ಮ ಈ ಪ್ರದೇಶದಲ್ಲಿನ ಜನರ ಜೀವಾಳವಾಗಿದ್ದಳೆಂದು ಹೇಳಬಹುದಾಗಿದೆ. ಈ ಯಲ್ಲಮ್ಮನನ್ನು ತ್ವಾಟದ ಯಲ್ಲಮ್ಮ ಎಂದು ಕರೆಯುತ್ತಾರೆ. ಈ ಗುಡಿಗೆ ದಾನ-ದತ್ತಿ ನೀಡಿರುವುದು ಇಲ್ಲಿನ ಶಾಸನದಿಂದ ಕಂಡುಬರುತ್ತದೆ.[೬೮] ಈ ಪ್ರದೇಶದಲ್ಲಿ ಕಂಡುಬರುವ ಯಲ್ಲಮ್ಮ, ಹುಲಿಗೆಮ್ಮ ಮುಂತಾದ ದೇವರುಗಳನ್ನು ಪೂಜಿಸುವವರು, ಈ ದೇವತೆಗಳನ್ನು ಮನೆ ದೇವರೆಂದು ಗುರುತಿಸಿಕೊಂಡ ಜಾತಿಗಳೆಂದರೆ; ಮಾದಿಗರು, ಹೊಲೆಯರು, ವಡ್ಡರು, ಬೇಡರು, ಕೊರವರು ಮುಂತಾದವು ಪ್ರಮುಖವಾಗಿವೆ.

"ಪ್ರಜೆಗಳ ಸ್ಮಾರಕಗಳಲ್ಲಿ ಮರಣ ಸ್ಮಾರಕಗಳು ಬಹುಮುಖ್ಯವಾದವು. ಇವು ಗಂಡನಿಗಾಗಿ, ಅರಸನಿಗಾಗಿ, ಭೂಮಿಗಾಗಿ, ಬಂಧುಗಳಿಗಾಗಿ, ಧರ್ಮಕ್ಕಾಗಿ ಅಥವಾ ಮೋಕ್ಷಕ್ಕಾಗಿ ಮರಣವನ್ನಪ್ಪಿದವರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕಗಳಾಗಿವೆ. ಅವು ಕಲ್ಲುಗಳೇ ಆಗಿವೆ. ಈ ಸ್ಮಾರಕಗಳನ್ನು ಮಾಸ್ತಿಕಲ್ಲು, ವೀರಗಲ್ಲು, ಬಲಿದಾನ ಕಲ್ಲು, ನಿಷಧಿಗಲ್ಲು ಎಂಬ ಹೆಸರುಗಳಿಂದ ಕರೆಯುತ್ತಾರೆಂದು" ಮೋಹನಕೃಷ್ಣ ರೈ ಅವರು ತಿಳಿಸುತ್ತಾರೆ(ರೈ ೨೦೦೪: ೨೦೧). ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅನೇಕ ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳು ಕಂಡುಬರುತ್ತವೆ. ಈ ಪ್ರದೇಶದ ವೀರಗಲ್ಲುಗಳನ್ನು ಕುರಿತು ಸಮಗ್ರ ಅಧ್ಯಯನಗಳು ನಡೆಯದಿರುವುದು ಗೋಚರಿಸುತ್ತದೆ. ಈ ಪ್ರದೇಶದ ಕೆಲವು ಅಧ್ಯಯನಕಾರರು ತಮ್ಮ ಅಧ್ಯಯನದ ಸ್ವರೂಪದ ಹಿನ್ನೆಲೆಯಲ್ಲಿ ಸೀಮಿತವಾಗಿ ವೀರಗಲ್ಲುಗಳನ್ನು ಬಳಸಿಕೊಂಡಿದ್ದಾರೆ. ವೀರಗಲ್ಲುಗಳ ಸಮಗ್ರ ಅಧ್ಯಯನ ಆಗಬೇಕಿದೆ. ಈ ಪ್ರದೇಶದಲ್ಲಿ ರಾಯಚೂರು, ಗಬ್ಬೂರು, ಮಲಿಯಾಬಾದ್, ದೇವದುರ್ಗ, ಕ್ಯಾದಿಗ್ಗೇರಿ, ಅರಕೇರಿ, ಗೋನವಾಟ್ಲ, ಗುಂತಗೋಳ, ಯರಗೋಡಿ, ಆಲ್ಕೋಡ, ವಡವಟ್ಟಿ, ಸಿರವಾರ, ಮಸ್ಕಿ, ಬಳಗಾನೂರು, ಮಾನ್ವಿ, ಗಲಗ, ಅನ್ವರ ದಿದ್ದಿಗಿ, ಮಲ್ಲಿನಾಯಕನ ದೊಡ್ಡಿ, ಮುದಗಲ್, ಹರವಿ, ಆನೆಹೊಸೂರು ಮುಂತಾದ ಸ್ಥಳಗಳಲ್ಲಿ ಅನೇಕ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳಿವೆ. ಈ ವೀರಗಲ್ಲುಗಳು ಅರಸು ಕೇಂದ್ರಿತ ಚರಿತ್ರೆಯಲ್ಲಿ ಪ್ರಮುಖ ಸ್ಥಾನ ಪಡೆಯಲಿಲ್ಲ. ಬದಲಾಗಿ ಚರಿತ್ರೆಯಿಂದ ಹೊರಗುಳಿದವು. ಯಾಕೆ ಹೊರಗೆ ಉಳಿದವು ಎಂಬುದಕ್ಕೆ ಮೋಹನ್‌ಕೃಷ್ಣ ರೈ ಅವರ ಮಾತಿನಲ್ಲಿ ಹೇಳಬೇಕಾದರೆ "ಸ್ಮಾರಕ ಶಿಲೆಗಳನ್ನು ನೆಡುವ ಪದ್ಧತಿ ಕ್ರಮೇಣ ಜನರ ನಂಬಿಕೆ, ಧರ್ಮ ಮತ್ತು ಸನ್ನಿವೇಶಗಳೊಂದಿಗೆ ಬೆಳೆದುಬಂತು. ಜನಸಾಮಾನ್ಯರ ಜೀವನವನ್ನು ತಮ್ಮ ಪಾಠ ಮತ್ತು ಶಿಲ್ಪದ ಮೂಲಕ ವ್ಯಕ್ತ ಮಾಡುವ ಮರಣಸ್ಮಾರಕಗಳು ಅಥವಾ ಮರಣ ಕಲ್ಲುಗಳು ಚರಿತ್ರೆ ನಿರ್ಮಾಣದಲ್ಲಿ ಬಹುಮುಖ್ಯವಾದ ದಾಖಲೆಗಳಾಗಿವೆ. ಈ ಮರಣ ಸ್ಮಾರಕಗಳನ್ನು ಬಲಿದಾನದ, ದೇಶ ಪ್ರೇಮದ, ಗಂಡನ ಮೇಲಿನ ಹೆಂಡತಿಯ ಪ್ರೀತಿಯ, ಮೋಕ್ಷ ಪ್ರಾಪ್ತಿಯ ಹಿನ್ನೆಲೆಯಿಂದಷ್ಟೇ ಅಧ್ಯಯನ ನಡೆಸಿರುವುದು ತಿಳಿದುಬರುತ್ತದೆ. ಇದು ಮರಣ ಸ್ಮಾರಕಗಳ ಒಂದು

ಮುಖ ಮಾತ್ರ, ಅವುಗಳ ಇನ್ನೊಂದು ಮುಖ ಒತ್ತಡ–ಒತ್ತಾಯಗಳ, ನೋವಿನ, ಶೋಷಣೆಯ ಹಾಗೂ ಲೌಕಿಕ–ಅಲೌಕಿಕ ಜಗತ್ತಿನ ಆಮಿಷ ಒಡ್ಡುವ ರೀತಿಯದು" ಎಂದು ವಿಶ್ಲೇಷಿಸಿದ್ದಾರೆ(ರೈ ೨೦೦೪: ೨೦೧–೨೦೨).

ಮಹಿಳೆಯ ಸ್ಮಾರಕಗಳು ಈ ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಹಾಗೆಯೇ ಶಾಸನ ಉಲ್ಲೇಖಗಳೂ ಸಹ ಲಭಿಸಿವೆ. ಪತಿಗಾಗಿ ಮಡಿದ ಸತಿಯ ಸ್ಮಾರಕವನ್ನು ಮಾಸ್ತಿ ಕಲ್ಲು ಎಂದು ಹೆಸರಿಸಲಾಗಿದೆ. ಮಹಾಸತಿಯನ್ನು ಕುರಿತು ದೇವದುರ್ಗ ತಾಲೂಕಿನ ಕ್ಯಾದಿಗ್ಗೇರಿ, ಹುನಗುಂದಬಾಡ, ರಾಮದುರ್ಗ, ದೇವದುರ್ಗ, ರಾಯಚೂರು ತಾಲೂಕಿನ ರಾಯಚೂರು, ಲಿಂಗಸೂಗೂರ ತಾಲೂಕಿನ ಮಸ್ಕಿ, ಗುಂತಗೋಳ, ಮಾನ್ವಿ ತಾಲೂಕಿನ ಹರವಿ ಮುಂತಾದ ಸ್ಥಳಗಳಲ್ಲಿ ಮಹಾಸತಿ ಕಲ್ಲುಗಳಿವೆ. ಇವನ್ನು ಗಮನಿಸಿದರೆ ಸತಿಪದ್ಧತಿ ಇಲ್ಲಿ ಪರಿಣಾಮಕಾರಿಯಾಗಿ ಪ್ರಭಾವ ಬೀರಿದೆ ಎಂಬುದು ತಿಳಿಯುತ್ತದೆ. ಸತಿಪದ್ಧತಿ ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ವೀರಗಲ್ಲುಗಳಷ್ಟೇ ಅಲ್ಲದೆ ಮಾನ್ವಿ ತಾಲೂಕಿನ ಮಲ್ಲಟ(೧೦೨)–ಕ್ರಿ.ಶ. ೧೧೯೬ರ ಶಾಸನ,[೬೯] ಸಿಂಧನೂರು ತಾಲೂಕಿನ ಜಾಲಿಹಾಳು(೨೩), ಕ್ರಿ.ಶ.೧೧೦೫ರ ಶಾಸನ[೭೦] ಹಾಗೂ ಮಾಡಶಿರವಾರ(೪೭), ಕ್ರಿ.ಶ. ೧೦೩೩ರ ಶಾಸನ.[೭೧] ವೀರ ಮಾಸ್ತಿಕಲ್ಲಿನಲ್ಲಿದೆ. ಈ ಮೂರು ಶಾಸನಗಳ ಆಧಾರದ ಮೇಲೆ ಹಾಗೂ ಈ ಪ್ರದೇಶದಲ್ಲಿ ದೊರೆತ ಮಾಸ್ತಿ ಕಲ್ಲುಗಳ ಆಧಾರದ ಮೇಲೆ ಮಹಾಸತಿ ಪದ್ಧತಿ ಜಾರಿಯಲ್ಲಿದ್ದಿತು ಎಂದು ಹೇಳಬಹುದಾಗಿದೆ.

ಯುದ್ಧದಲ್ಲಿ ಮಡಿದವರಿಗೆ ಗುಡಿಗಳನ್ನು ನಿರ್ಮಿಸಲಾಗುತ್ತಿತ್ತು. ಇವನ್ನು ವೀರರ ಗುಡಿಗಳೆಂದು ಹೆಸರಿಸಲಾಗಿದೆ. ಅವು ಜಾಲಹಳ್ಳಿ ಮತ್ತು ಕ್ಯಾದಿಗ್ಗೇರಿಗಳಲ್ಲಿ ಕಂಡುಬರುತ್ತವೆ. ಹಾಗೆಯೇ ಕ್ಯಾದಿಗ್ಗೇರಿಯಲ್ಲಿ ದೊರೆಗಳ ಸಮಾಧಿಗಳಿವೆ. ಉತ್ತಮವಾದ ಕಲ್ಲುಗಳಿಂದ ಸಮಾಧಿಗಳನ್ನು ಕಟ್ಟಲಾಗಿದೆ. ಅವು ನಶಿಸಿ ಹೋಗುವ ಸ್ಥಿತಿಯಲ್ಲಿವೆ. ಬಂಡೆಗಳನ್ನು ಹಾಕಿ ನಿರ್ಮಿಸಲಾಗಿದೆ. ಆದರೆ ವಾರಸುದಾರರು ಇಲ್ಲದ ಕಾರಣ ಶಿಥಿಲಾವಸ್ಥೆಯ ಕಡೆಗೆ ಸಾಗಿವೆ. ಈ ಪ್ರದೇಶದಲ್ಲಿ ದೊರೆಯುವ ವೀರಗಲ್ಲುಗಳನ್ನು ಈರಣ್ಣ ದೇವರು, ಏಳುಮಕ್ಕಳ ತಾಯಮ್ಮ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹಾಗೆಯೇ ವೀರಮರಣವನ್ನು ಹೊಂದಿದವರನ್ನು ದೈವತ್ವಕ್ಕೆ ಏರಿಸಿ ಪೂಜಿಸುವುದು ಇಲ್ಲಿ ಕಂಡು ಬರುತ್ತದೆ. ಈ ವೀರಗಲ್ಲುಗಳಿಗೆ ಪ್ರಾಣಿ ಬಲಿ ನೀಡುವುದು ಸಹ ಕ್ಯಾದಿಗ್ಗೇರಿಯಲ್ಲಿ ಕಾಣಬಹುದು. ಕ್ಯಾದಿಗ್ಗೇರಿಯ ಪಶ್ಚಿಮದ ಗುಡ್ಡದಲ್ಲಿ ಸಂತಕಲುಮದ ಹತ್ತಿರ, ಕ್ಯಾದಿಗ್ಗೇರಿ ಕೋಟೆಯಿಂದ ಪಶ್ಚಿಮದ ಕಡೆಗಿರುವ ಗ್ರಾಮಗಳಾದ ಆಲ್ಕೋಡ, ಶಾವಂತಗಲ್, ಅಡಕಲಗುಡ್ಡ, ಅನವಾರಗಳಿಗೆ ಹೋಗಬೇಕಾದರೆ ಬಳಸುವ ಪ್ರಮುಖ ರಾಜಬೀದಿಯದು. ಅದು ನಡಿಗೆ ಎಂದು ಕರೆಯಿಸಿಕೊಂಡಿದೆ. ಈ ನಡಿಗೆಯಲ್ಲಿ ಒಂದು ಪ್ರವೇಶದ್ವಾರ ಬರುತ್ತದೆ. ಅಲ್ಲಿ ಒಂದು ವೀರಗಲ್ಲಿದೆ. ಅದು ನಾಯಕ ಸಮುದಾಯ ಸಿಂಗ್ರಿಯವರಿಗೆ ಸೇರಿದ್ದೆಂದು ತಿಳಿದುಬರುತ್ತದೆ. ಈ ವೀರಗಲ್ಲನ್ನು ದೇವರೆಂದು ಭಾವಿಸಿ ಈ ಮನೆಯವರು ಮದುವೆ ಮುಂತಾದ ಕಾರ್ಯಕ್ರಮಗಳ ಸಂದರ್ಭದಲ್ಲಿ ಹೆಣ್ಣು ಕೊಟ್ಟ ಬೀಗರು ಪ್ರಾಣಿಗಳನ್ನು(ಆಡು ಅಥವಾ ಕುರಿ) ಹರಿಗಡಿಯುತ್ತಾರೆ. ಹೀಗೆ ಈ ಪ್ರದೇಶದಲ್ಲಿನ ವೀರಗಲ್ಲುಗಳನ್ನು ದೈವತ್ವಕ್ಕೆ ಏರಿಸಲಾಗಿದೆ. ಹಾಗೆಯೇ ವೀರಗಲ್ಲುಗಳೆಲ್ಲವೂ ಕೆಳವರ್ಗಗಳಿಗೆ ಸೇರಿದವುಗಳಾಗಿವೆ ಎನಿಸುತ್ತದೆ. ಏಕೆಂದರೆ ಇವು ಚರಿತ್ರೆಯ ನಿರ್ಮಾಣ ಸಂದರ್ಭದಲ್ಲಿ ಬಹುಮುಖ್ಯ ಆಕರಗಳಾಗಿವೆ. ಆದರೂ ಕಡೆಗಣಿಸಲ್ಪಟ್ಟಿರುವುದು

ಸ್ಪಷ್ಟವಾಗಿ ಕಂಡುಬರುತ್ತದೆ. ಇವುಗಳ ಬಗ್ಗೆ ಪ್ರತ್ಯೇಕ ಅಧ್ಯಯನದ ಅವಶ್ಯಕತೆಯಿದೆ. ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿರುವ ಜನಸಾಮಾನ್ಯರನ್ನು ಕುರಿತು ತಿಳಿಸುವ ಸ್ಮಾರಕಗಳಾದ ವೀರಗಲ್ಲು, ಮಾಸ್ತಿಕಲ್ಲುಗಳನ್ನು ಒಂದೆಡೆ ಕಲೆ ಹಾಕಿದರೆ ಚರಿತ್ರೆಯ ವಿವಿಧ ಮಜಲುಗಳನ್ನು ಅಧ್ಯಯನ ಮಾಡಲು ಸಾಧ್ಯವೆಂದು ಹೇಳಬಹುದಾಗಿದೆ.

### ೩.೫. ಉಪಸಂಹಾರ

ರಾಯಚೂರು ದೋ–ಅಬ್ ಪ್ರದೇಶದಲ್ಲಿ ಸಿಂಧೂ ನಾಗರಿಕತೆಯ ಕಾಲಘಟ್ಟದಿಂದ ಹೈದರಾಬಾದ್ ನಿಜಾಮರ ಕಾಲದವರೆಗೆ ವಿವಿಧ ಅರಸು ಮನೆತನಗಳು ಆಳ್ವಿಕೆ ನಡೆಸಿವೆ. ಈ ಪ್ರದೇಶ ಅನೇಕ ಯುದ್ಧಗಳಿಗೆ ಕಾರಣವಾದ ನೆಲವಾಗಿದೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ೬೧ ಯುದ್ಧಗಳು ನಡೆದ ಬಗ್ಗೆ ತಿಳಿಸಲಾಗಿದೆ. ಇಷ್ಟೆಲ್ಲ ಯುದ್ಧಗಳಿಗೆ ಅನೇಕ ಕಾರಣಗಳು ಕಂಡುಬರುತ್ತವೆ. ಅವುಗಳಿಗೆಲ್ಲ ಮೂಲಕಾರಣ ಈ ಪ್ರದೇಶದ ಫಲವತ್ತಾದ ಭೂಮಿಯಾಗಿದೆ. ಇದು ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿದ ವಿವಿಧ ಅರಸುಮನೆತನಗಳ ರಾಜಕೀಯ ಸ್ಥಿತ್ಯಂತರಕ್ಕೂ ಕಾರಣವಾಗಿದೆ. ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಕಾರಣಗಳಿಂದಾಗಿ ಈ ಪ್ರದೇಶ ಆಕರ್ಷಕ ಕೇಂದ್ರವಾಗಿ ರೂಪುಗೊಂಡಿತ್ತು.

ಈ ಪ್ರದೇಶದ ಚರಿತ್ರೆಯನ್ನು ವಿಜಯನಗರ ಮತ್ತು ಬಹಮನಿ ಅರಸರ ಕಾಲದ ಮೂಲಕ ಗುರುತಿಸಲಾಗುತ್ತದೆ. ಆದರೆ ಈ ಎರಡೂ ಮನೆತನಗಳ ಕಾಲಘಟ್ಟದಲ್ಲಿ ವಿವಾದಿತ ಕೇಂದ್ರವಾಗಿ ಗುರುತಿಸಿಕೊಂಡಿತ್ತಷ್ಟೆ, ವಿಜಯನಗರ ಮತ್ತು ಬಹಮನಿಗಳು ಈ ಪ್ರದೇಶಕ್ಕಾಗಿ ನಿರಂತರವಾಗಿ ಕಚ್ಚಾಡಿದಂತೆ ಇದಕ್ಕೂ ಪೂರ್ವದ ಹಲವು ಅರಸುಮನೆತನಗಳು ಹೋರಾಟ ಮಾಡಿರುವುದು ಕಂಡುಬರುತ್ತದೆ. ಆದರೆ ರಾಯಚೂರು ದೋ–ಅಬ್ ಅಂದರೆ ವಿಜಯನಗರ ಮತ್ತು ಬಹಮನಿ ಕಾಲಕ್ಕೆ ಸೇರಿಸಲಾಗುತ್ತದೆ. ಈ ವೇಳೆಗಾಗಲೇ ಇದು ಪ್ರತಿಷ್ಠಿತ ಯುದ್ಧ ಕೇಂದ್ರವಾಗಿ ರೂಪುಗೊಂಡಿತ್ತು. ಈ ಪ್ರದೇಶಕ್ಕಾಗಿ ಮೌರ್ಯ ಅರಸ ಅಶೋಕ ಸೈನಿಕ ಕಾರ್ಯಾಚರಣೆಯನ್ನು ಮಾಡಿ ಅನೇಕ ಚಿನ್ನದ ಗಣಿಗಳನ್ನು ಹೊಂದಿದ್ದ ಇಲ್ಲಿನ ಮಸ್ಕಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಇಂದಿನ ಮಸ್ಕಿ ಮೌರ್ಯರ ದಕ್ಷಿಣದ ಪ್ರಾಂತ್ಯ ಸುವರ್ಣಗಿರಿಯಾಗಿತ್ತೆಂದು ಹೇಳಬಹುದಾಗಿದೆ. ಮಸ್ಕಿ ಶಾಸನದಲ್ಲಿ ಅಶೋಕನ ಪೂರ್ಣ ಹೆಸರನ್ನು ಉಲ್ಲೇಖಿಸಲಾಗಿದೆ. ಈ ಶಾಸನ ಭಾರತದ ಸಂದರ್ಭದಲ್ಲಿ ವಿಶೇಷ ಸ್ಥಾನ ಪಡೆದಿರುವುದು ಗಮನಾರ್ಹ. ಹಾಗೆಯೇ ಬಾದಾಮಿ ಚಾಲುಕ್ಯರು ಮತ್ತು ಪಲ್ಲವರ ನಡುವೆ ನಿರಂತರವಾಗಿ ಹೋರಾಟಗಳು ನಡೆದವು. ರಾಷ್ಟ್ರಕೂಟರು ಮತ್ತು ದಕ್ಷಿಣದ ರಾಜ್ಯಗಳಾದ ಗಂಗರು, ಪಲ್ಲವರು, ಪಾಂಡ್ಯರು ಮುಂತಾದವರು ಹೋರಾಟ ಮಾಡಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಈ ಪ್ರದೇಶ ಅತ್ಯಂತ ಪ್ರತಿಷ್ಠಿತ ಕೇಂದ್ರವಾಗಿತ್ತು. ಈ ಸಂದರ್ಭದಲ್ಲಿ ಕಲ್ಯಾಣ ಚಾಲುಕ್ಯರು ಮತ್ತು ತಂಜಾವೂರಿನ ಚೋಳರ ನಡುವೆ ನಿರಂತರವಾಗಿ ಯುದ್ಧಗಳು ನಡೆದಿರುವುದು ಕಂಡುಬರುತ್ತದೆ. ಚೋಳರನ್ನು ಎದುರಿಸಲು ಈ ಪ್ರದೇಶದ ಮಸ್ಕಿಯನ್ನು ರಾಜಧಾನಿ ಯನ್ನಾಗಿ ಕಲ್ಯಾಣ ಚಾಲುಕ್ಯರು ಮಾಡಿಕೊಂಡಿದ್ದರು. ಈ ಮನೆತನಗಳ ಮಧ್ಯ ಭಾರೀ ಪೈಪೋಟಿ ಕಂಡುಬರುತ್ತದೆ. ಆದರೆ ಚೋಳರ ಕುರಿತ ಶಾಸನಗಳು ಅಷ್ಟಾಗಿ ಕಂಡುಬರುತ್ತಿಲ್ಲ. ಹಾಗಾಗಿ ಚೋಳರನ್ನು ಕುರಿತು ಉಲ್ಲೇಖಿಸುವ ಶಾಸನಗಳ ಅಧ್ಯಯನದ ಅಗತ್ಯವಿದೆ. ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ನಡುವೆ ಸಂಘರ್ಷಗಳು ನಡೆದದ್ದುಂಟು. ಸ್ವಲ್ಪ ಕಾಲ ಈ ಪ್ರದೇಶ ಕಲಚೂರಿಗಳ ವಶದಲ್ಲಿತ್ತು. ದಕ್ಷಿಣ

ಭಾರತದ ಸಂದರ್ಭದಲ್ಲಿ ಹೊಯ್ಸಳರು, ಸೇವುಣರು ಹಾಗೂ ಕಾಕತೀಯರು ಪರಸ್ಪರ ವಿರೋಧಿಗಳಾಗಿ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಲು ಹೋರಾಟ ಮಾಡಿರುವುದು ಕಂಡುಬರುತ್ತದೆ. ಕ್ರಿ.ಶ.೧೩ನೆಯ ಶತಮಾನದವರೆಗೆ ಈ ಎಲ್ಲ ಅರಸು ಮನೆತನಗಳು ಈ ಪ್ರದೇಶವನ್ನು ಯುದ್ಧದ ಕಣವನ್ನಾಗಿ ರೂಪಿಸಿದ್ದವು. ಇದು ಇನ್ನಷ್ಟು ವ್ಯಾಪಿಸಿಕೊಂಡದ್ದು, ಹೆಚ್ಚಿಸಿಕೊಂಡದ್ದು, ಮುಂದುವರೆದದ್ದು ವಿಜಯನಗರ ಮತ್ತು ಬಹಮನಿ ರಾಜ್ಯಗಳ ಕಾಲದಲ್ಲಿ. ಒಂದಿಲ್ಲೊಂದು ಕಾರಣದಿಂದ ಈ ಎರಡು ಮನೆತನಗಳು ನಿರಂತರವಾಗಿ ಕಾದಾಡಿವೆ. ಇವುಗಳ ಹೋರಾಟ ಹಿಂದು-ಮುಸ್ಲಿಂ ಹೋರಾಟವೆಂದೇ ಬಿಂಬಿಸಲಾಗಿದೆ. ಆದರೆ ಅಧಿಕಾರ ಸ್ಥಾಪನೆಯೇ ಅವರ ಮುಖ್ಯ ಗುರಿಯಾಗಿತ್ತೇ ಹೊರತು ಧರ್ಮಕೇಂದ್ರಿತ ರಾಜಕಾರಣವಲ್ಲ. ವಿಜಯನಗರ ಮತ್ತು ಬಹಮನಿಗಳ ನಡುವೆ ನಡೆದ ರಾಯಚೂರು ಕೋಟೆ ಮುತ್ತಿಗೆ ಕಾಲವನ್ನು ಕ್ರಿ.ಶ.೧೫೨೦ ಎಂಬುದರ ಬದಲಾಗಿ ಕ್ರಿ.ಶ.೧೫೨೧ರಲ್ಲಿ ಮುತ್ತಿಗೆ ಹಾಕಲಾಯಿತೆಂದು ತಿಳಿದುಬರುತ್ತದೆ. ಹಾಗೆಯೇ ಕ್ರಿ.ಶ. ೧೫೬೫ರಲ್ಲಿ ನಡೆದ ತಾಳಿಕೋಟೆ, ರಕ್ಕಸಗಿ-ತಂಗಡಗಿ ಯುದ್ಧವೆಂದು ಕರೆಯುವುದರ ಬದಲು ಬಯ್ಯಾಪುರ ಯುದ್ಧವೆಂದು ಕರೆಯುವುದು ಸೂಕ್ತವಾಗಿದೆ. ಏಕೆಂದರೆ ೧೫೬೫ರ ಯುದ್ಧ ಬಯ್ಯಾಪುರ-ಭೋಗಾಪುರಗಳಲ್ಲಿ ನಡೆದಿದೆ.

ವಿಜಯನಗರ ಪತನದ ನಂತರ ಈ ಪ್ರದೇಶ ಬಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ಕಾಲಾವಧಿಯಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳ ಉದಯವಾಯಿತು. ಆದಿಲ್‌ಶಾಹಿಗಳ ಅವನತಿಯ ನಂತರ ಈ ಪ್ರದೇಶ ಮೊಗಲರ ವಶವಾಯಿತು. ಮೊಗಲರ ಪ್ರತಿನಿಧಿಯಾಗಿ ಹೈದರಾಬಾದ್ ಸಂಸ್ಥಾನ ಉದಯವಾಯಿತು. ಈ ಸಂಸ್ಥಾನದ ನಿಜಾಮರು ಪ್ರಬಲರಾಗಿದ್ದರು. ಇದಕ್ಕೂ ಪೂರ್ವದಲ್ಲಿ ಈ ಪ್ರದೇಶದಲ್ಲಿ ಸಾಲಗುಂದೆಯ ಸಿಂದರು, ಮೊರಟದ ಹೈಹಯರು ಹಾಗೂ ಕರಡಿಕಲ್ ಕದಂಬರು ಮುಂತಾದವರು ಸಾಮಂತರಾಗಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಇವರು ಕಲ್ಯಾಣ ಚಾಲುಕ್ಯರು ಮತ್ತು ಸೇವುಣರ ಕಾಲದಲ್ಲಿ ಪ್ರಬಲ ಸಾಮಂತರಾಗಿ ರಾಜಧಾನಿಗಳನ್ನು ಹೊಂದಿ, ರಾಜ್ಯಭಾರ ಮಾಡಿರುವುದು ಗೋಚರಿಸುತ್ತದೆ. ಸಾಮಂತರಂತೆ ಸಂಸ್ಥಾನಿಕರು ಸಹ ಸೀಮಿತ ಪ್ರದೇಶಗಳಲ್ಲಿ ಅಧಿಕಾರ ನಡೆಸಿದ ಬಗ್ಗೆ ತಿಳಿದುಬರುತ್ತದೆ. ಇವರು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ.

ಈ ಪ್ರದೇಶಕ್ಕಾಗಿ ನಡೆದ ನಿರಂತರವಾದ ಯುದ್ಧಗಳಿಂದಾಗಿ ಸಾಮಾಜಿಕ ವ್ಯವಸ್ಥೆಯ ಮೇಲೆ ಅನೇಕ ಪರಿಣಾಮಗಳು ಬೀರಿರುವುದು ಕಂಡುಬರುತ್ತದೆ. ಇದರಿಂದ ರಾಜಕೀಯ ಸ್ಥಿತ್ಯಂತರ, ಸಾಮಾಜಿಕ ಪಲ್ಲಟಗಳಾದವು. ಆರ್.ಎಸ್. ಶರ್ಮ ಅವರು ಹೇಳುವಂತೆ "ಯೋಧರನ್ನು ಮತ್ತು ಪುರೋಹಿತರನ್ನು ಶ್ರೀಮಂತರನ್ನಾಗಿಸಿರುವುದು ಯುದ್ಧಗಳಿಗೆ ಕಾರಣ"ವೆನ್ನುತ್ತಾರೆ. ಸಂಪತ್ತಿನ ಕ್ರೋಢೀಕರಣ ಅವರ ಮೂಲ ಉದ್ದೇಶವಾಗಿತ್ತು. ಯುದ್ಧಗಳ ಪರಿಣಾಮವಾಗಿ ಆರ್ಥಿಕ ಚಟುವಟಿಕೆಗಳು ಹೆಚ್ಚಾಗಿ ಗರಿಗೆದರಿದವು. ಅದರಲ್ಲಿ ವಿಶೇಷವಾಗಿ ಕೃಷಿಯೆ ಪ್ರಧಾನವಾಗಿ ಗುರುತಿಸಿಕೊಂಡಿತು. ಕೃಷಿ ಚಟುವಟಿಕೆ ಹೆಚ್ಚುವರಿ ಉತ್ಪಾದನೆಗೆ ಕಾರಣವಾಯಿತು. ಇದರಿಂದ ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಮಿಂಚಿನ ಸಂಚಲನ ಉಂಟಾಯಿತು. ಈ ಪ್ರದೇಶದಲ್ಲಿ ಕೃಷಿ ಭೂಮಿಯ ವಿಸ್ತರಣೆಗೆ ತೊಡಗಿಕೊಳ್ಳುವಂತಾಯಿತು. ಕೃಷಿ ಭೂಮಿ ವಿಸ್ತರಣೆಗೊಂಡಂತೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಲಾಯಿತು. ಕೃಷಿ ಪ್ರಧಾನ ಉದ್ಯೋಗವಾಗಿ ರೂಪಿತವಾಯಿತು. ರಾಜಪ್ರಭುತ್ವ ವ್ಯವಸ್ಥೆ ಹೆಚ್ಚಿನ ಪ್ರಮಾಣದ ಭೂಮಿಯನ್ನು ದೇವಾಲಯ, ಬಸದಿ, ಅಗ್ರಹಾರ, ಬ್ರಹ್ಮಪುರ ಮುಂತಾದವುಗಳಿಗೆ ಭೂದಾನ ಮಾಡಿದ ಬಗ್ಗೆ

ತಿಳಿದುಬರುತ್ತದೆ. ಇದು ಭೂಮಾಲಿಕ ಹೊಸ ವರ್ಗದ ಸೃಷ್ಟಿಗೆ ಕಾರಣವಾಯಿತು. ಮುಂದೆ ಊಳಿಗಮಾನ್ಯ ವ್ಯವಸ್ಥೆಯೂ ಸೃಷ್ಟಿಯಾಯಿತು. ಇದರ ಮೂಲಕ ಸಾಮಾಜಿಕ ವ್ಯವಸ್ಥೆಯ ಮೇಲೆ ಬಿಗಿಯಾದ ಹಿಡಿತ ಸಾಧಿಸಲು ಪ್ರಯತ್ನಿಸಿರುವುದು ಗೋಚರಿಸುತ್ತದೆ.

ಆರ್ಥಿಕತೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದ ಕೃಷಿಕ್ಷೇತ್ರ ಕೆಲವು ಕುಶಲಕರ್ಮಿಗಳನ್ನು ಉದಯಿಸುವಂತೆ ಮಾಡಿತು. ಇವರು ಕೂಡ ಆರ್ಥಿಕ ವ್ಯವಸ್ಥೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿದರು. ಕುಲಕಸಬು ವೃತ್ತಿಗಳು ಕಾಲಕ್ಕೆ ತಕ್ಕಂತೆ ಬದಲಾಗುತ್ತಿದ್ದವು. ರಾಜಪ್ರಭುತ್ವ ವ್ಯವಸ್ಥೆ ತನ್ನ ರಾಜ್ಯಭಂಡಾರವನ್ನು ತುಂಬಿಸಿಕೊಳ್ಳಲು ಹಲವು ಆದಾಯದ ಮೂಲಗಳನ್ನು ಗುರುತಿಸಿಕೊಂಡಿತ್ತು. ಅದರಲ್ಲಿ ತೆರಿಗೆಗಳನ್ನು ಕೃಷಿ, ವ್ಯಾಪಾರ ಮತ್ತು ವೃತ್ತಿ ಮುಂತಾದವುಗಳ ಮೇಲೆ ಹಾಕಲಾಗುತ್ತಿತ್ತು ಹಾಗೂ ಹೆಚ್ಚಿನ ಆದಾಯವನ್ನು ಸಂಗ್ರಹಿಸಲಾಗುತ್ತಿತ್ತು. ಆರ್ಥಿಕವಾಗಿ ಪ್ರಧಾನವಾಗಿ ಗುರುತಿಸಿಕೊಂಡಿದ್ದ ಈ ಪ್ರದೇಶ ಬೇರೆ ಬೇರೆ ಪ್ರದೇಶಗಳೊಂದಿಗೆ ವ್ಯಾಪಾರ ಸಂಬಂಧ ಹೊಂದಿತ್ತು. ಇದರಂತೆ ವರ್ತಕರ ಮೇಲೂ ಅನೇಕ ತೆರಿಗೆಗಳನ್ನು ವಿಧಿಸಲಾಯಿತು. ಪ್ರಾಚೀನ, ಮಧ್ಯ ಹಾಗೂ ಆಧುನಿಕ ಈ ಎಲ್ಲ ಕಾಲಘಟ್ಟಗಳಲ್ಲಿ ಇದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.

ಈ ಪ್ರದೇಶದಲ್ಲಿನ ಹೆಚ್ಚುವರಿ ಉತ್ಪಾದನೆಗೆ ರೈತಾಪಿ ವರ್ಗ ಕಾರಣವಾಗಿದ್ದರೆ, ವರ್ತಕರ ಪಾತ್ರ ಉತ್ಪಾದನೆಯನ್ನು ದೇಶದ ಮೂಲೆ ಮೂಲೆಗೆ ತಲುಪಿಸುವಲ್ಲಿ ಪ್ರಮುಖವಾಗಿದೆ. ಅಂದು ವರ್ತಕರು ಅರಸರಿಗೆ ಸಾಲಕೊಡುವಷ್ಟು ಶ್ರೀಮಂತರಾಗಿದ್ದರು. ರಾಜಪ್ರಭುತ್ವ ವ್ಯವಸ್ಥೆಯಲ್ಲಿ ವರ್ತಕರು ಹಲವು ಬಗೆಯ ಸ್ಥಾನಮಾನಗಳನ್ನು ಹೊಂದಿದ್ದರು. ಅವರು ಖಾಸಗಿ ಸಭೆ-ಸಮಾರಂಭಗಳನ್ನು ನಡೆಸುವುದು, ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳುವುದು, ದಾನ ನೀಡುವುದು ಮೊದಲಾದ ಕಾರ್ಯಗಳ ಮೂಲಕ ಪ್ರಭಾವಶಾಲಿಗಳಾಗಿದ್ದರು. ಅಲ್ಲದೆ ವರ್ತಕರು ತಮ್ಮದೇ ವೃತ್ತಿ ಸಂಘಗಳನ್ನೂ ಹೊಂದಿದ್ದುದು ಕಂಡುಬರುತ್ತದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರೇಣೀಕರಣ ಪದ್ಧತಿ ಇದ್ದಿತು. ಶಿಕ್ಷಣ ವ್ಯವಸ್ಥೆ ಸಾಮಾಜಿಕ ಪರಂಪರೆಯಂತೆ ನಡೆದುಕೊಂಡು ಬಂದಿತು. ಬ್ರಾಹ್ಮಣರು ಅಂದು ವಿದ್ಯಾವಂತರಾಗಿದ್ದರು. ಶಿಕ್ಷಣ ಮಾಧ್ಯಮ ಕಾಲದಿಂದ ಕಾಲಕ್ಕೆ ಬದಲಾದುದು ಕಂಡುಬರುತ್ತದೆ. ಪ್ರಾಕೃತ, ಸಂಸ್ಕೃತಿ, ಪರ್ಶಿಯನ್, ಅರೇಬಿಕ್, ಕನ್ನಡ, ತೆಲುಗು, ಉರ್ದು ಮುಂತಾದ ಭಾಷೆಗಳು ಕಾಲದಿಂದ ಕಾಲಕ್ಕೆ ಮಾಧ್ಯಮ ವಾಗಿದ್ದುದನ್ನು ಗಮನಿಸಬಹುದಾಗಿದೆ. ಬ್ರಾಹ್ಮಣರು ರಾಜಪ್ರಭುತ್ವ ವ್ಯವಸ್ಥೆಯಲ್ಲಿ ಸ್ಥಾನಮಾನಗಳನ್ನು ಹೊಂದಿದ್ದರು. ಅವರು ಹಿಂದೂ-ಮುಸ್ಲಿಂ ರಾಜಪ್ರಭುತ್ವಗಳೆಂದು ಅಂದು ಭಿನ್ನತೆ ತೋರಲಿಲ್ಲ. ನಿಜಾಮರ ಕಾಲದಲ್ಲೂ ಬ್ರಾಹ್ಮಣರೆ ಅಧಿಕಾರ ಕೇಂದ್ರಿತ ಸ್ಥಾನಗಳಲ್ಲಿ ಮುಂದುವರೆದುದು ಕಂಡುಬರುತ್ತದೆ. ಹಾಗೆಂದು ಇತರೆ ಜನರು ಭಾಗವಹಿಸಿರಲಿಲ್ಲವೆಂದಲ್ಲ.

ಕೆಳಜಾತಿಗಳಿಗೆ ಸಾರ್ವಜನಿಕ ಬೀದಿಯಲ್ಲಿ ಕೂಡ ನಡೆದುಕೊಂಡು ಹೋಗುವ ಸ್ಥಿತಿಯಿರಲಿಲ್ಲ. ಇದಕ್ಕೆ ಲಿಂಗಸೂಗೂರು ತಾಲೂಕಿನ ಕರಡಕಲ್ (೬)ರ ೧೧೭೯ರ ಶಾಸನ ಸಾಕ್ಷಿಯಾಗಿ ನಿಲ್ಲುತ್ತದೆ. ಮಹಿಳೆಯರ ಸ್ಥಾನಮಾನಗಳನ್ನು ಕುರಿತು ಉಲ್ಲೇಖಿಸುವ ಶಾಸನಗಳಿವೆ. ಅವು ಪ್ರಭುಗಳು, ಅಧಿಕಾರಿವರ್ಗ, ಸಾಮಂತ ಮುಂತಾದ ಅಧಿಕಾರದಲ್ಲಿರುವ ಮಡದಿಯರನ್ನು ಸೂಚಿಸುತ್ತವೆ. ಪ್ರಭುತ್ವದಲ್ಲಿ ಗುರುತಿಸಿಕೊಂಡ ರಾಣಿಯರು ಆಡಳಿತ ನಡೆಸಿದ, ದಾನ ನೀಡಿದ ಮತ್ತು ದೇವಾಲಯ ಕಟ್ಟಿಸಿದ ಬಗೆಗಿನ ಮಾಹಿತಿಗಳು ಸಿಗುತ್ತವೆ. ಇಲ್ಲಿನ ಶಾಸನಗಳು ೫೦ ಜನ ಮಹಿಳೆಯರನ್ನು ಉಲ್ಲೇಖಿಸುತ್ತವೆ. ಇವರೆಲ್ಲರೂ ಮೇಲ್ವರ್ಗಕ್ಕೆ

ಸೇರಿದವರಾಗಿದ್ದಾರೆ. ಅದರಲ್ಲಿ ಒಬ್ಬ ಮಹಿಳೆ ಕೆಳಜಾತಿ/ ವರ್ಗಕ್ಕೆ ಸೇರಿದ ಉಲ್ಲೇಖವಿದೆ. ಅಂದು ಬಹುಪತ್ನಿತ್ವ ವ್ಯವಸ್ಥೆ ಅಸ್ಥಿತ್ವದಲ್ಲಿದ್ದು ಸಾಮಾಜಿಕ ಪ್ರತಿಷ್ಠೆಯ ಭಾಗವಾಗಿತ್ತು. ಈ ಪದ್ಧತಿ ಅರಸರಲ್ಲಷ್ಟೇ ಅಲ್ಲದೆ ಸಮಾಜದ ಎಲ್ಲ ಜಾತಿ ಜನಾಂಗದ ಜನಸಾಮಾನ್ಯರಲ್ಲೂ ಕಂಡುಬರುತ್ತದೆ. ಸತಿ ಪದ್ಧತಿಗೆ ಮಹಿಳೆಯರು ಬಲಿಯಾಗುತ್ತಿದುದು ಸರ್ವೇ ಸಾಮಾನ್ಯವಾದ ಸಂಗತಿಯಾಗಿತ್ತು. ಈ ಪದ್ಧತಿಯಿಂದ ಉಂಟಾದ ಪರಿಣಾಮಗಳು ಅಂದು ಪರಿಹಾರ ಕಂಡುಕೊಳ್ಳಲಿಲ್ಲ. ಇದಲ್ಲದೆ ದೇವದಾಸಿ ಪದ್ಧತಿ ಚಾಲ್ತಿಯಲ್ಲಿತ್ತು. ಇದು ಕೆಳಜಾತಿ ವರ್ಗದ ಮಹಿಳೆಯರನ್ನು ಶೋಷಣೆಗೆ ಒಳಪಡಿಸುವ ಮಾರ್ಗವಾಗಿತ್ತು. ಈ ಪದ್ಧತಿ ಕಾಲಾನಂತರದಲ್ಲಿ ವೇಶ್ಯವಾಟಿಕೆಯಾಗಿ ಪರಿವರ್ತನೆಯಾಯಿತು. ಈ ಪ್ರದೇಶದಲ್ಲಿ ಕ್ರಿ.ಶ.೭-೮ನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ವಿಚಾರ ಪ್ರಚೋದಕ ನೆಲೆಯ ಸಾಹಿತ್ಯ ಸೃಷ್ಟಿಯಾಯಿತು. ಇದರಿಂದ ಹಲವು ಬದಲಾವಣೆಗಳು ಕಾಣಬೇಕಾಗಿತ್ತು, ಆದರೆ ಅದು ಸಾಧ್ಯವಾಗಲಿಲ್ಲ. ಈ ಪ್ರದೇಶದಲ್ಲಿ ಶೈವ ಮತ್ತು ವೈಷ್ಣವ ಪರಂಪರೆಗಳು ಪ್ರಧಾನವಾಗಿ ಗುರುತಿಸಿ ಕೊಂಡಿದ್ದವು. ಇಲ್ಲಿ ಶೈವ ಲಿಂಗಾಯತರನ್ನೂ ವೈಷ್ಣವ ಬ್ರಾಹ್ಮಣರನ್ನೂ ಸೂಚಿಸುವ ಸ್ಥಿತಿ ಇದ್ದಿತು. ಹಾಗಾಗಿ ಶೈವ ಮತ್ತು ವೈಷ್ಣವ ಪರಂಪರೆಗಳ ಪ್ರಭಾವ ಮತ್ತು ಪ್ರಾಬಲ್ಯತೆ ಹೆಚ್ಚಾಗಿ ಕಂಡುಬರುತ್ತದೆ. ಶೈವ ವಚನ ಸಾಹಿತ್ಯವನ್ನೂ ವೈಷ್ಣವ ದಾಸ ಸಾಹಿತ್ಯವನ್ನೂ ಹುಟ್ಟು ಹಾಕಿ, ಆ ಮೂಲಕವೇ ಸಮಾಜವನ್ನು ನಿಯಂತ್ರಿಸುತ್ತಿದ್ದವು. ಉಳಿದ ಮತಧರ್ಮಗಳು ಅಸ್ತಿತ್ವದಲ್ಲಿದ್ದರೂ ನೆಪಮಾತ್ರಕ್ಕೆ ತಮ್ಮ ಅಸ್ತಿತ್ವ ಉಳಿಸಿಕೊಂಡಿದ್ದವು. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಇಲ್ಲಿ ತಮ್ಮ ಪ್ರಭಾವ ಬೀರಲು ಪ್ರಯತ್ನಿಸಿದವು ಎಂದು ಹೇಳಬಹುದಾಗಿದೆ.

ಈ ಪ್ರದೇಶದಲ್ಲಿನ ಸ್ಮಾರಕಗಳ ನಿರ್ಮಾಣಕ್ಕಾಗಿ ಶ್ರಮಿಸಿದ ದುಡಿಯುವ ವರ್ಗ ಕೋಟೆ, ದೇವಾಲಯ ಮುಂತಾದ ಸ್ಮಾರಕಗಳ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿರುವುದು ಕಂಡುಬರುತ್ತದೆ. ಇಲ್ಲಿನ ಕೋಟೆಗಳಿಗೆ ಮಹಿಳೆಯರನ್ನು ಬಲಿನೀಡಿರುವುದು ಗೋಚರಿಸುತ್ತದೆ. ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯದ ಅನೇಕ ಕಾರಣಗಳಿಗಾಗಿ ಪ್ರಾಣತ್ಯಾಗ ಮಾಡಿದ ಕೆಳಜಾತಿ ವರ್ಗ ಜನತೆ ಚರಿತ್ರೆಯಲ್ಲಿ ದಾಖಲಾಗದೆ ಹೋಗಿದೆ. ಅರಸನಿಗಾಗಿ ಪ್ರಾಣತ್ಯಾಗ ಮಾಡಿದ ಕುರುಹುಗಳಾಗಿ ಕಂಡುಬರುವ ವೀರಗಲ್ಲು, ಮಾಸ್ತಿಗಲ್ಲು, ಗುಡಿಗಳು, ಮನೆಗಳು ಚರಿತ್ರೆಯಿಂದ ದೂರವುಳಿದವು. ಜನಸಾಮಾನ್ಯರ ಗಮನ ಸೆಳೆದಿದ್ದ ಸ್ಥಳೀಯ ದೇವತೆಗಳನ್ನು, ಅದಕ್ಕೆ ಸಂಬಂಧಿಸಿದ ಆಚರಣೆಗಳನ್ನು ಅಧ್ಯಯನಕ್ಕೆ ಒಳಪಡಿಸದಿರುವುದು ಗೋಚರಿಸುತ್ತದೆ.

## ಟಿಪ್ಪಣಿಗಳು

೧. ಈ ವಿಚಾರವನ್ನು ಕುರಿತು ಶೆಟ್ಟರ್ ಷ, ೨೦೧೦, ಶಂಗಂ- ತಮಿಳಗಂ ಮತ್ತು ಕನ್ನಡ ನಾಡುನುಡಿ, ಪುಟ ೭೬-೭೮, ಆರ್.ಎಸ್.ಶರ್ಮ, ೨೦೧೦, ಪ್ರಾಚೀನ ಭಾರತ, ಪುಟ ೧೩೭, ೧೩೪, ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ, ಪುಟ ೧೪, ಮತ್ತು ೨೯, ಮಂಜಪ್ಪಶೆಟ್ಟಿ ಮಸಗಲಿ, ೧೯೯೨, ತುಂಬಿದ ಕೊಡ, ಪುಟ ೪೮೯-೪೮೩ ಹಾಗೂ ಮಂಜುನಾಥ, ೨೦೧೦, ರಾಜ್ಯ ನಿರ್ಮಾಣ ಮತ್ತು ನಗರೀಕರಣ, ವಿಜಯ್ ಪೂಣಚ್ಚ ತಂಬಂಡ(ಪ್ರಸಂ. ಮತ್ತು ಸಂ.ಸಂ) ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೨, ಆಧುನಿಕ ಉಪಖಂಡದ ಆಧುನಿಕ ಪೂರ್ವ ಚರಿತ್ರೆ ವಿವಿಧ ಆಯಾಮಗಳು, ಪುಟ ೧೮೩ ಮುಂತಾದವುಗಳಲ್ಲಿ ಚರ್ಚಿಸಿರುವುದು ಕಂಡುಬರುತ್ತದೆ.

೨. ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪುಟ ೧೬೮.

೩. ಸೂರ್ಯನಾಥ್ ಕಾಮತ್, ೨೦೦೬, ತ್ರಿಭುವನ ಸ್ಕೂಲ್ ಅಟ್ಲಾಸ್-ಕರ್ನಾಟಕ, ಪುಟ ೬೮.

೪. ಶರ್ಮ ಆರ್.ಎಸ್, ೨೦೧೦, ಪ್ರಾಚೀನ ಭಾರತ, ಪುಟ ೨೪೦-೪೧.

೫. ನರಸಿಂಹಮೂರ್ತಿ ಎ.ವಿ., ೧೯೯೯, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ-೭, ನರಸಿಂಹಮೂರ್ತಿ ಎ.ವಿ.,(ಪ್ರ.ಸಂ), ಕನೂಜ್ ಸಾಮ್ರಾಜ್ಯ ಯುಗ ಭಾಗ-೧, ಪುಟ ೧೧.

೬. ನರಸಿಂಮೂರ್ತಿ ಎ.ವಿ., ೨೦೦೦, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ-೯, ಸಾಮ್ರಾಜ್ಯಕ್ಕಾಗಿ ಹೋರಾಟ ಭಾಗ ೯, ಪುಟ ೨೩೯.

೭. ನಾಗರಾಜರಾವ್, ೨೦೦೦, ಪೂರ್ವೋಕ್ತ, ನರಸಿಂಹಮೂರ್ತಿ ಎ.ವಿ.,(ಪ್ರ.ಸಂ) ಪುಟ ೨೪೦.

೮. ಅದೇ, ಪುಟ ೨೩೨-೪೩ ಹಾಗೂ ಜಯಪ್ಪಗೌಡ ಡಿ.ಎಸ್., ೧೯೮೩, ಕಡಲಾಚೆಯ ಸಂಪರ್ಕಗಳು, ಪುಟ ೩೪೩.

೯. ನಾಗರಾಜರಾವ್, ೨೦೦೦, ಪೂರ್ವೋಕ್ತ, ಪುಟ ೨೪೬ ಹಾಗೂ ತಾಳ್ತಜೆ ವಸಂತಕುಮಾರ, ೧೯೮೮, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಪುಟ ೧೨೦.

೧೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ದೇವದುರ್ಗ-೪೨, ಚಂದನಕೇರಿ, ಕ್ರಿ.ಶ. ೧೦೫೮-೧೦೬೧, ಪುಟ ೧೦೯.

೧೧. ನಾಗರಾಜರಾವ್, ೨೦೦೦, ಪೂರ್ವೋಕ್ತ, ಪುಟ ೨೫೨.

೧೨. ಮೃತ್ಯುಂಜಯ ಹೊರಕೇರಿ(ಸಂ), ೨೦೦೫, ರಾಯಚೂರು ಜಿಲ್ಲಾ ದರ್ಶನ, ಪುಟ ೨.

೧೩. ನರಸಿಂಹಮೂರ್ತಿ ಎ.ವಿ., ೨೦೦೦, ಪೂರ್ವೋಕ್ತ, ಪುಟ ೨೭೧.

೧೪. ರಾಮಚಂದ್ರೇಗೌಡ ಹಿ.ಶಿ., (ಸಂ), ೨೦೦೭, ಕನ್ನಡ ವಿಷಯ ವಿಶ್ವಕೋಶ-೨, ಪುಟ ೩೭೪.

೧೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಮಾನ್ವಿ-೧೨೦, ಮಲ್ಲಟ-ಕ್ರಿ.ಶ. ೧೧೯೬, ಪುಟ ೩೧೮.

೧೬. ನರಸಿಂಹಮೂರ್ತಿ ಎ.ವಿ., ೨೦೦೦, ಪೂರ್ವೋಕ್ತ, ಪುಟ ೨೭೩.

೧೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೪೫, ರಾಯಚೂರು-ಕ್ರಿ.ಶ. ೧೨೯೪, ಪುಟ ೨೯.

೧೮ ವಿಶ್ವನಾಥ(ಅನು), ೨೦೦೧, ನರಸಿಂಹಮೂರ್ತಿ ಎ.ವಿ.,(ಪ್ರ.ಸಂ), ಪೂರ್ವೋಕ್ತ, ಪುಟ ೩೮೪-೮೫, ಸದಾನಂದ ಕನವಳ್ಳಿ(ಅನು), ೨೦೧೦, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ರಾಬರ್ಟ್ ಸಿವೆಲ್(ಮೂಲ), ಪುಟ ೩೦-೩೧ ಹಾಗೂ ಕವಿರತ್ನ, ೨೦೦೯, ಬಹಮನಿ ಕಾಳಗಗಳು, ಪುಟ ೪೯-೫೦ ಈ ಕೃತಿಗಳಲ್ಲಿ ಗಮನಿಸಬಹುದಾಗಿದೆ.

೧೯. ಸೂರ್ಯನಾಥ ಕಾಮತ್, ೧೯೭೩, ವಿಜಯನಗರ ಸಾಮ್ರಾಜ್ಯ, ಪುಟ ೮-೯ ಹಾಗೂ ವಿಶ್ವನಾಥ (ಅನು), ೨೦೦೧, ಪೂರ್ವೋಕ್ತ, ಪುಟ ೩೮೬.

೨೦. ಸದಾನಂದ ಕನವಳ್ಳಿ (ಅನು), ೨೦೧೦, ಪೂರ್ವೋಕ್ತ, ಪುಟ ೩೨-೩೮ ಕವಿರತ್ನ, ೨೦೦೯, ಪೂರ್ವೋಕ್ತ, ಪುಟ ೫೧-೫೪ ಹಾಗೂ ಎಲ್.ಆರ್. ಕುಲಕರ್ಣಿ, ೧೯೭೨, ಬಹಮನಿ ರಾಜ್ಯ, ಪುಟ ೧೩ ಮುಂತಾದವುಗಳನ್ನು ಗಮನಿಸಬಹುದು.

೨೧ ಸದಾನಂದ ಕನವಳ್ಳಿ(ಅನು), ೨೦೧೦, ಪೂರ್ವೋಕ್ತ ಪುಟ ೩೪-೩೮.

೨೨. ಅದೇ, ಪುಟ ೩೯–೪೩, ಬಾಲಸುಬ್ರಹ್ಮಣ್ಯ(ಅನು), ೨೦೦೧, ವಿಜಯನಗರ, ಎನ್ ವೆಂಕಟರಮಣಯ್ಯ (ಮೂಲ), ನರಸಿಂಹಮೂರ್ತಿ.ಎ.ವಿ(ಪ್ರಸಂ), ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ–೧೧, ದೆಹಲಿ ಸುಲ್ತಾನರ ಅಧಿಪತ್ಯ ಭಾಗ ೧, ಪುಟ ೪೨೬–೨೭ ಹಾಗೂ ರಾಘವೇಂದ್ರರಾವ್, ೧೯೪೯, ವಿಜಯನಗರ, ಪುಟ ೧೨–೧೪ ಮುಂತಾದವನ್ನು ಗಮನಿಸಿ.

೨೩. ಸದಾನಂದ ಕನವಳ್ಳಿ(ಅನು), ೨೦೧೦, ಪೂರ್ವೋಕ್ತ, ಪುಟ ೪೪–೪೫ ಹಾಗೂ ದೇವರಕೊಂಡಾರೆಡ್ಡಿ (ಸಂ), ೨೦೦೩, ಪೂರ್ವೋಕ್ತ, ರಾಯಚೂರು–೪೪, ರಾಯಚೂರು–ಕ್ರಿ.ಶ. ೧೩೫೫–೫೬, ಪುಟ ೨೮–೨೯.

೨೪. ಬಾಲಸುಬ್ರಹ್ಮಣ್ಯ ೨೦೦೧, ಪೂರ್ವೋಕ್ತ, ಪುಟ ೪೨೯–೩೨. ಹಾಗೂ ಸದಾನಂದ ಕನವಳ್ಳಿ(ಅನು), ೨೦೧೦, ಪೂರ್ವೋಕ್ತ, ಪುಟ ೫೨–೫೬

೨೫. ಸದಾನಂದ ಕನವಳ್ಳಿ(ಅನು), ೨೦೧೦, ಪೂರ್ವೋಕ್ತ ಪುಟ ೫೯–೬೩, ಬಾಲಸುಬ್ರಹ್ಮಣ್ಯ, ೨೦೦೧, ಪೂರ್ವೋಕ್ತ ಪುಟ ೪೩೨, ರಾಘವೇಂದ್ರರಾವ್, ೧೯೪೯, ಪೂರ್ವೋಕ್ತ, ಪುಟ.೨೧–೨೨ ಹಾಗೂ ಸೂರ್ಯನಾಥ ಕಾಮತ್, ೧೯೭೩, ಪೂರ್ವೋಕ್ತ, ಪುಟ ೧೧ ಅನು. ಗಮನಿಸಿ.

೨೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ ಮಾನವಿ–೧೪, ಮಾನವಿ–ಕ್ರಿ.ಶ. ೧೪೦೬–೦೭, ಪುಟ ೨೩೭

೨೭. ಈ ಯುದ್ಧವನ್ನು ಕುರಿತು ಬಾಲಸುಬ್ರಹ್ಮಣ್ಯಂ ೨೦೦೧, ಪೂರ್ವೋಕ್ತ, ಪುಟ ೪೩೪, ರಾಘವೇಂದ್ರರಾವ್, ೧೯೪೯, ಪೂರ್ವೋಕ್ತ, ಪುಟ ೨೨ ಹಾಗೂ ನಾಗರಾಜು ಎಚ್.ಎಂ., ೧೯೯೯, ವಿಜಯನಗರ ಇಮ್ಮಡಿ ದೇವರಾಯ, ಪುಟ ೩೨ ಮುಂತಾದವರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ.

೨೮. ಸದಾನಂದ ಕನವಳ್ಳಿ, ೨೦೧೦, ಪೂರ್ವೋಕ್ತ, ಪುಟ ೭೪, ನಾಗರಾಜು ಎಚ್.ಎಂ., ೧೯೯೯, ಪೂರ್ವೋಕ್ತ, ಪುಟ ೩೫ ಹಾಗೂ ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೫೦, ಮುದಗಲ್–ಕ್ರಿ.ಶ. ೧೪೩೬ರ ಶಾಸನ, ಪುಟ ೧೮೬

೨೯ ಸದಾನಂದ ಕನವಳ್ಳಿ, ೨೦೧೦, ಪೂರ್ವೋಕ್ತ, ಪುಟ ೭೪–೭೯ ಹಾಗೂ ನಾಗಾರಜು ಎಚ್.ಎಂ., ೧೯೯೯, ಪೂರ್ವೋಕ್ತ, ಪುಟ ೩೬–೩೭

೩೦ ರಾಘವೇಂದ್ರರಾವ್, ೧೯೪೯, ಪೂರ್ವೋಕ್ತ, ಪುಟ ೩೩.

೩೧ ಕೃಷ್ಣಮೂರ್ತಿ, ೨೦೦೩, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ–೧೪, ನರಸಿಂಹ ಮೂರ್ತಿ ಎ.ವಿ.(ಪ್ರಸಂ), ಮುಘಲ್ ಸಾಮ್ರಾಜ್ಯ ಭಾಗ–೨, ಪುಟ ೨೨೨–೨೨೩.

೩೨. ಕೃಷ್ಣಮೂರ್ತಿ, ೨೦೦೩, ಪೂರ್ವೋಕ್ತ, ಪುಟ ೨೨೩, ಶ್ರೀನಿವಾಸರಾವ್, ೧೯೫೬, ರಾಯಚೂರು ಇತಿಹಾಸ, ಪುಟ.೧೦–೧೧ ಹಾಗೂ ಭೀಮಪ್ಪ ಆರ್. ಸುರಪುರ, ೨೦೦೧, ನವರಂಗ ದರವಾಜಾ ಐತಿಹಾಸಿಕ–ಹಿನ್ನೆಲೆ, ಇತಿಹಾಸ ದರ್ಶನ ಸಂಪುಟ–೧೬, ೨೦೦೧, ಪುಟ ೧೪೫–೧೪೭.

೩೩. ಬಾಲಸುಬ್ರಹ್ಮಣ್ಯ, ೨೦೦೧, ಪೂರ್ವೋಕ್ತ, ಪುಟ ೪೬೧–೬೨.

೩೪. ಈ ಯುದ್ಧವನ್ನು ಕುರಿತು ದೀಕ್ಷಿತ್ ಜಿ.ಎಸ್. ಮತ್ತು ಇತರು, ೧೯೯೭, ಶ್ರೀಕೃಷ್ಣದೇವರಾಯ ಜೀವನ, ಸಾಧನೆಗಳು, ಪುಟ ೨೭, ಗೋಪಾಲ್ ಬಾ.ರಾ., ೧೯೯೫, ವಿಜಯನಗರ, ಬಿ.ಷೇಕ್ ಅಲಿ (ಪ್ರಸಂ), ಶಿವಣ್ಣ ಕೆ.ಎಸ್.(ಸಂ.ಸಂ), ೧೯೯೭, ಕರ್ನಾಟಕ ಚರಿತ್ರೆ ಸಂಪುಟ–೪, ಪುಟ ೭೫ ಹಾಗೂ

ಸದಾನಂದ ಕನವಳ್ಳಿ, ೨೦೧೦, ಪೂರ್ವೋಕ್ತ, ಪುಟ ೧೩೧ ಅಧ್ಯಯನ ಮಾಡಿರುವುದನ್ನು ಗಮನಿಸಬಹುದಾಗಿದೆ.

೩೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೯, ಮಲಿಯಾಬಾದ್-ಕ್ರಿ.ಶ. ೧೫೧೩ರ ಶಾಸನ, ಪುಟ ೧೦-೧೧, ರಾಯಚೂರು-೧೭, ರಾಯಚೂರು-ಕ್ರಿ.ಶ.೧೫೧೩ರ ಏಕಮಿನಾರ್ ಶಾಸನ, ಪುಟ ೧೫-೧೬.

೩೬. ಕೃಷ್ಣದೇವರಾಯನು ಆಂಧ್ರಪ್ರದೇಶದ ದಂಡಯಾತ್ರೆಯಲ್ಲಿದ್ದನು. ಆಗ ರಾಯಚೂರು ಕೋಟೆಯನ್ನು ಬಿಜಾಪುರದವರು ವಶಪಡಿಸಿಕೊಂಡಿದ್ದರು. ಇದನ್ನು ಗಮನಿಸಿದ ಕೃಷ್ಣದೇವರಾಯ ಕ್ರಿ.ಶ. ೧೫೧೫ ರಲ್ಲಿ ರಾಯಚೂರು ಕೋಟೆಯ ಮೇಲೆ ದಾಳಿ ಮಾಡಿದನೆಂದು ತಿಳಿದುಬರುತ್ತದೆ. ಇದಕ್ಕೆ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ನಂದಿಕೊಟ್ಕೂರ್ ತಾಲೂಕು, ಶ್ರೀಶೈಲ-೩೨೬, ಕ್ರಿ.ಶ. ೧೫೧೫ರ ಶಾಸನ, ಪುಟ ೬೧೩-೬೧೫ ಹಾಗೂ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲೂಕು, ತಿರುಮಲೆ-೩೨೭, ಕ್ರಿ.ಶ. ೧೫೧೫ರ ಶಾಸನ, ಪುಟ ೬೧೫-೬೧೭(ಪರಮಶಿವಮೂರ್ತಿ ಡಿ.ವಿ.(ಸಂ), ೨೦೧೦, ಕೃಷ್ಣದೇವರಾಯನ ಶಾಸನಗಳು ಸಂಪುಟ ೧, ಪುಟ ೬೧೩-೬೧೭) ಈ ಶಾಸನಗಳನ್ನು ಗಮನಿಸಬಹುದಾಗಿದೆ.

೩೭. ನಾರಾಯಣ ಸಂಗಮ(ಅನು), ೨೦೦೬, ವಿಜಯನಗರದ ಕೃಷ್ಣದೇವರಾಯನ ಕಾಲ, ಸಿ.ವಿ. ರಂಗಸ್ವಾಮಿ (ಮೂಲ), ಕರ್ನಾಟಕ ಪರಂಪರೆ ಸಂಪುಟ ೨, ಮಧ್ಯಕಾಲ ಮತ್ತು ಆಧುನಿಕ ಕಾಲ, ಪುಟ ೩೫ ಹಾಗೂ ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೧೮, ರಾಯಚೂರು-ಕ್ರಿ.ಶ. ೧೫೧೮ರ ಶಾಸನ, ಪುಟ ೧೬

೩೮. ಈ ಯುದ್ಧವು ಎಲ್ಲರನ್ನು ಗಮನ ಸೆಳೆದದ್ದಾಗಿದೆ. ಇದರ ಬಗ್ಗೆ ಭಿನ್ನಾಭಿಪ್ರಾಯಗಳೂ ಇವೆ. ಆದರೂ ಪರಿಶೀಲಿಸಿ ನಿರ್ಣಯಕ್ಕೆ ಬರಬಹುದಾಗಿದೆ. ಈ ಯುದ್ಧವನ್ನು ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಆದರೆ ಕೆಲವನ್ನು ಮಾತ್ರ ಇಲ್ಲಿ ಬಳಸಿಕೊಳ್ಳಲಾಗಿದೆ. ಸದಾನಂದ ಕನವಳ್ಳಿ, ೨೦೧೦, ಪೂರ್ವೋಕ್ತ, ಪುಟ ೧೪೫-೧೫೦, ಡಿ.ವಿ. ಪರಶಿವಮೂರ್ತಿ(ಸಂ), ೨೦೧೦, ಪೂರ್ವೋಕ್ತ, ಆಂಧ್ರಪ್ರದೇಶದ ಮೆಹಬೂಬನಗರ ಜಿಲ್ಲೆಯ ಆಲಂಪುರ-೩೩೭ ಮತ್ತು ೩೩೮ರ ಶಾಸನ, ಪುಟ ೬೩೦-೬೩೪, ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಮಾನ್ವಿ-೧೯, ಚೀಕಲಪರ್ವಿ, ಕ್ರಿ.ಶ. ೧೫೨೧ರ ಶಾಸನ, ಪುಟ ೨೪೩, ನಾಗೇಗೌಡ ಎಚ್.ಎಲ್.(ಸಂ), ೨೦೦೬, ಪ್ರವಾಸಿಕಂಡ ಇಂಡಿಯಾ ಸಂಪುಟ ೨, ಪುಟ ೩೬೬-೩೭೧, ದೀಕ್ಷಿತ್ ಜಿ.ಎಸ್., ೧೯೯೭, ಪೂರ್ವೋಕ್ತ, ಪುಟ ೬೨-೬೫ ಮುಂತಾದವುಗಳನ್ನು ಗಮನಿಸಬಹುದು.

೩೯. ಯಾಸೀನ್ ಖುದ್ದೂಸಿ ಎಂ. ಮತ್ತು ಸೀತಾರಾಮ ಜಾಗೀರ್‌ದಾರ್(ಸಂ), ೨೦೦೧, ಕರ್ನಾಟಕ ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು, ಬಿಜಾಪುರ(೧೧೩)-ಕ್ರಿ.ಶ. ೧೫೨೨ರ ಶಾಸನ, ಪುಟ ೭೭-೭೮ರಲ್ಲಿ ಈ ಯುದ್ಧವನ್ನು ಕುರಿತು ಉಲ್ಲೇಖಿಸಲಾಗಿದೆ.

೪೦. ಕೃಷ್ಣಮೂರ್ತಿ, ೨೦೦೩, ಪೂರ್ವೋಕ್ತ, ಪುಟ ೨೨೭-೨೮.

೪೧. ಸೂರ್ಯನಾಥ ಕಾಮತ್, ೧೯೭೩, ಪೂರ್ವೋಕ್ತ, ಪುಟ ೨೧.

೪೨. ಗೋಪಾಲ ಬಾ.ರಾ. ೧೯೯೭, ವಿಜಯನಗರ, ಪೂರ್ವೋಕ್ತ, ಪುಟ ೫೧.

೪೩. ಕೋಡದ ಎಸ್.ಬಿ., ೧೯೬೬, ವಿಜಯನಗರದ ಉಚ್ಛ್ರಾಯ ಕಾಲ, ಪುಟ ೨೯.

೪೪. ರಾಘವೇಂದ್ರರಾವ್, ೧೯೪೯, ಪೂರ್ವೋಕ್ತ, ಪುಟ ೬೧.

೪೫. ಅದೇ, ಪುಟ ೬೧.

೪೬. ಈ ಯುದ್ಧವನ್ನು ಕುರಿತು ಸಾಕಷ್ಟು ಅಧ್ಯಯನಗಳಾಗಿವೆ. ಆದರೆ ಇಲ್ಲಿ ಕೆಲವನ್ನು ಮಾತ್ರ ಬಳಸಿಕೊಳ್ಳಲಾಗಿದೆ. ಅವು ಗೋಪಾಲ ಬಾ.ರಾ., ೧೯೯೭, ಪೂರ್ವೋಕ್ತ, ಪುಟ ೫೨-೫೩, ಕೋಡದ ಎಸ್.ಬಿ. ೧೯೯೯, ತಾಳಿಕೋಟೆ ಯುದ್ಧ, ಪುಟ ೩೩-೩೭, ಶರ್ಮ ಶೀ.ತಾ., ೧೯೯೯, ಚಾರಿತ್ರಿಕ ದಾಖಲೆಗಳು, ಪುಟ ೯, ಕೃಷ್ಣಕೊಲ್ಹಾರ ಕುಲಕರ್ಣಿ, ೨೦೧೧, ವಿಜಯನಗರ ಕಾಳಗದ ಖಚಿತ ಸ್ಥಳ ಒಂದು ಚರ್ಚೆ, ಲಕ್ಷ್ಮಣ್ ತೆಲಗಾವಿ(ಸಂ), ರಾಮಾಜಿ ತಿರುಮಲ ಹರಿಕಾರೆಯ ರಾಮರಾಜನ ಬಖೈರು, ಪುಟ ೯೫-೯೬, ವಾಸುದೇವ ಬಡಿಗೇರ, ೨೦೧೧, ತಾಳಿಕೋಟೆ ಯುದ್ಧದ ಸ್ಥಳ ಸಮೀಕ್ಷೆ, ಲಕ್ಷ್ಮಣ್ ತೆಲಗಾವಿ(ಸಂ), ಪೂರ್ವೋಕ್ತ, ಪುಟ ೧೦೬ ಹಾಗೂ ಬಾರ್ಕೂರು ಉದಯ, ೨೦೧೨, ವಾಸ್ತವದ ಒಡಕುಗಳು ಇತಿಹಾಸದ ತೊಡಕುಗಳು, ಪುಟ ೧೫-೨೨ರಲ್ಲಿ ಈ ಯುದ್ಧದ ಕುರಿತು ಅಭ್ಯಸಿಸಲಾಗಿದೆ.

೪೭. ಕೃಷ್ಣಕೊಲ್ಹಾರ ಕುಲಕರ್ಣಿ, ೧೯೯೯, ಪೂರ್ವೋಕ್ತ, ಪುಟ ೨೮೧.

೪೮. ಕೃಷ್ಣಮೂರ್ತಿ, ೨೦೦೩, ಪೂರ್ವೋಕ್ತ, ಪುಟ ೨೪೨.

೪೯. ಕೃಷ್ಣಕೊಲ್ಹಾರ ಕುಲಕುರ್ಣಿ, ೧೯೯೯, ಪೂರ್ವೋಕ್ತ, ಪುಟ ೩೪೮-೫೨. ಹಾಗೂ ಮಾನ್ವಿ-೬೧, ಕಲ್ಲೂರು-ಕ್ರಿ.ಶ. ೧೬೮೩ರ ಶಾಸನ, ಪುಟ ೨೮೦-೮೧.

೫೦. ಧ್ರುವನಾರಾಯಣ ಎಂ.(ಸಂ), ೨೦೦೫, ಕಪಟರಾಳ ಕೃಷ್ಣರಾಯರ ಸುರಪುರ ಸಂಸ್ಥಾನದ ಇತಿಹಾಸ, ಪುಟ ೨೨.

೫೧. ಅದೇ, ಪುಟ ೨೯.

೫೨. ಕೃಷ್ಣಕೊಲ್ಹಾರ ಕುಲಕರ್ಣಿ, ೧೯೯೯, ಪೂರ್ವೋಕ್ತ, ಪುಟ ೪೨೪-೨೭.

೫೩. ಅದೇ. ಪುಟ ೫೧೭.

೫೪. ಅಮರೇಶ ಆಲ್ಕೋಡ, ೨೦೧೨, ದೇವದುರ್ಗ ಚಾರಿತ್ರಿಕ ಅಧ್ಯಯನ, ಪುಟ ೩೩-೩೪.

೫೫. ಧ್ರುವನಾರಾಯಣ ಎಂ.(ಸಂ), ೨೦೦೫, ಪೂರ್ವೋಕ್ತ ಪುಟ ೮೧-೮೨.೫೬

೫೬. ಅಮರೇಶ ಆಲ್ಕೋಡ, ೨೦೧೨, ಪೂರ್ವೋಕ್ತ, ಪುಟ ೩೫.

೫೭. ಧ್ರುವನಾರಾಯಣ ಎ.(ಸಂ), ೨೦೦೫, ಪೂರ್ವೋಕ್ತ, ಪುಟ ೯೮-೧೦೩.

೫೮. ಅದೇ, ಪುಟ ೧೧೬.

೫೯. ಅದೇ, ಪುಟ ೧೨೧-೨೨.

೬೦. ಅಮರೇಶ ಆಲ್ಕೋಡ, ೨೦೧೨, ಪೂರ್ವೋಕ್ತ, ಪುಟ ೧೨೮.

೬೧. ಧ್ರುವನಾರಾಯಣ ಎ.(ಸಂ), ೨೦೦೫, ಪೂರ್ವೋಕ್ತ, ಪುಟ ೧೨೨-೧೨೫

೬೨. ಅದೇ, ಪುಟ ೧೩೮.

೬೩. ಶ್ಯಾಮಭಟ್ ಎನ್., ೧೯೯೭, ಹತ್ತೊಂಬನೆಯ ಶತಮಾನದ ದಕ್ಷಿಣ ಕನ್ನಡದಲ್ಲಿ ರೈತ ಬಂಡಾಯಗಳು, ಬಿ.ಷೇಕ್‌ಅಲಿ(ಪ್ರ.ಸಂ), ಸೆಬಾಸ್ಟಿಯನ್ ಜೋಸೆಫ್(ಸಂ.ಸಂ), ಕರ್ನಾಟಕ ಚರಿತ್ರೆ ಸಂಪುಟ-೬, ಪುಟ ೪೦-೪೧.

೬೪. ಅಮರೇಶ ಆಲ್ಕೋಡ, ೨೦೧೨, ಪೂರ್ವೋಕ್ತ, ಪುಟ ೧೨೯.

೬೫. ಮಹಾದೇವ(ಅನು), ೨೦೧೦, ಮೆಸಪಟೋಮಿಯಾದ ನಾಗರಿಕತೆ, ಹುಟ್ಟು ಹಾಗೂ ಬೆಳವಣಿಗೆ, ಸರ್ವಮಂಗಳ ಜಿ.(ಮೂಲ), ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೪, ಕೆ. ಮೋಹನ್‌ಕೃಷ್ಣ ರೈ(ಸಂ.ಸಂ.), ಏಷ್ಯಾ ಚರಿತ್ರೆಯ ವಿವಿಧ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೧೨-೧೫.

೬೬. ಜೈಕುಮಾರ್ ಎಂ.(ಅನು), ೨೦೧೦, ಚೀನಿ ನಾಗರಿಕತೆ ಹುಟ್ಟು ಹಾಗೂ ಬೆಳವಣಿಗೆ, ಸರ್ವಮಂಗಳ ಜಿ.(ಮೂಲ), ಪೂರ್ವೋಕ್ತ, ಪುಟ ೨೫-೪೦.

೬೭. ಶಿವರುದ್ರಸ್ವಾಮಿ ಎಸ್.ಎನ್., ೨೦೧೦, ಈಜಿಪ್ಟಿನ್ ನಾಗರಿಕತೆ ಕೆಲವು ಟಿಪ್ಪಣಿಗಳು, ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೭, ಚಿನ್ನಸ್ವಾಮಿ ಎನ್ ಸೋಸಲೆ(ಸಂ.ಸಂ.), ಆಫ್ರಿಕಾ ಚರಿತ್ರೆಯ ವಿವಿಧ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೧-೧೭

೬೮. ರಂಗಸ್ವಾಮಯ್ಯ ಜಿ.ಆರ್. ಮತ್ತು ಶಿವಣ್ಣ, ೨೦೦೩, ಉತ್ತರ ಭಾರತ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ ೬೯-೭೯.

೬೯. ಅದೇ, ಪುಟ ೧೧೦-೧೧೫.

೭೦. ಪ್ರಭಾಕರರಾವ್ ಕೆ., ೨೦೧೦, ರಾಜ್ಯ ಪದ್ಧತಿಯ ಬೆಳವಣಿಗೆ-ಪ್ರಾರಂಭಿಕ ಮಧ್ಯಯುಗ, ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ-೨, ವಿಜಯ್ ಪೂಣಚ್ಚ ತಂಬಂಡ(ಸಂ.ಸಂ.), ಭಾರತ ಉಪಖಂಡದ ಆಧುನಿಕ ಪೂರ್ವಚರಿತ್ರೆ ವಿವಿಧ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೨೮೪.

೭೧. ಶ್ರೀನಿವಾಸಮೂರ್ತಿ ಎಚ್.ವಿ., ೨೦೧೦, ಗುಪ್ತರಿಂದ ಮೊಗಲರ ಕಾಲದವರೆಗೆ(ಅಕ್ಬರ್) ಕೆಲವು ಟಿಪ್ಪಣಿಗಳು, ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ. ಮತ್ತು ಸಂ.ಸಂ.), ಪೂರ್ವೋಕ್ತ, ಪುಟ ೩೩೬

೭೨. ಗುರುರಾಜಾಚಾರ್(ಅನು), ೧೯೯೪, ಲೋಥಲ್ ಮತ್ತು ಸಿಂಧೂ ನಾಗರಿಕತೆ, ಎಸ್.ಆರ್. ರಾವ್ (ಮೂಲ), ಪುಟ ೧೦೦-೧೧೫.

೭೩. ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪುಟ ೨೯.

೭೪. ವಿಜಯಲಕ್ಷ್ಮಿ, ೨೦೦೬, ಹಟ್ಟಿ ಚಿನ್ನದಗಣಿ: ಚಾರಿತ್ರಿಕ ಹಾಗೂ ಸಮಾಜೋ-ಆರ್ಥಿಕ ಅಧ್ಯಯನ, ಪುಟ ೧೫-೧೬.

೭೫. ವೆಂಕಟಸ್ವಾಮಿ ಎಂ., ೨೦೧೦, ಕೋಲಾರದ ಚಿನ್ನದ ಗಣಿಗಳು, ಪುಟ ೨೧-೩೨.

೭೬. ಮೌರ್ಯರು ಆಡಳಿತವನ್ನು ಕೇಂದ್ರ ಸರ್ಕಾರದಿಂದ ಮಾತ್ರ ನಿಯಂತ್ರಿಸದೆ ಆಡಳಿತದ ಅನುಕೂಲಕ್ಕಾಗಿ ಅನೇಕ ಪ್ರಾಂತ್ಯಗಳನ್ನಾಗಿ ವಿಭಜಿಸಿದ್ದರು. ಅಲ್ಲದೆ ಪ್ರತ್ಯೇಕವಾದ ಆಡಳಿತ ವ್ಯವಸ್ಥೆಯನ್ನು ರಚಿಸಿದ್ದರು.

ಈ ಪ್ರಾಂತ್ಯಗಳು ಒಬ್ಬ ರಾಜನಿಂದ ಮತ್ತೊಬ್ಬ ರಾಜನ ಕಾಲಕ್ಕೆ ವ್ಯತ್ಯಾಸಗಳಿದ್ದವು. ಚಂದ್ರಗುಪ್ತ ಮೌರ್ಯನ ಕಾಲದಲ್ಲಿದ್ದ ಪ್ರಾಂತಗಳ ಸಂಖ್ಯೆ ಬಗ್ಗೆ ಮಾಹಿತಿ ಇಲ್ಲ. ಆದರೆ ಅಶೋಕನ ಕಾಲದಲ್ಲಿ ತಕ್ಷಶಿಲೆ(ವಾಯುವ್ಯ ಪ್ರಾಂತ್ಯ), ಉಜ್ಜನಿ(ಪಶ್ಚಿಮ ಪ್ರಾಂತ್ಯ), ಪಾಟಲೀಪುತ್ರ(ಪೂರ್ವ ಪ್ರಾಂತ್ಯ), ಸುವರ್ಣಗಿರಿ(ದಕ್ಷಿಣ ಪ್ರಾಂತ್ಯ) ಎಂಬ ಪ್ರಾಂತ್ಯಗಳಿದ್ದವು. ಪ್ರಾಂತೀಯ ಆಡಳಿತ ಮುಖ್ಯಸ್ಥನನ್ನು 'ಕುಮಾರ' ಅಥವಾ ರಾಜ್ಯಪಾಲ ಎಂದು ಕರೆಯುತ್ತಿದ್ದರು. ಈ ರಾಜ್ಯಪಾಲರನ್ನಾಗಿ ಸಾಮಾನ್ಯವಾಗಿ ರಾಜ ಪರಿವಾರದವರನ್ನೇ ನೇಮಕ ಮಾಡಲಾಗುತ್ತಿತ್ತು. ಸ್ವಾತಂತ್ರ್ಯದ ಆಡಳಿತವು ಕೇಂದ್ರ ಸರ್ಕಾರದಂತೆ ಇದ್ದು, ಕೆಲವು ವಿಷಯಗಳಲ್ಲಿ ಸ್ವಯಂ ಆಡಳಿತ ಹೊಂದಿತ್ತು(ಮಂಜುನಾಥ ೨೦೧೦:೧೮೩-೧೮೪).

೭೭. ಲಕ್ಷ್ಮಣ್ ತೆಲಗಾವಿ, ೨೦೦೪, ಪೂರ್ವೋಕ್ತ, ಪುಟ ೪೬-೪೭.

೭೮. ಜಯತೀರ್ಥ ರಾಜಪುರೋಹಿತ, ೧೯೭೫, ಕನಕಗಿರಿ, ಪಿಬಿಎಚ್ ಪ್ರಕಾಶನ, ಬೆಂಗಳೂರು, ಪುಟ ೫,೭

೭೯. ಲಕ್ಷ್ಮಣ್ ತೆಲಗಾವಿ, ೨೦೦೪, ಪೂರ್ವೋಕ್ತ, ಪುಟ ೪೫.

೮೦. ಅದೇ, ಪುಟ ೪೫.

೮೧. ವಸು ಎಂ.ವಿ., ೨೦೦೨, ಕರ್ನಾಟಕದ ಸ್ವಾತಂತ್ರ್ಯ ಪೂರ್ವ ಇತಿಹಾಸ, ಬರಗೂರು ರಾಮಚಂದ್ರಪ್ಪ (ಪ್ರಸಂ.), ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಪುಟ ೮೩-೮೪.

೮೨. ಲಕ್ಷ್ಮಣ್ ತೆಲಗಾವಿ, ೨೦೦೪, ಪೂರ್ವೋಕ್ತ, ಪುಟ ೪೬

೮೩. ಜಯತೀರ್ಥ ರಾಜಪುರೋಹಿತ, ೧೯೭೫, ಪೂರ್ವೋಕ್ತ, ಪುಟ ೬

೮೪. ಮಂಜಪ್ಪ ಶೆಟ್ಟಿ ಮಸಗಲಿ, ೧೯೯೨, ಕರ್ನಾಟಕದಲ್ಲಿ ಅಶೋಕನ ಶಾಸನಗಳು, ಮಂಜಪ್ಪ ಶೆಟ್ಟಿ ಮಸಗಲಿ(ಸಂ), ತುಂಬಿದಕೊಡ, ಚಿಕ್ಕಮಗಳೂರು, ಪುಟ ೪೫೮-೪೬೫.

೮೫. ಲಕ್ಷ್ಮಣ್ ತೆಲಗಾವಿ, ೨೦೦೪, ಪೂರ್ವೋಕ್ತ, ಪುಟ ೪೩.

೮೬. ಅಮರೇಶ ಆಲ್ಕೋಡ, ೨೦೧೩, ರಾಯಚೂರು ದೋ-ಅಬ್ ಪ್ರದೇಶದ ವರ್ತಕ-ವ್ಯಾಪಾರ ಸಂಬಂಧಗಳು, ಪುಟ ೧೧.

೮೭. ಲಕ್ಷ್ಮಣ್ ತೆಲಗಾವಿ, ೨೦೦೪, ಪೂರ್ವೋಕ್ತ, ಪುಟ ೪೪೮.

೮೮. ಅದೇ, ಪುಟ ೨೯.

೮೯. ಮಂಜಪ್ಪಶೆಟ್ಟಿ ಮಸಗಲಿ, ೧೯೯೨, ಪೂರ್ವೋಕ್ತ, ಪುಟ ೪೫೩-೪೮೫.

೯೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೨೯, ಮಸ್ಕಿ-ಕ್ರಿ.ಪೂ. ३ನೆಯ ಶತಮಾನ, ಪುಟ ೧೬೧-೧೬೨.

೯೧. ಈ ಯುದ್ಧವನ್ನು ಕುರಿತು ನಾಗರಾಜರಾವ್, ೨೦೦೦, ಪೂರ್ವೋಕ್ತ, ಪುಟ ೨೪೨-೨೪೩, ಜಯಪ್ಪಗೌಡ ಡಿ.ಎಸ್. ೧೯೮೩, ಪೂರ್ವೋಕ್ತ, ಪುಟ ३೪३, ಹಾಗೂ ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-३೦, ಮಸ್ಕಿ-ಕ್ರಿ.ಶ. ೧೦३೭, ಪುಟ ೧೬೨-೧೬३, ಲಿಂಗಸೂಗೂರು-३೨, ಮಸ್ಕಿ-ಕ್ರಿ.ಶ.-೧೦೧೦, ಪುಟ ೧೬೫ರ ಶಾಸನಗಳನ್ನು ಗಮನಿಸಬಹುದು.

೯೨. ರಂಗಸ್ವಾಮಯ್ಯ ಜಿ.ಆರ್. ಮತ್ತು ಶಿವಣ್ಣ, ೨೦೦३, ಪೂರ್ವೋಕ್ತ, ಪುಟ ೨೬೬

೯३. ಮೋಹನ್‌ಕೃಷ್ಣ ರೈ ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪುಟ ೧೮.

೯೪. ಕ್ರಿಪೂ. ೨೫೦೦ ವರ್ಷಗಳಿಂದ ಕರ್ನಾಟಕದಲ್ಲಿ ಒಕ್ಕಲು ಸಂಸ್ಕೃತಿಗಳ ಹಂತವು ಕಾಣಿಸಿಕೊಳ್ಳುತ್ತದೆ. ಆದರೆ ಇದು ಕ್ರಿಪೂ. ೨೦೦೦ ವರ್ಷಗಳಿಂದ ಒಕ್ಕಲುತನವು ಪ್ರಗತಿಯಲ್ಲಿದ್ದುದಕ್ಕೆ ಬಹಳಮಟ್ಟಿಗೆ ಕಾರಣ ಇಲ್ಲಿ ಸಿಗುವ ಉತ್ತಮ ಖನಿಜಗಳು ಹಾಗೂ ಲೋಹಗಳ ಉತ್ಪಾದನೆಯ ತಂತ್ರಜ್ಞಾನದ ಸಂಪಾದನೆ. ಇಲ್ಲಿ ಒಕ್ಕಲುತನದ ಆರಂಭದ ವಿಳಂಬವನ್ನು ಆಗ ಮಾನವನು ಅಳವಡಿಸಿಕೊಂಡ ಜೀವನ ಕ್ರಮದಿಂದ ಅಳೆಯಬಹುದು. ಮಾನವನ ಮುಖ್ಯ ಸಂಪತ್ತು ದನಕರುಗಳಾಗಿದ್ದವು. ಹಸಿರು ಇರುವತನಕ ಒಂದು ಪ್ರದೇಶದಲ್ಲಿ ಇದ್ದು, ಹಸಿರು ಕಡಿಮೆಯಾದಂತೆಲ್ಲಾ ನೆರೆಹೊರೆಯ ಬೇರೆ ಪ್ರದೇಶಗಳಿಗೆ ತನ್ನ ದನಕರುಗಳ ಜೊತೆ ಹೋಗಿ ಮತ್ತೆ ಹಸಿರಾದಾಗ ಮೂಲ ನೆಲೆಗಳಿಗೆ ಮರಳಿ ಬರುತ್ತಿದ್ದುದು ಆಗಿನ ಸಾಮಾನ್ಯ ಜೀವನ ಕ್ರಮವಾಗಿತ್ತು. ಮೂಲ ನೆಲೆಗಳಿಂದ ಪ್ರತಿ ವರ್ಷ ವಲಸೆಹೋಗಿ ಮರಳಿ ಬರುವುದು ಸ್ವಲ್ಪ ಕಷ್ಟದಾಯಕ ಕೆಲಸವೇ ಆಗಿರಬೇಕು. ಇಂತಹ ಪರಿಸ್ಥಿತಿಯಲ್ಲಿ, ಒಕ್ಕಲುತನ ಒದಗಿಸಿಕೊಡುವ ಅನುಕೂಲತೆಗಳ ಅರಿವು ಆಗ ಮಾನವನಿಗೆ ಉಂಟಾಗಿ ಸುತ್ತಮುತ್ತಲು ಸಿಗುವ ಉತ್ತಮ ಖನಿಜಗಳಿಂದ ಲೋಹಗಳನ್ನು ತಯಾರಿಸಿ ಒಕ್ಕಲುತನಕ್ಕೆ ಹೆಚ್ಚಿನ ಕೌಶಲ್ಯವನ್ನು ತಂದುಕೊಂಡಿರಬೇಕು. ಹೀಗಾಗಿ ಹವಾಮಾನದಲ್ಲಿ ಆರ್ದ್ರತೆ ಕೆಲವೇ ಸಮಯವಿದ್ದರೂ ವರ್ಷದುದ್ದಕ್ಕೂ ಸಾಕಾಗುವಷ್ಟು ಕಾಳುಕಡಿ ಬೆಳೆಯುವ ಸಾಮರ್ಥ್ಯವನ್ನು ಕ್ರಮೇಣ ಸಂಪಾದಿಸಬಹುದೆನ್ನಬಹುದು. ಹೀಗಾಗಿ ಒಕ್ಕಲುತನ ಹೆಚ್ಚಿಸಿ ಪಾತ್ರವಹಿಸಿ ಮಾನವನು ದೊಡ್ಡ ಪ್ರಮಾಣದಲ್ಲಿ ಬೇಸಾಯದಲ್ಲಿ ತೊಡಗಿದುದನ್ನು ಊಹಿಸಬಹುದು. ಲೋಹಗಳ ಉಪಯೋಗ ಹೋಲೋಸೀನ್ ಕಾಲದ ಜನಸಮುದಾಯಗಳಲ್ಲಿ ಆಗಲೇ ಸಾಕಷ್ಟು ಪ್ರಚಲಿತವಾಗಿತ್ತು. ದನಕರುಗಳನ್ನೇ ಅವಲಂಬಿಸಿ ಆರಂಭವಾದ ನವಶಿಲಾಯುಗವು ಖನಿಜಗಳಿಂದ ಉತ್ಪಾದಿತ ಲೋಹಗಳಿಂದ ಉಪಲಭಿಸಿದ ಪೂರ್ಣಪ್ರಮಾಣದ ಬೇಸಾಯ ಮಟ್ಟವನ್ನು ಮುಟ್ಟುವ ನವಶಿಲಾಯುಗದ ಬೆಳವಣಿಗೆಯಲ್ಲಿ ಮೂರು ಪ್ರಮುಖ ಘಟ್ಟಗಳಿವೆ. ಈ ನೆಲೆಗಳ ಭೌಗೋಳಿಕ ಸ್ಥಾನ ಹಾಗೂ ಕಾಲಾನುಕ್ರಮಣಿಕೆಗಳನ್ನು ಗಣನೆಗೆ ತೆಗೆದುಕೊಂಡಾಗ ನವಶಿಲಾಯುಗದ ಹಾಗೂ ನಂತರ ಉದಯಿಸಿದ ಸಂಸ್ಕೃತಿಗಳ ತಾಂತ್ರಿಕ ಬೆಳವಣಿಗೆಗಳನ್ನು ತಂದುಕೊಂಡ ಸಂಪನ್ಮೂಲಗಳ ಕ್ಷೇತ್ರಗಳಿಗೆ ಹೊಂದಿಕೊಂಡೇ ಇರುವುದನ್ನು ಕಾಣಬಹುದು. ನವಶಿಲಾಯುಗದ ಪ್ರಥಮ ಘಟ್ಟದ ನೆಲೆಗಳಲ್ಲಿ ಪಿಕ್ಲಿಹಾಳ ಆದಿ ಹಂತ(ರಾಯಚೂರು ಜಿಲ್ಲೆ) ಇದೆ. ಈ ಹಂತದಿಂದಲೇ ಒಕ್ಕಲುತನವನ್ನು ಒಳಗೊಂಡ ಜೀವನ ವ್ಯವಸ್ಥೆಯ ಕುರುಹುಗಳಿವೆ. ತಾಮ್ರ ಯುಗದಲ್ಲಿನ ತಾಮ್ರದ ಬಳಕೆಯನ್ನು ಖಚಿತ ಪಡಿಸಲು ಕಲ್ಲೂರಿನಲ್ಲಿ(ರಾಯಚೂರು ಜಿಲ್ಲೆ) ಕಂಡುಬಂದ ತಾಮ್ರ ಖಡ್ಗಗಳ ಸಂಕಲನ ಮತ್ತು ಗಂಗಾನದಿಕೊಳ್ಳದಲ್ಲಿ ಕಂಡುಬರುವ ತಾಮ್ರದ ಉಪಕರಣಗಳ ನಡುವೆ ಸಾಮ್ಯತೆ ಇದೆ. ಇದು ಉತ್ತರ ಭಾರತ ಹಾಗೂ ಡೆಕ್ಕನ್ ಪ್ರದೇಶಗಳ ಅದರಲ್ಲಿ ರಾಯಚೂರು ದೋ-ಅಬ್ ಪ್ರದೇಶದ ನಡುವಿನ ಸಂಬಂಧವನ್ನು ಅರಿಯಲು ಸಹಾಕಾರಿಯಾಗಿದೆ. ಇದು ಕ್ರಿಪೂ. ೨೦೦೦ ವರ್ಷಗಳ ಕಾಲಕ್ಕೆ ಸೇರಿದೆ. ಇದೇ ಪ್ರಕಾರದಲ್ಲಿ ಕಬ್ಬಿಣಯುಗದ ಬೃಹತ್‌ಶಿಲಾ ನೆಲೆಗಳ ಭೌಗೋಳಿಕ ಸ್ಥಾನಮಾನಗಳು ಕಬ್ಬಿಣ ಅದಿರಿನ ನಿಕ್ಷೇಪಗಳ ಸಮೀಪ ಬೃಹತ್ ಶಿಲಾಗೋರಿಗಳನ್ನು ಕಟ್ಟಲು ಅನುಕೂಲವಾಗುವ ಬಂಡೆಕಲ್ಲುಗಳ ಲಭ್ಯತೆ ಹಾಗೂ ಉಳುಮೆಗೆ ಯೋಗ್ಯವಾದ ಭೂಮಿ ಇವುಗಳಿಂದ ನಿರ್ಣಯಿತವಾಗಿವೆ. ಈ ಪ್ರದೇಶದ ಅನೇಕ ನೆಲೆಗಳಲ್ಲಿ ನವಶಿಲಾಯುಗ ಜನರಿಂದಲೇ ವಾಸ್ತವ್ಯವು ಆರಂಭವಾಗಿ ನಿರಂತರವಾಗಿ ಮುಂದುವರೆಯಿತು. ಇದಕ್ಕೆ ಮಸ್ಕಿಯಲ್ಲಿರುವ ಕಲ್ಗೋರಿಗಳು ಮತ್ತು ಅಲ್ಲಿ ದೊರೆತ ಕಬ್ಬಿಣದ ಈಟಿ, ಭರ್ಚಿ ಮುಂತಾದವುಗಳು ಈ ಪ್ರದೇಶದಲ್ಲಿ ಕೃಷ್ಣ ಸಂಸ್ಕೃತಿ ವಿಸ್ತರಣೆಗೊಂಡಿರುವುದಕ್ಕೆ ಸಾಕ್ಷಿಗಳಾಗಿ ಕಂಡುಬರುತ್ತವೆ(ರವಿಕೋರಿ ಶೆಟ್ಟರ್ ೧೯೯೭: ೬೮-೮೦). ಈ ವಿಚಾರದ ಆಧಾರದ ಮೇಲೆ ಈ ಪ್ರದೇಶದಲ್ಲಿ ಕೃಷಿ ವಿಸ್ತರಣೆ ಕಾರ್ಯ ನವಶಿಲಾಯುಗದ ಕಾಲದಿಂದಲೂ ನಡೆಯುತ್ತ ಬಂದಿದೆ. ರಾಜಕೀಯ ಸಂಘರ್ಷಗಳ ಹಿನ್ನೆಲೆಯಲ್ಲಿ ನಡೆದ ವಿಸ್ತರಣೆ ಕಾರ್ಯಕ್ಕೂ ಸಾಂಪ್ರದಾಯಿಕವಾಗಿ ವಿಸ್ತರಣೆಗೊಳ್ಳುತ್ತಾ ಬಂದಿರುವ ಕಾರ್ಯಕ್ಕೆ ವ್ಯತ್ಯಾಸಗಳಿವೆ. ಪ್ರಭುತ್ವ

ರಾಜ್ಯಾದಾಯಕ್ಕೆ ಕೃಷಿ ವಿಸ್ತರಣೆ ಸಾಂಪ್ರದಾಯಿಕ ವಿಸ್ತರಣೆ, ಜೀವನೋಪಾಯಕ್ಕಾಗಿ ಕೃಷ್ಣ ವಿಸ್ತರಣೆ ಕಾರ್ಯ ನಡೆಯಿತೆಂದು ಹೇಳಬಹುದಾಗಿದೆ.

೯೫. ಕಬ್ಬಿಣದ ಬೃಹತ್ ಶಿಲಾಸಂಸ್ಕೃತಿ ಯುಗದ ಮಾನವರು ಮೃತರಾದ ನಂತರ ದ್ವಿತೀಯ ಹಂತದಲ್ಲಿ ಶವಸಂಸ್ಕಾರ ಮಾಡಿರುವ ಅಸ್ಥಿಪಂಜರಗಳು ಇಲ್ಲಿವೆ. ಇವು ಸುಮಾರು ಮೂರುಸಾವಿರ ವರ್ಷಗಳಷ್ಟು ಪುರಾತನವಾಗಿದೆ. ಕಬ್ಬಿಣದ ಬೃಹತ್ ಶಿಲಾ ಸಂಸ್ಕೃತಿಯುಗ, ನೂತನ ತಾಮ್ರ ಶಿಲಾಯುಗ, ಇತಿಹಾಸದ ಆರಂಭಿಕ ಯುಗ ಹಾಗೂ ಮಧ್ಯಯುಗ ಎಂದು ನಾಲ್ಕು ಯುಗಗಳಲ್ಲೂ ಮಸ್ಕಿಯ ಈ ಗುಡ್ಡದಲ್ಲಿ ಜನವಾಸಿಸುತ್ತಿದ್ದರು ಎಂಬುದಕ್ಕೆ ದಾಖಲೆಗಳಿವೆ. ಇಲ್ಲಿ ಮೂರು ರೀತಿಯಲ್ಲಿ ಶವಸಂಸ್ಕಾರ ಮಾಡಲಾಗಿದೆ. ಮಡಿಕೆಯಲ್ಲಿ ಶವ ಸಂಸ್ಕಾರ, ವೃತ್ತಾಕಾರದಲ್ಲಿ ತಗ್ಗು ತೋಡಿ ಮೂರು, ನಾಲ್ಕು ಶವಗಳನ್ನು ಇಡುವುದು ಹಾಗೂ ನಿಲ್ಸಗಲ್ಲು ಶವಸಂಸ್ಕಾರ ಮಾಡಿರುವುದು ಸಂಶೋಧನೆಗಳಿಂದ ಕಂಡು ಬಂದಿದೆ ಎಂದು ಡಾ. ಆರ್.ಎಂ. ಷಡಕ್ಷರಯ್ಯ ಹೇಳಿದ್ದಾರೆ(ಪ್ರಜಾವಾಣಿ ೧೯.೮.೨೦೧೨, ಭಾನುವಾರ, ಹುಬ್ಬಳ್ಳಿ-ಧಾರವಾಡ, ಪುಟ ೩).

೯೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು ತಾಲೂಕು-ಮಸ್ಕಿ(೩೩), ಕ್ರಿ.ಶ. ೧೦೩೨ರ ಶಾಸನ, ಪುಟ ೧೬೬ರಲ್ಲಿ ಈ ಪ್ರದೇಶದ ವಿವಿಧ ಬಗೆಯ ಕೃಷಿ ಚಟುವಟಿಕೆಗಳನ್ನು ವಿವರಿಸಲಾಗಿದೆ. ಬಹುತೇಕವಾಗಿ ಇಲ್ಲಿನ ಶಾಸನಗಳಲ್ಲಿ ಕೃಷಿ ಭೂಮಿಯನ್ನು ಕುರಿತು ಉಲ್ಲೇಖಿಸಿರುವುದು ಕಂಡುಬರುತ್ತದೆ.

೯೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ದೇವದುರ್ಗ-ಗಬ್ಬೂರು(೬) ಕ್ರಿ.ಶ. ೧೧೪೯ರ ಶಾಸನ, ಪುಟ ೫೭.

೯೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ರಾಯಚೂರು-೫೮, ದೇವಸೂಗೂರು-ಕ್ರಿ.ಶ. ೧೦೨೨ರ ಶಾಸನ, ಪುಟ ೪.

೯೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಸಿಂಧನೂರು-೨೪, ಹಿರೇಬೇರಿಗೆ-ಕ್ರಿ.ಶ. ೧೧೦೦ರ ಶಾಸನ, ಪುಟ ೩೮೩.

೧೦೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಸಿಂಧನೂರು-೨೦, ಮುಕ್ಕುಂದಿ ಕ್ರಿ.ಶ. ೧೦೬೬ರ ಶಾಸನ, ಪುಟ ೩೭೬

೧೦೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಲಿಂಗಸೂಗೂರು-೪೫, ಮಸ್ಕಿ- ಕ್ರಿ.ಶ. ೧೦೨೭ರ ಶಾಸನ, ಪುಟ ೧೭೯.

೧೦೨. ದೇವರಕೊಂಡಾರೆಡ್ಡಿ(ಸಂ), ಸಿಂಧನೂರು-೧೯, ಮುಕ್ಕುಂದಿ-ಕ್ರಿ.ಶ. ೧೬೪೬ರ ಶಾಸನ, ಪುಟ ೩೭೫.

೧೦೩. ದೇವರಕೊಂಡಾರೆಡ್ಡಿ(ಸಂ), ಮಾನ್ವಿ-೯೧, ಬಲ್ಲಟಗಿ-ಕ್ರಿ.ಶ. ೧೦೩೧ರ ಶಾಸನ, ಪುಟ ೩೦೮.

೧೦೪. ದೇವರಕೊಂಡಾರೆಡ್ಡಿ(ಸಂ), ದೇವದುರ್ಗ-೨, ಗಬ್ಬೂರು-ಕ್ರಿ.ಶ. ೧೧೦೩ರ ಶಾಸನ, ಪುಟ ೪೭.

೧೦೫. ಗುರುರಾಜಾಚಾರ್ ಎಸ್.(ಅನು), ಲೋಥಲ್ ಮತ್ತು ಸಿಂಧೂನಾಗರಿಕತೆ, ಎಸ್.ಆರ್. ರಾವ್(ಮೂಲ), ಪುಟ ೨೦೫.

೧೦೬. ನರಸಿಂಹಮೂರ್ತಿ ಎಂ.ವಿ. ೨೦೦೩, ಕರ್ನಾಟಕ ನಾಣ್ಯ ಪರಂಪರೆ, ಪುಟ ೩೩೦ರಲ್ಲಿ ರಾಯಚೂರು ಜಿಲ್ಲೆಯಲ್ಲಿ ಚಿನ್ನದ ನಾಣ್ಯ ದೊರೆತ ಉಲ್ಲೇಖವಿದೆ.

೧೦೭. ನಾಗೇಗೌಡ ಎಚ್.ಎಲ್, ೨೦೦೬, ಪ್ರವಾಸಿ ಕಂಡ ಇಂಡಿಯಾ–೧, ಪುಟ ೧೦೭ರಲ್ಲಿ ಈ ವಿಚಾರವಾಗಿ ಗಮನ ಸೆಳೆದ ಪ್ರಯತ್ನ ನಡೆದಿದೆ.

೧೦೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೩೪, ಮಸ್ಕಿ, ಕ್ರಿ.ಶ. ೧೦೧೮ರ ಶಾಸನ, ಪುಟ ೧೬೭ರ ಮೂಲಕ ವ್ಯಾಪಾರದ ಕುರುಹುಗಳು ಆರಂಭವಾಗುತ್ತವೆ.

೧೦೯. ಮೋಹನ್‌ಕೃಷ್ಣ ರೈ ಕೆ., ೨೦೦೪, ಪೂರ್ವೋಕ್ತ, ಪುಟ ೧೯.

೧೧೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ದೇವದುರ್ಗ–೨, ಗಬ್ಬೂರು. ಕ್ರಿ.ಶ. ೧೧೦೩ರ ಶಾಸನ, ಪುಟ ೪೭.

೧೧೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಮಾನ್ವಿ–೭೨, ಕಲ್ಲೂರು–ಕ್ರಿ.ಶ. ೧೧೩೪ರ ಶಾಸನ, ಪುಟ ೨೯೩.

೧೧೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು–೩, ಯಲಗಲದಿನ್ನಿ, ಮಸ್ಕಿ–ಕ್ರಿಶ ೧೧೨೨ರ ಶಾಸನ, ಪುಟ ೧೨೭ ಹತ್ತಿ, ಹಾಗೂ ಲಿಂಗಸೂಗೂರು–೩೩, ಮಸ್ಕಿ– ಕ್ರಿ.ಶ. ೧೦೩೨ರ ಶಾಸನ, ಪುಟ ೧೬೬ ಎಣ್ಣೆಕಾಳು, ಲಿಂಗಸೂಗೂರು–೬ ಕರಡಕಲ್–೧೦೭೮ರ ಶಾಸನ, ಪುಟ ೧೩೬, ಧಾನ್ಯಗಳು, ದೇವದುರ್ಗ–೧೩, ಗಬ್ಬೂರು ಕ್ರಿ.ಶ. ೧೧೪೪ರ ಶಾಸನ, ಪುಟ–೭೧, ಜೋಳ ಮತ್ತು ಭತ್ತ, ಇನ್ನೂ ಮುಂತಾದವುಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ದೇವದುರ್ಗ–೨೯, ನಿಲುವಂಜಿ ಕ್ರಿ.ಶ.೧೧೭೭ರ ಶಾಸನ, ಪುಟ ೯೪–ಗೋಧಿ ಮುಂತಾದವುಗಳಾಗಿವೆ.

೧೧೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೩೪ ಗೋರ್ಕಲ್ಲು ಕ್ರಿ.ಶ.೧೬೧೬ರ ಶಾಸನ, ಪುಟ೨೫೩,

೧೧೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧೂನೂರು–೧೯, ಮುಕ್ಕುಂದಿ–ಕ್ರಿ.ಶ.೧೬೪೬ರ ಶಾಸನ, ಪುಟ ೩೭೫ ಹಾಗೂ ಮಾನ್ವಿ–೬೩, ಕಲ್ಲೂರು– ಕ್ರಿ.ಶ.೧೬೫೨ರ ಶಾಸನ, ಪುಟ ೨೮೨. ಈ ಎರಡು ಶಾಸನಗಳು ಹೊಲಗಳನ್ನು ಪಾಲಿಗೆ ಮಾಡುವ ಪದ್ಧತಿಯನ್ನು ಕುರಿತು ತಿಳಿಸುತ್ತವೆ.

೧೧೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೭೧, ಅತ್ತನೂರು–ಕ್ರಿ.ಶ. ೧೭ನೆಯ ಶತಮಾನದ ಶಾಸನ, ಪುಟ ೨೯೨ರಲ್ಲಿ ಈ ವಿಚಾರ ವ್ಯಕ್ತವಾಗಿದೆ.

೧೧೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೩೪, ಗೋರ್ಕಲ್ಲು ಕ್ರಿ.ಶ. ೧೬೧೬ರ ಶಾಸನದಲ್ಲಿ ಪುಟ ೨೫೩ರಲ್ಲಿ ಬೀಳುಬಿದ್ದ ಹೊಲಗಳನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವುದಕ್ಕೆ ಅಳವಡಿಸಿಕೊಂಡಿದ್ದ ಪದ್ಧತಿಗಳನ್ನು ಉಲ್ಲೇಖಿಸಲಾಗಿದೆ.

೧೧೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೧೫, ಮುಕ್ಕುಂದಿ–ಕ್ರಿ.ಶ. ೧೫೬೧ರ ಶಾಸನದಲ್ಲಿ ಗಡಿಗಳನ್ನು ಗುರುತಿಸಿ ಸಾಗುವಳಿಗೆ ನೀಡುವ ಕ್ರಮದ ಬಗ್ಗೆ ಉಲ್ಲೇಖವಿದೆ. ಪುಟ ೩೭೧.

೧೧೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು–೩೬, ಮಸ್ಕಿ–ಕ್ರಿ.ಶ. ೧೫೩೭ರ ಶಾಸನ, ಪುಟ ೧೭೦ರಲ್ಲಿ ಇಕ್ಕಳದ ಉಲ್ಲೇಖವಿದೆ.

೧೧೯. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು–೭, ಗುಂಜಹಳ್ಳಿ– ಕ್ರಿ.ಶ. ೧೬೪೭ರ ಶಾಸನ, ಪುಟ ೮ರಲ್ಲಿ ವಕ್ಕಳ ಯರೆಹೊಲದ ಉಲ್ಲೇಖ ಬರುತ್ತದೆ.

೧೨೦. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು–೯, ಮಲಿಯಾಬಾದ್–ಕ್ರಿ.ಶ. ೧೫೫೩ರ ಶಾಸನ, ಪುಟ ೧೧ರಲ್ಲಿ ಮಲಿಕ್ ಅಂಬರ್ ಎಂಬುವವನು ಕೃಷಿಕರಿಗೆ ಕಡಿಮೆ ತೆರಿಗೆಯನ್ನು ಹಾಕಿದ್ದನು.

ಜೊತೆಗೆ ಬಿಟ್ಟಿ ಕೆಲಸವನ್ನು ಯಾರಿಂದಲೂ ಮಾಡಿಸಬಾರದೆಂದು ಸಾಮಾಜಿಕ ಪ್ರಜ್ಞೆಯನ್ನು ಮೆರೆದವನಾಗಿದ್ದನೆನಿಸುತ್ತದೆ.

೧೨೧. ಗಲಗು ಮತ್ತು ರಾಯದುರ್ಗದ ಸೀಮೆಯಲ್ಲಿ ಯಾರೂ ದಂಡವನ್ನು ತೆಗೆದುಕೊಳ್ಳಬಾರದೆಂದು ನ್ಯಾಯದಿಂದ ಕೊಡಬೇಕೆಂದೂ ಕಟ್ಟಳೆ ವಿಧಿಸಿದೆ. ಇದನ್ನು ಗಮನಿಸಿದರೆ ತೆರಿಗೆ ಕೊಡುವವರು ಮತ್ತು ವಸೂಲಿ ಮಾಡುವವರ ಮಧ್ಯದಲ್ಲಿ ತೆರಿಗೆ ವಿಚಾರವಾಗಿ ಅಶಾಂತಿ ಉಂಟಾಗಿರಬೇಕು. ರೈತರು ಪ್ರತಿಭಟನೆಯನ್ನು ತೋರಿರಬೇಕೆನಿಸುತ್ತದೆ. ಈ ಅಂಶಗಳ ಹಿನ್ನೆಲೆಯಲ್ಲಿ ಶಾಸನ ಹಾಕಿಸಿದಂತೆ ಕಾಣುತ್ತದೆ. ದೇವದುರ್ಗ–೩೫, ಗಲಗ–ಕ್ರಿ.ಶ. ೧೭೬೮ರ ಶಾಸನ, ಪುಟ ೧೦೩ರಲ್ಲಿ ಈ ಮೇಲಿನಂತೆ ಉಲ್ಲೇಖವಿದೆ. ಅರಸರ ಉಲ್ಲೇಖವಿಲ್ಲ. ಬಹುಶಃ ಆದಿಲ್‌ಷಾಹಿಗಳಿಗೆ ಸೇರಿರಬೇಕು.

೧೨೨. ಕನ್ನಡ ಭಾಷೆ ಹೆಚ್ಚಾಗಿ ಉರ್ದುಮಯವಾಗಿದೆ. ಗಬ್ಬೂರ ಹೊಲದ ಬೆಳೆಯಲ್ಲಿನ ಬೆಳೆ ಪಾಲನ್ನು ಮಾಫು ಮಾಡಿದಂತೆ ತಿಳಿಯುತ್ತದೆ. ಇದು ೧೭ನೆಯ ಶತಮಾನದ್ದಾಗಿದೆ. ಈ ಒಂದು ಬೆಳವಣಿಗೆಯು ಕೃಷಿ ವಿಸ್ತರಣೆ ಕಾರ್ಯಕ್ಕೆ ಪೂರಕವಾಗಿದೆ. ಕೃಷಿಕರ ಮೇಲಿನ ಕನಿಕರವನ್ನು ವ್ಯಕ್ತಪಡಿಸಿರುವ ಶಾಸನ ಇದಾಗಿದೆ. ದೇವದುರ್ಗ–೧೪, ಗಬ್ಬೂರು–ಕ್ರಿ.ಶ.೧೭ನೆಯ ಶತಮಾನದ ಶಾಸನ, ಪುಟ ೭೩ರಲ್ಲಿ ಉಲ್ಲೇಖಿಸಲಾಗಿದೆ.

೧೨೩. ಈ ಮೂಲಕ ಕೃಷಿ ವಿಸ್ತರಣೆಗೆ ಹೆಚ್ಚಿನ ಅವಕಾಶ ದೊರೆಯಿತು. ಜನಸಂಖ್ಯೆಯ ಒತ್ತಡವನ್ನು ನಿಯಂತ್ರಿಸುವ ತಂತ್ರಗಾರಿಕೆ ಇದಾಗಿದೆ. ಅಲ್ಲದೆ ಹಣಕಾಸಿನ ಕ್ರೋಢೀಕರಣ ಹೆಚ್ಚಿಸಿಕೊಳ್ಳಲು ಅನುಸರಿಸಿದ ಪದ್ಧತಿ ಇದಾಗಿದೆ. ಜನರಲ್ ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಸೆವರಲ್ ಪ್ರೆಸಿಡೆನ್ಸಿಸ್ ಅಂಡ್ ಪ್ರಾವಿನ್ಸ್‌ಸ್ ಆಫ್ ಬ್ರಿಟಿಶ್ ಇಂಡಿಯಾ– ಸಂಪುಟ–೧, ೧೮೫೮–೫೯, ಕಲ್ಕತ್ತ–೧೮೬೦.

೧೨೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಸಿಂಧನೂರು–೧೯, ಮುಕ್ಕುಂದಿ ಕ್ರಿ.ಶ. ೧೬೪೬ರ ಶಾಸನ, ಪುಟ ೩೭೫ರಲ್ಲಿ ಕೆರೆಗಳ ಉಲ್ಲೇಖವಿದೆ.

೧೨೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೧೮, ಮುಕ್ಕುಂದಿ–ಕ್ರಿ.ಶ. ೧೬೦೨ರ ಶಾಸನ, ಪುಟ ೩೭೪ರಲ್ಲಿ ಕಾಡಾರಂಭ ಮತ್ತು ನೀರಾರಂಭ ಎಂಬವುಗಳ ಉಲ್ಲೇಖಗಳಿವೆ.

೧೨೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೧, ರೌಡಕುಂದಿ–ಕ್ರಿ.ಶ.೧೦೫೩ರ ಶಾಸನ, ಪುಟ ೩೪೪ರಲ್ಲಿ ಸಾಮಂತ ಅರಸನಾದ ಸಿಂಧವಂಶದ ಕಣ್ಣರಸನು ದಿದ್ದಿಗೆಯ ಕರೆಯ ಕೆಳಗೆ ಇರುವ ಕಣೇಶ್ವರ ದೇವರಿಗೆ ರೌಡಕುಂದಿಯ ದಕ್ಷಿಣದ ಹಾಲಾರಿಹಳ್ಳದ ಉತ್ತರಕ್ಕೆ ೨೫ ಮತ್ತರು ಕರಿಯ ನೆಲವನ್ನು ಮಂಡಲಗಾವನ ಘಳೆಯಲ್ಲಿ ಅಳೆದು ನೀಡುತ್ತಾನೆ ಎಂಬುದಾಗಿ ತಿಳಿದುಬರುತ್ತದೆ.

೧೨೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೯೫, ಬಲ್ಲಟಗಿ–ಕ್ರಿ.ಶ. ೧೦೫೮ರ ಶಾಸನ, ಪುಟ ೩೧೨ರಲ್ಲಿ ಕೆರೆಯ ಉಲ್ಲೇಖವಿದೆ.

೧೨೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೪, ಸಾಲಗಂದೆ–ಕ್ರಿ.ಶ. ೧೦೬೩ರ ಶಾಸನ, ಪುಟ ೩೫೦.

೧೨೯. ಮೋಹನ್‌ಕೃಷ್ಣ ರೈ ಕೆ., ೨೦೦೯, ಚರಿತ್ರೆ ಕಥನ, ಪುಟ ೧೮೮ರಲ್ಲಿ ದಾನದ ಪರಿಕಲ್ಪನೆಯನ್ನು ಕುರಿತು ವಾಸ್ತವದ ನೆಲೆಗಟ್ಟಿನಲ್ಲಿ ಚರ್ಚೆಗೊಳಪಡಿಸಿರುವುದು ಕಂಡುಬರುತ್ತದೆ.

೧೩೦. ಶ್ರೀಮತಿ ಎಚ್.ಎಸ್.(ಅನು), ೨೦೧೨, ಪ್ರಾಚೀನ ಭಾರತದ ಚರಿತ್ರೆ–ಡಿ.ಡಿ. ಕೊಸಾಂಬಿಯವರ ಚಿಂತನೆಗಳು, ಕೆ.ಬಾಲಗೋಪಾಲ್(ಮೂಲ), ಪುಟ ೧೮೪.

೧೩೧. ಮೋಹನ್‌ಕೃಷ್ಣ ರೈ ಕೆ., ೨೦೦೯, ಪೂರ್ವೋಕ್ತ, ಪುಟ ೨೦ರಲ್ಲಿ ದಾನ ನೀಡುವುದರಲ್ಲಿಯೂ ವೈದಿಕ ಹಿನ್ನೆಲೆಯಿಂದ ಬಂದ ವರ್ಣಾಶ್ರಮ ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಇದರಿಂದಾಗಿ ದಾನ ನೀಡುವುದು ಇದ್ದ ವ್ಯವಸ್ಥೆಯನ್ನು ಯಥಾಪ್ರಕಾರ ಕಾಯ್ದುಕೊಂಡು ಹೋಗಲು ನೀಡಿದ ಲಂಚದ ರೀತಿಯಲ್ಲಿ ಕಂಡುಬರುತ್ತದೆ.

೧೩೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೧, ಇಡಪನೂರು-ಕ್ರಿ.ಶ. ೧೧೨ರ ಶಾಸನ, ಪುಟ ೨.

೧೩೩. ಸೋಮಲಾದೇವಿಯ ಉಲ್ಲೇಖ ಬಲ್ಲಟಗಿ(೮೧)-೧೦೨೮ರ ಶಾಸನದಲ್ಲಿ ಕಂಡುಬರುತ್ತದೆ. ಈಕೆ ಹೆಗ್ಗಡೆ ಕಕ್ಕಪಯ ಎಂಬುವವನು ಎಡದೊರೆ-೨೦೦೦ದ ಬಲ್ಲಟಗಿಯಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿದಾಗ ಭೂಮಿಯನ್ನು ದಾನ ಮಾಡಿದಳು. ಅಲ್ಲದೆ ಮಸ್ಕಿಯ ಬಸದಿಗೆ ೫೦ ಮತ್ತರು ಭೂಮಿ, ಅಕಡಿ ಮತ್ತರು-೫೦, ಗಾಣ, ಹೂವಿನ ತೋಟವನ್ನು ದಾನ ನೀಡುತ್ತಾಳೆ. ಇದು ಮಸ್ಕಿ(೪೫)-ಕ್ರಿ.ಶ.೧೦೨೭ ಶಾಸನದಿಂದ ತಿಳಿದುಬರುತ್ತದೆ. ದೇವರಕೊಂಡಾರೆಡ್ಡಿ(ಸಂ) ೨೦೦೩, ಬಲ್ಲಟಗಿ-(೮೧)-೧೦೨೮ರ ಶಾಸನದಿಂದ ತಿಳಿದುಬರುವ ಸಂಗತಿ.

೧೩೪. ಈಕೆಯ ಉಲ್ಲೇಖ ಮಾನ್ವಿ ತಾಲೂಕಿನ ಸುಂಕನೂರು(೪೦)-೧೦೩೨ ಶಾಸನ ಹಾಗೂ ತಡಕಲ್ ಅಗ್ರಹಾರದಲ್ಲಿ ದೇವಾಲಯಕ್ಕೆ ಭೂದಾನ ಮಾಡಿದಳೆಂದು ತಡಕಲ್(೧೬)-೧೦೩೩ ಶಾಸನದಿಂದ ತಿಳಿದುಬರುತ್ತದೆ. ದೇವರಕೊಂಡಾರೆಡ್ಡಿ (ಸಂ), ೨೦೦೩, ಮಾನ್ವಿ-೧೬, ತಡಕಲ್-೧೦೩೩ರ ಶಾಸನ, ಪುಟ ೨೩೮-೩೯.

೧೩೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೫, ಬಲ್ಲಟಗಿ-ಕ್ರಿ.ಶ.೧೦೫೮ರ ಶಾಸನ, ಪುಟ ೩೧೨ರಲ್ಲಿ ಈಕೆ ಕಾಡಲೂರು ಸಂಗಮದಲ್ಲಿ ಸ್ನಾನ ಮಾಡಿದ್ದಕ್ಕಾಗಿ ಎಡೆದೊರೆ-೨೦೦೦ದ ಮೊಸಳಿಕಲ್ಲು-೩೦೦ರ ಭತ್ತಗ್ರಾಮ ಬಲ್ಲಟಗಿಯಲ್ಲಿ ದಾನ ಬಿಡುತ್ತಾಳೆ.

೧೩೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೦, ಬಲ್ಲಟಗಿ-ಕ್ರಿ.ಶ.೧೦೦೨ರ ಶಾಸನ, ಪುಟ ೩೦೭, ಚಾಲುಕ್ಯ ಎರಡನೆಯ ಜಯಸಿಂಹನ ಆಳ್ವಿಕೆಯ ಕಾಲದ್ದಾಗಿದ್ದು. ಚಕ್ರವರ್ತಿಯ ರಾಣಿ ಮಹಾದೇವಿ ಪುವ್ವರ ಹಳ್ಳಿಯ ಬೀಡಿನಲ್ಲಿದ್ದಾಗ, ತಂತ್ರಪಾಳ ಮಲ್ಲಯ್ಯನು ಬಲ್ಲಟಗಿಯಲ್ಲಿ ಪ್ರತಿಷ್ಠಾಪಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ-೩೦೦ ಮನ್ನೆಯ ಲೋಕಾದಿತ್ಯನಿಂದ ಭೂಮಿಯನ್ನು ಪಡೆದು ದಾನ ಬಿಡುತ್ತಾಳೆ.

೧೩೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೫೫, ಕಪಗಲ್-ಕ್ರಿ.ಶ.೧೦೬೯ರ ಶಾಸನ, ಪುಟ ೨೭೫ರಲ್ಲಿ ಈಕೆ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭುವನೈಕಮಲ್ಲನು ಕೆರೆಯೂರು ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಇವನ ಹೆಂಡತಿ ಪಂಪಾದೇವಿ ಮೊಸಳಿಕಲ್ಲು-೩೦೦ರ ಬಳಿಯಿರುವ ಗೋರಿಕಲ್ಲು-೧೨ರ ಕಪಗಲ್ ಗ್ರಾಮದ ಭೋಗೇಶ್ವರ ದೇವರಿಗೆ-೯ ಮತ್ತರು, ಮಠಕ್ಕೆ-೪ ಮತ್ತರು, ಬಾವಿಗೆ ೫ ಮತ್ತರು, ನಂದಾದೀವಿಗೆ ೬ ಮತ್ತರು, ಒಟ್ಟು ೨೪ ಮತ್ತರು ಮತ್ತು ಒಂದು ಗಾಣವನ್ನು ದಾನ ನೀಡಿದ್ದಾಳೆ ಎಂದಿದೆ.

೧೩೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮೦, ಬಲ್ಲಟಗಿ-ಕ್ರಿ.ಶ. ೧೧೦೬ರ ಶಾಸನ, ಪುಟ ೩೦೦ರಲ್ಲಿ ಚಂದಲಾದೇವಿ ಬ್ರಹ್ಮಪುರಿಯ ಹೊಲ್ಲಿಮಯ್ಯ ಹಾಗೂ ಮಲ್ಲಯ್ಯಗೆ ಬಲ್ಲಟಗಿಯಲ್ಲಿ ಭೂಮಿ ಹಾಗೂ ನಿವೇಶನ ನೀಡಿದ ಬಗ್ಗೆ ತಿಳಿದುಬರುತ್ತದೆ.

೧೩೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೧, ಲಿಂಗಸೂಗೂರು-ಕ್ರಿ.ಶ. ೧೧೪೬ರ ಶಾಸನ, ಪುಟ ೧೨೩ರಲ್ಲಿ ಅಬ್ಬಲದೇವಿ ಕರಡಿಕಲ್ಲು-೩೦೦ರ ಬಳಿಯ ಲಿಂಗವನ್ನು ಆಳುತ್ತಿದ್ದಾಗ, ಕರಿದೇವೇಶ್ವರ ದೇವರಿಗೆ ಮೂರು ಮತ್ತರು ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.

೧೪೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೩, ಮಸ್ಕಿ-ಕ್ರಿ.ಶ. ೧೩ನೆಯ ಶತಮಾನ, ಪುಟ ೧೭೬-೧೭೭ರಲ್ಲಿ ಪರೆಕಾರ ಎಳೆಮೋಜೆಸನ ಮಗಳು ಸೋಮಕ್ಕ ಎಂಬುವವಳು ೧೪ ಮತ್ತರು ಭೂಮಿಯನ್ನು ಪಂಚಲಿಂಗಕ್ಕೆ ದಾನ ನೀಡಿದ ಬಗ್ಗೆ ತಿಳಿಯುತ್ತದೆ.

೧೪೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೮, ಸುಲ್ತಾನಪುರ-ಕ್ರಿ.ಶ. ೧೨ನೆಯ ಶತಮಾನದ ಶಾಸನ, ಪುಟ ೭೮೨. ಈ ತುಂಡು ಶಾಸನದಲ್ಲಿ ಮಸ್ಕಿಯ ದಕ್ಷಿಣ ಭಾಗದಲ್ಲಿನ ಭೂಮಿಯನ್ನು ಪರೆಕಾರ ಮುಂತಾದವರಿಗೆ ದಾನ ಬಿಟ್ಟಂತೆ ತಿಳಿದುಬರುತ್ತದೆ. ಇದು ೧೨ನೆಯ ಶತಮಾನಕ್ಕೆ ಸೇರಿದ ಶಾಸನವಾಗಿದೆ. ಇದರಿಂದ ಎಳೆಮೋಜೆಸನು ೧೨ನೆಯ ಶತಮಾನದಲ್ಲಿ ಪಡೆದ ಭೂಮಿಯಲ್ಲಿ ಮಗಳು ಸೋಮಕ್ಕ ೧೩ನೆಯ ಶತಮಾನದಲ್ಲಿ ೧೪ ಮತ್ತರು ಭೂದಾನ ಮಾಡಿದ್ದು ಕಂಡುಬರುತ್ತದೆ. ಪರೆಕಾರ ವೃತ್ತಿಯಿಂದಾಗಿ ಭೂಮಿಯನ್ನು ಪಡೆಯಲಾಗಿತ್ತು. ಇವರ ಕುಂಟುಂಬ ಲಿಂಗದ ಪ್ರಭಾವಕ್ಕೆ ಬಳಗಾಗಿರಬೇಕು. ಅಂದರೆ ಶೈವ ಪರಂಪರೆಗೆ ಸೇರಿರಬೇಕು. ಇಲ್ಲ ಶಿವನ ಆರಾಧಕಳಾಗಿರಬೇಕೆನಿಸುತ್ತದೆ.

೧೪೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೨೬, ಮಲ್ಲಿಗಿಮಡುವು-ಕ್ರಿ.ಶ. ೧೦ನೆಯ ಶತಮಾನದ ಶಾಸನ, ಪುಟ ೨೪೮ರಲ್ಲಿ ಈಕೆಯ ಬಗ್ಗೆ ಉಲ್ಲೇಖವಿದೆ.

೧೪೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೯, ಚೀಕಲಪರ್ವಿ, ಕ್ರಿ.ಶ. ೧೫೨೧ರ ಶಾಸನ, ಪುಟ ೨೪೩ರಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸಿದೆ.

೧೪೪. ಶರ್ಮ ಆರ್.ಎಸ್., ೨೦೧೦, ಪ್ರಾಚೀನ ಭಾರತದಲ್ಲಿ ಶೂದ್ರರು, ಪುಟ ೧೪೦-೧೪೧ರಲ್ಲಿ ಗುಲಾಮರ ಸಂಖ್ಯೆಯಲ್ಲಿ ಇಳಿಮುಖವಾಯಿತು. ಇದಕ್ಕೆ ಕಾರಣ ಭೂ ಹಿಡುವಳಿಗಳು ಚಿಕ್ಕದಾಗಿದ್ದವು. ದೊಡ್ಡ ಪ್ರಮಾಣದ ಯುದ್ಧಗಳು ಇಲ್ಲಿ ನಡೆಯದೇ ಇರುವುದು ಗುಲಾಮರ ಇಳಿಮುಖಕ್ಕೆ ಕಾರಣ.

೧೪೫. ದೇವರಕೊಂಡಾರೆಡ್ಡಿ(ಸಂ), ೩೦೦೩, ಮಾನ್ವಿ-೫೧, ಕುರಡಿ-ಕ್ರಿ.ಶ. ೧೧೧೯ ಮತ್ತು ೧೧೪೮ರ ಶಾಸನಗಳಿಂದ ಪುಟ ೨೭೧ರಲ್ಲಿ ಈ ಉಲ್ಲೇಖಗಳು ಕಂಡುಬರುತ್ತವೆ.

೧೪೬ ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೦, ಬಲ್ಲಟಗಿ-ಕ್ರಿ.ಶ. ೧೦೨೨೫ ಶಾಸನ, ಪುಟ ೩೦೭

೧೪೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೫, ಕರಡಿಕಲ್- ಕ್ರಿ.ಶ. ೧೧೯೧ರ ಶಾಸನ, ಪುಟ ೧೩೧.

೧೪೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೩೭, ಬಳಗಾನೂರು, ಕ್ರಿ.ಶ. ೧೧೭೫ರ ಶಾಸನ, ಪುಟ ೩೯ರಲ್ಲಿ ಭೂಮಾಲಿಕನ ಭೂಮಾರಾಟವನ್ನು ಗಮನಿಸಬಹುದು.

೧೪೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩೪, ಮಸ್ಕಿ, ಕ್ರಿ.ಶ. ೧೦೧೮ರ ಶಾಸನ, ಪುಟ ೧೬೭ರಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ಶೆಟ್ಟಿಗಳು ಶ್ರೀಮಂತರಾಗಿದ್ದರು. ಜೊತೆಗೆ ಧಾರ್ಮಿಕತೆಗೆ ಹೆಚ್ಚಿನ ಆಸಕ್ತಿಯನ್ನು ತೋರುವಲ್ಲಿ ಬ್ರಾಹ್ಮಣರನ್ನು ಬಿಟ್ಟರೆ ಈ ಶೆಟ್ಟಿಗಳ ಅಧಿಕವಾಗಿದ್ದರೆಂಬ ಅಂಶ ತಿಳಿದುಬರುತ್ತದೆ.

೧೫೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೪೦, ಬಳಗಾನೂರು, ಕ್ರಿ.ಶ. ೧೧೭೫ರ ಶಾಸನ, ಪುಟ ೪೯ರಲ್ಲಿ ಈ ಬಗೆಯ ಮಾಹಿತಿಯಿದೆ.

೧೫೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೪೨, ಕುರುಡಿ- ಕ್ರಿ.ಶ. ೧೧೨೩ರ ಶಾಸನ, ಪುಟ ೨೫೯ರಲ್ಲಿ ಮಹಾಜನರ ಪ್ರಭಾವವನ್ನು ಬಿಡದ ಧಾರ್ಮಿಕತೆ ದಾನ ಶೂರನೆನಿಸಿಕೊಳ್ಳುವ ತವಕದೊಂದಿಗೆ ಅಧಿಕಾರದ ಉಳುವಿಗಾಗಿ ಈ ಬಗೆಯ ಕ್ರಮವನ್ನು ಅನುಸರಿಸಿರುವುದು ಕಂಡುಬರುತ್ತದೆ.

೧೫೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೪೩, ಕುರುಡಿ, ಕ್ರಿ.ಶ. ೧೧೨೩ರ ಶಾಸನ, ಪುಟ ೨೬೦-೬೧.

೧೫೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೦, ಬಲ್ಲಟಗಿ-ಕ್ರಿ.ಶ.೧೦೨೨ರ ಶಾಸನ, ಪುಟ ೩೦೭ರಲ್ಲಿ ರಾಣಿ ಮಹಾದೇವಿ ತನ್ನ ತಂತ್ರಪಾಲನು ನಿರ್ಮಿಸಿದ ದೇವಾಲಯಕ್ಕೆ ಭೂದಾನ ಮಾಡಲು ಲೋಕಾದಿತ್ಯನೆಂಬುವವನಿಂದ ಭೂಮಿಯನ್ನು ಪಡೆದು ದಾನ ಮಾಡಿದಳು.

೧೫೪. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨, ಗಬ್ಬೂರು, ಕ್ರಿ.ಶ.೧೧೦೩ರ ಶಾಸನ ಪುಟ ೪೯ರಲ್ಲಿ ಕಂಡುಬರುವಂತೆ ಕೂಲಿಯ ಜನರಿಂದ ದುಡಿದ ಕೂಲಿಯಲ್ಲಿ ಒಂದೊಂದು ಹಾಗವೆಂಬ ಹಣವನ್ನು ದೇವರಿಗಾಗಿ ನೀಡುವುದು ಕಂಡುಬರುತ್ತದೆ. ಇದರೊಂದಿಗೆ ರಾಯಚೂರಿನ ಜಿಲ್ಲಾ ಸರ್ಕಾರಿ ಆಸ್ಪತ್ರೆಯ ಮುಂಭಾಗದಲ್ಲಿ ಒಂದು ಸಣ್ಣ ವೀರಗಲ್ಲಿದೆ. ಅದು ಅಪರೂಪದ್ದಾಗಿದೆ. ಅದು ಕೃಷಿಕನನ್ನು ಬಿಂಬಿಸುವ ವೀರಗಲ್ಲಾಗಿದೆ. ರೈತನು ಬಲಗೈಯಲ್ಲಿ ಬಾರಕೋಲು ಮತ್ತು ಎಡಗೈಯಲ್ಲಿ ಕುಡುಗೋಲು ಹಿಡಿದಿರುವನು. ಇದನ್ನು ಗಮನಿಸಿದರೆ ರೈತ ಮತ್ತು ಭೂಮಾಲಿಕರ ಮಧ್ಯದಲ್ಲಿ ಸಂಘರ್ಷ ನಡೆದಿರಬೇಕೆನಿಸುತ್ತದೆ. ಇದು ೧೨ನೆಯ ಶತಮಾನಕ್ಕೆ ಸೇರಿದ್ದು, ಕರಿಕಲ್ಲಿನಲ್ಲಿ ಕೆತ್ತಲಾಗಿದೆ.

೧೫೫. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೯, ಗಬ್ಬೂರು-ಕ್ರಿ.ಶ. ೧೧೪೮ರ ಶಾಸನ, ಪುಟ ೮೧.

೧೫೬. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪೧, ಚಂದನಕೇರಿ-ಕ್ರಿ.ಶ. ೧೨ನೆಯ ಶತಮಾನದ ಶಾಸನ, ಪುಟ ೧೦೮ರಲ್ಲಿ ಉಲ್ಲೇಖವಿದೆ.

೧೫೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩, ಯಲಗಲದಿನ್ನಿ-ಕ್ರಿ.ಶ. ೧೧೨೨ರ ಶಾಸನ, ಪುಟ ೧೨೭.

೧೫೮. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೭, ಗುಂಜಹಳ್ಳಿ-ಕ್ರಿ.ಶ. ೧೬೪೭ರ ಶಾಸನ, ಪುಟ ೧೮-೯.

೧೫೯. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೫, ಮಟಮಾರಿ-ಕ್ರಿ.ಶ. ೧೭ನೆಯ ಶತಮಾನದ ಶಾಸನ, ಪುಟ ೬-೭

೧೬೦. ಜೀರಗೆಕಟ್ಟೆ ಬಸವಪ್ಪ, ೧೯೭೩, ಕರ್ನಾಟಕ ಯಾತ್ರೆ, ಪುಟ ೩೬೪.

೧೬೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೮, ನವಿಲೆ-ಕ್ರಿ.ಶ. ೧೧೩೫ರ ಶಾಸನ, ಪುಟ ೧೪೦-೧೪೧ರಲ್ಲಿ ಕುಂಬಾರ ರಾಚಿಮಯ್ಯನ ಉಲ್ಲೇಖವಿದೆ.

೧೬೨. ಸುಂದರ ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪುಟ ೫೬-೬೩.

೧೬೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ದೇವದುರ್ಗ-೧೬, ಗಬ್ಬೂರು-ಕ್ರಿ.ಶ. ೧೧೧೯ರ ಶಾಸನ, ಪುಟ ೭೪.

೧೬೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೦, ಮುದಗಲ್-ಕ್ರಿ.ಶ. ೧೨೧೫, ಪುಟ ೧೮೫.

೧೬೫. ನರಸಿಂಹಮೂರ್ತಿ ಎಂ.ವಿ., ೨೦೦೩, ಕರ್ನಾಟಕ ನಾಣ್ಯ ಪರಂಪರೆ, ಪುಟ ೨೬೨–೨೬೩.

೧೬೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ದೇವದುರ್ಗ–೨೮, ಗೂಗಲ್ಲು–ಕ್ರಿ.ಶ.೧೮೨೫ರ ಶಾಸನ, ಪುಟ ೯೩ರಲ್ಲಿ ಪ್ರಭುಸ್ವಾಮಿ ದೇವಾಲಯಕ್ಕೆ ಗಂಟೆ ಮಾಡಿಸಿದ್ದಾರೆ. ಅದು ಸಾಮಾನ್ಯವಾಗಿ ಪಂಚಲೋಹಗಳಿಂದ ಕೂಡಿರುತ್ತದೆ. ಈ ಲೋಹಗಳ ಪರಿಚಯ ಕಂಚಗಾರರಿಗಿರುತ್ತದೆ. ಕಂಚಗಾರ ಅಮ್ಮ ಎನ್ನಲಾಗಿದೆ. ಆಕೆಯ ಹೆಸರು ಗೊತ್ತಿಲ್ಲ.

೧೬೭. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ–೩೯, ಚಂದನಕೇರಿ–ಕ್ರಿ.ಶ. ೧೧ನೆಯ ಶತಮಾನ, ಪುಟ ೧೦೭.

೧೬೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು–೧೩, ಜಲದುರ್ಗ–ಕ್ರಿ.ಶ.೧೦೮೭ರ ಶಾಸನ, ಪುಟ ೧೪೭.

೧೬೯. ಮೋಹನ್‌ಕೃಷ್ಣ ರೈ ಕೆ., ೩೦೦೪, ಪೂರ್ವೋಕ್ತ, ಪುಟ ೯೪.

೧೭೦. ದೇವರಕೊಂಡಾರೆಡ್ಡಿ (ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೨೪, ಅನ್ವರಿ–ಕ್ರಿ.ಶ. ೧೧೧೪ರ ಶಾಸನ, ಪುಟ ೨೧–೫೮.

೧೭೧. ದೇವರಕೊಂಡಾರೆಡ್ಡಿ(ಸಂ)೨೦೦೩, ಮಾನ್ವಿ–೧೧೫, ಕವಿತಾಳ–ಕ್ರಿ.ಶ.೧೨೧೭ರ ಶಾಸನ, ಪುಟ ೩೩೩.

೧೭೨. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ–೩೯, ಚಂದನಕೇರಿ–ಕ್ರಿ.ಶ.೧೧ನೆಯ ಶತಮಾನ ಪುಟ ೧೦೭, ಲಿಂಗಸೂಗೂರು–೧೩, ಜಲದುರ್ಗ–ಕ್ರಿ.ಶ. ೧೦೮೭, ಪುಟ ೧೪೭ ಹಾಗೂ ಸಿಂಧನೂರು–೪೦, ಬಳಗಾನೂರು–ಕ್ರಿ.ಶ. ೧೧೮೨, ಪುಟ ೪೧೧ರಲ್ಲಿ ಈ ವಿಚಾರವಾಗಿ ಉಲ್ಲೇಖಿಸ ಲಾಗಿದೆ.

೧೭೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೬೫, ಕಲ್ಲೂರು–ಕ್ರಿ.ಶ. ೧೬೩೮ರ ಶಾಸನ, ಪುಟ ೨೮೫ರಲ್ಲಿ ಗಾಣಿಗರ ಓಬಿಶೆಟ್ಟಿಯ ಮಗ ಲಿಂಗಣ್ಣ ಎಂಬಾತನು ಕಲ್ಲೂರಿನ ಮಾರಟೇಶ್ವರ ದೇವಾಲಯದ ಗರುಡಗಂಭವನ್ನು ನಿಲ್ಲಿಸಿದನೆಂದು ತಿಳಿಸುತ್ತದೆ.

೧೭೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೩೪, ಗೋರ್ಕಲ್ಲು–ಕ್ರಿ.ಶ.೧೬೧೬ರ ಶಾಸನ, ಪುಟ ೨೫೩ರಲ್ಲಿ ಊರಿನ ಹೊಲಗಳು ಬೀಳು ಬಿದ್ದಿರಲು ಅವುಗಳಿಗೆ ನೇಗಿಲು ಕಟ್ಟಿ ಉಳುಮೆ ಮಾಡಿದಾಗ ಮೊದಲ ವರ್ಷ ಎರಡನೆಯ ವರ್ಷ ಹೀಗೆ ಐದು ವರ್ಷಗಳವರೆಗೆ ಇಂತಿಷ್ಟು ಧಾನ್ಯವನ್ನು ನೀಡಬೇಕೆಂದು ಕಟ್ಟಳೆಯನ್ನು ವಿಧಿಸಲಾಗಿತ್ತು.

೧೭೫. ಪರ್ವೀನ್ ಸುಲ್ತಾನ, ೧೯೯೭, ರಾಜನೀತಿ, ಸಮಾಜ ಮತ್ತು ಆರ್ಥಿಕತೆ ಹೈದರಾಬಾದ್ ಕರ್ನಾಟಕ, ಕರ್ನಾಟಕ ಚರಿತ್ರೆ ಸಂಪುಟ–೬, ಬಿ.ಷೇಕ್‌ಅಲಿ(ಪ್ರಸಂ), ಸೆಬಾಸ್ಟಿಯನ್ ಜೋಸೆಫ್(ಸಂ.ಸಂ.), ಪುಟ ೧೭೩.

೧೭೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಸಿಂಧನೂರು–೧೯, ಮುಕ್ಕುಂದಿ– ಕ್ರಿ.ಶ. ೧೬೪೬, ಪುಟ ೩೭೫ ಹಾಗೂ ಮಾನ್ಯದ ಹೊಲ ನೀಡಿ ಅದರ ಉತ್ಪತ್ತಿಯಲ್ಲಿ ಕೆಲವು ಪಾಲು ನೀಡಬೇಕೆಂದು ನಿಗದಿ ಪಡಿಸಿದ್ದದ್ದು ಮಾನ್ವಿ–೬೩, ಕಲ್ಲೂರು–ಕ್ರಿ.ಶ. ೧೬೫೨ರ ಶಾಸನ, ಪುಟ ೨೮೨ರಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ.

೧೭೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೫೨, ಒಳಬಳ್ಳಾರಿ–ಕ್ರಿ.ಶ.೧೯೧೫, ಪುಟ ೪೨೨.

೧೭೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು–೧೩, ಜಲದುರ್ಗ–ಕ್ರಿ.ಶ. ೧೦೮೭ರ ಶಾಸನ, ಪುಟ ೧೪೭.

೧೭೯. ದೇವರಕೊಂಡಾರೆಡ್ಡಿ(ಸಂ),೨೦೦೩, ಮಾನ್ವಿ-೧೦೨, ಮಲ್ಲಟ-ಕ್ರಿ.ಶ. ೧೧೯೬ರ ಶಾಸನ, ಪುಟ ೩೨೧.

೧೮೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೨೪, ಅನ್ವರಿ-ಕ್ರಿ.ಶ. ೧೧೧೪ರ ಶಾಸನ, ಪುಟ ೧೫೮.

೧೮೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೭, ಕಲ್ಲೂರು-ಕ್ರಿ.ಶ.೧೧೩೪ರ ಶಾಸನ, ಪುಟ ೨೮೮.

೧೮೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩, ಯಲಗಲದಿನ್ನಿ-ಕ್ರಿ.ಶ. ೧೧೨೨, ಪುಟ ೧೨೮.

೧೮೩. ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರು-೧೫, ಗೋಣ್‌ವಟ್ಲ-ಕ್ರಿ.ಶ. ೧೧೮೫, ಪುಟ ೧೪೯.

೧೮೪. ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರು-೧೩ ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೭.

೧೮೫. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪೦, ಚಂದನಕೇರಿ, ಕ್ರಿ.ಶ. ೧೧ನೆಯ ಶತಮಾನ, ಪುಟ ೧೦೭.

೧೮೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೧೩ ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೭.

೧೮೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೦೪, ಬಾಗಲವಾಡ-ಕ್ರಿ.ಶ.೧೦೮೪, ಪುಟ ೮೭.

೧೮೮. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೫, ಗಬ್ಬೂರು-ಕ್ರಿ.ಶ.೧೦೮೪, ಪುಟ ೮೭.

೧೮೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೮, ಕಲ್ಲೂರು-ಕ್ರಿ.ಶ. ೧೧೫೧, ಪುಟ ೨೮೯.

೧೯೦ ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮, ಮಾನ್ವಿ-ಕ್ರಿ.ಶ.೧೫೫೩, ಪುಟ ೨೩೨.

೧೯೧. ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೭

೧೯೨. ದೇವರಕೊಂಡಾರೆಡ್ಡಿ(ಸಂ),೨೦೦೩, ದೇವದುರ್ಗ-೨೭,ಹಿರೇರಾಯಕುಂಪಿ-ಕ್ರಿ.ಶ. ೧೧೩೦, ಪುಟ ೯೨.

೧೯೩. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೪೭, ಕಲ್ಮಲ-ಕ್ರಿ.ಶ.೧೧೩೦, ಪುಟ ೯೨.

೧೯೪. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪, ಗಬ್ಬೂರು- ಕ್ರಿ.ಶ. ೧೧೫೪, ಪುಟ ೫೪.

೧೯೫. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ೨೦, ನಿಲುವಂಜಿ- ಕ್ರಿ.ಶ. ೧೧೭೭, ಪುಟ ೯೫.

೧೯೬. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೯, ನಿಲುವಂಜಿ- ಕ್ರಿ.ಶ. ೧೧೭೭, ಪುಟ ೫೪.

೧೯೭ ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ. ೧೦೮೭, ಪುಟ೧೪೭

೧೯೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮, ಮಾನ್ವಿ-ಕ್ರಿ.ಶ. ೧೫೫೩, ಪುಟ ೨೩೨.

೧೯೯. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೫, ಗಬ್ಬೂರು- ಕ್ರಿ.ಶ. ೧೦೮೪, ಪುಟ ೮೭.

೨೦೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೬, ಕರಡಕಲ್-ಕ್ರಿ.ಶ. ೧೦೭೯, ಪುಟ ೧೩೬.

೨೦೧. ಅಮರೇಶ ಆಲ್ಕೋಡ, ೨೦೧೨, ದೇವದುರ್ಗ ಚಾರಿತ್ರಿಕ ಅಧ್ಯಯನ, ಪುಟ ೬೯.

೨೦೨. ಪರ್ವಿನ್ ಸುಲ್ತಾನ, ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೬, ಪುಟ ೧೭೨.

೨೦೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೯, ಮಲಿಯಾಬಾದ್-ಕ್ರಿ.ಶ.೧೫೧೩ರ ಶಾಸನ, ಪುಟ ೧೧.

೨೦೪. ದೇವರಕೊಂಡಾರೆಡ್ಡಿ(ಸಂ), ದೇವದುರ್ಗ-೩೫, ಗಲಗ-ಕ್ರಿ.ಶ. ೧೭೨೬, ಪುಟ ೧೦೩.

೨೦೫. ದೇವರಕೊಂಡಾರೆಡ್ಡಿ(ಸಂ), ರಾಯಚೂರು-೯, ಮಲಿಯಾಬಾದ್- ಕ್ರಿ.ಶ. ೧೫೧೩, ಪುಟ ೧೧.

೨೦೬. ಹಿರೇಮಠ ಬಿ.ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ ೧೧.

೨೦೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೩೪, ಮಸ್ಕಿ-ಕ್ರಿ.ಶ.೧೦೧೮ರ ಶಾಸನ, ಪುಟ ೧೬೭.

೨೦೮. ಮೋತಿಚಂದ್ರ (ಮೂಲ), ೧೯೯೬, ಸಾರ್ಥವಾಹ, ಪಾಟೀಲ್ ಎಚ್.ಎಸ್.(ಅನು), ಪುಟ ೧೧೫.

೨೦೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ದೇವದುರ್ಗ-೪, ಗಬ್ಬೂರು-ಕ್ರಿ.ಶ. ೧೧೫೪, ಪುಟ ೫೩.

೨೧೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨೪, ಹಿರೇಭೇರಿಗೆ-ಕ್ರಿ.ಶ. ೧೧೨೭, ಪುಟ ೨೮೩.

೨೧೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ.೧೦೮೭, ಪುಟ ೧೪೬.

೨೧೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨, ಸಾಲಗುಂದೆ-ಕ್ರಿ.ಶ.೧೧೫೩, ಪುಟ ೩೪೬.

೨೧೩. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩, ಗಬ್ಬೂರು-ಕ್ರಿ.ಶ. ೧೧೦೭, ಪುಟ ೫೧.

೨೧೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೭೫, ಪುಟ ೪೯.

೨೧೫. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩, ಗಬ್ಬೂರು-ಕ್ರಿ.ಶ.೧೧೦೭, ಪುಟ ೫೧.

೨೧೬. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩, ಗಬ್ಬೂರು, ಕ್ರಿ.ಶ. ೧೧೦೭, ಪುಟ ೫೧.

೨೧೭. ಎಸ್.ಆರ್.ರಾವ್ (ಮೂಲ), ೧೯೯೪, ಲೋಥಲ್ ಮತ್ತು ಸಿಂಧೂ ನಾಗರಿಕತೆ, ಗುರುರಾಜಾಚಾರ್ ಎಸ್, ಪುಟ ೧೧೫ರಲ್ಲಿ ಉಲ್ಲೇಖವಿದೆ.

೨೧೮. ಮೆಡ್ಲಿಕಾಟ್ ಜೆ.ಜಿ, ೧೮೬೨, ಕಾಟನ್ ಹ್ಯಾಂಡ್‌ಬುಕ್ ಫಾರ್ ಬೆಂಗಾಲ್, ಪುಟ ೨೭೫ರಲ್ಲಿ ಈ ವಿವರ ನೀಡಲಾಗಿದೆ.

೨೧೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೪೯, ಮುದಗಲ್-ಕ್ರಿ.ಶ. ೧೨೧೫ರ ಶಾಸನ, ಪುಟ ೧೮೩ರಲ್ಲಿ ಕುಬೇರನ ವಂಶದವರಾದ ವೈಶ್ಯ ಕುಲದವರಾದ ಮುದಗಲ್ ಸಮಸ್ತ ನಖರರು ಎಂದು ಉಲ್ಲೇಖಿಸಿದೆ.

೨೨೦. ದೇವರಕೊಂಡಾರೆಡ್ಡಿ(ಸಂ) ,೨೦೦೩, ದೇವದುರ್ಗ-೨೨, ಗಬ್ಬೂರು-ಕ್ರಿ.ಶ. ೧೧ನೆಯ ಶತಮಾನ, ಪುಟ ೮೪.

೨೨೧. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೨, ಗಬ್ಬೂರು- ಕ್ರಿ.ಶ. ೧೦೮೮, ಪುಟ ೫೦.

೨೨೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೫, ಕವಿತಾಳ-ಕ್ರಿ.ಶ.೧೨೧೭, ಪುಟ ೩೩೧.

೨೨೩. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೨, ಗಬ್ಬೂರು- ಕ್ರಿ.ಶ.೧೦೮೮, ಪುಟ ೫೧.

೨೨೪. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩೧, ವೀರಗೋಟ-ಕ್ರಿ.ಶ.೧೨೨೩, ಪುಟ ೯೮.

೨೨೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೭೫, ಪುಟ ೪೯.

೨೨೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೫೧, ಕುರುಡಿ-ಕ್ರಿ.ಶ.೧೧೧೯, ಪುಟ ೨೭೨.

೨೨೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೯, ಮುದಗಲ್-ಕ್ರಿ.ಶ. ೧೨೧೫, ಪುಟ ೧೮೩.

೨೨೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೨೧, ಗೂಗೇಬಾಳ-ಕ್ರಿ.ಶ.೧೧೭೪, ಪುಟ ೩೪೧.

೨೨೯. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩, ಗಬ್ಬೂರು-ಕ್ರಿ.ಶ. ೧೦೮೮, ಪುಟ ೫೧.

೨೩೦. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೩, ಗಬ್ಬೂರು-ಕ್ರಿ.ಶ. ೧೧೪೪, ಪುಟ ೭೧.

೨೩೧. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೬, ಗಬ್ಬೂರು-ಕ್ರಿ.ಶ. ೧೧೯, ಪುಟ ೭೫.

೨೩೨. ದೇವರಕೊಂಡಾರೆಡ್ಡಿ(ಸಂ),೨೦೦೩, ಸಿಂಧನೂರು-೩೮, ಬಳಗಾನೂರು-ಕ್ರಿ.ಶ.೧೧೮೨, ಪುಟ ೪೦೨.

೨೩೩. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪, ಗಬ್ಬೂರು-ಕ್ರಿ.ಶ. ೧೧೫೪, ಪುಟ ೫೫.

೨೩೪. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪, ಗಬ್ಬೂರು-ಕ್ರಿ.ಶ. ೧೧೫೪ರ ಶಾಸನ, ಪುಟ ೫೨-೫೩ರಲ್ಲಿ ವ್ಯಾಪಾರ ಸಂಘಗಳು ಸಭೆ ಸೇರಿರುವ ಕುರಿತು ಉಲ್ಲೇಖ ಕಂಡುಬರುತ್ತದೆ.

೨೩೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೫, ಕವಿತಾಳ-ಕ್ರಿ.ಶ. ೧೨೧೭, ಪುಟ ೩೩೩.

೨೩೬ ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೯, ಗಬ್ಬೂರು-ಕ್ರಿ.ಶ. ೧೧೪೮, ಪುಟ ೮೧.

೨೩೭. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨, ಗಬ್ಬೂರು-ಕ್ರಿ.ಶ. ೧೧೦೩, ಪುಟ ೪೭.

೨೩೮. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೭, ಗುಂಜಹಳ್ಳಿ-ಕ್ರಿ.ಶ. ೧೬೪೭, ಪುಟ ೮-೯.

೨೩೯. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೫, ಮಟಮಾರಿ-ಕ್ರಿ.ಶ. ೧೭ನೆಯ ಶತಮಾನ, ಪುಟ ೬-೭.

೨೪೦. ದೇವರಕೊಂಡಾರೆಡ್ಡಿ(ಸಂ),೨೦೦೩,ಲಿಂಗಸೂಗೂರು-೮,ನವಿಲೆ-ಕ್ರಿ.ಶ. ೧೧೩೫, ಪುಟ ೧೪೦-೧೪೧.

೨೪೧. ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರ-೪೯, ಮುದಗಲ್-ಕ್ರಿ.ಶ. ೧೨೧೫, ಪುಟ ೧೮೫.

೨೪೨. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೮, ಗೂಗಲ್ಲು-ಕ್ರಿ.ಶ. ೧೮೨೫, ಪುಟ ೯೩.

೨೪೩. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪೧, ಚಂದನಕೇರಿ-ಕ್ರಿ.ಶ. ೧೨ನೆಯ ಶತಮಾನ, ಪುಟ ೧೦೮.

೨೪೪. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩ ಗಬ್ಬೂರು-ಕ್ರಿ.ಶ. ೧೧೦೭, ಪುಟ ೫೧.

೨೪೫. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪೧, ಚಂದನಕೇರಿ-ಕ್ರಿ.ಶ. ೧೨ನೆಯ ಶತಮಾನ, ಪುಟ ೧೦೮.

೨೪೬ ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೨, ಗಬ್ಬೂರು-ಕ್ರಿ.ಶ.೧೧೨೪, ಪುಟ ೭೦.

೨೪೭. ದೇವರಕೊಂಡಾರೆಡ್ಡಿ(ಸಂ),೨೦೦೩, ಲಿಂಗಸೂಗೂರು-೪, ಕರಡಕಲ್-ಕ್ರಿ.ಶ. ೧೦೭೯, ಪುಟ ೧೨೯.

೨೪೮. ದೇವರಕೊಂಡಾರೆಡ್ಡಿ(ಸಂ)೨೦೦೩, ಲಿಂಗಸೂಗೂರು-೫, ಕರಡಕಲ್-ಕ್ರಿ.ಶ. ೧೧೯೧, ಪುಟ ೧೩೧.

೨೪೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩೨, ಮಸ್ಕಿ-ಕ್ರಿ.ಶ. ೧೦೧೦, ಪುಟ ೧೬೫.

೨೫೦. ದೇವರಕೊಂಡಾರೆಡ್ಡಿ(ಸಂ),೨೦೦೩, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೭೫, ಪುಟ ೪೧೯.

೨೫೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೫, ಬಲ್ಲಟಗಿ-ಕ್ರಿ.ಶ. ೧೦೫೮, ಪುಟ ೩೧೨.

೨೫೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೫, ಕವಿತಾಳ-ಕ್ರಿ.ಶ.೧೨೧೭, ಪುಟ ೩೩೧.

೨೫೩. ದೇವರಕೊಂಡಾರೆಡ್ಡಿ(ಸಂ),೨೦೦೩,ರಾಯಚೂರು-೪೫, ರಾಯಚೂರು-ಕ್ರಿ.ಶ.೧೨೯೪, ಪುಟ ೨೯.

೨೫೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೦೩, ಮಲ್ಲಟ-ಕ್ರಿ.ಶ.೧೧೪೮, ಪುಟ ೩೨೨.

೨೫೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೧೦, ಮುಕ್ಕುಂದಿ-ಕ್ರಿ.ಶ. ೧೫೮೫, ಪುಟ ೩೬೬.

೨೫೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೦, ಮಾನ್ವಿ-ಕ್ರಿ.ಶ. ೧೭೬೦, ಪುಟ ೨೩೪.

೨೫೭. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೮, ಗುಂಜಹಳ್ಳಿ-ಕ್ರಿ.ಶ. ೧೬೪೭, ಪುಟ ೯.

೨೫೮. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೪೬, ದೇವದುರ್ಗ-ಕ್ರಿ.ಶ. ೧೬೯೦, ಪುಟ ೧೧೪.

೨೫೯. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೯, ಮಲಿಯಾಬಾದ್-ಕ್ರಿ.ಶ. ೧೫೧೩, ಪುಟ ೧೧.

೨೬೦. ದೇವರಕೊಂಡಾರೆಡ್ಡಿ(ಸಂ),೨೦೦೩,ರಾಯಚೂರು-೫೦,ಹೊಸಪೇಟೆ-ಕ್ರಿ.ಶ. ೧೬೭೦, ಪುಟ ೩೪-೩೫.

೨೬೧. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೩೯, ಚಂದನಕೇರಿ-ಕ್ರಿ.ಶ. ೧೧ನೆಯ ಶತಮಾನ, ಪುಟ ೧೦೭.

೨೬೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೧೮, ಗುರುಗುಂಟಾ-ಕ್ರಿ.ಶ.೧೬ನೆಯ ಶತಮಾನ, ಪುಟ ೧೫೨.

೨೬೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೨೯, ಸಂಕೇಶ್ವರ-ಕ್ರಿ.ಶ. ೧೯೯೭, ಪುಟ ೨೫೦.

೨೬೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೪೨, ಕುರುಡಿ-ಕ್ರಿ.ಶ. ೧೧೨೩, ಪುಟ ೨೫೯.

೨೬೫. ದೇವರಕೊಂಡಾರೆಡ್ಡಿ(ಸಂ),೨೦೦೩, ಮಾನ್ವಿ-೭೫, ಸಿರವಾರ-ಕ್ರಿ.ಶ. ೯ನೆಯ ಶತಮಾನ, ಪುಟ ೨೯೬

೨೬೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೫, ಕವಿತಾಳ-ಕ್ರಿ.ಶ. ೧೨೧೭, ಪುಟ ೩೩೧.

೨೬೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೮, ಕಲ್ಲೂರು-ಕ್ರಿ.ಶ. ೧೧೫೧, ಪುಟ ೨೮೯.

೨೬೮. ದೇವರಕೊಂಡಾರೆಡ್ಡಿ(ಸಂ),೨೦೦೩, ಸಿಂಧನೂರು-೨,ಸಾಲಗುಂದೆ-ಕ್ರಿ.ಶ. ೧೧೫೩, ಪುಟ ೩೪೭-೩೪೮.

೨೬೯. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೯, ಮಲಿಯಾಬಾದ್-ಕ್ರಿ.ಶ. ೧೫೧೩, ಪುಟ ೧೧

೨೭೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೬, ಕರಡಕಲ್-ಕ್ರಿ.ಶ.೧೦೭೯, ಪುಟ ೧೩೬

೨೭೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೫೧, ಕುರುಡಿ-ಕ್ರಿ.ಶ.೧೧೧೯, ಪುಟ ೨೭೧.

೨೭೨. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨೯, ನಿಲುವಂಜಿ-ಕ್ರಿ.ಶ.೧೧೭೭, ಪುಟ ೯೪.

೨೭೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೪, ಕಲ್ಲೂರು-ಕ್ರಿ.ಶ.೧೦೮೦, ಪುಟ ೨೮೩ ಹಾಗೂ ಮಾನ್ವಿ-೧೦೩, ಮಲ್ಲಟ-ಕ್ರಿ.ಶ. ೧೧೪೮, ಪುಟ ೩೨೨.

೨೭೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೦೩, ಮಲ್ಲಟ-ಕ್ರಿ.ಶ.೧೧೪೮, ಪುಟ ೩೨೨.

೨೭೫. ದೇವರಕೊಂಡಾರೆಡ್ಡಿ(ಸಂ),೨೦೦೩,ಮಾನ್ವಿ-೭೫, ಸಿರವಾರ-ಕ್ರಿ.ಶ. ೯ನೆಯ ಶತಮಾನ, ಪುಟ ೨೯೬.

೨೭೬. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೩, ಗಬ್ಬೂರು-ಕ್ರಿ.ಶ.೧೧೪೪, ಪುಟ ೭೧.

೨೭೭. ರಾಜಾರಾಮಹೆಗಡೆ, ೨೦೦೫, ಬಿಲ್ಲಮುನ್ನೂರ್ವರು: ಕನ್ನಡ ಶಾಸನಗಳಲ್ಲಿ ಸಮುದಾಯಗಳ ಇತಿಹಾಸ, ಚರಿತ್ರೆ ಅಧ್ಯಯನ ಸಂಪುಟ-೧, ಸಂಚಿಕೆ-೧, ಲಕ್ಷ್ಮಣ್ ತೆಲಗಾವಿ(ಸಂ), ಪುಟ ೯೫-೯೯.

೨೭೮. ಗುರುರಾಜಾಚಾರ್ ಎಸ್.(ಅನು), ೧೯೯೪, ಲೋಥಲ್ ಮತ್ತು ಸಿಂಧೂನಾಗರಿಕತೆ, ಎಸ್.ಆರ್.ರಾವ್ (ಮೂಲ), ಪುಟ ೧೦೦-೧೧೫.

೨೭೯. ಶ್ರೀಮತಿ.ಎಚ್ ಎಸ್.(ಅನು), ೧೯೯೮, ಪ್ರಾಚೀನ ಭಾರತದ ಚರಿತ್ರೆ–ಡಿ.ಡಿ. ಕೊಸಾಂಬಿಯವರ ಚಿಂತನೆಗಳು, ಬಾಲಗೋಪಾಲ್ (ಮೂಲ), ಪುಟ ೧೪೮.

೨೮೦. ಜೀರಗೆ ಕಟ್ಟೆ ಬಸವಪ್ಪ, ೧೯೭೩, ಪೂರ್ವೋಕ್ತ, ಪುಟ ೩೭೧.

೨೮೧. ಮೋತಿಚಂದ್ರ, ೧೯೯೬, ಪೂರ್ವೋಕ್ತ, ಪುಟ ೧೧೫.

೨೮೨. ನರಸಿಂಹಮೂರ್ತಿ ಎಂ.ವಿ., ೨೦೦೩, ಪೂರ್ವೋಕ್ತ, ಪುಟ ೪೪–೪೬.

೨೮೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೨೯, ಮಸ್ಕಿ–ಕ್ರಿ.ಶ.೩ನೆಯ ಶತಮಾನ, ಪುಟ ೧೬೨.

೨೮೪. ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪುಟ ೨೮–೪೫.

೨೮೫. ಅಶೋಕನು ಚಿನ್ನದ ಲೋಹದ ಮೇಲೆ ಹೆಚ್ಚು ಆಸಕ್ತಿಯನ್ನು ಹೊಂದಿದವನಾಗಿದ್ದನು.

೨೮೬. ನರಸಿಂಹಮೂರ್ತಿಎಂ.ವಿ, ೨೦೦೩, ಕರ್ನಾಟಕ ನಾಣ್ಯ ಪರಂಪರೆ ಎಂಬ ಕೃತಿಯಲ್ಲಿ ಚಿನ್ನ ನಾಣ್ಯದ ಕುರಿತು ಪುಟ ೨೨೦ರಲ್ಲಿ ಉಲ್ಲೇಖವಿದೆ.

೨೮೭. ನಾಗೇಗೌಡ ಎಚ್.ಎಲ್., ೨೦೦೬, ಪ್ರವಾಸಿ ಕಂಡ ಇಂಡಿಯಾ ೧, ಪುಟ ೧೦೭ರಲ್ಲಿ ಗ್ರೀಕ್ ಪ್ರವಾಸಿ ಟಾಲೆಮಿ ಮುದಗಲ್‌ನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ.

೨೮೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಸಿಂಧನೂರು–೧೦, ಮುಕ್ಕುಂದಿ–ಕ್ರಿ.ಶ. ೧೫೮೫ರ ಶಾಸನ, ಪುಟ ೩೬೬.

೨೮೯. ರಾಯಚೂರು ದೋ–ಅಬ್ ಪ್ರದೇಶದಿಂದ ವ್ಯಾಪಾರ ಮಾರ್ಗವಿತ್ತು. ಮೋತಿಚಂದ್ರ, ೧೯೯೬, ಸಾರ್ಥವಾಹ, ಪುಟ ೩೫.

೨೯೦. ರಾಯಚೂರಿನ ಕಾಡಲೂರು ಸಂಗಮ ಸ್ಥಳದಿಂದ ಪುಣೆಗೆ ಹೋಗಲು ನದಿಗುಂಟ ಮಾರ್ಗವಿತ್ತೆಂದು ಮೋತಿಚಂದ್ರ(೧೯೯೬)ರ ಸಾರ್ಥವಾಹದಿಂದ ತಿಳಿದುಬರುತ್ತದೆ. ಪುಟ ೩೫–೩೬

೨೯೧. ಈ ಪ್ರದೇಶ ಮಹಾರಾಷ್ಟ್ರ ಪೌನಿದೇವಟೇಕ್ ಸಾಲಿನ ಕಣಿವೆಯೊಂದಿಗೆ ಸಂಬಂಧ ಹೊಂದಿತ್ತು ಎಂಬುದು ಲಕ್ಷ್ಮಣ್ ತೆಲಗಾವಿ(೨೦೦೪) ಅವರ ಮೌರ್ಯ ಮತ್ತು ಶಾತವಾಹನ ಯುಗದಿಂದ ತಿಳಿದುಬರುತ್ತದೆ. ಪುಟ ೨೧.

೨೯೨. ಕರ್ನಾಟಕದಲ್ಲಿ ಶಾಸನಗಳನ್ನು ಹೊರಡಿಸಿರುವ ಪ್ರದೇಶಗಳೊಂದಿಗೆ ರಾಯಚೂರು ಪ್ರದೇಶದ ಮಾರ್ಗಗಳನ್ನು ಕಲ್ಪಿಸಲಾಗಿತ್ತು.

೨೯೩. ರಾಯಚೂರು ದೋ–ಅಬ್ ಪ್ರದೇಶವು ಸೋನ್ ಕಣಿವೆಯೊಂದಿಗೆ ವ್ಯಾಪಾರದ ಮಾರ್ಗವನ್ನು ಹಂಚಿಕೊಂಡಿತ್ತು.

೨೯೪. ಈ ಪ್ರದೇಶದ ಮಸ್ಕಿ ತನ್ನ ಅಸ್ಮಿತೆಯಿಂದ ವ್ಯಾಪಾರ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಕರ್ನಾಟಕ–ಆಂಧ್ರಪ್ರದೇಶಗಳ ಮುಖ್ಯ ವ್ಯಾಪಾರ ಮಾರ್ಗಗಳ ಸಂಪರ್ಕವಿತ್ತು.

೨೯೫. ಮಸ್ಕಿಯಿಂದ ಮಹಾರಾಷ್ಟ್ರಕ್ಕೆ ನೇರವಾದ ಮಾರ್ಗವಿದ್ದಿತು.

೨೯೬. ಈ ಪ್ರದೇಶ ಪ್ರಾಚೀನ ಕಾಲದಲ್ಲಿ ಬೌದ್ಧ ಶಿಕ್ಷಣ ಕೇಂದ್ರವಾಗಿದ್ದ ತಕ್ಷಶಿಲೆಗೆ ವ್ಯಾಪಾರ ಉದ್ದೇಶದಿಂದ ಮಾರ್ಗಗಳನ್ನು ಹೊಂದಿರಬೇಕು.

೨೯೭. ಮಸ್ಕಿ ಆಂಧ್ರದ ಮೂಲಕ ಮಧ್ಯಪ್ರದೇಶ ವ್ಯಾಪಾರ ಕೇಂದ್ರಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿರಬೇಕು.

೨೯೮. ಸಿಂಧೂ ನಾಗರಿಕತೆಯ ಜನರು ಈ ಪ್ರದೇಶದ ಚಿನ್ನದ ಗಣಿಯಿಂದ ಬಂಗಾರವನ್ನು ಸಮುದ್ರ ಮಾರ್ಗದ ಮೂಲಕ ತರಿಸಿಕೊಳ್ಳಲಾಗುತ್ತಿತ್ತು.

೨೯೯. ಕ್ರಿ.ಶ.೧-೨ನೆಯ ಶತಮಾನದಲ್ಲಿ ಈ ಪ್ರದೇಶ ರೋಮ್‌ನೊಂದಿಗೆ ಜಲಮಾರ್ಗದ ಮೂಲಕ ವ್ಯಾಪಾರ ನಡೆದಿದ್ದಿತು.

೩೦೦. ಮೌರ್ಯರ ಅರಸ ಅಶೋಕನಿಗೆ ಲೋಹದ ಉದ್ದಿಮೆಯಲ್ಲಿ ಆಸಕ್ತಿಯನ್ನು ಹೊಂದಿದ್ದನು. ಹಾಗಾಗಿ ಇಲ್ಲಿಂದ ಪಾಟಲಿಪುತ್ರಕ್ಕೆ ವ್ಯಾಪಾರ ಮಾರ್ಗವಿದ್ದಿತು ಎಂಬುದನ್ನು ಗಮನಿಸಬಹುದಾಗಿದೆ.

೩೦೧. ರಾಯಚೂರು ದೋ-ಅಬ್ ಪ್ರದೇಶದ ಮಧ್ಯದಿಂದ ಕಾವೇರಿ ಬಯಲು ಪ್ರದೇಶಕ್ಕೆ ವ್ಯಾಪಾರ ಮಾರ್ಗ ಇದ್ದಿತು. ಇದು ವಿಜಯನಗರದ, ಹರಿಹರದ ಮೂಲಕ ಸಂಪರ್ಕ ಹೊಂದಿತ್ತು.

೩೦೨. ಈ ಪ್ರದೇಶದ ಕಲ್ಲೂರು ಮತ್ತು ಗಂಗಾ ನದಿಬಯಲು ಪ್ರದೇಶದಲ್ಲಿ ತಾಮ್ರದ ಖಡ್ಗಗಳು ದೊರೆತಿವೆ. ಇವು ಒಂದಕ್ಕೊಂದು ಸಾಮ್ಯತೆಯನ್ನು ಹೊಂದಿವೆ. ತಾಮ್ರದ ಕುಲುಮೆಗಳು ಈ ಪ್ರದೇಶದಲ್ಲಿ ಕಲ್ಲೂರು ಮತ್ತು ಕವಿತಾಳಗಳಲ್ಲಿ ಕಂಡುಬರುತ್ತವೆ.

೩೦೩. ಪಾಟಲಿಪುತ್ರದೊಂದಿಗೆ ನೇರವಾದ ಸಂಬಂಧವಿರುವುದರಿಂದ ಈ ಮಾರ್ಗದ ಮೂಲಕ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿದ್ದವು.

೩೦೪. ವಸಾಹತುಶಾಹಿ ಕಾಲಘಟ್ಟದಲ್ಲಿ ಈ ಪ್ರದೇಶದಲ್ಲಿ ಬೆಳೆದ ಹತ್ತಿಯನ್ನು ಇಂಗ್ಲೆಂಡಿಗೆ ಸಾಗಿಸಲು ಅನುಸರಿಸಿದ ಮಾರ್ಗವಿದಾಗಿದೆ.

೩೦೫. ಮಹಾಜನರು ಈ ಪ್ರದೇಶದಲ್ಲಿ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ಅಗ್ರಸ್ಥಾನದಲ್ಲಿದ್ದರು. ಇವರು ಧಾರ್ಮಿಕ ವ್ಯಕ್ತಿಗಳಾಗಿದ್ದರು. ಇವರ ಧರ್ಮಕ್ಕೆ ತಲೆಬಾಗಿದ ಅರಸರು ಧಾರ್ಮಿಕಪ್ರಭುತ್ವ ಚೌಕಟ್ಟಿನಲ್ಲಿ ರಾಜಪ್ರಭುತ್ವವನ್ನು ನಡೆಸಬೇಕಾಗಿತ್ತು. ಧರ್ಮದ ಚೌಕಟ್ಟಿಗೆ ಸಿಲುಕಿದ ಈ ಪ್ರದೇಶದ ಸಾಮಂತರು ಅನಿವಾರ್ಯವಾಗಿ ಮಹಾಜನರಿಗೆ ದೊಡ್ಡ ಪ್ರಮಾಣದ ಭೂದಾನಗಳನ್ನು ಮಾಡಿರುವುದು ಕಂಡುಬರುತ್ತದೆ. ರಾಷ್ಟ್ರಕೂಟರ ಕಾಲದಿಂದ ವಿಜಯನಗರದ ಸ್ಥಾಪನೆಯಾಗುವ ಕಾಲದವರೆಗೆ ಸುಮಾರು ೧೫೦ ಶಾಸನಗಳು ಕಂಡುಬರುತ್ತದೆ. ಅವುಗಳಲ್ಲಿ ಬಹುತೇಕ ಶಾಸನಗಳು ಭೂದಾನ ಮಾಡಿದ ಉಲ್ಲೆಖಗಳನ್ನು ತಿಳಿಸುವಂತವುಗಳಾಗಿವೆ(ದೇವರಕೊಂಡಾರೆಡ್ಡಿ(ಸಂ), ೨೦೦೩, ಕವಿವಿ ಶಾಸನ-೭ ರಾಯಚೂರು-ಜಿಲ್ಲೆ).

೩೦೬. ವಿಜಯನಗರಕ್ಕೆ ಸೇರಿದ ಶಾಸನಗಳು ಈ ಪ್ರದೇಶದಲ್ಲಿ ಕ್ರಿ.ಶ.೧೪೩೬ರಿಂದ ದೊರೆಯುತ್ತವೆ. ಈ ರಾಜ್ಯಕ್ಕೆ ಸೇರಿದ ೧೫ ಶಾಸನಗಳು ಲಭ್ಯವಿವೆ. ಅವುಗಳಲ್ಲಿ ೮-೧೦ ಶಾಸನಗಳು ಬ್ರಾಹ್ಮಣರ ಹೆಸರಿನ ಬದಲು ದೇವರ ಹೆಸರಿನಲ್ಲಿ ದಾನ ಮಾಡಿರುವುದು ಗೋಚರಿಸುತ್ತದೆ. ಕ್ರಿ.ಶ.೮-೧೩ನೆಯ ಶತಮಾನಕ್ಕೆ ಹೋಲಿಕೆ ಮಾಡಿದಾಗ ಬ್ರಾಹ್ಮಣರಿಗೆ ಪ್ರೋತ್ಸಾಹವಿದ್ದಿತು. ಆದರೂ ಅದರ ಪ್ರಮಾಣ ಕಡಿಮೆಯಾತೆಂಬುದು ತಿಳಿದುಬರುತ್ತದೆ(ದೇವರಕೊಂಡಾರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭, ರಾಯಚೂರು-ಜಿಲ್ಲೆ).

೩೦೭. ಬ್ರಾಹ್ಮಣರು ೧೭-೧೮ನೆಯ ಶತಮಾನದಲ್ಲಿ ಆಡಳಿತ ವ್ಯವಸ್ಥೆಯ ಭಾಗವಾಗಿ ಗುರುತಿಸಿಕೊಳ್ಳುತ್ತಾರೆ. ರಾಜಾಸ್ಥಾನಗಳು ನಶಿಸಿ ಹೋದದ್ದರಿಂದ ಇವರ ಪ್ರಭಾವಕ್ಕೆ ಹಿನ್ನೆಡೆಯಾಯಿತು. ಆಗ ಅನಿವಾರ್ಯವಾಗಿ

ಭೂಮಿಯ ದಾಖಲೆಗಳನ್ನು ಬರೆಯುವವರಾಗಿ ಗುರುತಿಸಿಕೊಂಡಿದ್ದರು. ಏಕೆಂದರೆ ಅನಕ್ಷರಸ್ಥರಾಗಿದ್ದ ಜನರಿಗೆ ಗಣಿತ ಗೊತ್ತಿರಲಿಲ್ಲ. ಆಗ ಅಕ್ಷರ ಬಲ್ಲವರೆಂದರೆ ಬ್ರಾಹ್ಮಣರೇ. ಹಾಗಾಗಿ ಅವರು ಗ್ರಾಮ ಲೆಕ್ಕಾಧಿಕಾರಿಗಳಾಗಿ ಸೇವೆಸಲ್ಲಿಸಲು ಪ್ರಾರಂಭಿಸಿದರು(ದೇವರಕೊಂಡಾರೆಡ್ಡಿ(ಸಂ), ೨೦೦೩, ಕವಿವಿ ಶಾಸನ–೭, ರಾಯಚೂರು–ಜಿಲ್ಲೆ). ಕುಲಕರ್ಣಿಯ ಉಲ್ಲೇಖ ಕ್ಯಾದಿಗ್ಗೇರಿ(೩೭) ಕ್ರಿ.ಶ.೧೭–೧೮ನೆಯ ಶತಮಾನದ ಶಾಸನಗಳಿಂದ ತಿಳಿದುಬರುತ್ತದೆ.

೩೦೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ–೧೨೧, ಗೂಗೇಬಾಳ–ಕ್ರಿ.ಶ. ೧೧೭೪, ಪುಟ ೩೪೧ರಲ್ಲಿ ಈ ಉಲ್ಲೇಖವಿದೆ.

೩೦೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೩೮, ಬಳಗಾನೂರು–ಕ್ರಿ.ಶ.೧೧೮೨ರ ಶಾಸನ ಪುಟ–೫೦೧ ಹಾಗೂ ಲಿಂಗಸೂಗೂರು–೪೯, ಮುದಗಲ್–ಕ್ರಿ.ಶ.೧೨೧೫ರ ಶಾಸನ, ಪುಟ ೧೮೩ರಲ್ಲಿ ಈ ವಿಷಯಗಳ ಉಲ್ಲೇಖ ಕಂಡುಬರುತ್ತದೆ.

೩೧೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೧೦, ಮುಕ್ಕುಂದಿ–ಕ್ರಿ.ಶ.೧೫೮೫, ಪುಟ ೩೬೬

೩೧೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು–೬, ಕರಡಕಲ್–ಕ್ರಿ.ಶ.೧೦೭೯, ಪುಟ ೧೩೫.

೩೧೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೧೪, ಮುಕ್ಕುಂದಿ–ಕ್ರಿ.ಶ.೧೫೫೬, ಪುಟ ೩೭೦.

೩೧೩. ದೇವರಕೊಂಡಾರೆಡ್ಡಿ(ಸಂ),೨೦೦೩, ಸಿಂಧನೂರು–೩೭, ಬಳಗಾನೂರು–ಕ್ರಿ.ಶ.೧೧೭೫, ಪುಟ ೩೯೯.

೩೧೪. ದೇವರಕೊಂಡಾರೆಡ್ಡಿ(ಸಂ),೨೦೦೩, ಮಾನ್ವಿ–೭೭, ಸಿರವಾರ–ಕ್ರಿ.ಶ.೯ನೆಯ ಶತಮಾನ, ಪುಟ ೨೯೬.

೩೧೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೪೨, ದಿದ್ದಿಗಿ–ಕ್ರಿ.ಶ.೯೧೮, ಪುಟ ೪೧೪.

೩೧೬. ದೇವರಕೊಂಡಾರೆಡ್ಡಿ(ಸಂ), ೨೦೦೩,ಸಿಂಧನೂರು–೪೯, ಬೆಳಗುರ್ಕಿ–ಕ್ರಿ.ಶ.೯೯೨, ಪುಟ ೪೧೯–೪೨೦.

೩೧೭. ದೇವರಕೊಂಡಾರೆಡ್ಡಿ(ಸಂ),೨೦೦೩,ಸಿಂಧನೂರು–೪, ಸಾಲಗುಂದಿ–ಕ್ರಿ.ಶ.೧೦೬೩, ಪುಟ ೩೪೯–೫೦.

೩೧೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೭, ಮುಕ್ಕುಂದಿ–ಕ್ರಿ.ಶ. ೧೯೯೭, ಪುಟ ೩೫೮.

೩೧೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು–೫೨, ಒಳಬಳ್ಳಾರಿ–ಕ್ರಿ.ಶ. ೧೯೯೫, ಪುಟ ೪೨೨

೩೨೦. ದೇವರಕೊಂಡಾರೆಡ್ಡಿ(ಸಂ),೨೦೦೩,ಸಿಂಧನೂರು–೩೯, ಬಳಗಾನೂರು–ಕ್ರಿ.ಶ. ೧೧೯೧, ಪುಟ ೪೦೬

೩೨೧. ದೇವರಕೊಂಡಾರೆಡ್ಡಿ(ಸಂ), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕೊಪ್ಪಳ ಜಿಲ್ಲೆ ಕುಷ್ಟಗಿ–೧೩, ಪುರ–ಕ್ರಿ.ಶ.೧೨ನೆಯ ಶತಮಾನ, ಪುಟ ೨೪೯

೩೨೨. ಅಮರೇಶ ಯತಗಲ್, ೨೦೧೦, ರಾಯಚೂರು ಜಿಲ್ಲೆಯ ಅಗ್ರಹಾರಗಳು ಮತ್ತು ಬ್ರಹ್ಮಪುರಿಗಳು, ಅಮರೇಶ ಯತಗಲ್(ಸಂ), ದೋ–ಅಬ್ ರಾಯಚೂರು ಇತಿಹಾಸ, ಪುಟ ೧೨೬

೩೨೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೧೨೬, ಕಿಲಾರಹಟ್ಟಿ–ಕ್ರಿ.ಶ. ೧೦೪೬, ಪುಟ ೨೨೬.

೩೨೪. ಅಮರೇಶ ಯತಗಲ್, ೨೦೧೦, ಅಮರೇಶ ಯತಗಲ್(ಸಂ), ಪೂರ್ವೋಕ್ತ, ದೋ–ಅಬ್ ರಾಯಚೂರು ಇತಿಹಾಸ, ಪುಟ ೧೨೭.

೩೨೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು–೪೬, ಸುಲ್ತಾನಪುರ–ಕ್ರಿ.ಶ. ೧೫೩೭, ಪುಟ ೧೮೦.

೩೨೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೬, ತಡಕಲ್-ಕ್ರಿ.ಶ. ೧೦೩೩, ಪುಟ ೨೩೮-೨೩೯.

೩೨೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೪, ಕಲ್ಲೂರು-ಕ್ರಿ.ಶ. ೧೦೮೦, ಪುಟ ೨೮೩.

೩೨೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೪೬, ಕುರುಡಿ-ಕ್ರಿ.ಶ. ೧೦೯೨, ಪುಟ ೨೬೫.

೩೨೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೭, ಹಿರೇಕೊಟ್ನೆಕಲ್-ಕ್ರಿ.ಶ. ೧೧೯೧, ಪುಟ ೨೪೦.

೩೩೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೪, ತುಪ್ಪದೂರು-ಕ್ರಿ.ಶ. ೧೧-೧೨ನೆಯ ಶತಮಾನ, ಪುಟ ೩೩೦.

೩೩೧. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೬, ಗಬ್ಬೂರು-ಕ್ರಿ.ಶ. ೧೧೧೯, ಪುಟ ೭೪.

೩೩೨. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೨ ಗಬ್ಬೂರು-ಕ್ರಿ.ಶ. ೧೧೦೩, ಪುಟ ೪೭.

೩೩೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪, ಕರಡಕಲ್-ಕ್ರಿ.ಶ. ೧೦೭೯, ಪುಟ ೧೨೯.

೩೩೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೯, ಮುದಗಲ್-ಕ್ರಿ.ಶ. ೧೨೧೫, ಪುಟ ೧೮೫.

೩೩೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮೦, ಬಲ್ಲಟಗಿ-ಕ್ರಿ.ಶ.೧೧೦೬, ಪುಟ ೨೯೯.

೩೩೬. ದೇವರಕೊಂಡಾರೆಡ್ಡಿ(ಸಂ),೨೦೦೩,ಮಾನ್ವಿ-೭೨, ಅತ್ತನೂರು-ಕ್ರಿ.ಶ. ೧೨ನೆಯ ಶತಮಾನ, ಪುಟ ೨೯೪.

೩೩೭. ಮಹಾದೇವಪ್ಪ ನಾಗರಾಳ, ೨೦೧೦, ಮುದಗಲ್ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೨೦೦.

೩೩೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಕ.ವಿ.ಶಾ.ಸಂ-೭, ರಾಯಚೂರು ಜಿಲ್ಲೆ, ಪುಟ VIX-XIVII.

೩೩೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೯, ಚೀಕಲಪರ್ವಿ-ಕ್ರಿ.ಶ.೧೫೨೧, ಪುಟ ೨೪೩ರಲ್ಲಿ ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿಯರ ಉಲ್ಲೇಖ ದೊರೆಯುತ್ತದೆ. ಇದಲ್ಲದೆ ಜಗನ್ಮೋಹಿನಿ ಮುಂತಾದ ಉಪಪತ್ನಿಯರನ್ನು ಹೊಂದಿದ್ದನು.

೩೪೦. ಅಮರೇಶ ಆಲ್ಕೋಡ, ೨೦೧೨, ಪೂರ್ವೋಕ್ತ, ಪುಟ ೧೨೬ರಲ್ಲಿ ಸುರಪುರದ ಮುಮ್ಮಡಿ ರಾಜಾದೇವೇಂದ್ರ ವೆಂಕಟಪ್ಪನಾಯಕನು ತನ್ನ ಮೊದಲನೆಯ ಹೆಂಡತಿ ರತ್ನಗಿರಿ ರಂಗಮ್ಮಳ ಉದರದಿಂದ ಜನಿಸಿದ ರಂಗಮ್ಮ ಮತ್ತು ಸೀತಮ್ಮ ಎಂಬ ಇಬ್ಬರು ಹೆಣ್ಣುಮಕ್ಕಳನ್ನು ಕ್ಯಾದಿಗ್ಗೇರಿಯ ದೊರೆಗೆ ಕೊಟ್ಟು ವಿವಾಹ ಮಾಡಿದರು ಎಂಬುದು ತಿಳಿದುಬರುತ್ತದೆ.

೩೪೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಈ ಸಂಪುಟದಲ್ಲಿ ಮಹಿಳೆಯರ ಉಲ್ಲೇಖಗಳು ಅನೇಕ ಶಾಸನಗಳಲ್ಲಿವೆ. ಅವು ರಾಜಪ್ರಭುತ್ವದ ಮತ್ತು ಧಾರ್ಮಿಕ ಪ್ರಭುತ್ವದ ಮಹಿಳೆಯರ ಉಲ್ಲೇಖಗಳೇ ಆಗಿವೆ. ಏಕೆಂದರೆ ಸಮಾಜವೇ ಬ್ರಾಹ್ಮಣರ ಹಿಡಿತದಲ್ಲಿರುವುದರಿಂದ ರಾಜಪ್ರಭುತ್ವದ ತಲೆಬಾಗಲೇಬೇಕಿತ್ತು. ಇವರ ವೈಭವದ ಜೀವನಕ್ಕೆ ಕಾರಣರಾದ ಶ್ರಮಿಕ ವರ್ಗವನ್ನು ಇವರಿಂದ ದೂರವಿಡಲಾಗಿತ್ತು. ಹಾಗಾಗಿ ಬ್ರಾಹ್ಮಣರು ಮತ್ತು ಪ್ರಭುಗಳು ಹಾಗೂ ಸಾಮಂತರು ಅಧಿಕಾರವನ್ನು ಅನುಭವಿಸಬೇಕಾಗಿತ್ತು.

೩೪೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪೩, ಮಸ್ಕಿ-ಕ್ರಿ.ಶ.೧೩ನೆಯ ಶತಮಾನ, ಪುಟ ೧೭೭ರಲ್ಲಿ ಹಲಿಗೆ ಬಾರಿಸುವ ಪರೆಕಾರ ಎಳಮೋಜೆಸನ ಮಗಳು ಸೋಮಕ್ಕ ಎಂಬುವವಳು ೧೪ ಮತ್ತರು ಭೂಮಿಯನ್ನು ದಾನ ಮಾಡಿದ ಉಲ್ಲೇಖವಿದೆ.

೩೪೩. ಅಮರೇಶ ಆಲ್ಕೋಡ, ೨೦೧೨, ಪೂರ್ವೋಕ್ತ, ಪುಟ ೯೦-೯೧ರಲ್ಲಿ ಈ ಪದಗಳನ್ನು ದೇವದಾಸಿ ಯಾದವರಿಗೆ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.

೩೪೪. ದೇವರಕೊಂಡಾರೆಡ್ಡಿ(ಸಂ),೨೦೦೩,ಪೂರ್ವೋಕ್ತ, ಮಾನ್ವಿ-೬೬, ಕಲ್ಲೂರು-ಕ್ರಿ.ಶ. ೧೧೯೬, ಪುಟ ೨೪೬.

೩೪೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೨೯, ಮಸ್ಕಿ- ಕ್ರಿಪೂ. ೩ನೆಯ ಶತಮಾನ, ಪುಟ ೧೬೨.

೩೪೬. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೫೨, ಕೂಡ್ಲೂರು-ಕ್ರಿ.ಶ.೧೨ನೆಯ ಶತಮಾನ, ಪುಟ ೩೭. ಈ ಶಾಸನದಲ್ಲಿ ಕುಮುದ ಚಂದ್ರಮುನಿ ಎಂಬ ಜೈನಮುನಿಯ ಹೆಸರು ಉಲ್ಲೇಖವಿದೆ. ಇದೊಂದು ಜೈನ ಶಾಸನವೆಂಬ ಪ್ರಸಿದ್ಧಿಯನ್ನು ಪಡೆದಿದೆ.

೩೪೭. ದೇವರಕೊಂಡಾರೆಡ್ಡಿ(ಸಂ), ೨೦೦೩, ದೇವದುರ್ಗ-೧೬, ಗಬ್ಬೂರು-ಕ್ರಿ.ಶ.೧೧೧೯, ಪುಟ ೭೪. ಈ ಶಾಸನದಲ್ಲಿ ಗಬ್ಬೂರಿನಲ್ಲಿರುವ ಬ್ರಹ್ಮ ಜಿನಾಲಯ ಜೈನರ ಪ್ರಮುಖ ಕೇಂದ್ರವಾಗಿತ್ತು. ಈ ಬಸದಿಯನ್ನು ನಗರ ಜಿನಾಲಯವೆಂದು ಕರೆಯಲಾಗಿದೆ.

೩೪೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೨೭, ಹಿರೇಹೆಸರೂರು-ಕ್ರಿ.ಶ. ೧೦೨೦, ಪುಟ ೧೬೦.

೩೪೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩೩, ಮಸ್ಕಿ-ಕ್ರಿ.ಶ.೧೦೩೨, ಪುಟ ೧೬೬ ಈ ಶಾಸನದಲ್ಲಿ ಕನಕನಂದಿಯ ಉಲ್ಲೇಖವಿದೆ. ಆ ಬಸದಿಗೆ ೧೦೦ ಮತ್ತರು ಭೂಮಿ, ಗದ್ದೆ, ಗಾಣ, ಹೂದೋಟ ದಾನ ಬಿಡಲಾಗಿದೆ. ಇದು ಬಹುದೊಡ್ಡ ಜೈನ ನೆಲೆಯಾಗಿದೆ. ಬೌದ್ಧಮತದಂತೆ ಈ ಮತ ಸಹ ಮಸ್ಕಿಯನ್ನು ಮತ ಪ್ರಚಾರ ಕೇಂದ್ರವನ್ನಾಗಿಸಿಕೊಂಡಿರಬೇಕು.

೩೫೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೨೨, ದದ್ದಲ-ಕ್ರಿ.ಶ.೧೦೭೬, ಪುಟ ೨೪೮.

೩೫೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮೭, ಬಲ್ಲಟಗಿ-ಕ್ರಿ.ಶ.೧೦೭೯, ಪುಟ ೩೦೪.

೩೫೨. ದೇವದುರ್ಗಕ್ಕೆ ಹೊಂದಿಕೊಂಡಿರುವ ಚಂದನಕೇರಿ ಹಿಂದೆ ಒಂದು ಜೈನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಆದರೆ ಅಧ್ಯಯನದ ಅವಶ್ಯಕತೆಯಿದೆ.

೩೫೩. ಈ ಪ್ರದೇಶದಲ್ಲಿ ಕಂಡುಬರುವ ಶೈವ ಧರ್ಮದ ಮಠಗಳಿಗೆ ಹೈದರಾಬಾದ್ ನಿಜಾಮನು ಭೂಮಿಯನ್ನು ದಾನ ಮಾಡಿರುವುದು ಚಂದ್ರಶೇಖರ ನಾರಣಾಪುರ(೨೦೦೨) ಅವರ 'ಕರ್ನಾಟಕದ ವೀರಶೈವ ಮಠಗಳು' ಎಂಬ ಕೃತಿಯಿಂದ ತಿಳಿದುಬರುತ್ತದೆ. ಹೆಚ್ಚಿನ ಮಾಹಿಗಾಗಿ ನೋಡಬಹುದಾಗಿದೆ.

೩೫೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ದೇವದುರ್ಗ-೨, ಗಬ್ಬೂರು-ಕ್ರಿ.ಶ. ೧೦-೧೧ನೆಯ ಶತಮಾನ, ಪುಟ ೪೭.

೩೫೫. ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಪ್ರಮುಖ ಶೈವ ದೇವಾಲಯ ರಚನೆಗೊಂಡಿದೆ. ಈ ಪ್ರದೇಶದಲ್ಲಿ ಕಂಡುಬರುವ ಶೈವ ದೇವಾಲಯಗಳಿಗಿಂತ ಭಿನ್ನವಾಗಿದೆ. ಅರಕೇರಾದಿಂದ ನಾಗೋಲಿ ಗ್ರಾಮ ೪ ಕಿ.ಮೀ. ದೂರದಲ್ಲಿದೆ. ಇದೊಂದು ಶೈವ ಕೇಂದ್ರವಾಗಿರಬೇಕೆಂದು ಊಹಿಸಬಹುದಾಗಿದೆ.

೩೫೬. ದೇವದುರ್ಗದಲ್ಲಿ ಶೈವ ಪರಂಪರೆಗೆ ಸೇರಿದ ಸಿದ್ಧರಾಮೇಶ್ವರ ಮತ್ತು ಶಂಭುಲಿಂಗೇಶ್ವರ ದೇವಾಲಯಗಳು ಸಂಸ್ಥಾನಿಕರಿಂದ ಭೂದಾನ ಪಡೆದಿರುವುದು ಕಂಡುಬರುತ್ತದೆ.

೩೫೭. ದೇವದುರ್ಗ ತಾಲೂಕಿನಲ್ಲಿ ಹೆಚ್ಚು ಜನಪ್ರಿಯವಾದ ಶೈವ ಕೇಂದ್ರ ಮುಂಡರಗಿಯಾಗಿದೆ. ಇದು ಜನಸಾಮಾನ್ಯರ ಬಲವನ್ನು ಹೊಂದಿದೆ. ಈ ದೇವಾಲಯಕ್ಕೂ ಉಳಿದ ಶೈವ ಮಠಗಳಿಗೂ ಬಹು ವ್ಯತ್ಯಾಸ ಗೋಚರಿಸುತ್ತದೆ. ಇಲ್ಲಿ ಶೈವ ಮಠಗಳೆಲ್ಲವೂ ಲಿಂಗಾಯತರ ಅಧೀನದಲ್ಲಿವೆ. ಮುಂಡರಗಿಯದು ಕುರುಬರ ಅಧೀನದಲ್ಲಿದೆ. ಈ ತಾರತಮ್ಯ ಜಾತಿ ಸಂಬಂಧವಿಲ್ಲದಂತಿವೆ. ಜನಸಾಮಾನ್ಯರನ್ನು ತನ್ನತ್ತ ಕೇಂದ್ರೀಕರಿಸಿಕೊಂಡು ಗಮನ ಸೆಳೆದಿದೆ.

೩೫೮. ಜಾಲಹಳ್ಳಿಯಲ್ಲಿ ಕ್ರಿ.ಶ. ೬ನೆಯ ಶತಮಾನದಿಂದ ಶ್ರೀ ಜಯ ಶಾಂತಲಿಂಗೇಶ್ವರ ಮಠ ಸ್ಥಾಪನೆಗೊಂಡಿದೆ. ಇದು ಇಂದು ಸುಧಾರಿಸಿದೆ. ಮುಂದುವರೆದಿದೆ. ಶಿಕ್ಷಣಕೇಂದ್ರವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದೆ.

೩೫೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೯, ನವಿಲೆ-ಕ್ರಿ.ಶ. ೧೦೬೬, ಪುಟ ೧೪೨.

೩೬೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೪, ಕರಡಕಲ್-ಕ್ರಿ.ಶ. ೧೦೭೯, ಪುಟ ೧೨೯.

೩೬೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೨೪, ಅನ್ವರಿ-ಕ್ರಿ.ಶ. ೧೧೧೪, ಪುಟ ೧೫೭.

೩೬೨. ಅಮರೇಶ್ವರ ದೇವಾಲಯ ಈ ಪ್ರದೇಶದಲ್ಲಿ ಪ್ರಭಾವಿಯಾಗಿ ಗುರುತಿಸಿಕೊಂಡಿದೆ. ಅಲ್ಲದೆ ೧೨ನೆಯ ಶತಮಾನದಲ್ಲಿ ಆಯ್ದಕ್ಕಿ ಮಾರಯ್ಯ, ಅಯ್ದಕ್ಕಿ ಲಕ್ಕಮ್ಮನವರು ಅಮರೇಶ್ವರನನ್ನು ಅಂಕಿತನಾಮವನ್ನಾಗಿ ಬಳಸಿಕೊಂಡಿರುವುದು ಆಯ್ದಕ್ಕಿ ದಂಪತಿಗಳು ನೆಲೆ ಅಮರೇಶ್ವರ ಅಲ್ಲವೆಂದು ವಾದಿಸುತ್ತಾ, ಇದಕ್ಕೆ ಕರಡಕಲ್‌ನ ಕ್ರಿ.ಶ. ೧೧೯೧ರ ಶಾಸನದ ಉಲ್ಲೇಖವನ್ನು ಉಲ್ಲೇಖಿಸುತ್ತಾರೆ. ಆಯ್ದಕ್ಕಿ ದಂಪತಿಗಳು ತಮ್ಮ ವಚನಾಂಕಿತದಲ್ಲಿ ಬರುವ 'ಅಮರೇಶ್ವರಲಿಂಗ' ಈ ಅಮರೇಶ್ವರವನ್ನು ಸೂಚಿಸುವುದಿಲ್ಲ. ೧೨ನೆಯ ಶತಮಾನದಲ್ಲಿ ಅಮರಗುಂಡ ಮಲ್ಲಿಕಾರ್ಜುನ ಇನ್ನೂ ಅಮರೇಶ್ವರ ಆಗಿರಲಿಲ್ಲ. ೧೬ನೆಯ ಶತಮಾನದಲ್ಲಿ ಆಮರೇಶ್ವರ ಕೊಳದ ಜಲಮಹಿಮೆ ಸಾರಿದ ನಂತರ ಅಮರೇಶ್ವರ ಎನ್ನುವ ನಾಮಾಂಕಿತ ನೀಡಲಾಗಿದೆ ಎಂದು ಬಸವಲಿಂಗ ಸೊಪ್ಪಿಮಠ ಅವರು ತಿಳಿಸುತ್ತಾರೆ. ಫ.ಗು. ಹಳಕಟ್ಟಿಯವರು ಉಲ್ಲೇಖಿಸಿದಂತೆ ಅಮರೇಶ್ವರ ಕ್ಷೇತ್ರ ಶರಣ ದಂಪತಿ ಆಯ್ದಕ್ಕಿ ಮಾರಯ್ಯ, ಲಕ್ಕಮ್ಮರ ನೆಲೆಯಾಗಿರಲಿಲ್ಲ ವೆಂದು ಹೇಳುತ್ತಾರೆ(ವಿಜಯವಾಣಿ ದಿನಪತ್ರಿಕೆ ೨೭-೧೦-೨೦೧೨, ಪುಟ ೬ ಗಂಗಾವತಿ). ಆದರೆ ಶಾಸನಗಳನ್ನು ಪ್ರಧಾನವಾಗಿಟ್ಟುಕೊಂಡು ಅಭ್ಯಸಿಸಿದ ಕ್ರಮವಾಗಿ ಕಂಡುಬರುತ್ತದೆ. ಇಲ್ಲಿ ಅವರು ಐತಿಹ್ಯದ ಆಧಾರದ ಮೇಲೆ ಕಾಲನಿರ್ಣಯ ಮಾಡಲು ಪ್ರಯತ್ನಿಸಿದ್ದಾರೆ. ಆದರೆ ದೇವರಗುಡಿ ಶಾಸನದಲ್ಲಿ ಅಮರೇಶ್ವರ ದೇವರು ಎಂಬ ಉಲ್ಲೇಖ ಕಂಡುಬರುತ್ತದೆ. ಇದರ ಕಾಲ ಕ್ರಿ.ಶ. ೧೧೦೮ ಆಗಿದೆ. ಅಂದರೆ ಅಮರೇಶ್ವರ ಎಂಬ ಪದದ ಉಲ್ಲೇಖ ಇಲ್ಲಾಗಿರುವುದರಿಂದ ಗುರುಗುಂಟಾ ಅಮರೇಶ್ವರದ ಹೆಸರು ೧೧ನೆಯ ಶತಮಾದಲ್ಲಿಯೇ ಇದ್ದಿರಬೇಕು. ಶಾಸನ ಬರೆಯುವವನ ಆರಾಧ್ಯ ದೈವದ ಹಿನ್ನೆಲೆ ಇಲ್ಲಿ ಅರಿಯಬೇಕಾಗಿದೆ. ಇನ್ನೊಂದು ಮುಖ್ಯವಾಗಿ ಸಿದ್ಧಾರೂಢರು, ಅಮರೇಶ್ವರ ಕ್ಷೇತ್ರದಲ್ಲಿ ಸಾಧನೆ ಮಾಡಿದ್ದು, ಸಿದ್ಧಾರೂಢ ಚರಿತ್ರೆಯಲ್ಲೂ ಅಮರಗುಂಡ ಮಲ್ಲಿಕಾರ್ಜುನ ಎಂದು ಕರೆದಿದ್ದಾರೆಂಬುದು ತಿಳಿದುಬರುತ್ತದೆ. ಸಿದ್ಧಾರೂಢರ ಕಾಲ ಕ್ರಿ.ಶ.೧೮-೧೯ನೆಯ ಶತಮಾನದಲ್ಲಿ ಅಮರೇಶ್ವರದ ಹೆಸರು 'ಅಮರಗುಂಡ ಮಲ್ಲಿಕಾರ್ಜುನ' ಎಂದಿರುವುದನ್ನು ಗಮನಿಸಿದರೆ ಈ ಕ್ಷೇತ್ರವನ್ನು ಎಲ್ಲರೂ ಪ್ರೀತಿಯಿಂದ, ಗೌರವ ಪೂರ್ವಕವಾಗಿ ಅಮರೇಶ್ವರ ಎಂದು ಈ ದೇವಾಲಯ ಸ್ಥಾಪನೆಯಾದಂದಿನಿಂದ ಕರೆಯಲಾಗುತ್ತಿತ್ತೆನಿಸುತ್ತದೆ.

೩೬೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಲಿಂಗಸೂಗೂರು-೩೬, ಮಸ್ಕಿ-ಕ್ರಿ.ಶ. ೧೫೩೭, ಪುಟ ೧೭೦

೩೬೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨೮, ದೇವರಗುಡಿ-ಕ್ರಿ.ಶ.೧೧೦೧, ಪುಟ ೩೪೯.

೩೬೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨, ಸಾಲಗುಂದೆ-ಕ್ರಿ.ಶ. ೧೧೫೩, ಪುಟ ೩೪೬.

೩೬೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೧೮, ಮುಕ್ಕುಂದೆ-ಕ್ರಿ.ಶ.೧೬೦೩, ಪುಟ ೩೭೩.

೩೬೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೩೪, ಬಳಗಾನೂರು-ಕ್ರಿ.ಶ. (?), ಪುಟ ೩೯೭.

೩೬೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ- ೬೪, ಕಲ್ಲೂರು-ಕ್ರಿ.ಶ.೧೦೮೦, ಪುಟ ೨೮೩.

೩೬೯. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೧೫ ಮತ್ತು ೧೧೬, ಕವಿತಾಳ-ಕ್ರಿ.ಶ. ೧೨೧೭, ಪುಟ ೩೩೧-೩೩೪.

೩೭೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೪೪, ಕುರುಡಿ-ಕ್ರಿ.ಶ. ೧೧೩೭, ಪುಟ ೨೬೨-೬೩.

೩೭೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೯೨ ಬಲ್ಲಟಗಿ-ಕ್ರಿ.ಶ. ೧೦೩೬, ಪುಟ ೩೦೯.

೩೭೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೦೨, ಮಲ್ಲಟ-ಕ್ರಿ.ಶ. ೧೧೯೬, ಪುಟ ೩೧೮.

೩೭೩. ದೇವರಕೊಂಡಾರೆಡ್ಡಿ(ಸಂ),೨೦೦೩, ಮಾನ್ವಿ-೭೪, ಸಿರಿವಾರ-ಕ್ರಿ.ಶ.೯ನೆಯ ಶತಮಾನ, ಪುಟ ೨೯೫.

೩೭೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೬೦, ಹರವಿ-ಕ್ರಿ.ಶ.೧೦೭೬, ಪುಟ ೨೭೯.

೩೭೫. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೧, ಇಡಪನೂರು-ಕ್ರಿ.ಶ.೧೧೨೨, ಪುಟ ೧.

೩೭೬. ವಾಸುದೇವನ್ ಸಿ.ಎಸ್, ೨೦೧೨, ಕರ್ನಾಟಕ ದೇವಾಲಯ ಕೋಶ, ರಾಯಚೂರು ಜಿಲ್ಲೆ ಎಂಬ ಕೃತಿಯಲ್ಲಿ ಆಲ್ಕೂರಿನ ದೇವಸ್ಥಾನದಲ್ಲಿ ಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಲಾಗಿದೆ.

೩೭೭. ಜೇಗರಕಲ್‌ನಲ್ಲಿ ಈಶ್ವರ ದೇವಾಲಯ ಪ್ರಸಿದ್ಧಿಯನ್ನು ಪಡೆದಿದೆ. ಇದು ಪ್ರಮುಖ ಶೈವ ಕೇಂದ್ರವಾಗಿರ ಬಹುದೆನಿಸುತ್ತದೆ.

೩೭೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ರಾಯಚೂರು-೫೫, ದೇವಸೂಗೂರು-ಕ್ರಿ.ಶ. ೧೭ನೆಯ ಶತಮಾನ, ಪುಟ ೩೮

೩೭೯. ದೇವರಕೊಂಡಾರೆಡ್ಡಿ(ಸಂ), ರಾಯಚೂರು-೪೯, ಕಲ್ಮಲ-ಕ್ರಿ.ಶ. ೯೪೦, ಪುಟ ೩೩.

೨೮೦. ರಾಯಚೂರಿನಲ್ಲಿ ಅನೇಕ ಮಠಗಳು ದೇವಾಲಯಗಳು ಈ ಧರ್ಮದ ಕಾರ್ಯದಲ್ಲಿ ತೊಡಗಿದ್ದವು (ಮಾಹಿತಿಗಾಗಿ ನೋಡಿ: ಚಂದ್ರಶೇಖರ ನಾರಣಾಪುರ ಅವರ "ಕರ್ನಾಟಕದ ವೀರಶೈವ ಮಠಗಳು)".

೩೮೧. ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಈ ದೇವಾಲಯ ಶೈವ ಪರಂಪರೆಯನ್ನು ಮುಂದುವರೆಸಿಕೊಂಡು ಹೋದವುಗಳಲ್ಲಿ ಒಂದೆನಿಸುತ್ತದೆ.

೩೮೨. ದೇವರಕೊಂಡಾರೆಡ್ಡಿ(ಸಂ)೨೦೦೩,ಪೂರ್ವೋಕ್ತದೇವದುರ್ಗ-೧೦,ಗಬ್ಬೂರು-ಕ್ರಿ.ಶ. ೧೧೪೧,ಪುಟ ೬೭

೩೮೩. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೫೧, ಕುರುಡಿ-ಕ್ರಿ.ಶ. ೧೧೧೯, ಪುಟ ೨೭೧.

೩೮೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೮೧, ಬಲ್ಲಟಗಿ-ಕ್ರಿ.ಶ. ೧೦೨೮, ಪುಟ ೩೦೦.

೩೮೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೮, ಮುಕ್ಕುಂದಿ-ಕ್ರಿ.ಶ. ೧೦೮೮, ಪುಟ ೩೬೨

೩೮೬. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೩೪, ಮಸ್ಕಿ-ಕ್ರಿ.ಶ. ೧೦೧೮, ಪುಟ ೧೬೭.

೩೮೭. ದೇವರಕೊಂಡಾರೆಡ್ಡಿ(ಸಂ). ೨೦೦೩, ಸಿಂಧನೂರು-೩೯, ಬಳಗಾನೂರು-ಕ್ರಿ.ಶ. ೧೧೯೧, ಪುಟ ೪೦೬

೩೮೮. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೪೨, ದಿದ್ದಿಗಿ-ಕ್ರಿ.ಶ. ೯೧೮, ಪುಟ ೪೧೪.

೩೮೯. ಮಾನವಿ ತಾಲೂಕಿನ ಮಲ್ಲಟ ಗ್ರಾಮಪಂಚಾಯತಿಗೆ ಸೇರಿದ ಈ ಗ್ರಾಮ. ಸಿರವಾರ-ಹಟ್ಟಿ ಮಾರ್ಗದಲ್ಲಿದೆ. ಇಲ್ಲಿನ ರಂಗನಾಥ ದೇವರು ಕ್ಯಾದಿಗ್ಗೇರಿ ಸಂಸ್ಥಾನಿಕರ ಮನೆ ದೇವರು. ಅಲ್ಲದೆ ಈ ಪ್ರದೇಶದ ಎಲ್ಲಾ ಜನಾಂಗಗಳ ಆರಾಧ್ಯದೈವ. ಬೇಡರು, ವಡ್ಡರು, ಉಪ್ಪಾರರು, ದಾಸರು, ಇಂತಹ ಜನಾಂಗಗಳವರು ಆಚರಿಸುವ ಪ್ರಮುಖ ದೇವರಾಗಿದ್ದಾನೆ. ಇಂತಹ ಜನಸಾಮಾನ್ಯರ ಆರಾಧ್ಯ ದೇವರು ವಡವಟ್ಟಿ ಎಂಬ ಗ್ರಾಮದಲ್ಲಿರುವುದು ಕಂಡುಬರುತ್ತದೆ.

೩೯೦. ದೇವದುರ್ಗ ತಾಲೂಕಿಗೆ ಸೇರಿದ ಪ್ರಮುಖ ಗ್ರಾಮ. ಇದು ಸಂಸ್ಥಾನಿಕರ ಆಳ್ವಿಕೆಯ ಸ್ಥಳ. ಈ ಗ್ರಾಮದಲ್ಲಿ ರಂಗನಾಥ ದೇವಾಲಯವಿದೆ. ಇದರ ಆಚರಣೆಯೂ ಸಹ ಜನಸಾಮಾನ್ಯರಿಂದ ಕೂಡಿರುತ್ತದೆ.

೩೯೧. ದೇವದುರ್ಗ ತಾಲೂಕಿನಲ್ಲಿದೆ. ದೇವದುರ್ಗ ಸಂಸ್ಥಾನಿಕರ ಕುಲದೇವರು. ಇದು ಕೂಡಾ ಮೇಲೆ ಉಲ್ಲೇಖಿಸಿದಂತೆ ಇದೆ.

೩೯೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಪೂರ್ವೋಕ್ತ, ಮಾನ್ವಿ-೮೮, ಬಲ್ಲಟಗಿ-ಕ್ರಿ.ಶ. ೧೧ನೆಯ ಶತಮಾನ, ಪುಟ ೩೦೫.

೩೯೩. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೨೦, ರಾಯಚೂರು-ಕ್ರಿ.ಶ. ೧೫೪೮-೪೯, ಪುಟ ೧೭.

೩೯೪. ದೇವರಕೊಂಡಾರೆಡ್ಡಿ(ಸಂ), ೨೦೦೩, ಲಿಂಗಸೂಗೂರು-೫೬, ಮುದಗಲ್-ಕ್ರಿ.ಶ. ೧೧೯೧, ಪುಟ ೧೯೦.

೩೯೫. ದೇವರಕೊಂಡಾರೆಡ್ಡಿ(ಸಂ), ೨೦೦೩, ಮಾನ್ವಿ-೧೪, ಮಾನ್ವಿ-ಕ್ರಿ.ಶ. ೧೪೦೬-೦೭, ಪುಟ ೨೩೬.

೩೯೬. ದೇವರಕೊಂಡಾರೆಡ್ಡಿ(ಸಂ), ೨೦೦೩, ರಾಯಚೂರು-೧೬, ರಾಯಚೂರು-ಕ್ರಿ.ಶ. ೧೪೮೯೮-೯೯, ಪುಟ ೧೫.

೩೯೭. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೩೮, ಬಳಗಾನೂರು-ಕ್ರಿ.ಶ. ೧೧೮೨ ಮತ್ತು ಸಿಂಧನೂರು-೩೯, ಬಳಗಾನೂರು-ಕ್ರಿ.ಶ. ೧೧೯೧, ಪುಟ ೪೦೦-೪೦೮.

೩೯೮. ಬಳಗಾನೂರಿನಲ್ಲಿರುವ ಊರಿಗೆ ಹೊಂದಿಕೊಂಡಿರುವ ಹೊಲವೊಂದರಲ್ಲಿ ಈ ದೇವಾಲಯವಿದೆ. ಇದನ್ನು ತ್ವಾಟದ(ತೋಟದ) ಯಲ್ಲಮ್ಮನ ಗುಡಿ ಎಂದು ಕರೆಯುತ್ತಾರೆ. ಬಹುತೇಕ ದುರ್ಗದ ಹೊರವಲಯದಲ್ಲಿ ಕಟ್ಟಲ್ಪಟ್ಟ ಮೊದಲ ದೇವಾಲಯ ಇದಾಗಿದೆ. ಈ ದೇವಾಲಯ ಸಂಪೂರ್ಣವಾಗಿ ಹಾಳಾಗಿ ಮಂಟಪವೊಂದೆ ಉಳಿದುಕೊಂಡಿತ್ತು. ಇತ್ತೀಚೆಗೆ ಗರ್ಭಗೃಹವನ್ನು ನಿರ್ಮಿಸಿ ಹೊಸ ಮೂರ್ತಿಯನ್ನು ಇಲ್ಲಿ ಸ್ಥಾಪಿಸಲಾಗಿದೆ. ಈ ದೇವಾಲಯ ಬಹುತೇಕವಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರುವಂತಿದೆ. ಇಲ್ಲಿಯ ಶಾಸನ ತದನಂತರದಲ್ಲಿ ಈ ದೇವಾಲಯಕ್ಕೆ ದಾನ ದತ್ತಿಯ ನೀಡಿದ ಬಗ್ಗೆ ಮಾಹಿತಿಯನ್ನು ಕೊಡುತ್ತದೆ(ರಡ್ಡೆಪ್ಪಹಳ್ಳಿ ೨೦೧೦: ೨೨೬).

೩೯೯. ದೇವರಕೊಂಡಾರೆಡ್ಡಿ(ಸಂ),೨೦೦೩,ಪೂರ್ವೋಕ್ತ, ಮಾನ್ವಿ-೧೦೨, ಮಲ್ಲಟ-ಕ್ರಿ.ಶ. ೧೧೯೬, ಪುಟ ೩೧೯.

೪೦೦. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨೩, ಜಾಲಿಹಾಳು-ಕ್ರಿ.ಶ.೧೧೦೫, ಪುಟ ೩೮೧.

೪೦೧. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೪೭, ಮಾಡಶಿರವಾರ-(?), ಪುಟ ೪೧೯.

□

ಅಧ್ಯಾಯ ನಾಲ್ಕು

# ರಾಯಚೂರು ದೋ-ಅಬ್ ಪ್ರದೇಶದ ಸಾಮಂತರು ಮತ್ತು ಸಂಸ್ಥಾನಿಕರು(ಕ್ರಿಶ. ೧೦ರಿಂದ ೨೦ನೆಯ ಶತಮಾನದವರೆಗೆ)

## ೪.೧.

ಮಧ್ಯಕಾಲೀನ ಕಾಲಘಟ್ಟದಲ್ಲಿ ಅಸ್ತಿತ್ವಕ್ಕೆ ಬಂದ ಪದ್ಧತಿಗಳಲ್ಲಿ ಸಾಮಂತ ಮತ್ತು ಸಂಸ್ಥಾನಿಕರ ಆಡಳಿತ ಕ್ರಮ ಪ್ರಮುಖವಾಗಿದೆ. ಸಾಮಂತ ಪದ್ಧತಿಯಲ್ಲಿ ರಾಜ್ಯ ವ್ಯವಸ್ಥೆಯ ಒಟ್ಟು ರಚನೆ ಅಂತರ್ಗತ ಗೊಂಡು ರಾಜಕೀಯ ರಚನೆಯ ಉಳಿದೆಲ್ಲ ಸಂಬಂಧಗಳಿಗಿಂತ ಅಧಿಪತಿ ಅಧೀನರ ಸಂಬಂಧ ಪ್ರಬಲವಾಗಿ ಬೆಳೆದದ್ದು ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ಹಲವು ಸಣ್ಣ ಪುಟ್ಟ ಸಂಸ್ಥಾನಗಳು ಅಸ್ತಿತ್ವಕ್ಕೆ ಬಂದವು. ಅವು ಆರಂಭದಲ್ಲಿ ಸ್ವತಂತ್ರವಾಗಿದ್ದು, ನಂತರದಲ್ಲಿ ಅಧೀನತೆಗೆ ಒಳಗಾದಂತೆ ಕಂಡುಬರುತ್ತವೆ. ಸಾಮಂತ ಮತ್ತು ಸಂಸ್ಥಾನಿಕರು ತಮ್ಮ ಆಡಳಿತ ಪ್ರದೇಶದಲ್ಲಿ ಎಲ್ಲ ನಿರ್ಣಯಗಳನ್ನು ಕೈಗೊಳ್ಳುವ ಅಧಿಕಾರ ಹೊಂದಿದ್ದರು. ಸಾಮಂತರು ತಮ್ಮ ಅಧಿಪತಿಗೆ ಷರತ್ತು ಬದ್ಧರಾಗಿ ಆಪತ್ತಿನ ಸಮಯದಲ್ಲಿ ಸೈನಿಕ ಸೇವೆ, ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕಿತ್ತು. ಆದರೆ ಸಂಸ್ಥಾನಿಕರು ಇಂತಹ ಷರತ್ತುಗಳಿಗೆ ಒಳಗಾಗಿರಲಿಲ್ಲ. ಅನಿವಾರ್ಯ ಸಂದರ್ಭದಲ್ಲಿ ವಾರ್ಷಿಕ ಪೊಗದಿಯನ್ನು ಸಲ್ಲಿಸುವ ಪ್ರಮೇಯಕ್ಕೆ ಸಿಲುಕಿರುವುದು ಕಂಡುಬರುತ್ತದೆ. ಈ ಬಗೆಯ ಆಡಳಿತ ವ್ಯವಸ್ಥೆಯನ್ನು ಊಳಿಗಮಾನ್ಯ ವ್ಯವಸ್ಥೆ, ಭೂಮಾನ್ಯ ಪದ್ಧತಿ, ಸಾಮಂತ ಪದ್ಧತಿ ಎಂದು ಕರೆಯಲಾಗಿದೆ.

ಈ ಪ್ರದೇಶದಲ್ಲಿ ಕ್ರಿ.ಶ.೧೦ನೆಯ ಶತಮಾನದಿಂದ ಸಾಮಂತ ಆಡಳಿತವಿದ್ದುದು ಕಂಡುಬರುತ್ತದೆ. ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿ ಯಾದವರು ಹಾಗೂ ವಾರಂಗಲ್ ಕಾಕತೀಯರು ಸಾಮಂತ ಪದ್ಧತಿಯನ್ನು ಬೆಳೆಸಿರುವುದನ್ನು ಗಮನಿಸಬಹುದಾಗಿದೆ. ಸಾಲಗುಂದೆಯ ಸಿಂದರು, ಮೊರಟದ ಹೈಹಯರು, ಕರಡಿಕಲ್ ಕದಂಬರು ಮತ್ತು ಇವರ ಸಮಕಾಲೀನ ಸಾಮಂತರು ಈ ಪ್ರದೇಶವನ್ನು ಆಳ್ವಿಕೆ ಮಾಡಿದ್ದು, ಸ್ವತಂತ್ರರಾಗಿದ್ದರು. ಇವರು ಸಾಮಾಜಿಕ ವ್ಯವಸ್ಥೆಯ ಮೇಲೆ ಯಜಮಾನಿಕೆಯನ್ನು ಸಾಧಿಸಿದ್ದರು. ತಾವೇ ಸಾಮಂತರಾಗಿದ್ದರೂ ತಮ್ಮ ಕೈಕೆಳಗೆ ಉಪಸಾಮಂತರನ್ನು ಹೊಂದಿದ್ದರು. ಇವರಲ್ಲಿ 'ಕುಟುಂಬ ಪ್ರಭುತ್ವ' ವ್ಯವಸ್ಥೆ ಇದ್ದುದು ಕಾಣಬಹುದಾಗಿದೆ. ಇವರ ಅಧೀನದಲ್ಲೂ ಉಪ ತುಂಡರಸರು ಸೇವೆ ಸಲ್ಲಿಸುತ್ತಿದ್ದದ್ದು ಶಾಸನಗಳಿಂದ ತಿಳಿದುಬರುತ್ತದೆ.

ಸಾಮಂತ ಪದ್ಧತಿ ನಂತರ ಸಂಸ್ಥಾನಿಕರ ಆಡಳಿತ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಇದು ಕೂಡ "ಕುಟುಂಬ ಪ್ರಭುತ್ವ" ವ್ಯವಸ್ಥೆಯನ್ನು ಹೊಂದಿತ್ತು. ಇಲ್ಲಿನ ಗುಂತಗೋಳ, ಗುಡಗುಂಟಿ, ದೇವದುರ್ಗ, ಜಾಲಹಳ್ಳಿ, ಅರಕೇರಿ, ಕ್ಯಾದಿಗ್ಗೇರಿ, ಗಲಗ, ಕರಿಗುಡ್ಡ, ಮುಂಡರಗಿ ಹಾಗೂ ರಾಮದುರ್ಗ ಮುಂತಾದ ಸಂಸ್ಥಾನಗಳು ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದವು. ಸಾಮಂತರ ಆಳ್ವಿಕೆ ಕಾಲಘಟ್ಟದಲ್ಲಿ ಕರಡಿಕಲ್ಲು-೩೦೦, ಮೊರಟ-೩೦೦, ಮೊಸಳಿಕಲ್-೩೦೦, ಮುದಗುಂದೂರು-೩೦೦, ಅಯ್ಯಣವಾಡಿ-೩೦೦, ಸಾಲಗುಂದೆ-೭೦ ಮುಂತಾದವು ಪ್ರಮುಖ ಆಡಳಿತ ಕೇಂದ್ರಗಳಾಗಿ ಗುರುತಿಸಿಕೊಂಡಿದ್ದವು. ಸಾಮಂತರು ಎರಡೆರಡು ರಾಜಧಾನಿ ಕೇಂದ್ರಗಳನ್ನು ಹೊಂದಿದ್ದುದು

ಕಂಡುಬರುತ್ತದೆ. ಮೊರಟದ ಹೈಹಯರು ಮೊರಟವನ್ನು ತಮ್ಮ ಮೊದಲ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು, ನಂತರ ಸಿರವಾರಕ್ಕೆ ರಾಜಧಾನಿಯನ್ನು ವರ್ಗಾಯಿಸಿದರು. ಇವರಂತೆ ಕರಡಿಕಲ್ಲು ಕದಂಬರೂ ಕರಡಿಕಲ್ಲನ್ನು ಮೊದಲ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೆ, ಎರಡನೆಯ ರಾಜಧಾನಿಯನ್ನಾಗಿ ಮುದಗಲ್ಲನ್ನು ಅಸ್ತಿತ್ವಕ್ಕೆ ತಂದದ್ದು ತಿಳಿದುಬರುತ್ತದೆ. ಸಾಮಂತರಂತೆ ಸಂಸ್ಥಾನಿಕರೂ ತಮ್ಮ ಆಡಳಿತ ಕೇಂದ್ರಗಳಿಂದಲೆ ಎಲ್ಲ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದರು. ವೈವಾಹಿಕ ಸಂಬಂಧಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿತ್ತು. ಇವರ ಹೋರಾಟ ತಮ್ಮ ರಾಜಕೀಯ ಅಧಿಕಾರದ ಅಸ್ತಿತ್ವಕ್ಕಾಗಿ ನಡೆದಿರುವುದು ಕಂಡುಬರುತ್ತದೆ. ಬಿಜಾಪುರದ ಆದಿಲ್‌ಶಾಹಿಗಳು, ಮೊಗಲರು ಹಾಗೂ ಹೈದರಾಬಾದ್ ನಿಜಾಮರ ಕಾಲಗಳಲ್ಲಿ ಸಂಸ್ಥಾನಿಕರು ತಮ್ಮ ಸ್ವತಂತ್ರ ಆಡಳಿತ ನಿರ್ವಹಣೆಯಲ್ಲಿ ಆಡೆತಡೆಗಳನ್ನು ಎದುರಿಸಬೇಕಾಯಿತು. ನಿಜಾಮರ ಕಾಲದಲ್ಲಿ ಇದು ಪ್ರತಿಷ್ಠಿತ ಕೇಂದ್ರವಾಗಿ ಬದಲಾಗಿತ್ತು. ಇಡೀ ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮರ ವಿರುದ್ಧ ಹೋರಾಡಿದ ಪ್ರದೇಶಗಳಲ್ಲಿ ರಾಯಚೂರು ದೋ-ಅಬ್‌ನ ಪ್ರದೇಶ ಮುಂಚೂಣಿಯಲ್ಲಿತ್ತು. ನಿಜಾಮರನ್ನು ಕನ್ನಡ ವಿರೋಧಿಗಳೆಂದೆ ಬಿಂಬಿಸಲಾಗಿದ್ದು, ನಿಜಾಮರು ಕನ್ನಡಾಭಿಮಾನಿಗಳಾಗಿದ್ದುದಲ್ಲದೆ ಜನರಿಗೆ ಕುಡಿಯುವ ನೀರಿಗಾಗಿ ಗಿರಿಕಿ ಬಾವಿಗಳನ್ನು ತೋಡಿಸಿರುವುದು ಕಂಡುಬರುತ್ತದೆ. ಬ್ರಿಟಿಶರು ತಮ್ಮ ಪ್ರಾಬಲ್ಯ ಹೆಚ್ಚಿಸಲು ಇಲ್ಲಿ ಕಂಟೋನ್ಮೆಂಟ್ ಅನ್ನು ಸ್ಥಾಪಿಸಿ, ಈ ಪ್ರದೇಶದ ಹತ್ತಿ ಇಂಗ್ಲೆಂಡಿಗೆ ಅಗತ್ಯವಾಗಿತ್ತು. ಹಾಗಾಗಿ ಬೀರಾರ್ ಒಪ್ಪಂದದ ಮೂಲಕ ಹತ್ತಿ ಬೆಳೆಯುತ್ತಿದ್ದ ರಾಯಚೂರು ದೋ-ಅಬ್ ಪ್ರದೇಶವನ್ನು ವಶಪಡಿಸಿಕೊಳ್ಳಲಾಯಿತು. ಇವೆಲ್ಲದರ ನಡುವೆ ಭಾರತದಾದ್ಯಂತ ೧೮೫೭-೫೮ರಲ್ಲಿ ಬ್ರಿಟಿಶರ ವಿರುದ್ಧ ಬಂಡಾಯ ನಡೆದಿತ್ತು. ಆಗ ಇಲ್ಲಿಯೂ ಬಂಡಾಯ ಎದ್ದಿರುವುದು ಕಂಡುಬರುತ್ತದೆ.

ಪ್ರಸ್ತುತ ಅಧ್ಯಾಯವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯ ಭಾಗ ಸಾಮಂತರು ಮತ್ತು ಸಾರ್ವಭೌಮರ ಸಂಬಂಧವನ್ನು ಕುರಿತಿದೆ. ಎರಡನೆಯ ಭಾಗದಲ್ಲಿ ರಾಜಕೀಯ ಅಸ್ತಿತ್ವಕ್ಕಾಗಿ ಸಂಸ್ಥಾನಿಕರು ಮಾಡಿದ ಹೋರಾಟವನ್ನು ಕುರಿತು ವಿವರಿಸಿದೆ. ಈ ಭಾಗದಲ್ಲಿ ಮೊದಲನೆಯದಾಗಿ ಸಂಸ್ಥಾನಗಳ ಸ್ಥೂಲ ಪರಿಚಯವನ್ನು, ಎರಡನೆಯದಾಗಿ ಸಂಸ್ಥಾನಿಕರು ಬಿಜಾಪುರದ ಆದಿಲ್‌ಶಾಹಿ, ಮೊಗಲರು ಮತ್ತು ಹೈದರಾಬಾದ್ ನಿಜಾಮರ ಕಾಲಘಟ್ಟದಲ್ಲಿ ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಡಿದ ಪರಿಯನ್ನು, ಮೂರನೆಯದಾಗಿ ಸಾಮಂತರು ಮತ್ತು ಸಂಸ್ಥಾನಿಕರ ಕಾಲದ ಆಡಳಿತ ವಿಭಾಗಗಳನ್ನು ಕುರಿತು ವಿವರಿಸಲಾಗಿದೆ. ಮೂರನೆಯ ಭಾಗದಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿನ ಬ್ರಿಟಿಶರನ್ನು ಕುರಿತಿದೆ. ಈ ಭಾಗದಲ್ಲಿ ಮೊದಲನೆಯದಾಗಿ ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್ ಸ್ಥಾಪನೆ-೧೮೪೨, ಎರಡನೆಯದಾಗಿ ೧೮೫೩ರ ಬೀರಾರ್ ಒಪ್ಪಂದ ಹಲವು ಆಯಾಮಗಳನ್ನು ಮತ್ತು ಮೂರನೆಯದಾಗಿ ೧೮೫೮ರ ಬಂಡಾಯದಲ್ಲಿ ರಾಯಚೂರು ದೋ-ಅಬ್‌ನ ಪಾತ್ರವನ್ನು ಚರ್ಚಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇಲ್ಲಿ ದೊರೆತ ಶಾಸನಗಳು, ಕಪಟರಾಳ ಕೃಷ್ಣರಾಯ, ಕೃಷ್ಣಕೊಲ್ಹಾರ ಕುಲಕರ್ಣಿ, ಚನ್ನಬಸವ ಹಿರೇಮಠ, ಅಮರೇಶ ಯತಗಲ್, ಹೆನ್ರಿ ಜಾರ್ಜ್ ಬ್ರಿಗ್ಸ್ ಮೊದಲಾದವರ ಬರಹಗಳನ್ನು ಬಳಸಿಕೊಳ್ಳಲಾಗಿದೆ.

## ೪.೨. ಸಾಮಂತರು ಮತ್ತು ಸಾರ್ವಭೌಮರ ಸಂಬಂಧಗಳು

ರಾಯಚೂರು ದೋ-ಅಬ್ ಪ್ರದೇಶ ಸಾರ್ವಭೌಮರಿಗಿಂತ ಸಾಮಂತರ ಆಡಳಿತವನ್ನು ಹೆಚ್ಚು ಕಂಡಿದೆ. ಯಾವೊಂದು ಅರಸು ಮನೆತನವೂ ಈ ಪ್ರದೇಶದಲ್ಲಿ ತಮ್ಮ ರಾಜಧಾನಿ ಕೇಂದ್ರಗಳನ್ನು

ಸ್ಥಾಪಿಸಲಿಲ್ಲ. ಆದರೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇಮ್ಮಡಿ ಜಯಸಿಂಹನ ಕಾಲದಲ್ಲಿ ಮಸ್ಕಿಯನ್ನು ರಾಜಧಾನಿ ಕೇಂದ್ರವನ್ನಾಗಿ ಸ್ಥಾಪಿಸಲಾಯಿತು. ಚೋಳರ ಪ್ರಭಾವ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅಧಿಕವಾಗಿತ್ತು. ಚೋಳರ ತೀವ್ರವಾದ ಹೋರಾಟವನ್ನು ಹತ್ತಿಕ್ಕಲು ಮಸ್ಕಿ ಸೂಕ್ತವಾದ ಸ್ಥಳವಾಗಿತ್ತು. ಮೂಲಭೂತ ಸೌಕರ್ಯಗಳಿಂದ ಸಹಕಾರ ನೀಡಿದ ಮಸ್ಕಿಯನ್ನು ರಾಜಧಾನಿಯನ್ನಾಗಿ ಮಾಡಲಾಯಿತು. ಕಲ್ಯಾಣ ಚಾಲುಕ್ಯರಸ ಐದನೆಯ ವಿಕ್ರಮಾದಿತ್ಯನು ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಾಗ ಅವನ ತಮ್ಮನಾದ ಇಮ್ಮಡಿ ಜಯಸಿಂಹನು ಮಸ್ಕಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿರುವುದಾಗಿ ಮಸ್ಕಿ (೩೨)–ಕ್ರಿ.ಶ. ೧೦೧೦ರ ಶಾಸನದಿಂದ ತಿಳಿದುಬರುತ್ತದೆ.[೧] ಭುವನೈಕ ಮಲ್ಲನ ಕಾಲದವರೆಗೆ ರಾಜಧಾನಿ ಕೇಂದ್ರವಾಗಿತ್ತೆಂದು ಮಸ್ಕಿ(ಳಳ)–ಕ್ರಿ.ಶ. ೧೦೭೧ರ ಶಾಸನದಿಂದ ತಿಳಿದುಬರುತ್ತದೆ.[೨] ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಸ್ಕಿ ರಾಜಧಾನಿ ಕೇಂದ್ರವಾಗಿತ್ತೆನ್ನುವುದಕ್ಕೆ ಸುಮಾರು ಹತ್ತಕ್ಕೂ ಹೆಚ್ಚು ಶಾಸನಗಳಿವೆ. ಇದರಿಂದ ಸುಮಾರು ಒಂದು ಶತಮಾನ ಕಾಲ ಮಸ್ಕಿ ಕಲ್ಯಾಣ ಚಾಲುಕ್ಯರ ರಾಜಧಾನಿ ಕೇಂದ್ರವಾಗಿತ್ತೆಂದು ಹೇಳಬಹುದಾಗಿದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಸ್ಕಿಯನ್ನು ರಾಜಧಾನಿ ಕೇಂದ್ರವನ್ನಾಗಿ ಮಾಡಿಕೊಂಡಿದ್ದರೂ ಹಲವು ಸಾಮಂತ ಅರಸರು ವಿವಿಧ ಆಡಳಿತ ವಿಭಾಗಗಳಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಸಾಮಂತ ಸಾರ್ವಭೌಮರ ಸಂಬಂಧಗಳು ಮೌರ್ಯರ ಕಾಲದಿಂದಲೂ ಇಲ್ಲಿ ಚಾಲ್ತಿಯಲ್ಲಿದ್ದವು. ಉಂಬಳಿ ಮಾನ್ಯ ವ್ಯವಸ್ಥೆ, ಭೂಮಾನ್ಯ ಪದ್ಧತಿ, ಸಾಮಂತ ಪದ್ಧತಿ ಇವು ಒಂದೇ ಚೌಕಟ್ಟಿನ ಪರಧಿಯೊಳಗೆ ಗುರುತಿಸಿಕೊಂಡ ಸಂವಾದಿ ಪದಗಳಾಗಿದ್ದು, ಇವನ್ನು ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ಇವು ಸಾಮಂತ ಮತ್ತು ಸಾರ್ವಭೌಮರ ಸಂಬಂಧಗಳನ್ನು ಕುರಿತು ತಿಳಿಸುವಂತವುಗಳಾಗಿವೆ.

ಡಿ.ಡಿ. ಕೊಸಾಂಬಿ ಅವರು "ಸಾಮಂತರು ರಾಜನಿಗೆ ಸಂಪೂರ್ಣವಾಗಿ ನಿಷ್ಠರಾಗಿರಬೇಕು ಎನ್ನುವುದು ಪೂರ್ಣವಾಗಿ ಅಭಿವೃದ್ಧಿಗೊಂಡಿರುವ ಉಂಬಳಿಮಾನ್ಯ ವ್ಯವಸ್ಥೆಯ ಲಕ್ಷಣವಾಗಿದೆ. ಇದೊಂದು ಅಮೂರ್ತವಾದಂತಹ ಸ್ವಾಮಿ ನಿಷ್ಠೆ ಅಲ್ಲ. ಬದಲಾಗಿ ಇದು ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳ ಭದ್ರ ಬುನಾದಿಯ ಮೇಲೆ ರೂಪುಗೊಂಡ ಸ್ವಾಮಿನಿಷ್ಠೆ. ಇಲ್ಲಿ ಉತ್ಪಾದನಾ ಸಾಧನಗಳು ಮತ್ತು ಸಂಬಂಧಗಳೆಂದರೆ, ಭೂಮಿಯ ಒಡೆತನ, ಮಿಲಿಟರಿ ಸೇವೆ, ತೆರಿಗೆ ಸಂಗ್ರಹಣೆ ಮತ್ತು ದೊಡ್ಡ ಉದ್ದಿಮೆದಾರರ ಮೂಲಕ ಸ್ಥಳೀಯ ಉತ್ಪನ್ನವನ್ನು ಸರಕಾರ ಪರಿವರ್ತಿಸುವ ಪ್ರಕ್ರಿಯೆಯಾಗಿದೆ. ಕ್ರಿ.ಶ. ೬ನೆಯ ಶತಮಾನಕ್ಕೆ ಮುಂಚಿತವಾಗಿ ಈ ವ್ಯವಸ್ಥೆ ಖಂಡಿತಾ ಇರಲು ಸಾಧ್ಯವಿರಲಿಲ್ಲ. 'ಸಾಮಂತ' ಎಂಬುದು ಇಲ್ಲಿ ತೀರಾ ಮುಖ್ಯವಾಗುವ ಪದ. ಕ್ರಿ.ಶ. ೫೩೨ರ ವೇಳೆಗೆ ಆ ಪದಕ್ಕೆ ಕಡೇ ಪಕ್ಷ "ನೆರೆಯ ಅರಸ" ಎಂಬ ಅರ್ಥವಾದರೂ ಇತ್ತು. ಆದರೆ ಕ್ರಿ.ಶ. ೫೩೨ ನಂತರ ಜಮೀನುದಾರಿ, ಜಹಾಗೀರದಾರ ಎಂಬ ಅರ್ಥ ಪಡೆದುಕೊಂಡಿತು. ಹೊಸ ಜಹಾಗೀರದಾರರು ದೊರೆಗೆ ನಿಷ್ಠರಾಗಿದ್ದರು. ತೆರಿಗೆ ಸಂಗ್ರಹಿಸಿಕೊಡುವ ಕಾರ್ಯವನ್ನು ನಿರ್ವಹಿಸಿಕೊಡುತ್ತಿದ್ದರು. ಮನುಸ್ಮೃತಿಯಲ್ಲಿನ ದೊರೆಗೆ ಸಾಮಂತರಾರೂ ಇರಲಿಲ್ಲ. ಇಡೀ ಆಡಳಿತವನ್ನು ಅವನೇ ನೇರವಾಗಿ ಅಥವಾ ಯಾವುದೇ ಸ್ವತಂತ್ರ ಸ್ಥಾನಮಾನವಿರದ ರಾಜನಿಯೋಗಿಗಳ ಮೂಲಕ ನಿರ್ವಹಿಸಬೇಕಾಗಿತ್ತೆಂದು" ತಮ್ಮ "ಪುರಾಣ ಮತ್ತು ವಾಸ್ತವ" ಎಂಬ ಕೃತಿಯಲ್ಲಿ ಉಲ್ಲೇಖಿಸುತ್ತಾರೆ(ಕೊಸಾಂಬಿ ೨೦೦೩:ಳಳ–ಳ೫). ಜೊತೆಗೆ ಈ ಪದ್ಧತಿ ಗುಪ್ತರ ಕಾಲದಲ್ಲಿ ಹೆಚ್ಚು ಬಳಕೆಗೊಂಡು ಗುಪ್ತರ ಪತನಾನಂತರದಲ್ಲಿ ನಮ್ಮ ದೇಶದಲ್ಲಿ ಭೂಮಾಲಿಕತ್ವದ ಯುಗ ಪ್ರಾರಂಭವಾಯಿತೆಂದು ತಿಳಿಸುತ್ತಾರೆ(ಕೊಸಾಂಬಿ ೨೦೧೨: ೧೮೧–೧೮೨).

ಸಾಮಂತ ಪದ್ಧತಿಯನ್ನು ರಾಜಾರಾಮ ಹೆಗಡೆಯವರು ಕೌಟಿಲ್ಯನೂ ಸಾಮಂತ ರಾಜರನ್ನು ಉಲ್ಲೇಖಿಸಿರುವುದನ್ನು ಪ್ರಸ್ತುತಪಡಿಸುತ್ತಾರೆ. ಆದರೆ ಅಲ್ಲಿ ಸಾಮಂತರು ಎಂದರೆ ಅಕ್ಕ ಪಕ್ಕದ ರಾಜ್ಯದ ರಾಜರು. ಒಬ್ಬ ಸಾಮ್ರಾಟನಿಗೆ ಅಡಿಯಾಳಾಗಿರುವ ರಾಜ ಎಂದು ಅಭಿಪ್ರಾಯ ಪಡುತ್ತಾರೆ (ತಂಬಂಡ ೨೦೧೦: ೨೪೯). ವಿಜಯ್ ಪೂಣಚ್ಚ ತಂಬಂಡ ಅವರು ತಮ್ಮ 'ಬರ್ಟನ್ ಸ್ಟೈನ್ ಮತ್ತು ವಿಜಯನಗರ' ಎಂಬ ಲೇಖನದಲ್ಲಿ ಸಾಮಂತ ಪದ್ಧತಿ ಕುರಿತು ವಿಜಯನಗರದಲ್ಲಿ "ಕೇಂದ್ರ ಆಡಳಿತ ವ್ಯವಸ್ಥೆ" ಬಲಹೀನವಾಗಿತ್ತು ವಿಜಯನಗರ ಒಂದು 'ಸಾಮ್ರಾಜ್ಯ'ವಾಗಿ ಎಂದೂ ಇರಲಿಲ್ಲ. ಅಲ್ಲಿ ಮಧ್ಯಕಾಲೀನ ಯುರೋಪಿನ್ ದೇಶಗಳಲ್ಲಿದ್ದಂಥ 'ಆಡಳಿತಶಾಹಿ ಪ್ರಧಾನ'ವಾದ ಕೇಂದ್ರೀಕೃತ ವ್ಯವಸ್ಥೆಯೂ ಇರಲಿಲ್ಲ. ಯುರೋಪಿನಲ್ಲಿ ಆ ಮಾದರಿ ಇದ್ದರೆ ಭಾರತದ ಸಂದರ್ಭದಲ್ಲಿ ಈ ಮಾದರಿಯಿತ್ತು ಎಂದು ವಾದಿಸುವುದು ಸರಿಯಲ್ಲ. ಬದಲಿಗೆ ತನ್ನದೇ ಆದ ಸ್ವಾಯತ್ತ ಆಡಳಿತ ವ್ಯವಸ್ಥೆ ಹೊಂದಿದ್ದ ಹಾಗೂ ಸಾಮ್ರಾಜ್ಯದ ರಾಜಧಾನಿಯ ನಿರಂಕುಶಶಾಹಿ ಅಧಿಕಾರದಿಂದ ಮುಕ್ತವಾಗಿದ್ದ "ತುಂಡು ರಾಜ್ಯ"(ಸೆಗ್ಮೆಂಟರಿ ಸ್ಟೇಟ್)ಗಳು ಆ ಕಾಲದಲ್ಲಿ ಪ್ರಮುಖವಾಗಿದ್ದವು. ಅರಸರು ಸಾಂಪ್ರದಾಯಿಕ ಮುಖ್ಯಸ್ಥರಾಗಿದ್ದರು. ವಿಜಯನಗರ ಹಿಂದು ಪರ ಅಥವಾ ಮುಸ್ಲಿಂ ವಿರೋಧಿ ರಾಜ್ಯವಾಗಿರಲಿಲ್ಲ ಅಥವಾ ಕನ್ನಡ ಅಥವಾ ತೆಲುಗು ಪರವಾದ ರಾಜ್ಯವಾಗಿರಲಿಲ್ಲ ಎಂದು ಅವರು ಅಭಿಪ್ರಾಯ ಪಡುತ್ತಾರೆ(ತಂಬಂಡ ೧೯೯೯:೧೪-೧೬).

ರಾಜಾರಾಮ ಹೆಗಡೆ ಅವರು ಬರ್ಟನ್ ಸ್ಟೈನ್ ಅವರ ಮತ್ತೊಂದು ಆಡಳಿತ ಪದ್ಧತಿಯಾದ "ಕೌಟುಂಬಿಕ ಪ್ರಭುತ್ವ" ಆಡಳಿತ ವ್ಯವಸ್ಥೆ ವಿಜಯನಗರ ಕಾಲದಲ್ಲಿತ್ತೆಂದು ಉಲ್ಲೇಖಿಸುತ್ತಾರೆ. "ಕೃಷ್ಣದೇವರಾಯನ ಕಾಲದವರೆಗೆ ಸೆಗ್ಮೆಂಟರಿ ಅವಸ್ಥೆಯಲ್ಲೇ ಇತ್ತು. ಅಂದರೆ, ಸ್ಥಾನಿಕ ಸಂಸ್ಥೆಗಳು ಪ್ರಬಲವಾಗಿದ್ದು ವಿಜಯನಗರದ ಸಾರ್ವಭೌಮತ್ವ ಸೀಮಿತವಾಗಿತ್ತು ಹಾಗೂ ಈ ಪ್ರಭುತ್ವಕ್ಕೆ ಸೆಗ್ಮೆಂಟರಿ ಸ್ಟೇಟ್‌ನ ಸ್ವರೂಪವಿತ್ತು. ಆದರೆ ಬದಲಾದ ಸನ್ನಿವೇಶದಲ್ಲಿ ಈ ರಾಜರು ತಮ್ಮ ಸೈನ್ಯ ಬಲ ಹಾಗೂ ಪ್ರಭುತ್ವವನ್ನು ಕೇಂದ್ರೀಕರಿಸಿಕೊಳ್ಳುವ ಅಗತ್ಯ ಬಿದ್ದಿತು. ಈ ಮಿತಿಯಿಂದ ಹೊರಬರಲಿಕ್ಕೆ ೧೪ನೆಯ ಶತಮಾನದ ಅಂತ್ಯಾವಧಿಯಿಂದ ಅಮರನಾಯಕ ಪದ್ಧತಿಯನ್ನು ಆಶ್ರಯಿಸಲಾಯಿತು. ಕೃಷ್ಣದೇವರಾಯನು ತನ್ನ ರಾಜ್ಯಭಾರವನ್ನೇ ಈ ನಾಯಕರನ್ನಾಧರಿಸಿ ನಡೆಸಲು ತೊಡಗಿ ಸ್ವಾಯತ್ತ ಸಂಸ್ಥೆಗಳನ್ನು ದುರ್ಬಲಗೊಳಿಸಿದನು. ಸೈನ್ಯ ಸುಧಾರಣೆ ಕೂಡ ಇದರ ಉದ್ದೇಶವಾಗಿತ್ತು. ಆತನು ಸೆಗ್ಮೆಂಟರಿ ಪ್ರಭುತ್ವದ ಕಾರ್ಯವಿಧಾನಗಳಾದ ಸಾಂಪ್ರದಾಯಿಕ ವಿಧಿಗಳನ್ನೂ ಪ್ರಭುತ್ವವನ್ನು ಗಟ್ಟಿಗೊಳಿಸಲಿಕ್ಕೆ ಬಳಸಿದನು. ಅವನ ಕಾಲದಲ್ಲಿ ಈ ರಾಜ್ಯವು ದುರ್ಗಗಳ ನಿರ್ಮಾಣ ಹಾಗೂ ದಂಡನಾಯಕರು ಹಾಗೂ ನಾಯಕರನ್ನಾಶ್ರಯಿಸಿದ ಹೆಚ್ಚು ಕೇಂದ್ರ ನಿರ್ದೇಶಿತ ರಾಜ್ಯವಾಗಿ ಬದಲಾಗಿತ್ತು. ಇದು ವಿಜಯನಗರ ರಾಜ್ಯ ರಚನೆಗೆ ಬದಲಾವಣೆಯನ್ನು ತಂದರೂ, ಸ್ಥಾನಿಕ ಸಂಸ್ಥೆಗಳ ಬದಲಾಗಿ ನಾಯಕರು ರಾಜ್ಯಕ್ಕೆ ತೊಡಕಾದರು. ನಾಯಕರು ಸೈನ್ಯ ಸಂಘಟನೆ ಮಾಡಿಕೊಂಡು, ತಮ್ಮ ಪ್ರದೇಶದಲ್ಲಿ ಅಧಿಕಾರವನ್ನು ಕೇಂದ್ರೀಕರಿಸಿ ಅಳಿಯ ರಾಮರಾಯನ ಕಾಲಕ್ಕೇ ಪ್ರಬಲರಾಗಿದ್ದರು. ಇಂಥ ಬದಲಾದ ಸನ್ನಿವೇಶದಲ್ಲಿ ರಾಮರಾಯನು ರಾಜ್ಯವನ್ನು ಪಿತೃಕೇಂದ್ರಿತವನ್ನಾಗಿ ಬದಲಾಯಿಸ ತೊಡಗಿದನು. ಈ ರೀತಿ ನಾಯಕ ಪ್ರಭುಗಳು ತಾಳಿಕೋಟೆ ಯುದ್ಧಕ್ಕೂ ಮೊದಲೇ ಅಸ್ತಿತ್ವದಲ್ಲಿ ಬಂದಿದ್ದವು" ಎನ್ನುತ್ತಾರೆ (ತಂಬಂಡ ೨೦೧೦: ೪೨೯-೪೩೦). ಅಳಿಯ ರಾಮರಾಯನು ನಾಯಕರ ಪದ್ಧತಿಯಿಂದ ಆಗುತ್ತಿದ್ದ ಧಕ್ಕೆಯನ್ನು ತಪ್ಪಿಸಲೆಂದು "ಕೌಟುಂಬಿಕ ಪ್ರಭುತ್ವ" ಆಡಳಿತವನ್ನು ಜಾರಿಗ ತರುವ ಮೂಲಕ ಆಡಳಿತ ಪದ್ಧತಿಯಲ್ಲಿ ಪುನಃ ಬದಲಾವಣೆ ಮಾಡಿದನು. ಅಳಿಯ ರಾಮರಾಯ ತಮ್ಮ ಕುಟುಂಬದ

ಸದಸ್ಯರುಗಳನ್ನೇ ಪ್ರಾಂತ್ಯಗಳ ಅಧಿಕಾರಿಗಳನ್ನಾಗಿ ಮಾಡುವ ಮೂಲಕ ನಾಯಕರ ಪ್ರಾಬಲ್ಯವನ್ನು ಕಡಿಮೆಗೊಳಿಸಿದನು. ಆ ಮೂಲಕ ಪ್ರಾಂತ್ಯಗಳ ಅಧಿಕಾರವನ್ನು ಮತ್ತೆ ಪುನಃ ಕೇಂದ್ರೀಕರಿಸಲು ಪ್ರಯತ್ನಿಸಿದನು. ಹೀಗೆ ಸಾಮಂತರ ಬದಲಾಗಿ ಪ್ರಾಂತೀಯ ಆಡಳಿತವನ್ನು ಕುಟುಂಬದ ಸದಸ್ಯರೇ ನಿಯಂತ್ರಣ ಮಾಡತೊಡಗಿದರೆಂಬುದಾಗಿ ತಿಳಿದುಬರುತ್ತದೆ.

ಸಾಮಂತ ಪದ್ಧತಿ ಕುರಿತ ವ್ಯಾಖ್ಯಾನಗಳಲ್ಲಿ ಭಿನ್ನಾಭಿಪ್ರಾಯ ಇರುವುದು ಕಂಡುಬರುತ್ತದೆ. ಸಾಮಂತ ಪದ್ಧತಿಯನ್ನು ಡಿ.ಡಿ.ಕೊಸಾಂಬಿ ಅವರು ಕ್ರಿ.ಶ. ೬ನೆಯ ಶತಮಾನದಿಂದ ಗುರುತಿಸಿದರೆ, ರಾಜಾರಾಮ ಹೆಗಡೆ ಅವರು ಮೌರ್ಯರ ಕಾಲದಿಂದಲೂ ಇದ್ದಿತೆಂದು ತಿಳಿಸುತ್ತಾರೆ. ಇದಕ್ಕೆ ರಾಯಚೂರು ದೋ-ಅಬ್ ಪ್ರದೇಶದಲ್ಲಿರುವ ಮೌರ್ಯರ ಅರಸ ಅಶೋಕನ ಮಸ್ಕಿ ಶಾಸನ[೩] ಪೂರಕವಾಗಿ ಕಂಡು ಬರುತ್ತದೆ. ಮಸ್ಕಿ ಶಾಸನದಲ್ಲಿ ಉಲ್ಲೇಖಗೊಂಡ ಕುಮಾರ ಮತ್ತು ಮಹಾಮಾತ್ರರು ಇಲ್ಲಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಇದೂ ಒಂದು ಬಗೆಯ ಸಾಮಂತ ಪದ್ಧತಿಯಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕ್ರಿಪೂ.೩ನೆಯ ಶತಮಾನದಿಂದ ಸಾಮಂತ ಪದ್ಧತಿ ಅಸ್ತಿತ್ವದಲ್ಲಿದ್ದಿತ್ತೆಂದು ಗುರುತಿಸ ಬಹುದಾಗಿದೆ. ರಾಜ್ಯದ ಸ್ವರೂಪ ಈ ಪ್ರದೇಶದಲ್ಲಿ ಆಗಾಗ ಬದಲಾಗುತ್ತಿರುವುದನ್ನು ಗಮನಿಸಬಹುದಾಗಿದೆ. ಕ್ರಿಪೂ. ಮೂರನೆಯ ಶತಮಾನದಿಂದ ಕ್ರಿ.ಶ. ೧೩ನೆಯ ಶತಮಾನದವರೆಗೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಆಡಳಿತ ವ್ಯವಸ್ಥೆ "ಕುಟುಂಬ ಕೇಂದ್ರಿತ ಪ್ರಭುತ್ವ" ವ್ಯವಸ್ಥೆಯ ಜೊತೆಗೆ ಬರ್ಟನ್ ಸ್ಟೈನ್ ಅವರು ಗುರುತಿಸಿದ ಸೆಗ್ಮೆಂಟರಿ ಸ್ಟೇಟ್‌ಗಳು(ತಂಡು ರಾಜ್ಯ) ಅಸ್ತಿತ್ವದಲ್ಲಿದ್ದವು. ಸೆಗ್ಮೆಂಟರಿ ಸ್ಟೇಟ್ ವ್ಯವಸ್ಥೆಯನ್ನು ವಿಜಯನಗರದ ಕೃಷ್ಣದೇವರಾಯನ ಕಾಲದವರೆಗೆ ಗುರುತಿಸಲಾಗಿದೆ. ಆದರೆ ವಾಸ್ತವವಾಗಿ ನಾಯಕರ ಪದ್ಧತಿಯನ್ನು ಜಾರಿಗೆ ತಂದವನು ವಿಜಯನಗರದ ಎರಡನೆಯ ದೇವರಾಯ. ಈ ಪದ್ಧತಿಗೆ ಹೆಚ್ಚು ಚಾಲನೆ ದೊರೆತದ್ದು ಕೃಷ್ಣದೇವರಾಯನ ಕಾಲದಲ್ಲಿ. ಕೃಷ್ಣದೇವರಾಯನ ನಂತರ ವಿಜಯನಗರದ ಆಡಳಿತ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ತರಲು ಅಳಿಯ ರಾಮರಾಯ ಬರ್ಟನ್ ಸ್ಟೈನ್ ಗುರುತಿಸಿದ್ದ ಸೆಗ್ಮೆಂಟರಿ ಸ್ಟೇಟ್‌ನ ಬದಲಾಗಿ 'ಕೌಟುಂಬಿಕ ಪ್ರಭುತ್ವ' ವ್ಯವಸ್ಥೆಯನ್ನು ಜಾರಿಗೆ ತಂದು ನಾಯಕರ ಪದ್ಧತಿಯನ್ನು ರದ್ದುಗೊಳಿಸಿದನು. ಕ್ರಿ.ಶ. ೧೬ರಿಂದ ೧೮ನೆಯ ಶತಮಾನದವರೆಗೆ ಈ ಪದ್ಧತಿ ಮುಂದುವರೆಯಿತು. ಈ ಕೌಟುಂಬಿಕ ಪ್ರಭುತ್ವ ವ್ಯವಸ್ಥೆ ಎಲ್ಲ ಕಾಲಘಟ್ಟಗಳಲ್ಲಿ ಅಸ್ತಿತ್ವದಲ್ಲಿದ್ದಿತೆಂದೇ ಹೇಳಬೇಕಾಗುತ್ತದೆ. ಈ ಪದ್ಧತಿ ಆಗಾಗ ಮರುಕಳಿಸುತ್ತದೆ.

ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದ ಸಾಮಂತರ ಮತ್ತು ಸಂಸ್ಥಾನಿಕರ ಆಡಳಿತ ಸ್ವರೂಪ ಮತ್ತು ಸಾರ್ವಭೌಮರೊಂದಿಗೆ ಹೊಂದಿರುವ ಸಂಬಂಧಗಳು ಆರ್ಥಿಕ ಮತ್ತು ರಾಜಕೀಯ ಕೇಂದ್ರಿತವಾಗಿದ್ದವು. ಇದಕ್ಕೆ ಸಾಮಂತರಿಗೆ ವಿಧಿಸಿದ ಷರತ್ತುಗಳೇ ಇಲ್ಲಿ ಸಾಕ್ಷಿಯಾಗಿವೆ. ವಿಸ್ತಾರಗೊಂಡ ರಾಜ್ಯವನ್ನು ನೇರ ಆಳ್ವಿಕೆ ಮಾಡಲು ಸಾಧ್ಯವಿಲ್ಲದ ಕಾರಣ ವಿವಿಧ ಆಡಳಿತ ವಿಭಾಗಗಳನ್ನು ಗುರುತಿಸಿ, ಅಲ್ಲಿ ಸಾಮಂತರ ಮೂಲಕ ಆಡಳಿತ ನಡೆಸುವ ಅನಿವಾರ್ಯತೆ ಉಂಟಾಯಿತು. ಗೆದ್ದ ಪ್ರದೇಶ ಬೇರೆಯವರಿಗೆ ಸೇರಬಾರದೆಂಬ ಆಕಾಂಕ್ಷೆಯಿಂದ ತನ್ನ ಅಧೀನದಲ್ಲಿಯೇ ಮುಂದುವರೆಯಬೇಕೆಂಬ ಕಾರಣಕ್ಕಾಗಿ ಈ ಪದ್ಧತಿಯನ್ನು ಅನುಸರಿಸಬೇಕಾಯಿತು. ಈ ಪದ್ಧತಿಯ ಪ್ರಕಾರ ಸಾಮಂತರಾದವರು ಸಾರ್ವಭೌಮರಿಗೆ ನಿಷ್ಠರಾಗಿರಬೇಕು. ಅಗತ್ಯ ಬಿದ್ದಾಗ ಸೈನಿಕ ಸೇವೆಯನ್ನು ಸಲ್ಲಿಸಬೇಕು. ವಾರ್ಷಿಕವಾಗಿ ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕು. ಈ ಮೂರು ಷರತ್ತುಗಳಿಗೆ ಬದ್ಧರಾಗಿ ಆಳ್ವಿಕೆ ಮಾಡಬೇಕಿತ್ತು. ಈ ನಿಯಮಗಳನ್ನು ಪಾಲಿಸಿದರೆ ಸಾಕು ಸಾಮಂತರು ಸರ್ವ ಸ್ವತಂತ್ರರಾಗಿರ ಬಹುದಾಗಿತ್ತು. ಸಾಮಂತರ ಜೊತೆಗೆ ಸಂಸ್ಥಾನಿಕರ ಆಡಳಿತ ವ್ಯವಸ್ಥೆಯೂ ಇಲ್ಲಿ ಕಂಡುಬರುತ್ತದೆ.

ಸಂಸ್ಥಾನಿಕರು ಸ್ವತಂತ್ರವಾಗಿದ್ದರು. ಷರತ್ತುಗಳಿರಲಿಲ್ಲ. ಆದರೂ ಅನಿವಾರ್ಯತೆಯ ಹಿನ್ನೆಲೆಯಲ್ಲಿ ವಾರ್ಷಿಕ ಪೊಗದಿಯನ್ನು ಸಲ್ಲಿಸುವ ನಿಯಮ ಅಸ್ತಿತ್ವಕ್ಕೆ ಬಂದಿತು. ಸಂಸ್ಥಾನಿಕರ ಆಡಳಿತ ಕುಟುಂಬ ಕೇಂದ್ರಿತ ಪ್ರಭುತ್ವ ವ್ಯವಸ್ಥೆಯಿಂದ ಕೂಡಿತ್ತು.

### ೪.೨.೧. ಸಾಮಂತರ ಸ್ಥೂಲ ಪರಿಚಯ

ಈ ಪ್ರದೇಶದಲ್ಲಿ ಹಲವು ಸಾಮಂತ ಅರಸು ಮನೆತನಗಳು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಅವುಗಳೆಂದರೆ, ಸಾಲಗುಂದೆಯ ಸಿಂಧರು, ಮೊರಟದ ಹೈಹಯರು, ಕರಡಿಕಲ್ ಕದಂಬರು ಇವರ ಸಮಕಾಲೀನ ಸಾಮಂತರು, ಅಮರನಾಯಕರು ಮತ್ತು ಸರದಾರರು ಮುಂತಾದವರು. ಇವರು ಈ ಪ್ರದೇಶದಲ್ಲಿ ಸಾಮಂತ ಪದ್ಧತಿಯ ಷರತ್ತುಗಳಿಗೆ ಬದ್ಧರಾಗಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈ ಪ್ರದೇಶದ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ನಿರ್ಣಾಯಕ ಪಾತ್ರ ವಹಿಸಿದ ಈ ಸಾಮಂತರ ಕುರಿತು ಈ ಪ್ರದೇಶ ಚರಿತ್ರೆಯಲ್ಲಿ ದಾಖಲಾಗದೆ ಉಳಿದಿದೆ. ಈ ಪ್ರದೇಶದ ಪ್ರತಿಯೊಂದು ನಿರ್ಣಯಗಳಿಗೆ ನಿರ್ಣಾಯಕರಾಗಿದ್ದ ಈ ಸಾಮಂತರು ಇಡೀ ಪ್ರದೇಶದ ಸಾಮಾಜಿಕ ವ್ಯವಸ್ಥೆಯನ್ನು ಹಿಡಿದಿಟ್ಟುಕೊಂಡು ಪ್ರಭುತ್ವದ ಪರವಾಗಿ ಕಾರ್ಯನಿರ್ವಹಿಸಿರುವುದು ಗೋಚರಿಸುತ್ತದೆ. ಹೆಚ್ಚುವರಿ ಉತ್ಪಾದನೆಗೆ ಕಾರಣವಾಗಿದ್ದ ರೈತಾಪಿ, ಕಾರ್ಮಿಕ ವರ್ಗ ಶೋಚನೀಯ ಸ್ಥಿತಿಯಲ್ಲಿತ್ತು. ವೈಭವಯುತ ಜೀವನವನ್ನು ಸಾಮಂತರು ಸಾಗಿಸಿರುವುದು ಇಲ್ಲಿ ವಿಧಿಸಿದ ತೆರಿಗೆಗಳಿಂದ ಕಂಡುಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ಸಾಮಂತರ ಕುರಿತು ಸ್ಥೂಲ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ.

#### ೪.೨.೧.೧. ಸಾಲಗುಂದೆಯ ಸಿಂಧರು(ಕ್ರಿ.ಶ. ೧೦೨೧-೧೧೫೪)

ಕರ್ನಾಟಕದಲ್ಲಿ ಕಂಡು ಬರುವಂತೆ ರಾಯಚೂರು ದೋ-ಅಬ್ ಪ್ರದೇಶದಲ್ಲಿಯೂ ಸಿಂಧರ ಆಳ್ವಿಕೆ ಕಂಡುಬರುತ್ತದೆ. ಕರ್ನಾಟಕದಲ್ಲಿ ಅಲ್ಲಲ್ಲಿ ಅನೇಕ ಸಿಂಧ ಮನೆತನಗಳು ಕಲ್ಯಾಣ ಚಾಲುಕ್ಯ, ಕಲಚೂರಿ ಮತ್ತು ಸೇವುಣರ ಸಾಮಂತರಾಗಿ ಆಳಿದ್ದಾರೆ. ಇದುವರೆಗೆ ಗುರುತಿಲಸ್ಪಟ್ಟ ಸಿಂಧ ಮನೆತನಗಳು ಹೀಗಿವೆ. ಬೆಳಗುತ್ತಿ ಸಿಂಧರು. ಬಾಗಡಗೆಯ ಸಿಂಧರು, ಯಲಬುರ್ಗಿ ಸಿಂಧರು, ರಂಜೋಲದ ಸಿಂಧರು, ಮುಳುಗುಂದ ಸಿಂಧರು, ಕೋಗಳಿನಾಡು ಸಿಂಧರು, ಗುತ್ತಿಯ ಸಿಂಧರು, ಕುರುಗೋಡು ಸಿಂಧರು, ಸಾಲಗುಂದೆ ಸಿಂಧರು, ಚಕ್ರಕೂಟದ ಸಿಂಧರು ಮತ್ತು ಪ್ರತ್ಯಂಡ್ರಕದ ಸಿಂಧರು. ಇವು ಹತ್ತನೆಯ ಶತಮಾನದಲ್ಲಿ ಕಂಡುಬರುವ ಸಿಂಧ ಮನೆತನಗಳಾಗಿವೆ ಎಂದು ಜಗದೀಶ ಅವರು ತಿಳಿಸುತ್ತಾರೆ(ಜಗದೀಶ ೨೦೦೧: ೧೦೯). ಇವರೆಲ್ಲರಿಗಿಂತಲೂ ಸಾಲಗುಂದೆಯ ಸಿಂಧರು ಭಿನ್ನರಾಗಿದ್ದರೆಂದು ದೇವರಕೊಂಡಾರೆಡ್ಡಿ ಅವರು ಪ್ರಸ್ತಾಪಿಸುತ್ತಾರೆ. ಸಾಲಗುಂದೆ ಸಿಂಧನೂರು ತಾಲೂಕಿನಲ್ಲಿದೆ. ಈ ಸಾಲಗುಂದೆಯನ್ನು ರಾಜಧಾನಿ ಕೇಂದ್ರವನ್ನಾಗಿಸಿಕೊಂಡಿದ್ದರು. ಇವರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಕ್ರಿ.ಶ.೧೦೨೧-೧೧೫೪ರ ವರೆಗೆ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಇವರನ್ನು ಕುರಿತು ೧೦ಕ್ಕೂ ಹೆಚ್ಚು ಶಾಸನಗಳು ತಿಳಿಸುತ್ತವೆ. ಇವರು ಉಪಸಾಮಂತರನ್ನು ಹೊಂದಿದ್ದರು.

ಸಾಲಗುಂದೆಯ ಸಿಂಧರು ಅಗ್ರಹಾರ, ದೇವಾಲಯ, ಬ್ರಾಹ್ಮಣರಿಗೆ ದಾನ ನೀಡಿರುವುದು ಕಂಡುಬರುತ್ತದೆ. ರೌಡಕುಂದೆ(೧) ಕ್ರಿ.ಶ. ೧೦೫೩,[೪] ಸಾಲಗುಂದೆ(೨) ಕ್ರಿ.ಶ. ೧೧೫೩,[೫] ಸಾಲಗುಂದೆ(೪) ಕ್ರಿ.ಶ.೧೦೬೩,[೬] ಮುಕ್ಕುಂದಿ(೫) ಕ್ರಿ.ಶ. ೧೧೩೪,[೭] ಮುಕ್ಕುಂದಿ(೬) ಕ್ರಿ.ಶ. ೧೧೩೪,[೮] ಮುಕ್ಕುಂದಿ(೮) ಕ್ರಿ.ಶ. ೧೦೮೮,[೯] ಮುಕ್ಕುಂದಿ(೯) ಕ್ರಿ.ಶ. ೧೦೪೯,[೧೦] ಮುಕ್ಕುಂದಿ(೭) ಕ್ರಿ.ಶ. ೧೦೯೭,[೧೧] ಜಾಲಿಹಾಳು(೨೩) ಕ್ರಿ.ಶ. ೧೧೦೫[೧೨] ಹಾಗೂ ದೇವರಗುಡಿ(೨೮) ಕ್ರಿ.ಶ. ೧೧೦೮ರ[೧೩] ದಾನ ಶಾಸನಗಳು ಸಾಕ್ಷಿಯಾಗಿವೆ.

ಅರಸನ ಹೆಸರಿಲ್ಲದೆ ವಂಶಾವಳಿಯನ್ನು ರಚಿಸಿರುವುದರ ಬಗ್ಗೆ ಮುಕ್ಕುಂದಿ(೮)ಕ್ರಿ.ಶ. ೧೦೮೮ರ ಶಾಸನದಿಂದ ತಿಳಿದುಬರುತ್ತದೆ. ಹಾಗೆಯೇ ಅರಸರ ಹೆಸರುಗಳನ್ನು ಉಲ್ಲೇಖಿಸದೆ, ಸ್ವತಂತ್ರವಾಗಿ ಶಾಸನ ಹೊರಡಿಸಿದರು. ಇದಕ್ಕೆ ಮುಕ್ಕುಂದಿ(೯)ಕ್ರಿ.ಶ.೧೦೪೯ರ ಶಾಸನ ಅರಸನ ಹೆಸರಿಲ್ಲದೆ ಸಿಂಧವಂಶದ ಗೋನರಸ ಎಂದು ತಿಳಿಸುತ್ತದೆ.[೧೪] ಇದು ಸ್ವತಂತ್ರತೆಯನ್ನು ಸೂಚಿಸುತ್ತದೆ. ಸಾಮಂತ ಪದ್ಧತಿಯ ನಿಯಮಗಳಿಗೆ ಬದ್ಧರಾಗಿ ಸ್ವತಂತ್ರವಾಗಿ ರಾಜ್ಯಭಾರ ಮಾಡಿರುವುದು ಗೋಚರಿಸುತ್ತದೆ. ಕ್ರಿ.ಶ.೧೦೨೧ರಲ್ಲಿ ಈ ಮನೆತನ ಎಡೆದೊರೆನಾಡು-೨೦೦೦ನ್ನು ಆಳುತ್ತಿದ್ದ ಜಯಸಿಂಹನ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಮನೆತನ ಕಲ್ಯಾಣ ಚಾಲುಕ್ಯರೊಂದಿಗೆ ಆರ್ಥಿಕ ಮತ್ತು ರಾಜಕೀಯ ಸಂಬಂಧಗಳನ್ನು ಹೊಂದಿರುವುದು ಕಂಡುಬರುತ್ತದೆ. ಆದರೆ ವೈವಾಹಿಕ ಸಂಬಂಧಗಳು ನಡೆದಿರುವುದು ಅಷ್ಟಾಗಿ ಗೋಚರಿಸುವುದಿಲ್ಲ. ಕೆಲವು ಸಲ ಸಾಮಂತರನ್ನು ಅಧೀನದಲ್ಲಿಟ್ಟುಕೊಳ್ಳುವುದಕ್ಕೋಸ್ಕರ ಕೇಂದ್ರದಲ್ಲಿ ದಂಡನಾಯಕ ಅಥವಾ ಯಾವುದೇ ಅಧಿಕಾರಿಯಾಗಿದ್ದವರನ್ನು ನೇಮಿಸಲಾಗುತ್ತಿತ್ತು. ರಾಯಚೂರು ದೋ-ಅಬ್ ಪ್ರದೇಶ ಕಲ್ಯಾಣ ಚಾಲುಕ್ಯರ ಕಾಲಘಟ್ಟದಲ್ಲಿ ಎಡದೊರೆ-೨೦೦೦ ಎಂಬ ಆಡಳಿತ ವಿಭಾಗವಾಗಿ ಗುರುತಿಸಿಕೊಂಡಿದೆ.[೧೫] ಒಟ್ಟು ಆಡಳಿತದ ಹಿಡಿತ ಕೇಂದ್ರದ ಅರಸನ ಆಪ್ತರಲ್ಲಿದ್ದು, ಸಾಮಂತರ ಮೂಲಕ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಗುಪ್ತರ ಯುಗದ ಸಾಮಂತ ಪದ್ಧತಿಗೆ ಸಾಲಗುಂದೆ(೨)-ಕ್ರಿ.ಶ.೧೧೫೩ರ ಶಾಸನ ಆಧಾರವಾಗಿದೆ.[೧೬] ಈ ಶಾಸನದಲ್ಲಿ ಮಲ್ಲಿಕಾರ್ಜುನ ಅರಸನು ಕೇಂದ್ರದಿಂದ ಆಳುತ್ತಿದ್ದರೆ, ಅವನ ಆಪ್ತನೂ, ದಂಡನಾಯಕನೂ ಆದ ನಾಚಣ ಎಂಬುವವನು ಎಡದೊರೆ-೨೦೦೦ ಎಂಬ ಈ ಆಡಳಿತ ವಿಭಾಗದ ಸಾಮಂತ ಅಧಿಪತಿಯಾಗಿದ್ದನು. ನಾಚಣನ ಉಪಸಾಮಂತನಾಗಿ ಸಿಂಧವಂಶದ ಬಾಚಿದೇವ ಎಂಬುವವನು ಎಡೆದೊರೆ-೨೦೦೦ದ ಉಪ ಆಡಳಿತ ಕೇಂದ್ರವಾದ ಸಾಲಗುಂದೆ-೭೦ರಲ್ಲಿ ಆಳುತ್ತಿದ್ದನು. ಆರ್.ಎಸ್. ಶರ್ಮ ಅವರು ತಿಳಿಸುವಂತೆ ಸಾಮಂತರು, ಉಪಸಾಮಂತರನ್ನು ಹೊಂದಿರುತ್ತಿದ್ದರು ಎಂಬುದಕ್ಕೆ ಇದು ಸೂಕ್ತ ಉದಾಹರಣೆ. ಸಾಲಗುಂದೆಯ ಸಿಂಧರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಸೀಮಿತವಾದ ಪ್ರದೇಶದಲ್ಲಿ ಆಳ್ವಿಕೆಯನ್ನು ಮಾಡಿರುವುದು ಕಂಡುಬರುತ್ತದೆ.

### ೪.೨.೧.೨. ಮೊರಟದ ಹೈಹಯರು(ಕ್ರಿ.ಶ. ೧೦೪೦-೧೨೩೧)

ಇವರು ಆರಂಭದಲ್ಲಿ ಇಂದಿನ ಮಲ್ಲಟ(ಅಂದಿನ ಮೊರಟ)ವನ್ನು ರಾಜಧಾನಿಯನ್ನಾಗಿಸಿಕೊಂಡು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ರಾಜ್ಯಭಾರ ಮಾಡಿದರು. ಸಾಮಂತ ಮಲ್ಲದೇವರಸನ ಕಾಲದಲ್ಲಿ ಮಲ್ಲಟವನ್ನು ತೊರೆದು ಸಿರವಾರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿರುವುದು ಕಂಡುಬರುತ್ತದೆ. ಮೊರಟದ ಹೈಹಯರನ್ನು ಕುರಿತು ೨೮ ಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ. ಇವರು ಕಲ್ಯಾಣ ಚಾಲುಕ್ಯರು, ಕಲಚೂರಿಗಳು ಹಾಗೂ ದೇವಗಿರಿ ಯಾದವರ ಅಧೀನ ಸಾಮಂತರಾಗಿ ಆಳ್ವಿಕೆ ಮಾಡಿದ್ದಾರೆ. ಇದಕ್ಕೆ ಪೂರಕವಾಗಿ ಕಲ್ಯಾಣ ಚಾಲುಕ್ಯರ ಅಧೀನದಲ್ಲಿದ್ದರೆನ್ನುವುದಕ್ಕೆ ಮಾನ್ವಿ(೧೧) ಕಾಲವಿಲ್ಲದ ಶಾಸನ,[೧೭] ಮಾನ್ವಿ(೧೩)-೧೦೫೩ರ ಶಾಸನ ಇರಬೇಕು,[೧೮] ಮಾನ್ವಿ(೧೫)-೧೦೫೨,[೧೯] ಹಿರೇಕೊಟ್ನೆಕಲ್ (೧೭)-೧೧೯೧,[೨೦] ದದ್ದಲ(೨೨)-೧೦೬೯,[೨೧] ಸುಂಕೇಶ್ವರ(೨೯)-೧೧೯೭,[೨೨] ಕಲ್ಲೂರು (೬೬)-೧೧೯೬,[೨೩] ಕಲ್ಲೂರು (೬೭)-೧೧೩೪,[೨೪] ಕಲ್ಲೂರು (೬೮)-೧೧೫೧,[೨೫] ಕಲ್ಲೂರು(೬೯)-೧೧೪೨,[೨೬] ಅತ್ತನೂರು (೭೨) ಕಾಲದ ಉಲ್ಲೇಖವಿಲ್ಲ,[೨೭] ಬಲ್ಲಟಗಿ (೯೩)-೧೧ನೆಯ ಶತಮಾನ,[೨೮] ಬಲ್ಲಟಗಿ (೯೬)-೧೧೯೧,[೨೯] ಮಲ್ಲಟ (೧೦೨)-೧೧೯೬,[೩೦] ಮಲ್ಲಟ (೧೦೩)-೧೧೪೮,[೩೧]

ಬಾಗಲವಾಡ(೧೦೪)-೧೧೯೬,[೩೨] ಗಬ್ಬೂರು(೨೫-೨೬)-೧೦೮೪,[೩೩] ಹಿರೇರಾಯಕುಂಪಿ(೨೭)-೧೧೩೦,[೩೪] ನಿಲವಂಜಿ(೨೯)-೧೧೭೭[೩೫] ಬಳಗಾನೂರು(೩೯)-೧೧೯೧[೩೬] ಶಾಸನಗಳು ಹಾಗೂ ದೇವಗಿರಿ ಯಾದವರ ಸಾಮಂತರಾಗಿದ್ದರೆಂಬುದಕ್ಕೆ ಕವಿತಾಳ (೧೧೫-೧೧೬)-೧೨೧೭,[೩೭] ಸುಂಕೇಶ್ವರ(೩)-೧೨೩೧,[೩೮] ಮತ್ತು ಬಳಗಾನೂರು(೪೦)-೧೧೮೬ರ[೩೯] ಶಾಸನಗಳು ಈ ಮನೆತನಕ್ಕೆ ಸೇರಿದವುಗಳಾಗಿವೆ. ಸಾಮಂತರಾಗಿದ್ದ ಮೊರಟದ ಹೈಹಯರು ಉಪಸಾಮಂತರನ್ನು ಹೊಂದಿದ್ದರು. ಇವರು ಎಡದೊರೆ-೨೦೦೦ನ್ನು ತಮ್ಮ ಹತೋಟಿಗೆ ತೆಗೆದುಕೊಂಡಿದ್ದರು.

ಹೈಹಯ ರೇವರಸನ ಕಾಲದಲ್ಲಿ ಎಡದೊರೆ-೨೦೦೦ ಎಂಬ ದೊಡ್ಡ ಆಡಳಿತ ವಿಭಾಗದ ಮೇಲಿನ ಅಧಿಕಾರ ಲಭಿಸಿತ್ತು. ಇದು ಸಾರ್ವಭೌಮರನ್ನೇ ವಿರೋಧಿಸಿದಂತೆ. ರೇವರಸನು ಉಪಸಾಮಂತ ಗಂಗರ ಚಾವುಂಡಯ್ಯನ ಮೂಲಕ ಈ ಪ್ರದೇಶದ ಆಡಳಿತವನ್ನು ನಡೆಸುತ್ತಿದ್ದನು. ಇವರೂ ದೇವಾಲಯಗಳಿಗೆ, ಬ್ರಾಹ್ಮಣರಿಗೆ ದಾನ ದತ್ತಿಗಳನ್ನು ನೀಡಿರುವುದು ಗೋಚರಿಸುತ್ತದೆ. ಎಡದೊರೆ-೨೦೦೦ನ್ನು ಹೈಹಯ ವಂಶದ ರೇವರಸನು ಆಳಿರುವುದನ್ನು ಮಾನ್ವಿ(೧೫) ಕ್ರಿ.ಶ. ೧೦೫೨ರ ಶಾಸನ ತಿಳಿಸುತ್ತದೆ.[೪೦] ಸಾಮರ್ಥ್ಯದ ಜೊತೆಗೆ ಹೈಹಯರು ಕಲ್ಯಾಣ ಚಾಲುಕ್ಯರೊಂದಿಗೆ ವಿಶೇಷ ಆತ್ಮೀಯವಾದ ಸಂಬಂಧವನ್ನು ಹೊಂದಿರಬೇಕು. ಸಿಂಧರು ಮತ್ತು ಕದಂಬರು ಸಾಮಂತರಾಗಿಯೇ ಆಳ್ವಿಕೆ ನಡೆಸಿದರೆ ಮೊರಟದ ಹೈಹಯರು ಇಡೀ ಎಡದೊರೆ-೨೦೦೦ನ್ನು ತಮ್ಮ ವಶಕ್ಕೆ ತೆಗೆದುಕೊಂಡು ಉಳಿದ ಉಪಸಾಮಂತರ ಮೇಲೆ ಅಧಿಕಾರವನ್ನು ಸ್ಥಾಪಿಸಿದ್ದರು. ಆದರೂ ಸಾಮಂತರು ಮತ್ತು ಸಾರ್ವಭೌಮರ ಸಂಬಂಧಗಳನ್ನು ಕುರಿತು ಅವಲೋಕಿಸುವಾಗ ವಿಸ್ತಾರವಾಗಿ ಬೆಳೆಯುತ್ತಿದ್ದ ರಾಜ್ಯಗಳು ಸ್ಥಳೀಯ ಅರಸುಮನೆತನಗಳೊಂದಿಗೆ ರಾಜಕೀಯ ಹಾಗೂ ಆರ್ಥಿಕ ಸಂಬಂಧಗಳನ್ನು ಏರ್ಪಡಿಸಿ ಕೊಳ್ಳುತ್ತಿದ್ದವು. ವಿಶಾಲವಾದ ರಾಜ್ಯವನ್ನು ಆಡಳಿತ ನಡೆಸಲು ಈ ಸಂಬಂಧ ಅನಿವಾರ್ಯವಾಗಿತ್ತೆಂಬುದು ತಿಳಿದು ಬರುತ್ತದೆ. ಹೈಹಯರು ಮೊದಲು ಸಾಮಾನ್ಯ ಆಡಳಿತಾಧಿಕಾರಿಗಳಾಗಿದ್ದರು. ನಂತರ ತಮ್ಮ ಸಾಮರ್ಥ್ಯದ ಮೂಲಕ ಸಾಮಂತ ಸ್ಥಾನವನ್ನು ಪಡೆದುಕೊಂಡರು. ಸಾಮಂತರಾಗಿದ್ದುಕೊಂಡು, ಸಾಮಂತಾಧಿಪತಿ ಗಳಾಗಿ ಕಲ್ಯಾಣ ಚಾಲುಕ್ಯರಿಗೆ ಆಪ್ತರಾಗಿ ಗುರುತಿಸಿಕೊಂಡಿರುವುದು ಗಮನಾರ್ಹ.

### ೪.೨.೧.೩. ಕರಡಿಕಲ್ ಕದಂಬರು(ಕ್ರಿ.ಶ. ೧೦೬೬-೧೨೧೫)

ಇವರು ಬನವಾಸಿ ಕದಂಬ ವಂಶಕ್ಕೆ ಸೇರಿದವರು. ಕದಂಬ ಶಾಖೆಗಳಾದ ಹಾನಗಲ್ ಕದಂಬರು, ಗೋವೆಯ ಕದಂಬರಂತೆ ಕರಡಿಕಲ್ ಕದಂಬರದ್ದೂ ಸಹ ಒಂದು ಶಾಖೆಯಾಗಿದೆ. ಇವರ ಆಳ್ವಿಕೆಯನ್ನು ಕ್ರಿ.ಶ.೧೦೬೬-೧೨೧೫ರ ವರೆಗೆ ಸುಮಾರು ಎರಡು ಶತಮಾನಗಳ ಕಾಲ ಎಡದೊರೆ-೨೦೦೦ದಲ್ಲಿನ ಕಂಪಣ ಅಥವಾ ನಾಡಾದ ಕರಡಿಕಲ್-೩೦೦ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು.[೪೧] ಇವರಿಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ೮ ಶಾಸನಗಳು ದೊರೆತಿವೆ. ಇವರು ಮೊರಟದ ಹೈಹಯರು ಮೊರಟದಿಂದ ಸಿರವಾರಕ್ಕೆ ರಾಜಧಾನಿಯನ್ನು ಸ್ಥಳಾಂತರಿಸಿದಂತೆ ಕರಡಿಕಲ್‌ನಿಂದ ಮುದಗಲ್‌ಗೆ ರಾಜಧಾನಿ ಕೇಂದ್ರವನ್ನು ಬದಲಿಸಿದರು. ಕಲ್ಯಾಣ ಚಾಲುಕ್ಯರು ಅಧಿಕಾರದಲ್ಲಿರುವವರೆಗೆ ಕರಡಿಕಲ್-೩೦೦ ಕರಡಿಕಲ್ ಕದಂಬರ ರಾಜಧಾನಿಯಾಗಿತ್ತು. ದೇವಗಿರಿಯ ಯಾದವ ಅರಸ ಭಿಲ್ಲಮದೇವನು ರಾಜ್ಯ ಆಳುವಾಗ ಕ್ರಿ.ಶ.೧೧೯೧ರಲ್ಲಿ ಕರಡಿಕಲ್‌ನಿಂದ ಮುದಗಲ್‌ಗೆ ರಾಜಧಾನಿಯನ್ನು ವರ್ಗಾವಣೆ ಮಾಡಿದನು. ಈ ಸಂದರ್ಭದಲ್ಲಿ ಕದಂಬ ಅರಸ ಬಜ್ಜರಸ ಎಂಬುವವನು ಸಾಮಂತನಾಗಿದ್ದನು. ಕರಡಿಕಲ್(೫)-ಕ್ರಿ.ಶ. ೧೧೯೧ರ ಶಾಸನ[೪೨] ಇದನ್ನು ಸ್ಪಷ್ಟಪಡಿಸುತ್ತದೆ. ಇವರು

ಸ್ವತಂತ್ರವಾಗಿದ್ದು ಶಾಸನಗಳನ್ನು ಹೊರಡಿಸುತ್ತಿದ್ದರು. ಇವರೂ ಸಹ ಉಪಸಾಮಂತರನ್ನು ಹೊಂದಿದ್ದರು. ಹಾಗೆಯೇ ಇವರು ಕೂಡಾ ಉಪಸಾಮಂತರಾಗಿ ಕಾಣಿಸಿಕೊಂಡಿದ್ದರು ಎಂಬುದಕ್ಕೆ ಲಿಂಗಸೂಗೂರು (೨)-ಕ್ರಿ.ಶ.೧೦೭೭ರ ಶಾಸನ ಆಧಾರವಾಗಿದೆ.[೪೩] ಇವರು ಯಥೇಚ್ಚವಾದ ಧಾನ-ಧರ್ಮಗಳನ್ನು ನೀಡುತ್ತಿದ್ದರು. ಇವರು ನಗರೀಕರಣಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರೆನಿಸುತ್ತದೆ. ಬಹುತೇಕ ಕರಡಿಕಲ್-೩೦೦ರಲ್ಲಿ ವರ್ತಕರಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡಿರುವುದು ಗೋಚರಿಸುತ್ತದೆ. ಮುದಗಲ್‌ನ ವೈಶ್ಯರು ಬಹುದೊಡ್ಡ ಶ್ರೀಮಂತರಾಗಿದ್ದರು. ವೈಶ್ಯರ ಕುಟುಂಬದ ಸಂಪ್ರದಾಯಗಳನ್ನು ಶಾಸನದಲ್ಲಿ ಉಲ್ಲೇಖಿಸಿರುವುದು ವರ್ತಕರ ಪ್ರಭಾವವನ್ನು ಸೂಚಿಸುತ್ತದೆ. ಇವರನ್ನು ಕುರಿತು ನವಿಲೆ(೯)-೧೦೬೬ರ ಶಾಸನ,[೪೪] ಲಿಂಗಸೂಗೂರು(೨)-೧೦೭೭ರ ಶಾಸನ,[೪೫] ಹಿರೇಬೇರಿಗೆ(೨೪)-೧೧೦೦ರ ಶಾಸನ,[೪೬] ನವಿಲೆ(೮)-೧೧೧೯ರ ಶಾಸನ,[೪೭] ಲಿಂಗಸೂಗೂರು(೧)-೧೧೨೪ರ ಶಾಸನ,[೪೮] ಕರಡಿಕಲ್ (೫)-೧೧೯೧ರ ಶಾಸನ,[೪೯] ದೇವರಗುಡಿ(೨೯)-೧೨೦೨[೫೦] ಹಾಗೂ ಮುದಗಲ್(೪೯)-೧೨೧೫ರ ಶಾಸನ[೫೧] ಇವು ಕರಡಿಕಲ್ ಕದಂಬರ ಆಳ್ವಿಕೆಯನ್ನು ಸೂಚಿಸುವ ಶಾಸನಗಳಾಗಿವೆ. ಬಹುತೇಕವಾಗಿ ಕರಡಿಕಲ್-೩೦೦ರ ಕಂಪಣದಲ್ಲಿ ವರ್ತಕರ ಪ್ರಭಾವ ಎದ್ದು ಕಾಣುತ್ತದೆ. ಈ ಸಾಮಂತರು ವರ್ತಕ ಸಂಘಗಳಿಗೆ ಹೆಚ್ಚಿನ ಆಶ್ರಯ ನೀಡಿ ನಗರೀಕರಣಕ್ಕೆ ಸಹಕರಿಸಿದಂತೆ ತೋರುತ್ತದೆ. ರಾಜಕೀಯವಾಗಿ ಸಾಮಂತರು ಪ್ರಧಾನವಾಗಿ ಕಂಡುಬಂದರೂ ಆರ್ಥಿಕವಾಗಿ ವೈಶ್ಯರು ಮತ್ತು ವರ್ತಕರು ಪ್ರಭಾವಿತರಾಗಿದ್ದರು.

### ೪.೨.೧.೪. ಇತರ ಸಮಕಾಲೀನ ಸಾಮಂತರು

ಕ್ರಿ.ಶ. ೧೦ರಿಂದ ೧೩ನೆಯ ಶತಮಾನದವರೆಗೆ ಈ ಪ್ರದೇಶದಲ್ಲಿ ಕಂಡುಬರುವ ಸಾಮಂತ ಮನೆತನಗಳ ಆಳ್ವಿಕೆಯ ಕಾಲಘಟ್ಟದಲ್ಲಿ ಇವರ ಆಡಳಿತ ಪ್ರದೇಶಗಳನ್ನು ಹೊರತುಪಡಿಸಿ ಉಳಿದ ಆಡಳಿತ ವಿಭಾಗಗಳನ್ನು ಹಲವು ಜನ ಸಾರ್ವಭೌಮರಿಗೆ ಹತ್ತಿರವಾಗಿದ್ದ ಸಾಮಂತರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಕೆಲವು ವೇಳೆ ಸಾಮಂತರಾದವರು ಕೇಂದ್ರದಲ್ಲಿ ಮಂತ್ರಿಯಾಗಿಯೂ ಈ ಪ್ರದೇಶದಲ್ಲಿ ಪ್ರಮುಖ ಆಡಳಿತ ವಿಭಾಗಗಳಾದ ಕಂಪಣ ಅಥವಾ ಪ್ರಾಂತಗಳಿಗೆ ಸಾಮಂತರಾಗಿಯೂ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಇವರು ತಮ್ಮ ಪ್ರಾಂತದಲ್ಲಿ ಪರಮಾಧಿಕಾರ ಹೊಂದಿದ್ದರು. ಕೇಂದ್ರದಲ್ಲಿ ಮಂತ್ರಿಯಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಸಾಮಂತರಾಗಿ ಆಳ್ವಿಕೆ ಮಾಡಿದವರು ಅನೇಕ ಜನರು ಕಂಡುಬರುತ್ತಾರೆ. ಇವರ ಅಧಿಕಾರಾವಧಿ ಜೀವಿತಾವಧಿವರೆಗೆ ಇದ್ದಿತು. ಅವರೆಂದರೆ ಚಿಕ್ಕೆಯರಸ ದೇವಸೂಗೂರು(೫೬)-೧೦೨೨,[೫೨] ಚಿಕ್ಕ ರೇಚಯ್ಯ ಮಸ್ಕಿ(೩೦)-ಕ್ರಿ.ಶ. ೧೦೩೭,[೫೩] ಬುಟ್ಟರಸ ಕಲಮಲ(೪೯)-೯೪೦,[೫೪] ಜೊಯಿಮಯ್ಯರಸ ಗಬ್ಬೂರು(೨೬)-೧೦೮೪,[೫೫] ದಾಮೋದರ ಮುದಗಲ್(೪೯)-ಕ್ರಿ.ಶ. ೧೨೧೫,[೫೬] ಕಾವರಾಜಯ್ಯ ಕಲ್ಲೂರು(೬೯)-೧೧೪೨,[೫೭] ದೇವರಸ ಅತ್ತನೂರು(೭೨)- ಕ್ರಿ.ಶ. ೧೧ನೆಯ ಶತಮಾನ,[೫೮] ದಂಡನಾಯಕ ನಾಚಣ ಸಾಲಗುಂದೆ(೨)-೧೧೫೩,[೫೯] ದಸವವರ್ಮದೇವ ದೇವರಗುಡಿ(೨೮)-೧೧೦೧,[೬೦] ಪೆರ್ಗಡೆ ವಾರಸಿಂಘ ಮಾಡಸಿರವಾರ(೪೬)-೧೦೩೩[೬೧] ಮುಂತಾದವರು ಎರಡು ಕಡೆ ಸೇವೆಸಲ್ಲಿಸಿರುವುದು ಕಂಡುಬರುತ್ತದೆ. ಆದರೆ ಇವರು ಯಾವ ಆಡಳಿತ ಕೇಂದ್ರದಿಂದ ಆಳ್ವಿಕೆ ಮಾಡಿದರು ಎಂಬುದು ಸ್ಪಷ್ಟವಾಗಿಲ್ಲ. ಹಾಗೆಯೇ ಶಾಸನಗಳನ್ನಾಧರಿಸಿ ಗುರುತಿಸಲು ಪ್ರಯತ್ನಿಸಿದರೂ ಅಸ್ಪಷ್ಟ ಚಿತ್ರಣವೇ ಕಂಡುಬರುತ್ತದೆ ಈ ಹಿನ್ನೆಲೆಯಲ್ಲಿ ಅರಸರ ಸಾಮಂತರಾಗಿ ಆಳ್ವಿಕೆ ಮಾಡಿದ ಸಾಮಂತರನ್ನು ಕುರಿತು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಈ ಪ್ರದೇಶದಲ್ಲಿನ ಸಾಮಂತರ ಆಳ್ವಿಕೆ ಯಾವ ಆಡಳಿತ ಕೇಂದ್ರದಿಂದ ನಡೆಯುತ್ತಿತ್ತೆಂಬುದು ತಿಳಿದುಬರುವುದಿಲ್ಲ. ರಾಷ್ಟ್ರಕೂಟರು ಸಾಮಂತ ಆಳ್ವಿಕೆಗೆ ಅವಕಾಶವನ್ನು ಕಲ್ಪಿಸಿದ್ದರು. ಇವರ ಕಾಲದಲ್ಲಿ ಸಾಮಂತ ಆಡಳಿತ ಕ್ರಮ ಕೌಟುಂಬಿಕ ಪ್ರಭುತ್ವವಾಗಿತ್ತು.ಅರಸನ ಸಂಬಂಧಿಕರೇ ಈ ಎಡದೊರೆ-೨೦೦೦ನ್ನು ಆಳುತ್ತಿದ್ದರು. ಇವರ ಆಧೀನದಲ್ಲಿ ಉಪಸಾಮಂತರನ್ನು ನೇಮಿಸಿ ಕೊಳ್ಳಲಾಗುತ್ತಿತ್ತು. ಈ ಒಂದು ಆಡಳಿತ ವ್ಯವಸ್ಥೆ ಗುಪ್ತರ ಕಾಲದ ಸಾಮಂತ ಪದ್ಧತಿಯಂತಿದೆ. ಗುಪ್ತರ ಪ್ರಕಾರ-ರಾಜ, ಸಾಮಂತ, ಉಪಸಾಮಂತರನ್ನು ಹೊಂದಿರುವುದಾಗಿತ್ತು. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಎಡದೊರೆ-೨೦೦೦ನ್ನು ಈ ಕಾಲದಲ್ಲಿ 'ಕೌಟುಂಬಿಕ ಪ್ರಭುತ್ವ' ಆಡಳಿತ ನಡೆಸಿರುವುದಕ್ಕೆ ಮಾನ್ವಿ ತಾಲೂಕಿನ ಭೋಗಾವತಿ(೧೮)-೧೦ನೆಯ ಶತಮಾನದ ಶಾಸನ ಸಾಕ್ಷಿಯಾಗಿದೆ.[೨] ಉದಾಹರಣೆ-ರಾಜ-ಅಕಾಲವರ್ಷನು ಕೇಂದ್ರದಲ್ಲಿ ರಾಜ್ಯಭಾರ ಮಾಡುತ್ತಿರುವಾಗ, ರಾಜನ ತಮ್ಮನಾದ ಜಗತ್ತುಂಗನು ಎಡೆದೊರೆ-೨೦೦೦ನ್ನು ಆಳುತ್ತಿದ್ದನು. ಇವನ ಅಧೀನದಲ್ಲಿ ಚೋಳಗಾಮುಂಡ ಎಂಬ ಅಧಿಕಾರಿ ಆಳ್ವಿಕೆ ನಡೆಸುತ್ತಿದ್ದನು. ಇದು ಗುಪ್ತರ ಸಾಮಂತ ಪದ್ಧತಿಗೆ ಉದಾಹರಣೆ ಎನಿಸಿದರೂ ಸೈದ್ಧಾಂತಿಕವಾಗಿ ಬರ್ಟನ್‌ಸ್ಟೈನ್‌ರ ಕೌಟುಂಬಿಕ ಪ್ರಭುತ್ವಕ್ಕೆ ಸೂಕ್ತ ಉದಾಹರಣೆಯಾಗಿದೆ. ರಾಜನು ತನ್ನ ತಮ್ಮನನ್ನೇ ಪ್ರಮುಖ ಪ್ರಾಂತ್ಯಕ್ಕೆ ನೇಮಿಸುವುದು ಕುಟುಂಬ ಕೇಂದ್ರಿತ ಪ್ರಭುತ್ವ ವ್ಯವಸ್ಥೆಯನ್ನು ಸೂಚಿಸುತ್ತದೆ. ಆಡಳಿತದ ಹಿಡಿತವನ್ನು ಅರಸರು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ಸಾಮಂತರು ಸಾರ್ವಭೌಮತ್ವಕ್ಕೆ ಧಕ್ಕೆ ತರಬಹುದೆಂಬ ಭಯವೂ ಇದ್ದಿರಬೇಕು, ಇಲ್ಲವೆ ಸ್ವತಂತ್ರರಾಗಲು ಕಾಯುತ್ತಿರುವ ಅವರನ್ನು ಏಳಿಗೆ ಹೊಂದದಂತೆ ಮಾಡುವುದೇ ಇವರ ಮೂಲ ಉದ್ದೇಶವಾಗಿತ್ತು.

ರಾಯಚೂರು ತಾಲೂಕಿನಲ್ಲಿರುವ ಕಲ್ಮಲ(೪೮)-ಕ್ರಿ.ಶ. ೯೧೪-೯೨೯ರ ಶಾಸನ ಅರಸ-ನಿತ್ಯವರ್ಷ ದೇವನನ್ನು ಹೆಸರಿಸುತ್ತದೆ.[೩] ಅವನ ಅಧೀನ ಸಾಮಂತನೊಬ್ಬನು ಉಪಸಾಮಂತರಿಗೆ ಸಾಮಂತಾಧಿಪತಿ ಯಾಗಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಕ್ರಮವಾಗಿ ಅರಸ, ಸಾಮಾಂತಾಧಿಪತಿ ಮತ್ತು ಸಾಮಂತರ ಆಳ್ವಿಕೆಯನ್ನು ಈ ಶಾಸನ ಸೂಚಿಸುತ್ತದೆ. ಆದರೆ ಯಾವ ಆಡಳಿತ ಕೇಂದ್ರವೆಂದು ಹೇಳಲಾಗಿಲ್ಲ. ರಾಷ್ಟ್ರಕೂಟರ ಶಾಸನಗಳು ಕಲ್ಮಲದಲ್ಲಿ ಕಂಡುಬರುವುದರಿಂದ ಕಲ್ಮಲ ಆಡಳಿತ ಕೇಂದ್ರವಾಗಿರಬೇಕೆಂದು ಊಹಿಸಬಹುದಾಗಿದೆ. ಇದರಿಂದ ಕಲ್ಮಲದಲ್ಲಿರುವ ಈ ಕಲ್ಮಲ(೪೯)-೯೪೦ರ ಶಾಸನ ಸಹ ಸಾಮಂತ ಆಳ್ವಿಕೆಯನ್ನು ಅರಸ-ಸಾಮಂತ-ಉಪಸಾಮಂತ ಕ್ರಮದಲ್ಲಿ ನಿರೂಪಿಸುತ್ತದೆ.[೪] ರಾಷ್ಟ್ರಕೂಟರ ಕಾಲದಲ್ಲಿ ಸಾಮಂತ ಪದ್ಧತಿ ಈ ಪ್ರದೇಶದಲ್ಲಿತ್ತು. ರಾಷ್ಟ್ರಕೂಟರು ಅಧಿಕಾರಕ್ಕೆ ಬರುವ ವೇಳೆಗಾಗಲೇ ರಾಯಚೂರು ದೋ-ಅಬ್ ಪ್ರದೇಶ ಎಡೆದೊರೆ-೨೦೦೦ ಎಂದು ಗುರುತಿಸಿಕೊಂಡಿತ್ತೆನಿಸುತ್ತದೆ. ಈ ಅರಸು ಮನೆತನದ ಕಾಲಘಟ್ಟದಲ್ಲಿ ಕುಟುಂಬ ಕೇಂದ್ರಿತ ಪ್ರಭುತ್ವ ವ್ಯವಸ್ಥೆ ಹಾಗೂ ಸಾಮಂತ ಪದ್ಧತಿ ಎರಡೂ ಆಡಳಿತ ಪದ್ಧತಿಗಳು ಅಸ್ತಿತ್ವದಲ್ಲಿದ್ದವೆಂದು ಹೇಳಬಹುದಾಗಿದೆ. ಆದರೆ ಇವರ ಸಾಮಂತರು ಯಾವುದನ್ನು ಆಡಳಿತ ಕೇಂದ್ರವನ್ನಾಗಿ ಮಾಡಿ ಕೊಂಡಿದ್ದರೆಂಬುದು ತಿಳಿದುಬರುವುದಿಲ್ಲ.

ಇಲ್ಲಿ ಮುಖ್ಯವಾಗಿ ರಾಯಚೂರು ದೋ-ಅಬ್ ಪ್ರದೇಶವನ್ನು ಕಲ್ಯಾಣ ಚಾಲುಕ್ಯ ಅರಸರ ಕಾಲದಲ್ಲಿ ಎಡದೊರೆ-೨೦೦೦ನ್ನು ಇಂತಹ ಸಾಮಂತ ಮನೆತನದವರಿಗೆ ನೀಡಬೇಕೆಂಬ ನಿಯಮ

ಗಳಿರಲಿಲ್ಲ. ಈ ಪ್ರದೇಶದಲ್ಲಿ ಸಿಂಧರು, ಮೊರಟದ ಹೈಹಯರು ಮತ್ತು ಕರಡಿಕಲ್ ಕದಂಬರು ಎಂಬ ಸಾಮಂತ ಮನೆತನಗಳಿದ್ದರೂ ಇವರಿಗೆ ಎಡದೊರೆ-೨೦೦೦ದ ಆಡಳಿತವನ್ನು ಸಂಪೂರ್ಣ ವಹಿಸಿರಲಿಲ್ಲ. ಹಾಗೆಯೇ ಅರಸರು ತಮಗೆ ಯಾರು ಹತ್ತಿರವಾಗಿರುತ್ತಾರೋ ಅಂತಹವರಿಗೆ ಎಡದೊರೆ-೨೦೦೦ನ್ನು ನೀಡಿರುವುದು ಗೋಚರಿಸುತ್ತದೆ. ಈ ಪ್ರದೇಶದಲ್ಲಿ ಸಾಮಂತ ಮನೆತನಗಳು ಮಹಾಸಾಮಂತರ ಅಧೀನರಾಗಿರಬೇಕಿತ್ತು. ಜಗದೇಕಮಲ್ಲನ ಸಾಮಂತನಾಗಿ ಈ ಪ್ರದೇಶದಲ್ಲಿ ಚಿಕ್ಕಯರಸ ದೇವಸೂಗೂರು(೫೮)-ಕ್ರಿ.ಶ. ೧೦೨೨ರಲ್ಲಿ ಶಾಸನದ ಪ್ರಕಾರ ಆಳ್ವಿಕೆ ಮಾಡಿರುವುದಾಗಿ ತಿಳಿದು ಬರುತ್ತದೆ.[೬೫] ಇದರಂತೆ ಅನೇಕ ಜನ ಸಾಮಂತರು ಈ ಪ್ರದೇಶದ ವಿವಿಧ ಆಡಳಿತ ವಿಭಾಗಗಳಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ.

ಚಿಕ್ಕ ರೇಚಯ್ಯನ ಉಲ್ಲೇಖ ಮಸ್ಕಿ(೩೦)-೧೦೩೭ರ ಶಾಸನದಲ್ಲಿ ಕಂಡುಬರುತ್ತದೆ.[೬೬] ಇವನು ಮಸ್ಕಿ ರಾಜಧಾನಿ ಕೇಂದ್ರದಿಂದ ಆಳ್ವಿಕೆ ಮಾಡಿರುವುದಾಗಿ ತಿಳಿದುಬರುತ್ತದೆ. ಮಹಾಸಾಮಂತ ದಾಸಣ್ಣನ ಉಲ್ಲೇಖ ಗುಡಿಹಾಳು (೧೧೯)-ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಕಂಡುಬರುತ್ತದೆ,[೬೭] ಇವನ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ಇಲ್ಲ. ವೀರನೊಳಂಬ ಪಲ್ಲವ ಪೆರ್ಮಾನಡಿ ಎಂಬ ಸಾಮಂತನ ಆಳ್ವಿಕೆ ಚಾಲುಕ್ಯರಸ ತ್ರಿಭುವನಮಲ್ಲ ಕಾಲದಲ್ಲಿ ಕರಡಿಕಲ್-೩೦೦ರಲ್ಲಿ ಕಂಡುಬರುತ್ತದೆ. ಇವನ ಬಗ್ಗೆಯೂ ಇನ್ನೂ ಹೆಚ್ಚಿನ ಮಾಹಿತಿ ಇಲ್ಲ. ಇವನ ಸಾಮಂತನಾಗಿ ಕರಡಿಕಲ್ ಕದಂಬರ ನಾಗವರ್ಮ ಎಂಬುವವನು ಆಡಳಿತ ನಡೆಸಿರುವುದು ಲಿಂಗಸೂಗೂರು(೨)-೧೦೭೭ರ ಶಾಸನದಿಂದ ತಿಳಿದುಬರುತ್ತದೆ.[೬೮] ಇದನ್ನು ಗಮನಿಸಿದರೆ ಕಂಚಿಯ ಪಲ್ಲವ ವಂಶಕ್ಕೆ ಸೇರಿದವನು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿರುವುದು ಯುದ್ಧಗಳಲ್ಲಿ ಸೋಲನ್ನು ಅನುಭವಿಸಿದ ಪೆರ್ಮಾನಡಿ ಅನಿವಾರ್ಯವಾಗಿ ಕರಡಿಕಲ್-೩೦೦ರ ಆಡಳಿತ ಕೇಂದ್ರದಲ್ಲಿ ಆಳ್ವಿಕೆ ನಡೆಸಿರಬೇಕು. ಇಲ್ಲವೆ ಕರಡಿಕಲ್ ಕದಂಬರು ಈ ಕಾಲದಲ್ಲಿ ಸಾಮಂತರಾಗಿ ಸರಿಯಾದ ಆಳ್ವಿಕೆ ನಡೆಸದೆ ಸ್ವತಂತ್ರರಾಗಲು ಬಯಸಿರಬೇಕು. ಹಾಗಾಗಿ ಬೇರೆಯವರನ್ನು ನೇಮಿಸಿರಬಹುದೆಂದು ಊಹಿಸಬಹುದಾಗಿದೆ.

ಒಳಬಳ್ಳಾರಿ ಒಂದು ಅಗ್ರಹಾರ ಕೇಂದ್ರವಾಗಿತ್ತು. ಹಾಗೆಯೇ ಅದು ಸಹಜವಾಗಿ ಆಡಳಿತ ಕೇಂದ್ರವೂ ಆಗಿತ್ತು. ಇಲ್ಲಿಯೂ ಕೂಡ ಅರಸು ಸಾಮಂತ-ಉಪಸಾಮಂತರ ಪದ್ಧತಿ ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರಸ ತ್ರಿಭುವನ ಮಲ್ಲ, ಅವನ ಮಹಾಪ್ರಧಾನಿ ಅಗ್ರಹಾರದ ಅಥವಾ ಬ್ರಾಹ್ಮಣನಾಗಿದ್ದ ಮಹಾದೇವಭಟ್ಟೋಪಾಧ್ಯಾಯ ಸಾಮಂತನಾಗಿ ಇವನ ಅಧೀನದಲ್ಲಿ ದಂಡನಾಯಕ ಕೇಶಿರಾಜ ಎಂಬುವನು ಒಳಬಳ್ಳಾರಿಯಲ್ಲಿ ಆಳುತ್ತಿದ್ದಂತೆ ತೋರುತ್ತದೆ. ಒಟ್ಟಾರೆಯಾಗಿ ಸಮಕಾಲೀನ ಸಂದರ್ಭದಲ್ಲಿ ಸಾಮಂತ ವ್ಯವಸ್ಥೆಯನ್ನು ಕುರಿತು ಸೂಚಿಸುವ ಶಾಸನಗಳನ್ನು ಮಾತ್ರ ಉಲ್ಲೇಖಿಸಲು ಪ್ರಯತ್ನಿಸಲಾಗಿದೆ.

ಕುರುಡಿ(೪೩)-೧೧೨೩,[೬೯] ಒಳಬಳ್ಳಾರಿ(೫೩)-೧೧೧೭,[೭೦] ಹಿರೇರಾಯಕುಂಪಿ(೨೭)-೧೧೩೦,[೭೧] ಬಳಗಾನೂರು(೩೯)-೧೧೯೧,[೭೨] ದದ್ದಲ(೨೨)-೧೦೬೯,[೭೩] ಗಬ್ಬೂರು(೨೬)-೧೦೮೪,[೭೪] ದೇವರಗುಡಿ(೨೮)-೧೧೦೧,[೭೫] ಜಾಲಿಹಾಳು(೨೩)-೧೧೦೫,[೭೬] ಇಡಪನೂರು(೧)-೧೧೨೨,[೭೭] ಕಲ್ಲೂರು(೬೭)-೧೧೩೪,[೭೮] ಬಳಗಾನೂರು(೪೦)-೧೧೮೬,[೭೯] ಚಿಕ್ಕಸೂಗೂರು(೫೨)-೧೧೯೪,[೮೦] ವೀರಗೋಟ(೩)-೧೨೨೩,[೮೧] ರಾಯಚೂರು (೪೫)-೧೨೯೪,[೮೨] ರೌಡಕುಂದೆ (೧)-೧೦೫೩,[೮೩] ಸಾಲಗುಂದೆ(೪)-೧೦೬೩,[೮೪] ಜಲದುರ್ಗ(೧೩)-೧೦೮೭,[೮೫] ಕಲ್ಲೂಳು(೬೯)-೧೧೪೨.[೮೬] ಕಲ್ಲೂರು (೭೬)-೧೦೭೬,[೮೭] ಸುಂಕೇಶ್ವರ(೨೯)-೧೧೯೭,[೮೮] ಕುರುಡಿ(೪೨)-೧೧೨೩,[೮೯] ಕುರುಡಿ(೪೪)-೧೧೩೭,[೯೦]

ಕುರುಡಿ(೫೧)–೧೧೧೯,[೯೧] ಬೇವಿನೂರು(೫೬)–೧೨ನೆಯ ಶತಮಾನ,[೯೨] ಕೋಳಬಾಳು (೩೧)–೧೦೩೦,[೯೩] ಮಸ್ಕಿ(೪೪)–೧೦೭೧ ಶಾಸನ,[೯೪] ಹಾಗೂ ಇನ್ನೂ ಮುಂತಾದ ಶಾಸನಗಳು ಅರಸ–ಸಾಮಂತ–ಉಪಸಾಮಂತ ವ್ಯವಸ್ಥೆಯನ್ನು ಕುರಿತು ಸ್ಪಷ್ಟಪಡಿಸುತ್ತವೆ.

ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ದೇವಗಿರಿ ಯಾದವರ ಕಾಲಘಟ್ಟಗಳು ಈ ವ್ಯವಸ್ಥೆಯನ್ನು ಪೋಷಿಸಿ ಬೆಳೆಸಿದವು. ಮುಖ್ಯವಾಗಿ ಈ ಮನೆತನಗಳು ಸಾಮಂತ ಪ್ರಭುತ್ವ ಮತ್ತು ಕುಟುಂಬ ಕೇಂದ್ರಿತ ಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವುದು ಗೋಚರವಾಗುತ್ತದೆ. ಆಯಕಟ್ಟಿನ ಸ್ಥಳಗಳಲ್ಲಿ ಕುಟುಂಬದ ಸದಸ್ಯರನ್ನು ನೇಮಿಸಿ, ಇನ್ನುಳಿದ ಆಡಳಿತ ವಿಭಾಗಗಳಿಗೆ ಸಾಮಂತರನ್ನು ನೇಮಿಸಲಾಗುತ್ತಿತ್ತು. ಕಾಕತೀಯರ ಆಡಳಿತ ಪದ್ಧತಿಯೂ ಕೂಡಾ ಅರಸು–ಸಾಮಂತ–ಉಪಸಾಮಂತ ಮಾದರಿಯಲ್ಲಿಯೇ ಇದ್ದಿತು. ಇದಕ್ಕೆ ರಾಯಚೂರು(೪೫)–೧೨೯೪ರ ಶಾಸನ ಆಧಾರವಾಗಿದೆ.[೯೫] ಈ ಪದ್ಧತಿ ವಿಜಯನಗರದ ಅರಸ ರಾಮರಾಯನ ಕಾಲದವರೆಗೆ ಅಸ್ತಿತ್ವದಲ್ಲಿದ್ದಿತು. ನಂತರ ರಾಮರಾಯ ಆಡಳಿತದಲ್ಲಿ ಸುಧಾರಣೆ ಮತ್ತು ಹಿಡಿತ ಸಾಧಿಸಲು ಕೌಟುಂಬಿಕ ಪ್ರಭುತ್ವ ವ್ಯವಸ್ಥೆಯನ್ನು ಜಾರಿಗೆ ತಂದಿರುವುದು ಮುದಗಲ್(೫೧)–೧೫೬೦ರ ಶಾಸನದಿಂದ ತಿಳಿದುಬರುತ್ತದೆ.[೯೬] ಈ ಶಾಸನ ತಿಳಿಸುವಂತೆ ಅಳಿಯ ರಾಮರಾಯ ಕೇಂದ್ರದಲ್ಲಿದ್ದರೆ ಅವನ ಮಗ ಕೃಷ್ಣಪ್ಪ ರಾಜಯದೇವನಿಗೆ ಮುದಗಲ್ ಕೋಟೆಯ ಆಡಳಿತದ ಉಸ್ತುವಾರಿಯನ್ನು ನೀಡಲಾಗಿತ್ತು. ಇವನಿಗೆ ಸಹಾಯಕವಾಗಿ ಉಪಸಾಮಂತನಾಗಿ ವೆಂಗಳಪ್ಪನಾಯಕನನ್ನು ನೇಮಿಸಲಾಗಿತ್ತು. ಇವನ ಕಾಲಾವಧಿಯಲ್ಲಿ ಮುದಗಲ್ ಆಯಕಟ್ಟಿನ ಸ್ಥಳವಾಗಿತ್ತು, ಆಡಳಿತಕೇಂದ್ರವಾಗಿತ್ತು ಹಾಗೂ ರಾಯಚೂರು ದೋ–ಅಬ್ ಪ್ರದೇಶದ ಮೇಲಿನ ಅಧಿಕಾರವನ್ನು ನಿರ್ಣಯಿಸುವ ಮಹತ್ವದ ಕೇಂದ್ರವಾಗಿತ್ತು. ವಿಜಯನಗರ ಮತ್ತು ಆದಿಲ್‌ಶಾಹಿಗಳು ಇದನ್ನು ಪಡೆಯಲು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಪರಸ್ಪರ ಸೆಣಸಾಡಿದ್ದುಂಟು. ಹಾಗಾಗಿ ಇಂತಹ ಸ್ಥಳ ಆದಿಲ್‌ಶಾಹಿಗಳ ವ್ಯಾಪ್ತಿಗೆ ಸೇರಬಾರದೆಂಬ ಹಿನ್ನೆಲೆಯಲ್ಲಿ ರಾಮರಾಯ ಮುದಗಲ್‌ಗೆ ತನ್ನ ಮಗನನ್ನೇ ನೇಮಿಸಿರುವುದು ಕುಟುಂಬ ಕೇಂದ್ರಿತ ಆಡಳಿತ ವ್ಯವಸ್ಥೆಯನ್ನು ಸೂಚಿಸುತ್ತದೆ.

### ೪.೨.೧.೫. ಅಮರನಾಯಕ ಪದ್ಧತಿ ಮತ್ತು ತರಫ್‌ದಾರರು

ವಿಜಯನಗರ ಮತ್ತು ಬಹಮನಿ ಅರಸು ಮನೆತನಗಳು ಸಮಕಾಲೀನವಾಗಿವೆ. ಏಕಕಾಲದಲ್ಲಿ ಎರಡು ಅರಸುಮನೆತನಗಳ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಈ ಪ್ರದೇಶ ಮಹತ್ವದ್ದಾಗಿದೆ. ಈ ಪ್ರದೇಶಕ್ಕೆ ದೋ–ಅಬ್ ಎಂದು ಹೆಸರು ಬರಲು ಬಹಮನಿ ಅರಸರು ಕಾರಣರು. ಏಕೆಂದರೆ ಅವರು ಪರ್ಶಿಯನ್, ಅರಬ್ ಭಾಷೆಗಳನ್ನು ತಿಳಿದವರಾಗಿದ್ದರು. ಆರಂಭದಲ್ಲಿ ಅವರಿಗೆ ಕನ್ನಡದ ಪರಿಚಯವಿರಲಿಲ್ಲ. ಬಹುತೇಕವಾಗಿ ಆಡಳಿತ ಭಾಷೆಯನ್ನು ಉರ್ದು, ಪರ್ಶಿಯನ್‌ಗಳನ್ನು ಮಾಡಿಕೊಂಡಿದ್ದರು. ಅಲ್ಲದೆ ಈ ಭಾಷೆಗಳಿಗೆ ಹತ್ತಿರದ ಭಾಷೆಗಳನ್ನು ಕೂಡ ಬಳಸುತ್ತಿದ್ದರು ಎಂಬುದು ರಾಯಚೂರಿನಲ್ಲಿರುವ ಶಾಸನಗಳಿಂದ ತಿಳಿದುಬರುತ್ತದೆ. ಈ ಎರಡು ಪದ್ಧತಿಗಳನ್ನು ಕುರಿತು ಸ್ಥೂಲ ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ.

#### ಅಮರನಾಯಕ ಪದ್ಧತಿ

ಈ ಪದ್ಧತಿ ವಿಜಯನಗರದ ಕಾಲಘಟ್ಟದಲ್ಲಿ ಹೆಚ್ಚು ಬಳಕೆಗೊಂಡರೂ ಇದು ಮೂಲತಃ ಹೊಯ್ಸಳ ಕಾಲದಲ್ಲಿ ಈ ಪದ್ಧತಿ ಹುಟ್ಟಿಕೊಂಡಿತು. ಎರಡನೆಯ ದೇವರಾಯನ ಕಾಲದಲ್ಲಿ ವಿಜಯನಗರದಲ್ಲಿ ಅಳವಡಿಸಿಕೊಳ್ಳಲಾಯಿತು(ನಾಗರಾಜು ೧೯೯೯: ೭೮–೮೦). ಈ ಪದ್ಧತಿ ಕೃಷ್ಣದೇವರಾಯನ ಕಾಲದಲ್ಲಿ ಹೆಚ್ಚು ಬೆಳಕಿಗೆ ಬಂದಿತು. ಅಮರನಾಯಕ ಪದ್ಧತಿಯನ್ನು ಏಕೆ

ಆಶ್ರಯಿಸಲಾಯಿತು ಎಂಬುದಕ್ಕೆ ಶಿವಣ್ಣ ಕೆ.ಎಸ್. ಅವರು "ವಿಜಯನಗರ ಸರಕಾರ ಸದಾಕಾಲವೂ ನೆರೆಹೊರೆಯ ರಾಜರುಗಳೊಂದಿಗೆ ಯುದ್ಧದಲ್ಲಿ ತೊಡಗಿರುತ್ತಿದ್ದ ಮಿಲಿಟರಿ ಆಡಳಿತವಾಗಿತ್ತು. ಹಾಗಾಗಿ ಆಡಳಿತೀಯ ಸಮಗ್ರತೆಯನ್ನು ಪ್ರಭುತ್ವ ರಕ್ಷಿಸಿಕೊಳ್ಳಲು ಸರಕಾರ ಸದಾ ಜಾಗರೂಕವಾಗಿರಬೇಕಾಗಿತ್ತು. ಈ ಸೈನ್ಯ ಮತ್ತು ರೈತರು ಎರಡು ಅಂಶಗಳ ಬೆಂಬಲದಿಂದ ಮಾತ್ರ ಅದು ಸಾಧ್ಯವಾಗುತ್ತಿತ್ತು. ಸೈನ್ಯಗಳನ್ನು ಕಟ್ಟುವುದು ಒಂದು ಪ್ರಧಾನ ಅಗತ್ಯವಾಗಿತ್ತು. ಬೃಹತ್ತಾದ ಸಶಸ್ತ್ರ ಸೇನೆಯನ್ನು ಕಟ್ಟುವುದು ಹೇಗೆ ಎನ್ನುವುದೇ ಪ್ರಶ್ನೆಯಾಗಿತ್ತು. ಕೇಂದ್ರದಲ್ಲಿದ್ದ ರಾಜನೊಬ್ಬನಿಗೆ ಹಾಗೆ ಬೃಹತ್ ಸೇನೆಯ ನಿರ್ಮಾಣ ಸಾಧ್ಯವಿರಲಿಲ್ಲ. ಅದರಿಂದಾಗಿ ವಿಜಯನಗರದ ಅರಸರು ಅಧಿಕಾರವನ್ನು ವಿಕೇಂದ್ರೀಕರಿಸಲು ದಾರಿಯಾಯಿತು. ಮಾನ್ಯತೆ ಪಡೆದ ನಾಯಕರು ವಿವಿಧ ಪ್ರಾಂತಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದು, ನಿರ್ದಿಷ್ಟ ಪ್ರಮಾಣದ ಸೈನ್ಯವನ್ನು ಸದಾ ಸನ್ನದ್ಧವಾಗಿಟ್ಟಿರಬೇಕಾಗಿತ್ತು. ರಾಜರು ಅಗತ್ಯ ಸಮಯಗಳಲ್ಲಿ ಅವನ್ನು ಬಳಸಿಕೊಳ್ಳುತ್ತಿದ್ದರು. ಸ್ಥಿರವಾದ ಸರಕಾರಕ್ಕೆ ಅಗತ್ಯವಾಗಿದ್ದ ಎರಡನೆಯ ಅಂಶ ಕೃಷಿಕವರ್ಗ. ರಾಜ್ಯದ ಅರ್ಥ ವ್ಯವಸ್ಥೆಯ ಬೆನ್ನೆಲುಬಾಗಿದ್ದ ಕೃಷಿಕರು ಭೂಮಿಯನ್ನು ಬೇಸಾಯ ಮಾಡಿ, ಆಹಾರವನ್ನು ಬೆಳೆದು, ಸರಕಾರಕ್ಕೆ ತೆರಿಗೆಯನ್ನು ಪಾವತಿಮಾಡುತ್ತಿದ್ದರು. ಆದ್ದರಿಂದ ಈ ಎರಡು ವರ್ಗಗಳ ಬೆಂಬಲವನ್ನು ಸರಕಾರ ಅವಲಂಬಿಸಿತ್ತು" ಎಂದು ತಿಳಿಸುತ್ತಾರೆ(ಷೇಕ್ ಅಲಿ ೧೯೯೭: ೬೨). ಹಾಗಾಗಿ ಅಮರನಾಯಕರನ್ನು ಆಶ್ರಯಿಸಲಾಯಿತ್ತೆಂದು ತಿಳಿದುಬರುತ್ತದೆ.

ಅಮರನಾಯಕರು ಮೂಲತಃ ಸೈನ್ಯಾಡಳಿತಾಧಿಕಾರಿಗಳಾಗಿರುವುದರಿಂದ ಷರತ್ತು ಬದ್ಧರಾಗಿ ಸೈನ್ಯ ಮತ್ತು ಕಪ್ಪಕಾಣಿಕೆಗಳನ್ನು ಸಲ್ಲಿಸುವ ಒಪ್ಪಂದಕ್ಕೆ ಪೂರಕವಾಗಿ ನಡೆದುಕೊಳ್ಳಬೇಕಾಗಿತ್ತು. ಇವರು ರಾಜಕೀಯ, ಆಡಳಿತಾತ್ಮಕ, ಆರ್ಥಿಕ ಮತ್ತು ನ್ಯಾಯಿಕ ಅಧಿಕಾರಗಳನ್ನು ಹೊಂದಿದ್ದರು. ಅಮರನಾಯಕ ರಾಗಿದ್ದವರು ಮುಂದೆ ಸಂಸ್ಥಾನಿಕರಾಗಿ ಗುರುತಿಸಿಕೊಂಡರು ಎಂಬುದು ವಿದಿತವಾಗಿದೆ. ಇವರು ಪಡೆದ ಭೂದಾನವನ್ನು ಅಮರ ಮಾಗಣಿ, ಅಮರನಾಯಕರ, ಅಮರ ಮಹಲೆ, ಅಮರ ಅಂಬಲಿ, ಅಮರ ಪಂದೆನಾಯಕ ಎಂದು ಕರೆಯುತ್ತಿದ್ದರು(ಶಿವಣ್ಣ ೧೯೯೭:೬೨-೬೩).

ರಾಜಾರಾಮ ಹೆಗಡೆ ಅವರು ಅಮರನಾಯಕ ಪದ್ಧತಿಯನ್ನು ಅಳವಡಿಸಿಕೊಳ್ಳಲು ಕಾರಣವನ್ನು ಹುಡುಕುತ್ತಾ ಹೀಗೆ ಹೇಳುತ್ತಾರೆ. "ಸ್ಟೈನ್ ಅವರ ಬದಲಾದ ಚೌಕಟ್ಟಿನ ಪ್ರಕಾರ ವಿಜಯನಗರ ಕೃಷ್ಣದೇವರಾಯನ ಕಾಲದವರೆಗೆ ಸೆಗ್ಮೆಂಟರಿ ಅವಸ್ಥೆಯಲ್ಲೇ ಇತ್ತು. ಸ್ಥಾನಿಕ ಸಂಸ್ಥೆಗಳು ಪ್ರಬಲವಾಗಿದ್ದು, ವಿಜಯನಗರದ ಸಾರ್ವಭೌಮತ್ವ ಸೀಮಿತವಾಗಿತ್ತು ಹಾಗೂ ಈ ಪ್ರಭುತ್ವಕ್ಕೆ ಸೆಗ್ಮೆಂಟರಿ ಸ್ಟೇಟ್‌ನ ಸ್ವರೂಪವಿತ್ತು. ಆದರೆ ಬದಲಾದ ಸನ್ನಿವೇಶದಲ್ಲಿ ಈ ರಾಜರು ತಮ್ಮ ಸೈನ್ಯ ಬಲ ಹಾಗೂ ಪ್ರಭುತ್ವವನ್ನು ಕೇಂದ್ರೀಕರಿಸಿಕೊಳ್ಳುವ ಅಗತ್ಯ ಬಿದ್ದಿತು. ಈ ಮಿತಿಯಿಂದ ಹೊರಬರಲಿಕ್ಕೆ ೧೪ನೆಯ ಶತಮಾನದ ಅಂತ್ಯಾವಧಿಯಿಂದ ಅಮರನಾಯಕ ಪದ್ಧತಿಯನ್ನು ಆಶ್ರಯಿಸಲಾಯಿತು. ಕೃಷ್ಣದೇವರಾಯ ತನ್ನ ರಾಜ್ಯಭಾರವನ್ನೇ ಈ ನಾಯಕರನ್ನಾಧರಿಸಿ ನಡೆಸಲು ತೊಡಗಿ ಸ್ವಾಯತ್ತ ಸಂಸ್ಥೆಗಳನ್ನು ದುರ್ಬಲ ಗೊಳಿಸಿದನು. ಸೈನ್ಯ ಸುಧಾರಣೆ ಕೂಡ ಇದರ ಮತ್ತೊಂದು ಉದ್ದೇಶವಾಗಿತ್ತು" ಎನ್ನುತ್ತಾರೆ(ತಂಬಂಡ ೨೦೧೦: ೪೨೯-೩೦).

ಶಿವಣ್ಣ ಕೆ.ಎಸ್. ಮತ್ತು ರಾಜಾರಾಮ ಹೆಗಡೆಯವರ ವಿಚಾರಗಳನ್ನು ಪರಿಶೀಲಿಸಿದಾಗ ಈ ಪದ್ಧತಿಯನ್ನು ಅಳವಡಿಸಿಕೊಂಡ ಬಗೆಯನ್ನು ಇನ್ನೂ ಭಿನ್ನವಾದ ರೀತಿಯಲ್ಲಿ ಗುರುತಿಸಬಹುದೆನಿಸುತ್ತದೆ. ಕೃಷ್ಣದೇವರಾಯನ ಉದ್ದೇಶ ಅಧಿಕಾರವನ್ನು ಸ್ಥಾಪಿಸುವುದಾಗಿತ್ತು. ರಾಯಚೂರು ದೋ-ಅಬ್ ಪ್ರದೇಶ ಆದಿಲ್‌ಶಾಹಿಗಳ ಆಳ್ವಿಕೆಯಲ್ಲಿ ಇದ್ದದ್ದೇ ಹೆಚ್ಚು. ವಿಜಯನಗರದಲ್ಲಿ ಯಾಕೆ ಈ ಪ್ರದೇಶವನ್ನು

ಉಳಿಸಿಕೊಳ್ಳಲಾಗುತ್ತಿಲ್ಲ ಎಂಬ ಆತಂಕದಲ್ಲಿ ಕೃಷ್ಣದೇವರಾಯನಿದ್ದಾಗ ಸಮುದ್ರಯಾನದ ಮೂಲಕ ಬಂದಿದ್ದ ಪೋರ್ಚುಗೀಸರು ಅರಬ್ಬಿ ಸಮುದ್ರದಲ್ಲಿ ಅಲ್ಲಲ್ಲಿ ವಸಾಹತುಗಳನ್ನು ಸ್ಥಾಪಿಸುವ ತವಕದಲ್ಲಿದ್ದು, ಬಿಜಾಪುರದ ಆದಿಲ್‌ಶಾಹಿಗಳ ವಿರೋಧವನ್ನು ಎದುರಿಸಬೇಕಾಯಿತು. ಇಂತಹ ಸಂದರ್ಭದಲ್ಲಿ ಪೋರ್ಚುಗೀಸರಿಗೆ ಯಾವುದಾದರೂ ರಾಜಾಶ್ರಯ ಬೇಕಿತ್ತು. ಹಾಗೆಯೇ ವಿಜಯನಗರದವರಿಗೆ ಬಲಿಷ್ಠ ಕುದುರೆಗಳ ಅವಶ್ಯಕತೆಯೂ ಇದ್ದಿತು. ಬಿಜಾಪುರದ ಆದಿಲ್‌ಶಾಹಿಗಳು ಅರಬರು ಗೋವೆಯ ಸಮುದ್ರ ಮಾರ್ಗದ ಮೂಲಕ ಅರಬ್ಬರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಸಹಧರ್ಮೀಯರಾಗಿದ್ದರಿಂದ ಸೈನ್ಯಕ್ಕೆ ಅಗತ್ಯವಾಗಿದ್ದ ಬಲಿಷ್ಠ ಕುದುರೆಗಳನ್ನು ಒದಗಿಸುತ್ತಿದ್ದರು. ವಿಜಯನಗರ ತನ್ನ ಅಸ್ತಿತ್ವಕ್ಕಾಗಿ ಹೋರಾಟ ಮಾಡುವ ಸಮಯ ಬರಬಾರದೆಂಬ ಮಹತ್ವಾಕಾಂಕ್ಷೆಯಿಂದ ಯುರೋಪಿನ ಪೋರ್ಚುಗೀಸರೊಂದಿಗೆ ಕೃಷ್ಣದೇವರಾಯ ಒಪ್ಪಂದ ಮಾಡಿಕೊಂಡನು. ಕುದುರೆಗಳನ್ನು ವಿಜಯನಗರಕ್ಕೆ ಮಾತ್ರ ಸರಬರಾಜು ಮಾಡಬೇಕು. ಸುಲ್ತಾನರುಗಳಿಗೆ ಕುದುರೆಗಳನ್ನು ಕಳಿಸಬಾರದೆಂಬ ಕಟ್ಟಪ್ಪಣೆ ಮಾಡಿರುವುದು ಕಂಡುಬರುತ್ತದೆ. ಹೀಗೆ ಕರಾರುಗಳಿಗೆ ಬದ್ಧರಾಗಿ, ಪೋರ್ಚುಗೀಸರು ವಿಜಯನಗರದ ಬೆಂಬಲ ಪಡೆದು ವ್ಯಾಪಾರ ನಡೆಸಿರುವುದು ಸ್ಪಷ್ಟವಾಗಿದೆ. ಪೋರ್ಚುಗೀಸರ ಸೇನೆಯನ್ನು ವಿಜಯನಗರದ ಸೇನೆಯಲ್ಲಿ ಸೇರಿಸಲಾಗಿತ್ತೆನಿಸುತ್ತದೆ. ೧೫೨೧ರಲ್ಲಿ ನಡೆದ ರಾಯಚೂರು ಕೋಟೆಯ ಮುತ್ತಿಗೆಯ ಸಂದರ್ಭದಲ್ಲಿ ಕೃಷ್ಣದೇವರಾಯನ ಸೈನ್ಯದಿಂದ ರಾಯಚೂರು ಕೋಟೆಯನ್ನು ಭೇದಿಸಲು ಸಾಧ್ಯವಾಗಲಿಲ್ಲ. ಆಗ ಪೋರ್ಚುಗೀಸರ ಸೈನ್ಯದ ಸಹಾಯದಿಂದ ರಾಯಚೂರು ಕೋಟೆಯನ್ನು ವಶಪಡಿಸಿಕೊಳ್ಳಲಾಯಿತು. ಪೋರ್ಚುಗೀಸರಿಂದ ಖರೀದಿಸಿದ ಕುದುರೆಗಳನ್ನು ಪೋಷಿಸುವುದು ಅರಸನಿಗೆ ಕಷ್ಟಕರವಾಗಿತ್ತು. ಹಾಗಾಗಿ ಕುದುರೆಗಳ ಆರೈಕೆಯ ಹಿನ್ನೆಲೆಯಲ್ಲಿ ಈ ವೇಳೆಗಾಗಲೇ ಗುರುತಿಸಿಕೊಂಡಿರುವ ನಾಯಕರಿಗೆ ಭೂಮಿ ನೀಡಿ ಇಂತಿಷ್ಟು ಕುದುರೆಗಳನ್ನು ನಾಯಕತನಕ್ಕೆ ನೀಡಲಾಗುತ್ತಿತ್ತು. ಇದಕ್ಕೆ ಕೃಷ್ಣದೇವರಾಯನು ಕ್ರಿ.ಶ.೧೫೨೮ರಲ್ಲಿ ರಾಯಚೂರು ದೋ-ಅಬ್ ಪ್ರದೇಶದ ಸಾಲಗುಂದೆ ಗ್ರಾಮವನ್ನು ಅಬ್ಬರಾವು ಅಯ್ಯನ ಕುದುರೆ ನಾಯಕತನಕ್ಕೆ ನೀಡಿರುವುದು ಸಾಲಗುಂದೆ(೩)-ಕ್ರಿ.ಶ.೧೫೨೮ರ ಶಾಸನದಿಂದ ತಿಳಿದುಬರುತ್ತದೆ.[೯] ಅಧಿಕಾರ ಸ್ಥಾಪನೆಗಾಗಿ ಸಣ್ಣ ಪುಟ್ಟ ಅಧಿಕಾರಿಗಳನ್ನು ಹಿಂಬಾಲಿಸುವ ಬದಲು ಬಲಿಷ್ಠರಾಗಿದ್ದು, ರಾಜ್ಯಕ್ಕೆ ಸೇವೆಸಲ್ಲಿಸಲು ಸಮರ್ಥರಾದವರಿಗೆ ಅಮರನಾಯಕತ್ವವನ್ನು ನೀಡಿದನೆಂದು ಅರಿಯಬಹುದಾಗಿದೆ.

ಕೃಷ್ಣದೇವರಾಯ ಅಮರನಾಯಕ ಪದ್ಧತಿಯನ್ನು ಪೋರ್ಚುಗೀಸರ ಹಿನ್ನೆಲೆಯಲ್ಲಿ ಅಳವಡಿಸಿ ಕೊಂಡಿರಬಹುದೆಂದು ಊಹಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕೃಷ್ಣಕೊಲ್ಹಾರ ಕುಲಕರ್ಣಿ ಅವರು ನೀಡುವ ವಿವರಣೆಯನ್ನು ಗಮನಿಸಬಹುದು. ಕ್ರಿ.ಶ.೧೫೦೮ರ ಅಂತ್ಯದಲ್ಲಿ ಅಲ್ಮೀಡಾನ ಸ್ಥಳದಲ್ಲಿ ಅಲ್ಬುಕರ್ಕನು ರಾಜ್ಯಪಾಲನಾಗಿ ಬಂದನು. ಅರಬ್ಬೀ ಸಮುದ್ರದಲ್ಲಿ ಪೋರ್ಚುಗೀಸರ ಹಿಡಿತವನ್ನು ಬಲಗೊಳಿಸಲು ಆತ ಮರುವರುಷ ಪರ್ಶಿಯನ್ ಗಲ್ಫದಲ್ಲಿಯ ಆರ್ಮುಜನ್ನು ಕೈವಶ ಮಾಡಿಕೊಳ್ಳಲು ಸಿದ್ಧತೆಗಳನ್ನು ಮಾಡಿಕೊಂಡನು. ಆದರೆ ಉದ್ದೇಶಿತ ಕಾರ್ಯಕ್ಕೆ ಪ್ರವೃತ್ತನಾಗದೆ ಮನಸ್ಸನ್ನು ಗೋವೆಯತ್ತ ತಿರುಗಿಸಿದನು. "ಪೂರ್ವದೇಶಗಳಲ್ಲಿ ಪೋರ್ಚುಗೀಸರ ವ್ಯಾಪಾರದ ಅಭಿವೃದ್ಧಿಗೆ ಭಾರತದ ಪಶ್ಚಿಮ ಕರಾವಳಿಯಲ್ಲಿಯ ಮಹತ್ವದ ಬಂದರುಗಳನ್ನು ವಶಪಡಿಸಿಕೊಳ್ಳುವುದು ಅಗತ್ಯವೆಂದು ಆತ ಮನಗಂಡನು. ಅದಕ್ಕೆ ಒತ್ತಾಸೆಯಾಗಿ ವಿಜಯನಗರದ ತಿಮ್ಮೋಜನು, ಅಲ್ಬುಕರ್ಕನನ್ನು ಗೋವೆಯತ್ತ ಹೊರಡಲು ಹುರಿದುಂಬಿಸಿದನು. ಆಗ ತಿಮ್ಮೋಜನು ಮಲಬಾರ ಕರಾವಳಿಯ ಪಾಳೆಯಗಾರನಾಗಿದ್ದನು.

ವಿಜಯನಗರ ಮತ್ತು ಬಿಜಾಪುರ ಪರಸ್ಪರ ದ್ವೇಷಿಸುತ್ತಿದ್ದವು. ಅದಕ್ಕಾಗಿ ಅವನು ಆಲ್ಬುಕರ್ಕನನ್ನು ಬೆಂಬಲಿಸಿದನು. ಮುಸ್ಲಿಂ ಧರ್ಮಕ್ಕೆ ಉತ್ತೇಜನಕೊಡುವುದಕ್ಕಿಂತ ಪೋರ್ಚುಗೀಸರನ್ನು ಬೆಂಬಲಿಸುವುದು ಸರಿಯೆಂದು ಅವನು ಭಾವಿಸಿದ್ದನು. ಅಲ್ಲದೆ ವಿಜಯನಗರದ ಅರಸರಿಗೆ ಅಗತ್ಯವಾಗಿದ್ದ ಕುದುರೆಗಳನ್ನು ತರಿಸಿಕೊಡುವುದಾಗಿ ಪೋರ್ಚುಗೀಸರ ಜೊತೆಗೆ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಅದರಿಂದಾಗಿ ಆರ್ಮುಜದಿಂದ ಬರುವ ಕುದುರೆಗಳೆಲ್ಲ ಬಟ್ಟಿಕೋಟಾ ಅಥವಾ ವಿಜಯನಗರದವರು ತೋರಿಸುವ ಬಂದರಿಗಲ್ಲದೆ ಇನ್ನೆಲ್ಲೂ ಇಳಿಯಬಾರದೆಂದು ಕಟ್ಟಪ್ಪಣೆ ಮಾಡಿದರು ಮತ್ತು ಮುಸ್ಲಿಂ ರಾಜರಿಗೆ ಅವನ್ನು ಕಳಿಸಬಾರದೆಂದೂ ಆದೇಶಿಸಿದರು. ಅಂತೆಯೇ ಪೋರ್ಚುಗೀಸರು ಗೋವೆಯನ್ನು ಸ್ವಾಧೀನ ಪಡಿಸಿಕೊಳ್ಳುವುದು ವಿಜಯನಗರದ ರಾಜಕೀಯ ಅಗತ್ಯವಾಗಿತ್ತು. ಅದರಲ್ಲಿ ವ್ಯಾಪಾರಿ ಲಾಭ ಅಡಗಿತ್ತೆಂದು ಕುಲಕರ್ಣಿ ಅವರು ತಿಳಿಸುತ್ತಾರೆ(ಕುಲಕರ್ಣಿ ೨೦೦೭: ೪೮-೪೯). ಹಾಗೆಯೇ ಮುಂದುವರೆದು ಗೋವೆಯತ್ತ ತಿರುಗಲು ಆಲ್ಬುಕರ್ಕನಿಗೆ ಇನ್ನೂ ಒಂದು ಕಾರಣವಿತ್ತು. ಪೋರ್ಚುಗೀಸರನ್ನು ಭಾರತದಿಂದ ಹೊರಹಾಕಬೇಕೆಂದು ಯುಸೂಫ್ ಆದಿಲ್‌ಶಾಹನು ಇನ್ನೊಂದು ಪ್ರಯತ್ನದಲ್ಲಿದ್ದನು. ಹಾಗಾಗಿ ಆಲ್ಬುಕರ್ಕನು ಗೋವೆಯತ್ತ ಬಂದನು ಎನ್ನುತ್ತಾರೆ(ಕುಲಕರ್ಣಿ ೨೦೦೭: ೪೯).

ಕೃಷ್ಣಕೊಲ್ಹಾರ ಕುಲಕರ್ಣಿ ಅವರ ಪ್ರಕಾರ ಟಿಪ್ಪುಸುಲ್ತಾನನಿಗಿಂತ ಮುಂಚೆಯೇ ವಸಾಹತು ಸ್ಥಾಪಿಸಿ ರಾಜಕೀಯ ಐಡೆಂಟಿಟಿ ಪಡೆಯಬೇಕೆಂಬ ಆಕಾಂಕ್ಷೆ ಹೊಂದಿದ ಯುರೋಪಿನ ಪೋರ್ಚುಗೀಸ ರನ್ನು ಭಾರತ ಬಿಟ್ಟು ಓಡಿಸಬೇಕೆಂಬ ಹಿನ್ನೆಲೆಯಲ್ಲಿ ಬಿಜಾಪುರದ ಆದಿಶಾಹಿಗಳು ಪ್ರಯತ್ನಿಸಿದರು ಎಂದು ಗುರುತಿಸಬಹುದು. ಮುಖ್ಯವಾಗಿ ಯುಸೂಫ್ ಆದಿಲ್‌ಶಾಹನು ಈ ನಿಟ್ಟಿನಲ್ಲಿ ಪೋರ್ಚುಗೀಸರನ್ನು ವಿರೋಧಿಸಿದನು. ಇಂತಹ ಸಂದರ್ಭದಲ್ಲಿ ವೈರಿಯ ವೈರಿ ಪೋರ್ಚುಗೀಸರನ್ನು ಬೆಂಬಲಿಸುವ ಮೂಲಕ ಬಿಜಾಪುರದ ಆದಿಲ್‌ಶಾಹಿಗಳ ವ್ಯಾಪಾರದ ಮೇಲಿನ ಹಿಡಿತವನ್ನು ತಪ್ಪಿಸಿತು. ಈ ಮೂಲಕ ಕೃಷ್ಣದೇವರಾಯ ಅಧಿಕಾರ ಸ್ಥಾಪಿಸುವ ಭರಾಟೆಯಲ್ಲಿ ವಿದೇಶಿಯರಾದ ಯುರೋಪಿಯನ್ನರಿಗೆ ಬೆಂಬಲವನ್ನು ಸೂಚಿಸುವ ಮೂಲಕ ಭಾರತವನ್ನು ಯುರೋಪಿಯನ್ನರ ದಾಸ್ಯಕ್ಕೆ ಸಿಲುಕುವಂತೆ ಮಾಡಿದನು. ಆದರೆ ಬಿಜಾಪುರದ ಆದಿಲ್‌ಶಾಹಿ ಯುಸೂಫನ ಪ್ರಯತ್ನ ಕೂಡ ಭಾರತವನ್ನು ಯುರೋಪಿಯನ್ನರ ಹಿಡಿತಕ್ಕೆ ಸಿಗದಂತೆ ನೋಡಿಕೊಳ್ಳಬೇಕಾಗಿತ್ತು. ಹಾಗೆಯೇ ಆತ ಅರಬ್ ವ್ಯಾಪಾರಿಗಳಿಗೆ ಸಹಕರಿಸಿರುವುದೂ ಗೋಚರಿಸುತ್ತದೆ.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಅಮರನಾಯಕ ಪದ್ಧತಿ ಅಸ್ತಿತ್ವದಲ್ಲಿದ್ದಿತು. ಕೇಂದ್ರದ ಷರತ್ತುಗಳಿಗೆ ಬದ್ಧರಾಗಿ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿ ಅಮರನಾಯಕ ವರದಣ್ಣನಾಯಕ, ತ್ರಿಯಂಬಕ ಅರಸ, ಅಬ್ಬಾರಾವ್ ಅಯ್ಯನ, ಬಾಜಪ್ಪನಾಯಕ, ಇಮ್ಮಡಿ ಮೇದಿನಿರಾಯ ಎಂಬುವವರಿದ್ದರು. ಈ ಪ್ರದೇಶದಲ್ಲಿ ಅಮರನಾಯಕ ಪದ್ಧತಿ ಯಾವಾಗ ಅಸ್ತಿತ್ವಕ್ಕೆ ಬಂದಿತೋ ಅದೇ ಕಾಲಕ್ಕೆ ಇಲ್ಲಿಯೂ ಅನುಸರಿಸಿರಬೇಕು. ಈ ಪ್ರದೇಶದಲ್ಲಿ ನಾಲ್ಕು ಅಮರನಾಯಕರ ಕೇಂದ್ರಗಳಿದ್ದವು. ಅವು ಮುದಗಲ್, ರಾಯಚೂರು, ಸಾಲಗುಂದೆ ಮತ್ತು ಮಸ್ಕಿಗಳಾಗಿವೆ. ವಿಜಯನಗರದ ಅರಸ ಎರಡನೆಯ ದೇವರಾಯನ ಕಾಲದಲ್ಲಿ ಈ ಪ್ರದೇಶದ ಮುದಗಲ್ ಮತ್ತು ರಾಯಚೂರುಗಳಲ್ಲಿ ಅಮರನಾಯಕರನ್ನು ನೇಮಿಸಲಾಗಿತ್ತು. ರಾಯಚೂರು ಸೀಮೆಗೆ ತಿಪ್ಪಯ್ಯರಸನ ಮಗ ತ್ರಿಯಂಬಕ ಅರಸನನ್ನು ನೇಮಿಸಲಾಗಿತ್ತೆಂದು ದೇವಸೂಗೂರು (೫೭)-ಕ್ರಿ.ಶ. ೧೪೩೬[ರ] ಶಾಸನ ತಿಳಿಸುತ್ತದೆ. ಮುದಗಲ್‌ಗೆ ವರದಣ್ಣ ನಾಯಕನನ್ನು

ನೇಮಿಸಿರುವ ಬಗ್ಗೆ ಮುದಗಲ್(೫೦)-೧೪೩೬ರ ಶಾಸನದಿಂದ ತಿಳಿದುಬರುತ್ತದೆ.[೯೯] ಅಲ್ಲದೆ ಅಚ್ಯುತರಾಯನ ಕಾಲದಲ್ಲಿ ಬಾಚಪ್ಪನಾಯಕನನ್ನು ನೇಮಿಸಿರುವುದು ತಿಳಿದುಬರುತ್ತದೆ. ಈತ ಕೇಂದ್ರ ಸರಕಾರಕ್ಕೆ ಸೈನ್ಯ ಮತ್ತು ವಾರ್ಷಿಕ ಕಪ್ಪವನ್ನು ಸಲ್ಲಿಸುತ್ತಿದ್ದನು. ಇವನ ಕಾಲದಲ್ಲಿ ಮುದಗಲ್ ಆಡಳಿತ ಕೇಂದ್ರಕ್ಕೆ ವಾರ್ಷಿಕ ವರಮಾನ ೪,೦೦,೧೦೦ ಪರ್ಧಾವೋ ಹಣ ಬರುತ್ತಿತ್ತು. ೧೦,೦೦೦ ಪದಾತಿ, ೮೦೦೦ ಕುದುರೆ ಮತ್ತು ೫೦ ಆನೆಗಳನ್ನು ಹೊಂದಿ ದೊಡ್ಡ ಅಮರನಾಯಕನಾಗಿದ್ದನು. ಹಾಗೆಯೇ ಸರಕಾರಕ್ಕೆ ವಾರ್ಷಿಕ ೧,೫೦,೦೦೦ ಪರ್ಧಾವೋ ಹಣವನ್ನು ಸಲ್ಲಿಸುತ್ತಿದ್ದನೆಂದು ತಿಳಿದು ಬರುತ್ತದೆ(ಶಿವಣ್ಣ ೧೯೯೭: ೬೬-೬೭). ಬಾಜಪ್ಪನಾಯಕನ ಆಳ್ವಿಕೆಯ ಕಾಲ ಸ್ಪಷ್ಟವಾಗಿ ಕಂಡು ಬರುವುದಿಲ್ಲ. ಆದರೂ ೧೫೩೦ ಇರಬಹುದು ಎಂದು ಮಸ್ಕಿ (೩೭)-೧೫೩೦ರ ಶಾಸನದ ಸಹಾಯದಿಂದ ಊಹಿಸಬಹುದಾಗಿದೆ.[೧೦೦] ಸಾಲಗುಂದೆ ಸಹ ಕೃಷ್ಣದೇವರಾಯನ ಕಾಲದಲ್ಲಿ ಅಮರನಾಯಕ ಕೇಂದ್ರವಾಗಿತ್ತು. ಈ ಗ್ರಾಮವನ್ನು ಕೃಷ್ಣದೇವರಾಯ ಅಬ್ಬರಾವ ಅಯ್ಯನ ಎಂಬುವವನಿಗೆ ಕುದುರೆ ನಾಯಕತನಕ್ಕೆ ಬಿಟ್ಟಿದ್ದನೆಂದು ಸಾಲಗುಂದೆ(೩)-೧೫೨೮ರ ಶಾಸನದಿಂದ ತಿಳಿದುಬರುತ್ತದೆ.[೧೦೧] ಮಸ್ಕಿ ಅಚ್ಯುತರಾಯನ ಆಳ್ವಿಕೆಯ ಸಂದರ್ಭದಲ್ಲಿ ಅಮರನಾಯಕ ಕೇಂದ್ರವಾಗಿತ್ತು. ಇಲ್ಲಿ ಇಮ್ಮಡಿ ಮೇದಿನಿರಾಯ ಅಮರನಾಯಕನಾಗಿ ಸೇವೆ ಸಲ್ಲಿಸಿದನು. ಇದನ್ನು ಕುರಿತು ಮಸ್ಕಿ(೩೭)-೧೫೩೦,[೧೦೨] ಮಸ್ಕಿ (೩೬)-೧೫೩೭,[೧೦೩] ಮಸ್ಕಿ(೩೯)-೧೫೩೦[೧೦೪] ಶಾಸನಗಳು ತಿಳಿಸುತ್ತವೆ.

ಈ ಪ್ರದೇಶದಲ್ಲಿ ಕಂಡುಬರುವ ಅಮರನಾಯಕರು ಸರ್ಕಾರದ ಷರತ್ತುಗಳಿಗೆ ಬದ್ಧರಾಗಿದ್ದು ಆಳ್ವಿಕೆ ನಡೆಸುತ್ತಿದ್ದರು. ಇವರು ಸಂಪೂರ್ಣವಾಗಿ ಸ್ವತಂತ್ರವಾಗಿದ್ದರು. ದಾನ, ಧರ್ಮಗಳನ್ನು ನೀಡಿರುವುದು ಸಹ ಅವರ ಶಾಸನಗಳಿಂದ ತಿಳಿದುಬರುತ್ತದೆ. ರಾಜಕೀಯ, ಆರ್ಥಿಕ, ನ್ಯಾಯಿಕ, ಸಾಮಾಜಿಕ ಮುಂತಾದ ಅಧಿಕಾರಗಳನ್ನು ಹೊಂದಿದ್ದರು. ಇದು ಒಂದು ರೀತಿಯ ಸಹಾಯಕ ಸೈನ್ಯ ಪದ್ಧತಿಯ ಹಾಗೆ ಕಾಣುತ್ತದೆ. ಅಮರನಾಯಕ ಪದ್ಧತಿಯಿಂದಾಗಿ ಅಮರನಾಯಕರು ಸ್ವತಂತ್ರರಾಗಲು ಬಯಸಿದ್ದರು. ಪ್ರಭುತ್ವವನ್ನು ಹತ್ತಿಕ್ಕುವಷ್ಟು ಸಾಮರ್ಥ್ಯವನ್ನು ಹೊಂದಿದ್ದರು. ಅಳಿಯ ರಾಮರಾಯನ ಕಾಲದಲ್ಲಿ ಇದು ಮಿತಿ ಮೀರುವ ಹಂತ ತಲುಪಿತು. ಇದರಿಂದ ಎಚ್ಚೆತ್ತುಕೊಂಡ ರಾಮರಾಯ ಅಮರನಾಯಕ ತನವನ್ನು ರದ್ದುಪಡಿಸಿ ಕೌಟುಂಬಿಕ ಪ್ರಭುತ್ವ ವ್ಯವಸ್ಥೆಯನ್ನು ಜಾರಿಗೆ ತಂದು ಅಪಾಯದಿಂದ ಪಾರಾದಂತೆ ಕಂಡುಬರುತ್ತದೆ. ಮುರಿದು ಕಟ್ಟುವ ರಾಮರಾಯನ ಪ್ರಯತ್ನ ಸುಲಭದಾಯಕವಾಗಿರಲಿಲ್ಲ. ಅಮರನಾಯಕರ ಸ್ಥಳಗಳಿಗೆ ಕುಟುಂಬದ ಸದಸ್ಯರನ್ನೇ ನೇಮಿಸಿ ಆಡಳಿತವನ್ನು ನಡೆಸಲಾರಂಭಿಸಿದನು. ಈ ಪದ್ಧತಿ ರಾಜ್ಯಾದ್ಯಂತ ಕಂಡುಬರುವಂತೆ ರಾಯಚೂರು ದೋ-ಅಬ್ ಪ್ರದೇಶದಲ್ಲಿಯೂ ಜಾರಿಯಲ್ಲಿತ್ತು. ಇದಕ್ಕೆ ಸಂಬಂಧಿಸಿದಂತೆ ಶಾಸನಗಳಿವೆ. ಉದಾ-ತನ್ನ ಮಗ, ಕೃಷ್ಣರಾಜದೇವ ಮುದಗಲ್‌ನ ಅಧಿಕಾರಿಯಾಗಿ ಆಳ್ವಿಕೆ ಮಾಡುವಂತೆ ಮಾಡಿದನು. ಇದನ್ನು ಮುದಗಲ್ (೫೧)-೧೫೬೦ ರ ಶಾಸನ ತಿಳಿಸುತ್ತದೆ.[೧೦೫] ರಾಮಪುರ(೧೨)-೧೫೫೩[೧೦೬] ಹಾಗೂ ಕವಿತಾಳ(೧೧೭)-೧೫೫೧,[೧೦೭] ಮಸ್ಕಿ(೩೮)-೧೫೪೭[೧೦೮] ಮುಂತಾದ ಶಾಸನಗಳು ರಾಮರಾಯನೇ ಖುದ್ದಾಗಿ ಈ ಪ್ರದೇಶಗಳಲ್ಲಿ ಆಡಳಿತ ನಡೆಸಿದನೆಂದು ತಿಳಿಸುತ್ತವೆ. ಈ ರೀತಿಯಾಗಿ ರಾಮರಾಯ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಕಂಡುಬರುವ ಅಮರನಾಯಕರು ಜೀವಿತಾವಧಿಯವರೆಗೆ ಆಳ್ವಿಕೆ ಮಾಡಿದರು. ಇವರ ಆಡಳಿತ ವ್ಯವಸ್ಥೆ ವಂಶಪಾರಂಪರ್ಯವಾಗಿರಲಿಲ್ಲ. ಅಮರನಾಯಕರನ್ನು ಕಡೆಗಣಿಸಿದ್ದದ್ದು ಮುಂದೆ ಕ್ರಿ.ಶ. ೧೫೬೫ರ ಬಯ್ಯಾಪುರ ಯುದ್ಧದಲ್ಲಿ ಸೋಲನುಭವಿಸುವಂತೆ ಮಾಡಿತೆಂದು ಗುರುತಿಸಬಹುದಾಗಿದೆ.

### ತರಫ್‌ದಾರರು ಅಥವಾ ಪ್ರಾಂತಾಧಿಕಾರಿಗಳು

ಪ್ರಾಂತಾಧಿಕಾರಿಗಳ ವ್ಯವಸ್ಥೆಯನ್ನು ಬಹಮನಿ ಮತ್ತು ಬಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆಯ ಸಂದರ್ಭದಲ್ಲಿ ಕಾಣಬಹುದು. ಈ ಪದ್ಧತಿಯನ್ನು ಕುರಿತು ಬಿ. ಷೇಕ್‌ಅಲಿ ಅವರು ಹೀಗೆ ಹೇಳುತ್ತಾರೆ. "ಪ್ರಾಚೀನ ಕಾಲದಿಂದ ಇಂದಿನವರೆಗೂ ಚಕ್ರವರ್ತಿ ಅಥವಾ ನಿರಂಕುಶ ಮಾದರಿಯ ಸರಕಾರವಿರುವುದು ಪರಿವರ್ತನಾ ಸಾಹಿತ್ಯವನ್ನು ಸೂಚಿಸುತ್ತದೆ. ಪಶ್ಚಿಮವು ಸರಕಾರದ ಹಲವು ಮಾದರಿಗಳ ಅನುಭವವನ್ನು ಪಡೆಯಿತು. ಆದರೆ ಭಾರತ ಬಹಳ ಕಾಲ ನಿರಂಕುಶ ಪ್ರಭುತ್ವವನ್ನೇ ಅದರ ಹಲವು ಅಭಿವ್ಯಕ್ತಿಗಳಲ್ಲಿ ಕಾಣುತ್ತಾ ಬಂದಿತು. ಈ ದೃಷ್ಟಿಯಿಂದ ಬಹಮನಿ ಮತ್ತು ಬಿಜಾಪುರ ಆದಿಲ್‌ಶಾಹಿ ಅರಸರ ಆಡಳಿತ ಒಂದು ನಿರ್ದಿಷ್ಟ ಮಾದರಿಗೆ ಒಳಪಟ್ಟಿತ್ತೆಂದು ಹೇಳಬಹುದು. ಅವರ ಆಡಳಿತದಲ್ಲಿ ನಿರಂತರತೆ ಮತ್ತು ಬದಲಾವಣೆ ಎರಡೂ ವ್ಯಕ್ತವಾಗಿದ್ದುವು. ಎರಡೂ ಮಧ್ಯಯುಗಕ್ಕೆ, ಫ್ಯೂಡಲ್ ಯುಗಕ್ಕೆ ಸೇರಿದುವು. ಅದರ ಮೂಲತತ್ವಗಳನ್ನು ಬದಲಾಯಿಸಲು ಅವಕ್ಕೆ ಸಾಧ್ಯವಿರಲಿಲ್ಲ. ರಂಗದ ಚೌಕಟ್ಟಿನೊಳಗೆಯೇ ನಾಟಕದ ನಟರನ್ನು ಅವಲಂಬಿಸಿದಂತೆ, ಅರಸನಿಂದ ಅರಸನಿಗೆ ವ್ಯತ್ಯಾಸಗಳಿದ್ದುವು. ಆದರೆ ಎಲ್ಲರೂ ಅನಾದಿಕಾಲದಿಂದಲೂ ಬಂದಿದ್ದ ಚಕ್ರಾಧಿಪತ್ಯದ ನಿರ್ದಿಷ್ಟ ನಿಯಮಗಳ ಚೌಕಟ್ಟಿನಲ್ಲೇ ಕೆಲಸ ಮಾಡಬೇಕಾಗಿತ್ತು. ನಿರಂತರತೆಯ ವ್ಯವಸ್ಥೆಯಲ್ಲಿ ಬ್ರಿಟಿಷರೂ ಅಲ್ಪಸ್ವಲ್ಪ ಹೊರತುಪಡಿಸಿ ಮೂಲಭೂತವಾಗಿ ವ್ಯತ್ಯಾಸ ಮಾಡಲು ವಿಫಲರಾದರು. ಟರ್ಕರು, ಆಫ್ಘನ್ನರು ಮತ್ತು ಪರ್ಶಿಯನ್ನರು ಮಾಡಿದ್ದು ಇನ್ನೂ ಕಡಿಮೆ. ಒಬ್ಬ ರಾಜನ ಆಸ್ಥಾನದಲ್ಲಿ ಒಬ್ಬ ಸುಲ್ತಾನ ಬಂದಾಗ ಮೇಲು ಮಟ್ಟದಲ್ಲಿ ಬದಲಾವಣೆಯಾಯಿತು ಅಷ್ಟೇ ಹೊರತು ಸರಕಾರದ ಸಕಲ ವ್ಯವಸ್ಥೆಯೂ ಮುಂಚಿನಂತೆಯೇ ಮುಂದುವರೆಯಿತು. ಗ್ರಾಮಾಡಳಿತ, ನಗರಗಳು ಮತ್ತು ಪ್ರಾಂತಗಳಲ್ಲಿ ಅದೇ ವ್ಯವಸ್ಥೆ, ಕಾನೂನು-ಸುವ್ಯವಸ್ಥೆಯ ಪಾಲನಾಕ್ರಮ, ಹಿಡುವಳಿದಾರರ ಮೇಲೆ ಕೇಂದ್ರದ ಹತೋಟಿ, ಅದೇ ಸೈನ್ಯ ಮತ್ತು ಪೌರವ್ಯವಸ್ಥೆಗಳು ಎಲ್ಲವೂ ಹಾಗೆಯೇ ಮುಂದುವರಿದವು. ಆಡಳಿತದ ಉಸ್ತುವಾರಿ ವಹಿಸಿಕೊಂಡಿದ್ದವರು ಮಾತ್ರ ಬೇರೆಯಾಗಿದ್ದರು ಅಷ್ಟೇ" ಎಂಬುದಾಗಿ ತಿಳಿಸುತ್ತಾರೆ(ಷೇಕ್‌ಅಲಿ ೧೯೯೭:೧೩೮-೧೩೯).

ಬಹಮನಿ ಮತ್ತು ಬಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ಪ್ರಾಂತಾಧಿಕಾರಿಗಳ ಪಾತ್ರ ಬಹುಮುಖ್ಯವಾದುದಾಗಿತ್ತು. ಇವರು ಸುಲ್ತಾನರ ರಕ್ಷಣೆಗಾಗಿ ಹೋರಾಟ ಮಾಡಿರುವುದು ಗೋಚರಿಸುತ್ತದೆ. ಪ್ರಾಚೀನ ಕಾಲದಿಂದ ಬಂದ ದಾನ ಪದ್ಧತಿ ಇವರಲ್ಲಿಯೂ ಇದ್ದಿತು. ಮಸೀದಿಗಳ ಉದ್ಧಾರಕ್ಕಾಗಿ ಭೂದಾನವನ್ನು ಮಾಡಿರುವುದು ಕಂಡುಬರುತ್ತದೆ. ಇವರು ಜಾತ್ಯಾತೀತರಂತೆ ಕಂಡುಬಂದರೂ ಧಾರ್ಮಿಕ ಒಲವು ಉಳ್ಳವರಾಗಿದ್ದರು ಎಂಬುದಾಗಿ ರಾಯಚೂರು(೨೦)-೧೫೪೮-೪೯ರ ಶಾಸನದಿಂದ ತಿಳಿದುಬರುತ್ತದೆ.[೧೯] ಭೂದಾನ ಮಾಡಿದ್ದಾರೆಂಬುದಕ್ಕೆ ರಾಯಚೂರು (೧೬)-೧೪೯೮-೯೯ರ ಶಾಸನ ಆಧಾರವಾಗಿದೆ.[೧೦೦] ಹಾಗೆಯೇ ಈ ಪ್ರಾಂತಾಧಿಕಾರಿಗಳು ಜನಪರವಾಗಿದ್ದು, ಜಾತ್ಯಾತೀತತೆಯನ್ನು ಪಾಲಿಸುತ್ತಿದ್ದರೆಂಬುದಕ್ಕೆ ಇಲ್ಲಿನ ಶಾಸನಗಳು ಗಮನಾರ್ಹವಾಗಿವೆ. ಇದಕ್ಕೆ ಮಲಿಯಾಬಾದ್ (೯)-೧೫೧೩ರ ಶಾಸನದಲ್ಲಿ ಮಲಿಕ್ ಅಂಬರ್ ಎಂಬ ಪ್ರಾಂತಾಧಿಕಾರಿ "ನಿಗದಿಪಡಿಸಿದ ತೆರಿಗೆಗಿಂತ ಹೆಚ್ಚಿಗೆ ಸಂಗ್ರಹಿಸಬಾರದು, ಬಿಟ್ಟಿ ಕೆಲಸವನ್ನು ಯಾರಿಂದಲೂ ಮಾಡಿಸಬಾರದು, ನಿಯಮದಂತೆ ಜಕಾತ್ ತೆರಿಗೆ ಸಂಗ್ರಹಿಸಬೇಕು. ಈ ನಿಯಮಗಳನ್ನು ಮೀರಿ ಮುಸ್ಲಿಂರಾಗಲಿ, ಹಿಂದೂಗಳಾಗಲಿ ನಡೆದುಕೊಳ್ಳಬಾರದೆಂದು" ಸ್ಪಷ್ಟವಾಗಿ ಉಲ್ಲೇಖಿಸುತ್ತಾನೆ.[೧೧೧] ಇದು ಜಾತ್ಯಾತೀತತೆಯನ್ನು ಸಾರುವ ಶಾಸನವಾಗಿದೆ. ಇದೇ ಶಾಸನದಂತೆ ಮತ್ತೊಂದು ಶಾಸನ ದೇವದುರ್ಗ ತಾಲೂಕಿನ ಗಲಗಿನಲ್ಲಿ

ಕಂಡುಬರುತ್ತದೆ. ಅದು ಗಲಗು ಮತ್ತು ರಾಯದುರ್ಗ ಸೀಮೆಯಲ್ಲಿ ಯಾರೂ ದಂಡವನ್ನು ತೆಗೆದುಕೊಳ್ಳ ಬಾರದೆಂದೂ ನ್ಯಾಯದಿಂದ ಕೊಡಬೇಕೆಂದು ಕಟ್ಟಳೆ ವಿಧಿಸಿರುವುದು ಗೋಚರಿಸುತ್ತದೆ. ಇದನ್ನು ಅಧಿಕ ಪ್ರಮಾಣದಲ್ಲಿ ತೆರಿಗೆಯ ಜೊತೆಗೆ ದಂಡವನ್ನು ವಸೂಲಿ ಮಾಡುವುದನ್ನು ಆದಿಲ್‌ಶಾಹಿಗಳು ಖಂಡಿಸಿರುವುದು ಗಲಗ(೩೫)-೧೭೨೬ರ ಶಾಸನದಿಂದ ತಿಳಿದುಬರುತ್ತದೆ.[೧೧೨] ಗಬ್ಬೂರಿನ(೧೪)-೧೭ನೆಯ ಶತಮಾನದ ಶಾಸನದಲ್ಲಿ ಆದಿಲ್‌ಶಾಹಿಗಳು ರೈತರು ಬೆಳೆದ ಬೆಳೆಯಲ್ಲಿ ರಾಜ್ಯಕ್ಕೆ ಅರ್ಧ ಪಾಲನ್ನು ಸಲ್ಲಿಸಬೇಕಾಗಿತ್ತು. ಈ ಪಾಲನ್ನು ರೈತರು ಕೊಡುವುದು ಅಗತ್ಯವಿಲ್ಲ. ಬೆಳೆದ ಬೆಳೆಯಲ್ಲಿನ ಪಾಲನ್ನು ಮಾತ್ರ ಮಾಫು ಮಾಡಿರುವುದಾಗಿ ತಿಳಿದುಬರುತ್ತದೆ. ಈ ಮೂರು ಅಂಶಗಳನ್ನು ಗಮನಿಸಿದಾಗ ಸುಲ್ತಾನರುಗಳು ಜಾತ್ಯಾತೀತ ತತ್ವವನ್ನು ಪಾಲಿಸಿರುವುದು ಕಂಡುಬರುತ್ತದೆ.

ಈ ರೀತಿಯಾಗಿ ಸಾಮಂತರಾಗಿ ಸೇವೆ ಸಲ್ಲಿಸುವಲ್ಲಿ ಪ್ರಮುಖ ಪಾತ್ರವಹಿಸಿದ ತರಫ್‌ದಾರರು ಸದಾಕಾಲವೂ ಕಬಳಿಸಲು ಹೊಂಚು ಹಾಕುತ್ತಿದ್ದ ನೆರೆಯ ವೈರಿಗಳಿಂದ ರಕ್ಷಣೆ ಮಾಡಿಕೊಳ್ಳಬೇಕಿತ್ತು. ರಾಯಚೂರು ಮತ್ತು ಮುದಗಲ್‌ಗಳನ್ನು ವಿಜಯನಗರದ ಆಕ್ರಮಣದಿಂದ ರಕ್ಷಿಸಿಕೊಳ್ಳಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಪ್ರಾಂತೀಯ ಸರಕಾರ ವ್ಯವಸ್ಥೆಯನ್ನು ಬಹಮನಿ ಮತ್ತು ಆದಿಲ್‌ಶಾಹಿಗಳು ಬೆಳವಣಿಗೆಯತ್ತ ಕೊಂಡೊಯ್ದರು. ಈ ಬಗೆಯ ಸಾಮಂತ ಪದ್ಧತಿಯನ್ನು ತರಫ್‌ದಾರ ಪದ್ಧತಿ ಎನ್ನಲಾಯಿತು. ಇದು ಮುಂದೆ ಬಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ಪ್ರಾಂತಾಡಳಿತ ಪದ್ಧತಿಯಲ್ಲಿ ಅಲ್ಪ-ಸ್ವಲ್ಪ ಬದಲಾವಣೆ ಹೊಂದಿ ಆದಿಲ್‌ಶಾಹಿಗಳು ತರಫ್ ಮತ್ತು ತರಫ್‌ದಾರ ಎಂಬ ಪದಗಳನ್ನು ಜಾಗೀರ್ ಮತ್ತು ಜಾಗೀರ್‌ದಾರ ಎಂದು ಬದಲಾಯಿಸಿದರು. ಇದು ಯುಸೂಫ್ ಆದಿಲ್‌ಶಾಹನ ಕಾಲದಿಂದಲೇ ಅಸ್ತಿತ್ವಕ್ಕೆ ಬಂದದ್ದಾಗಿದೆ. ಈ ಸಾಮಂತರು ತಮ್ಮದೇ ಆದ ಆಡಳಿತ ವಿಧಾನವನ್ನು ಹೊಂದಿದ್ದರು. ಅದು ಬಹು ಪ್ರಾಚೀನಕಾಲದಿಂದಲೂ ಬಂದ ಆಡಳಿತ ಪದ್ಧತಿಯಾಗಿತ್ತು. ಅಲ್ಲಿ ಮುಖ್ಯಸ್ಥನನ್ನು ನಾಯಕ ಎನ್ನುತ್ತಿದ್ದರು. ಮೂರು ಅಂಶಗಳ ಹೊರತು ಅವರು ಹೆಚ್ಚು ಕಡಮೆ ಸ್ವತಂತ್ರರೇ ಆಗಿದ್ದರು. ಅವು ಪೊಗದಿಯ ಪಾವತಿ, ಸೈನ್ಯದ ಒದಗಣೆ ಮತ್ತು ಸುಲ್ತಾನನಿಗೆ ನಿಷ್ಠೆ ಅವರ ಆಂತರಿಕ ಆಡಳಿತ ವ್ಯವಹಾರದಲ್ಲಿ ಆದಿಲ್‌ಶಾಹಿಗಳು ಎಂದೂ ಮಧ್ಯೆ ಪ್ರವೇಶ ಮಾಡುತ್ತಿರಲಿಲ್ಲ ವೆಂದು ತಿಳಿದುಬರುತ್ತದೆ(ಷೇಕ್‌ಅಲಿ ೧೯೯೭: ೧೯೬-೧೯೮).

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬಹಮನಿ ಮತ್ತು ಬಿಜಾಪುರದ ಆದಿಲ್‌ಶಾಹಿಗಳ ಜಾಗೀರುದಾರರು ಆಳ್ವಿಕೆ ಮಾಡಿರುವುದು ಹೆಚ್ಚಾಗಿ ಮುದಗಲ್ ಮತ್ತು ರಾಯಚೂರುಗಳಲ್ಲಿ ಕಂಡು ಬರುತ್ತದೆ. ಮೇಲಾಗಿ ಸ್ವತಂತ್ರರಾಗಿದ್ದು, ಮಸೀದಿ, ಕೋಟೆ, ದ್ವಾರಬಾಗಿಲುಗಳನ್ನು ಕಟ್ಟಿಸುತ್ತಿದ್ದರು. ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನ ಮಾಡಿದ ಉಲ್ಲೇಖಗಳು ಸಿಗುತ್ತವೆ. ಬಿ. ಷೇಕ್‌ಅಲಿ ಅವರು ಹೇಳುವಂತೆ ಸಾಮಂತ ಪದ್ಧತಿ ಪ್ರಾಚೀನ ಕಾಲದಲ್ಲಿ ಹೇಗೆ ಅಸ್ತಿತ್ವದಲ್ಲಿದ್ದಿತೋ ಅದೇ ರೀತಿ ಜಾರಿಯಲ್ಲಿತ್ತು. ಆಡಳಿತ ಭಾಷೆ ಬದಲಾಗಿದ್ದರಿಂದ ಆಡಳಿತ ವಿಭಾಗಗಳನ್ನು ರಾಜ್ಯಾಡಳಿತ ಭಾಷೆಯಲ್ಲಿ ಜಾಗೀರು, ಪರಗಣ, ಸರ್ಕಾರ ಮುಂತಾಗಿ ಗುರುತಿಸಲಾಗಿತ್ತು. ಈ ಪ್ರದೇಶದಲ್ಲಿ ಬಹಮನಿ ಮತ್ತು ಬಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ ರಾಯಚೂರು ಮತ್ತು ಮುದಗಲ್‌ಗಳನ್ನು ಆಳಿದ ಪ್ರಮುಖ ಪ್ರಾಂತಾಧಿಕಾರಿಗಳು ಮಲ್ಲೂಖಾನ್ ಹಾಫೀಸ್[೧೧೩] ಮಲಿಕ್ ಹಾಜ್,[೧೧೪] ಮಲಿಕ್ ಅಂಬರ್,[೧೧೫] ಖ್ವಾಜಾ ಸಂಬುಲ್,[೧೧೬] ಮಲ್ಲೂಖಾನ್,[೧೧೭] ಅಹಮದ್ ಹಾಜಿ ಗೂನಾಬಾದಿ,[೧೧೮] ಷಂಷೀರು ಮುಲ್ಕ್[೧೧೯]

ಇಕ್ಲಾಸ್‌ಖಾನ್,[120] ಯೂಸೂಫ್ ಅಲಿ ಖಂದೀಲ್‌ದಾರ್,[121] ಖಾವಾಸಖಾನ್,[122] ಮಲಿಕ್ ರೈಹಾನ್,[123] ಅಬ್ದುಲ್ ಮಹಮ್ಮದ್,[124] ನಸರತ್‌ಖಾನ್ ಸಾಹೇಬ,[125] ಹಜರತಿ ಬಚಾಸಾಹೇಬ,[126] ಆಕ್ವಾಖುಸ್ರಾ,[127] ರುಸ್ತುಮಖಾನ್,[128] ಮುಂತಾದವರು. ಇದರಂತೆ ಮುದಗಲ್‌ನಲ್ಲಿಯೂ ಈ ಆದಿಲ್‌ಶಾಹಿಗಳ ಸಾಮಂತರಿದ್ದರು. ಅವರೂ ರಾಜ್ಯದ ಸೇವೆಯಲ್ಲಿ ಮುಖ್ಯರಾಗಿದ್ದರು. ಮುದಗಲ್‌ನ್ನು ವಿಜಯನಗರ ಮತ್ತು ಬಹಮನಿ ಮತ್ತು ಆದಿಲ್‌ಶಾಹಿಗಳ ಸಾಮಂತರು ಆಳಿದ್ದು ಕಂಡುಬರುತ್ತದೆ. ಇಲ್ಲಿ ಮಿಶ್ರ ಆಳ್ವಿಕೆ ಗೋಚರಿಸುತ್ತದೆ. ವರದಣ್ಣ ನಾಯಕ,[129] ಸಾಳುವ ತಿಮ್ಮಯ್ಯ,[130] ನರಸಪ್ಪ,[131] ರಾಮಪ್ಪಯ್ಯ ಮತ್ತು ದೇವಯ್ಯ,[132] ವೆಂಗಳಪ್ಪನಾಯಕ,[133] ಅಜಂ ಮನಾಸುಕೆಖಾನ್,[134] ಮಲಿಕ್‌ಮುರಾದ್‌ಖಾನ್,[135] ಉದಯಗಿರಿ ಬಸವರಾಜ,[136] ಬಸವಂತರಾಯ,[137] ರಾಘೋಸಿ ದೋಬಾಬಜಿ ಸಾಹೇಬ,[138] ಮಲಿಕ್ ಸಿಕಂದರ್,[139] ಗೋಸಲರಾಯ,[140] ಬಾಬಜಿನಾಯಕ,[141] ಆನೆರಾಯ ಕಮ್ಮಾನಾಯಕ್,[142] ಕೃಷ್ಣರಾಜ,[143] ರಂಗರಾಜ ಅಯರಾಜ[144] ಮುಂತಾದವರು ಆಳಿರುವ ಬಗ್ಗೆ ತಿಳಿದುಬರುತ್ತದೆ. ಈ ರೀತಿಯಾಗಿ ಸುಲ್ತಾನರುಗಳ ಪ್ರಾಂತಾಧಿಕಾರಿಗಳು ರಾಯಚೂರು, ಮುದಗಲ್‌ಗಳಲ್ಲಿ ಕೇಂದ್ರದ ನಿರ್ದೇಶನದಂತೆ ಆಳ್ವಿಕೆ ಮಾಡುತ್ತಿದ್ದದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ.

ಇಲ್ಲಿನ ಸಾಮಂತರು ಮತ್ತು ಸಾರ್ವಭೌಮರ ಸಂಬಂಧಗಳು ರಾಜಕೀಯ ಮತ್ತು ಆರ್ಥಿಕ ಹಿನ್ನೆಲೆಯಿಂದ ಕೂಡಿದ್ದವು. ಸಾಮಂತ ಪದ್ಧತಿ ಈ ಪ್ರದೇಶದಲ್ಲಿನ ಮೌರ್ಯರ ಅರಸ ಅಶೋಕನ ಕಾಲದಿಂದ ಕಂಡುಬರುತ್ತದೆ. ಮಸ್ಕಿಯಲ್ಲಿ ದೊರೆಯುವ ಅಶೋಕ ಶಾಸನ ಸಾಕ್ಷಿಯಾಗಿದೆ. ಇಲ್ಲಿ ಅರಸನ ಸಂಬಂಧಿಕ ಮತ್ತು ಮಹಾಮಾತ್ರ ಎಂಬ ಅಧಿಕಾರಿಗಳಿದ್ದರು. ದಕ್ಷಿಣದ ರಾಜಧಾನಿ ಮಸ್ಕಿಯ ಆಡಳಿತವನ್ನು ನೋಡಿಕೊಳ್ಳಲು ಅಶೋಕನು ಇವರನ್ನು ನೇಮಿಸಿರುವುದು ಕಂಡುಬರುತ್ತದೆ. ಮೌರ್ಯಕಾಲದಿಂದ ಬಿಜಾಪುರ ಆದಿಲ್‌ಶಾಹಿಗಳ ಕಾಲದವರೆಗೆ ಸಾಮಂತ ವ್ಯವಸ್ಥೆ ಸ್ವರೂಪದಲ್ಲಿ ಒಂದೇ ರೀತಿಯಾಗಿ ಕಂಡುಬಂದರೂ ಅಲ್ಪ-ಸ್ವಲ್ಪ ಬದಲಾವಣೆಯನ್ನು ಗುರುತಿಸಬಹುದಾಗಿದೆ. ಈ ಪ್ರದೇಶದಲ್ಲಿರುವ ಸಾಮಂತರುಗಳನ್ನು ಎರಡು ಬಗೆಯಲ್ಲಿ ಗುರುತಿಸಬಹುದು. ಮೊದಲನೆಯದು ಅರಸುಮನೆತನಗಳು ಅಧೀನತೆಯನ್ನು ಒಪ್ಪಿಕೊಂಡು ಆಳ್ವಿಕೆ ನಡೆಸುವುದು. ಎರಡನೆಯದು ಯಾವುದೇ ಅರಸರು ಅಧೀನದಲ್ಲಿಲ್ಲದಾಗ ಕೇಂದ್ರದಲ್ಲಿ ಮಂತ್ರಿಯಾಗಿದ್ದವನಿಗೆ ಸಾಮಂತನ ಸ್ಥಾನವನ್ನು ನೀಡಿ ನಿರ್ದಿಷ್ಟ ಪ್ರದೇಶವನ್ನು ನೀಡಲಾಗುತ್ತಿತ್ತು. ಇದಕ್ಕೆ ರಾಯಚೂರು ದೋ-ಅಬ್ ಪ್ರದೇಶ ಸೂಕ್ತ ಉದಾಹರಣೆ. ಇಲ್ಲಿ ಸಾಮಂತರಸರು ಆಳುತ್ತಿದ್ದ ಪ್ರದೇಶವನ್ನು ಹೊರತು ಪಡಿಸಿ ಉಳಿದ ಪ್ರದೇಶದಲ್ಲಿ ಕೇಂದ್ರದಲ್ಲಿ ಮಂತ್ರಿಗಳನ್ನು ನೇಮಿಸಿರುವುದು ಜಲದುರ್ಗ(೧೩)-೧೦೮೭,[145] ಒಳಬಳ್ಳಾರಿ(೫೨)-೧೦೯೫,[146] ದೇವರಗುಡಿ(೨೮)-೧೧೦[147] ಹಾಗೂ ಕುರುಡಿ(೪೪)-೧೧೩೭ರ ಮುಂತಾದ ಶಾಸನಗಳಿಂದ ತಿಳಿದುಬರುತ್ತದೆ.[148]

ವಿಜಯನಗರ ಕಾಲಘಟ್ಟದಲ್ಲಿ ಅಳಿಯ ರಾಮರಾಯ ಕೇಂದ್ರದಲ್ಲಿ ಅಧಿಕಾರವನ್ನು ಹೊಂದಿದ್ದರೂ, ರಾಯಚೂರು ಪ್ರದೇಶದಲ್ಲಿ ಆಳ್ವಿಕೆ ನಡೆಸಿದನು. ಅದೇ ರೀತಿಯಾಗಿ ರಾಮರಾಯನು ತನ್ನ ಮಗ ಕೃಷ್ಣಪ್ಪ ರಾಜನನ್ನು ಮುದಗಲ್ ಅರಸನನ್ನಾಗಿ ನೇಮಿಸಿದ್ದನು. ಈ ಎರಡು ಅಂಶಗಳು ಕ್ರಮವಾಗಿ ಮಾನ್ವಿ(೮)-೧೫೫೩ರ ಶಾಸನ[149] ಮತ್ತು ಮುದಗಲ್(೫೧)-೧೫೭೦ರ ಶಾಸನಗಳು[150] ಸ್ಪಷ್ಟಪಡಿಸುತ್ತವೆ.

ಅಮರನಾಯಕರು ಆಳ್ವಿಕೆ ಮಾಡಿರುವುದು ಸ್ಪಷ್ಟವಾದರೂ ವಂಶಪಾರಂಪರ್ಯದ ಬದಲಾಗಿ ಜೀವಿತಾವಧಿ ವರೆಗೆ ಅಸ್ತಿತ್ವದಲ್ಲಿದ್ದಿತು. ಬಹಮನಿ ಮತ್ತು ಆದಿಲ್‌ಶಾಹಿಗಳ ಆಡಳಿತ ಸಹ ಪ್ರಾಂತಾಧಿಕಾರಿಗಳ ಮೂಲಕ ನಡೆಯುತ್ತಿದ್ದಿತು. ಕ್ರಿ.ಶ. ೧೦–೧೭ನೆಯ ಶತಮಾನದವರೆಗೆ ಸಾಮಂತರ ಮೂಲಕ ಆಳ್ವಿಕೆ ಕಂಡ ರಾಯಚೂರು ದೋ–ಅಬ್ ಪ್ರದೇಶ ಈ ಪದ್ಧತಿಯಲ್ಲಿ ಬದಲಾವಣೆ ಕಂಡುಕೊಂಡಿತು ಎನ್ನಬಹುದು. ಅಮರನಾಯಕನಾದ ಮುದಗಲ್‌ನ ಬಾಜಪ್ಪ ನಾಯಕ ವಾರ್ಷಿಕ ವರಮಾನ ೪ ಲಕ್ಷ ರೂ.ಗಳು ಒಂದೇ ಆಡಳಿತ ಕೇಂದ್ರದಿಂದ ಸಂಗ್ರಹಿಸುವ ತೆರಿಗೆ ಇದಾಗಿದೆ. ಇದರಂತಿರುವ ಇನ್ನೂ ಅನೇಕ ಆಡಳಿತ ಕೇಂದ್ರಗಳಿಂದ ಲಕ್ಷಾಂತರ ರೂಪಾಯಿಗಳು ಕೇಂದ್ರಕ್ಕೆ ಸೇರುತ್ತಿತ್ತು ಎಂದು ತಿಳಿದುಬರುತ್ತದೆ.

ಭಾರತದ ಸಂದರ್ಭದಲ್ಲಿ ಸಾಮಂತ ಪದ್ಧತಿ ಮೌರ್ಯರ ಕಾಲದಿಂದಲೇ ಕಂಡುಬಂದರೂ ಈ ಪ್ರದೇಶದಲ್ಲಿ ಸಾಮಂತ  ರಾಷ್ಟ್ರಕೂಟರ ಕಾಲದಿಂದ ಅಂದರೆ ಕ್ರಿ.ಶ.೮ನೆಯ ಶತಮಾನದಿಂದ ಕಂಡುಬರುತ್ತದೆ. ಅವರ ಆಳ್ವಿಕೆ ಕೂಡಾ ಇದೇ ಕಾಲಘಟ್ಟದಿಂದ ಆರಂಭವಾಗುತ್ತದೆ. ರಾಷ್ಟ್ರಕೂಟ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಈ ಪದ್ಧತಿಯ ಉಲ್ಲೇಖ ಈ ಪ್ರದೇಶದಲ್ಲಿ ಕ್ರಿ.ಶ.೧೦ನೆಯ ಶತಮಾನದ ಭೋಗಾವತಿ (೧೮)–೧೦ನೆಯ ಶತಮಾನದ ಶಾಸನದಲ್ಲಿ ಕಂಡುಬರುತ್ತದೆ.[೧೫೧] ಈ ಶಾಸನದಲ್ಲಿ ಡಿ.ಡಿ.ಕೊಸಾಂಬಿ ಅವರು ಗುರುತಿಸಿದ ಮೇಲಿನ ಹಂತದ ಊಳಿಗಮಾನ್ಯ ಪದ್ಧತಿ ಇರುವುದು ಗೋಚರಿಸುತ್ತದೆ. ಆಕಾಲವರ್ಷನು ರಾಜನಾಗಿದ್ದನು. ಇವನ ಸಾಮಂತನಾಗಿ ತಮ್ಮನಾದ ಜಗತ್ತುಂಗನು ಎಡೆದೊರೆ–೨೦೦೦ನ್ನು ಆಳುತ್ತಿದ್ದನು. ಇವನ ಉಪಸಾಮಂತನಾಗಿ ಚೋಳಗಾವುಂಡ ಎಂಬುವವನಿದ್ದನು. ಹಾಗೆಯೇ ಮುಂದುವರೆದು ಕಲಮಲ(೪೮)–ಕ್ರಿ.ಶ.೯೧೪–೯೨೯ರ ಶಾಸನದಲ್ಲಿ ರಾಷ್ಟ್ರಕೂಟ ಅರಸ ನಿತ್ಯವರ್ಷನ ಕಾಲದಲ್ಲಿ ಸಾಮಂತಾಧಿಪತಿ ಮತ್ತು ಸಾಮಂತರ ಉಲ್ಲೇಖ ಕಂಡು ಬರುತ್ತದೆ.[೧೫೨] ಇವರು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ಭೂದಾನದ ಜೊತೆಗೆ ಇತರೆ ದಾನಗಳನ್ನು ನೀಡಿರುವುದು ಗೋಚರಿಸುತ್ತದೆ. ಸಾಮಂತರಾದವರು ಸ್ವತಂತ್ರವಾಗಿದ್ದು ದಾನ ನೀಡುವ ಅಧಿಕಾರವನ್ನು ಹೊಂದಿದ್ದರು. ಡಿ.ಡಿ.ಕೊಸಾಂಬಿ ಅವರು ಹೇಳುವಂತೆ "ಮೇಲಿನವನಿಗೆ ಕಪ್ಪವನ್ನು ಸಲ್ಲಿಸುವ ಒಂದು ಒಪ್ಪಂದಕ್ಕೆ ಬದ್ಧನಾಗಿರುತ್ತಾನಾದರೂ ತನ್ನ ಪರಿಪಾಲನಾ ಕ್ಷೇತ್ರದಲ್ಲಿ ಸಾಮಂತನು ಪೂರ್ಣವಾಗಿ ಸ್ವತಂತ್ರನಾಗಿರುತ್ತಾನೆ" ಎಂಬ ಅವರ ಮಾತು ವಾಸ್ತವವಾಗಿದೆ.

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲ ಅನೇಕ ಸಂಗತಿಗಳನ್ನು ಸೃಷ್ಟಿಸಿತು. ಈ ಕಾಲಾವಧಿಯಲ್ಲಿ ಸಾಮಂತರು, ಅರಸರು, ಸಣ್ಣ ಪುಟ್ಟ ಸಾಮಂತರು ಮುಂತಾದವರು ದಾನ ನೀಡುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದರು. ಹಾಗೆಯೇ ಅದು ಪ್ರತಿಷ್ಠೆಯ ವಿಷಯವಾಗಿ ಗಮನ ಸೆಳೆದಿದ್ದಿತು. ಡಿ.ಡಿ. ಕೊಸಾಂಬಿಯವರ ಮೇಲಿನ ಹಂತದ ಊಳಿಗಮಾನ್ಯ ಪದ್ಧತಿಗೆ ಉದಾಹರಣೆಯಾಗಿ ರಾಯಚೂರು ದೋ–ಅಬ್ ಪ್ರದೇಶದಲ್ಲಿ ಅನೇಕ ಶಾಸನಗಳು ಕಂಡುಬರುತ್ತವೆ. ಅವು ರಾಜ–ಸಾಮಂತ–ಉಪಸಾಮಂತ ಹಿನ್ನೆಲೆಯಲ್ಲಿವೆ. ಅವು ಈ ಕೆಳಗಿನಂತಿವೆ, ಗಬ್ಬೂರು(೨೬)–ಕ್ರಿ.ಶ.೧೦೮೪ರ ಶಾಸನ[೧೫೩] ರಾಜ–ತ್ರಿಭುವನಮಲ್ಲ, ಅವನ ಸಾಮಂತ–ಜೋಯಿಮರಸ, ಇವನ ಉಪಸಾಮಂತ ಕಲ್ಲಪ್ಪಯ್ಯ ಎಂದು ಸೂಚಿಸಿದರೆ, ಮುದಗಲ್(೪೯)–೧೨೧೫ರ ಶಾಸನ[೧೫೪] ರಾಜ ದೇವಗಿರಿ ಯಾದವ ಸಿಂಹಣ, ಅವನ ಸಾಮಂತ–ದಾಮೋದರ, ಇವನ ಉಪಸಾಮಂತ–ಕರಡಿಕಲ್ ಕದಂಬ ವಂಶದ ಬಜ್ಜರಸ, ಇವನ ಅಧಿಕಾರಿಯಾಗಿ–ದಂಡನಾಯಕ ಪರಸಯ್ಯ ಎಂಬಾತನು ಇದ್ದನು. ಅನೇಕ ಶಾಸನಗಳು ಮೇಲಿನ

ಹಂತದ ಸಾಮಂತ ಪದ್ಧತಿಯನ್ನು ತಿಳಿಸುತ್ತವೆ. ನವಿಲೆ(೧೧)-೧೦೧೪,[೧೫೫] ಯರಡೋಣಿ(೧೭)-೯೨೮,[೧೫೬] ಮಾನ್ವಿ(೧೩)-೧೦೫೨,[೧೫೭] ಮಾನ್ವಿ (೧೫)-೧೦೫೨,[೧೫೮] ಕಲ್ಲೂರು(೬೯)-೧೧೪೨,[೧೫೯] ಅತ್ತನೂರು(೭೨)-೧೧ನೆಯ ಶತಮಾನ,[೧೬೦] ಸಾಲಗುಂದೆ(೨)-೧೧೫೩,[೧೬೧] ಸಾಲಗುಂದೆ (೪)-೧೦೬೩,[೧೬೨] ದೇವರಗುಡಿ (೨೮)-೧೧೦೧,[೧೬೩] ಮಾಡಸಿರವಾರ(೪೬)-೧೦೩೩,[೧೬೪] ಕರಡಿಕಲ್(೫)-೧೧೯೧,[೧೬೫] ಜಲದುರ್ಗ(೧೩)-೧೦೮೭,[೧೬೬] ಕಾಡ್ಲೂರು(೫೩)-೧೨ನೆಯ ಶತಮಾನ,[೧೬೭] ಗಬ್ಬೂರು (೨೫)-೧೦೮೪,[೧೬೮] ಹಿರೇರಾಯಕುಂಪಿ(೨೭)-೧೧೩೦,[೧೬೯] ನಿಲುವಂಜಿ(೨೯)-೧೧೭೭,[೧೭೦] ಬಾಗೂರು(೩೦)-೧೦೬೩,[೧೭೧] ಲಿಂಗಸೂಗೂರು(೨)-೧೦೭೭,[೧೭೨] ಮಾನ್ವಿ(೧೩)- ೧೦೫೨,[೧೭೩] ಸುಂಕೇಶ್ವರ(೨೯)-೧೦೯೭,[೧೭೪] ಕುರುಡಿ(೪೨)-೧೧೨೩,[೧೭೫] ಕುರುಡಿ(೫೧)-೧೧೧೯,[೧೭೬] ಕಲ್ಲೂರು(೬೪)-೧೦೮೦,[೧೭೭] ಕಲ್ಲೂರು(೬೭)-೧೧೩೪,[೧೭೮] ಕಲ್ಲೂರು(೬೮)-೧೧೫೧,[೧೭೯] ಕಲ್ಲೂರು (೬೯)-೧೧೪೨,[೧೮೦] ಬಲ್ಲಟಗಿ(೯೩)-೧೧ನೇಯ ಶತಮಾನ,[೧೮೧] ಮಲ್ಲಟ (೧೦೩)-೧೧೪೮,[೧೮೨] ಕವಿತಾಳ(೧೧೭)-೧೨೧೭,[೧೮೩] ರೌಡಕುಂದೆ (೧)-೧೦೫೩,[೧೮೪] ಸಾಲಗುಂದೆ(೨)-೧೦೬೩,[೧೮೫] ಮುಕ್ಕುಂದೆ(೬)-೧೧೩೪,[೧೮೬] ಮುಕ್ಕುಂದೆ(೭)-೧೦೯೭,[೧೮೭] ಬಳಗಾನೂರು(೩೯)-೧೧೯೧,[೧೮೮] ಬಳಗಾನೂರು(೪೦)-೧೧೮೬,[೧೮೯] ಬೆಳಗುರ್ಕಿ(೪೯)-೯೯೨,[೧೯೦] ಬೇವಿನಹಳ್ಳಿ(೫೪)-೧೫೫೧,[೧೯೧] ಮುಂತಾದ ಶಾಸನಗಳಾಗಿವೆ.

ಈ ಪ್ರದೇಶದಲ್ಲಿ ಅರಸರಾಗಲಿ, ಸಾಮಂತರಾಗಲಿ, ಯಾರೇ ದಾನ ಮಾಡುವವರಾಗಲಿ ಭೂದಾನವನ್ನು ಮಾಡುವಾಗ ಭೂಮಿಯನ್ನು ಖರೀದಿಸಿ ದೇವಾಲಯ ಮತ್ತು ಬ್ರಾಹ್ಮಣರಿಗೆ ನೀಡಿರುವುದು ಕಂಡುಬರುತ್ತದೆ. ಹೀಗೆ ಖರೀದಿಸುವ ಭೂಮಿ ರೈತಾಪಿವರ್ಗಕ್ಕೆ ಸೇರಿತ್ತೆ ಎಂಬ ಕುತೂಹಲ ಮೂಡುತ್ತದೆ. ಏಕೆಂದರೆ ಹೆಚ್ಚು ಕಡಿಮೆ ೪೦ ಬಗೆಯ ಭೂಮಾಪನ ಅಳತೆ ಕೋಲುಗಳು ಕಂಡುಬರುತ್ತವೆ. ಕಾಲಕ್ಕನುಗುಣವಾಗಿ ಮಾಪನಗಳು ಬದಲಾವಣೆಗೊಂಡಿರಬಹುದು. ಆದರೆ ಕೇಂದ್ರಕ್ಕೆ, ಸಾಮಂತರಿಗೆ, ಉಪಸಾಮಂತರಿಗೆ ಬಹುತೇಕವಾಗಿ ಭೂಕಂದಾಯವೇ ಆಧಾರ ಸ್ಥಂಭವಾಗಿತ್ತು. ಭೂಮಿಯನ್ನು ಖರೀದಿಸಿ ದಾನ ಮಾಡುವುದು, ಭೂಮಿಯ ಮೇಲೆ ಭೂಕಂದಾಯ ವಿಧಿಸುವುದು ಭೂಮಾಪನ ಮಾಡುವ ವಿವಿಧ ಅಳತೆಕೋಲುಗಳು ಹಾಗೂ ವ್ಯವಹಾರಕ್ಕಾಗಿ ನಾಣ್ಯಗಳ ಚಲಾವಣೆ ಇವು ಹೊಸ ಬಗೆಯ ಚರ್ಚೆಯನ್ನು ಹುಟ್ಟುಹಾಕುತ್ತವೆ. ಭೂಮಿ ಸಹಜವಾಗಿ ರಾಜನಿಗೆ ಮತ್ತು ಸಾಮಂತರಿಗೆ ಮುಂತಾದ ಅಧಿಕಾರಿಗಳಿಗೆ ಸೇರಿದುದಾಗಿತ್ತು. ಭೂಮಿಯ ಮೇಲೆ ಅಧಿಪತ್ಯವನ್ನು ಸಾಧಿಸಿದವರು ದಾನ ನೀಡಬೇಕಾದ ಸಂದರ್ಭ ಬಂದಾಗ ಭೂಮಿಯನ್ನು ಖರೀದಿಸುವ ಪ್ರಮೇಯವೇ ಬರುತ್ತಿರಲಿಲ್ಲ. ಅಧಿಕಾರ ಕೇಂದ್ರಿತ ವ್ಯವಸ್ಥೆಯಲ್ಲಿ ಭೂಮಿಯನ್ನು ಖರೀದಿಸಲಾಗಿದೆಯೆಂದರೆ, ಅದು ಇನ್ನೊಬ್ಬರಿಗೆ ಸೇರಿದ್ದು ಎಂದರ್ಥವಾಗುತ್ತದೆ. ಒಟ್ಟಾರೆಯಾಗಿ ಭೂಮಿ ಎಲ್ಲ ಜನರಿಗೆ ಹಂಚಲ್ಪಟ್ಟಿತ್ತು ಎಂದು ಊಹಿಸಬಹುದು. ವರ್ತಮಾನದ ಸಂದರ್ಭವನ್ನು ಅವಲೋಕಿಸಿದಾಗ ಅಂತಸ್ತಿಗೆ ತಕ್ಕನಾದವರಿಗೆ ವಿವಿಧ ಹಂತಗಳಲ್ಲಿ ಭೂಮಿಯನ್ನು ಹೊಂದಿರುವುದು ಕಂಡು ಬರುತ್ತದೆ. ಶ್ರೀಮಂತರಿಗೆ ೧೦೦೦ ಎಕರೆ ಇರಬಹುದು, ಬಡವನಿಗೆ ೧ ಎಕರೆ ಇರಬಹುದು, ಇಲ್ಲದವರೂ ಇದ್ದಾರೆ. ಇಲ್ಲಿ ಬಹುತೇಕರು ಭೂಮಿಯನ್ನು ಹೊಂದಿರುವುದು ಕಂಡುಬರುತ್ತದೆ. ಇದರಂತೆ ಗತದಲ್ಲಿಯೂ ಎಲ್ಲಾ ವರ್ಗದ ಜನರು ಭೂಮಿಯನ್ನು ಹೊಂದಿದ್ದರು. ಅದರಲ್ಲಿ ಕೆಲವರಿಗೆ ಇಲ್ಲದೆಯೂ ಇರಬಹುದು. ಒಟ್ಟಾರೆ ಎಲ್ಲಾ ವರ್ಗದವರು ಭೂಮಿಯನ್ನು ಹೊಂದಿರುವ ಸಾಧ್ಯತೆ ಇದೆ ಎನಿಸುತ್ತದೆ. ಹಾಗಾಗಿ ಒಬ್ಬರ

ಭೂಮಿಯನ್ನು ಬೇರೊಬ್ಬರು ಖರೀದಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ ಭೂಮಿ ರಾಜನಿಗೆ ಸೇರಿದ್ದೆಂದು ಹೇಳಿದರೂ ಅದು ರೈತರಿಗೆ ಸೇರಿದ್ದಿತು, ಆ ಕಾರಣಕ್ಕಾಗಿ ಖರೀದಿಸುವ ಪ್ರಯತ್ನಕ್ಕೆ ಕೈ ಹಾಕಬೇಕಾಯಿತು ಎಂಬುದು ಇದರಿಂದ ತಿಳಿದುಬರುತ್ತದೆ.

ಈ ಪ್ರದೇಶದಲ್ಲಿ ಬಹುತೇಕವಾಗಿ ದಾನಕ್ಕಾಗಿ ಖರೀದಿಸಿದ ಭೂಮಿ ಆರ್ಥಿಕವಾಗಿ ಬಲಾಢ್ಯರಾಗಿದ್ದವರಿಗೆ ಸೇರಿರುವುದಾಗಿದೆ. ಇಲ್ಲಿಯೂ ಪ್ರತಿಷ್ಠೆಯ ಪ್ರಶ್ನೆ ಎದ್ದು ಕಾಣುತ್ತದೆ. ಜನಸಾಮಾನ್ಯರ ಭೂಮಿಯನ್ನು ಖರೀದಿಸುವ ಬದಲು ಶ್ರೀಮಂತರ ಭೂಮಿಯನ್ನು ಖರೀದಿಸಿರುವುದು ಹೆಚ್ಚು. ಏಕೆಂದರೆ ಶ್ರೀಮಂತರ ಭೂಮಿಗಳಿಗೆ ತೆರಿಗೆ ವಿಧಿಸುತ್ತಿರಲಿಲ್ಲ. ಜನಸಾಮಾನ್ಯರ ಭೂಮಿಗೆ ತೆರಿಗೆ ವಿಧಿಸಲಾಗುತ್ತಿತ್ತು. ಹಾಗಾಗಿ ತೆರಿಗೆ ವಿನಾಯಿತಿ ಹೊಂದಿದ ಭೂಮಿಯನ್ನು ಖರೀದಿಸಿರುವುದು ಕಂಡುಬರುತ್ತದೆ. ಇದು ಭೂಕಂದಾಯದ ಅಪೇಕ್ಷೆಯನ್ನು ಸೂಚಿಸುತ್ತದೆ. ಇಂತಹ ಶಾಸನಗಳು ಈ ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಮಸ್ಕಿ (೩೪)–೧೦೧೮,[೧೯೨] ಬಳಗಾನೂರು (೩೭)–೧೧೭೫,[೧೯೩] ಬಳಗಾನೂರು (೪೦)–೧೧೭೫,[೧೯೪] ಕರಡಿಕಲ್ (೫)–೧೧೯೧,[೧೯೫] ಹಿರೇಕೊಟ್ನೇಕಲ್(೧೭)–೧೧೯೧,[೧೯೬] ಕುರುಡಿ(೪೨)–೧೧೨೩,[೧೯೭] ಕುರುಡಿ(೪೩)–೧೧೨೩,[೧೯೮] ಕುರುಡಿ(೫೧)–೧೧೧೯,[೧೯೯] ಬಲ್ಲಟಗಿ(೯೦)–೧೦೨೨,[೨೦೦] ಹಾಗೂ ಸಿರವಾರ(೭೪)– ೯ನೆಯ ಶತಮಾನದ ಶಾಸನ,[೨೦೧] ಹೀಗೆ ಇನ್ನೂ ಮುಂತಾದ ಶಾಸನಗಳು ಭೂದಾನ ಪ್ರಕ್ರಿಯೆಯನ್ನು ಸೂಚಿಸುತ್ತವೆ.

ಭೂಕಂದಾಯವನ್ನು ಯಾರು ಭೂಮಿಯನ್ನು ಹೊಂದಿದ್ದರೋ ಅವರ ಮೇಲೆ ವಿಧಿಸುಲಾಗುತ್ತಿತ್ತು. ಭೂಮಿಯನ್ನು ಹೊಂದಿದವರು ಜಮೀನ್ದಾರರು, ಜಹಾಗೀರುದಾರರು, ಸಾಮಂತರು, ದಂಡನಾಯಕರು ಇನ್ನೂ ಮುಂತಾದವರ ಹೆಸರುಗಳನ್ನು ಉಲ್ಲೇಖಿಸಲಾಗುತ್ತದೆ. ಆದರೆ ಜಮೀನ್ದಾರರು ಮತ್ತು ಜಹಾಗೀರುದಾರರು ಯಾವುದೇ ಬಗೆಯ ತೆರಿಗೆ ಕಟ್ಟದೆ ತೆರಿಗೆ ರಹಿತ ಭೂ ಮಾಲಿಕರಾಗಿದ್ದರು. ಸಾಮಂತರಿಗೆ ಮೂರು ಷರುತ್ತುಗಳಿರುತ್ತಿತ್ತು. ೧.ಅರಸನಿಗೆ ನಿಷ್ಠನಾಗಿರಬೇಕು. ೨. ವಾರ್ಷಿಕ ನಿಗದಿಪಡಿಸಿದ ಕಪ್ಪವನ್ನು ಸಲ್ಲಿಸಬೇಕು. ೩ ಅಗತ್ಯಬಿದ್ದಾಗ ಸೈನ್ಯದ ಸೇವೆಯನ್ನು ಒದಗಿಸಬೇಕು. ಮೊದಲನೆಯ ಅಂಶವನ್ನು ಅಳವಡಿಸಿಕೊಂಡು ನಿಷ್ಠರಾಗಿರಬಹುದು. ಎರಡನೆಯ ಮತ್ತು ಮೂರನೆಯ ಅಂಶಗಳಿಗೆ ಸಂಬಂಧಪಟ್ಟಂತೆ ಖರ್ಚುವೆಚ್ಚಗಳನ್ನು ಹೇಗೆ ಸರಿದೂಗಿಸಬೇಕು, ಅದಕ್ಕೆ ಆದಾಯದ ಮೂಲಗಳಾವುವು ಎಂಬುದು ಇಲ್ಲಿನ ಪ್ರಶ್ನೆಯಾಗಿದೆ. ಭೂಕಂದಾಯ ಸಾಮಂತರ ಅಧೀನದಲ್ಲಿದ್ದರೆ ಭೂಮಿಗೆ ಭೂಕಂದಾಯವನ್ನು ವಿಧಿಸಲು ಸಾಧ್ಯವಿಲ್ಲ. ಅದು ಇನ್ನೊಬ್ಬರಿಗೆ ಸೇರಿರಬೇಕು. ಸಾಮಂತನ ಅಧೀನ ಪ್ರದೇಶವಾಗಿರಬೇಕು. ಇಲ್ಲಿ ಅಧಿಕಾರಿಶಾಹಿ ವರ್ಗಕ್ಕೆ ನೀಡಿದ ಭೂಮಿಗೆ ಭೂಕಂದಾಯವನ್ನು ವಿಧಿಸುತ್ತಿರಲಿಲ್ಲ. ಕೇಂದ್ರಕ್ಕೆ ಸಲ್ಲಿಸಬೇಕಾದ ಹಣವನ್ನು ಹೇಗೆ ಸಂಗ್ರಹಿಸಬೇಕು ಎಂಬುದು ಎದುರಾಗುತ್ತದೆ. ಇಂತಹ ಕಂದಾಯರಹಿತ ಭೂಮಿಯಲ್ಲಿ ಅರಸನಿರಲಿ, ಸಾಮಂತನಿರಲಿ ಮಧ್ಯಪ್ರವೇಶಿಸುವಂತಿರಲಿಲ್ಲ. ಇಂತಹ ಗೊಂದಲವಾದ ಸಂದರ್ಭದಲ್ಲಿ ಸಾಮಂತರು ಖರ್ಚು ವೆಚ್ಚಗಳನ್ನು ಸರಿದೂಗಿಸಲು ಭೂಮಿಯನ್ನು ಹಂಚಿರಬೇಕು ಅಥವಾ ಪ್ರತಿಯೊಬ್ಬರಿಗೂ ಇಂತಿಷ್ಟು ಭೂಮಿಯೆಂದು ಗುರುತಿಸಿ ರೈತಾಪಿ ವರ್ಗಕ್ಕೆ ನೀಡಿರುವ ಸಾಧ್ಯತೆಯಿದೆ. ಸಾಮಂತರಿಂದ ದೊರೆತ ಭೂಮಿಯ ಮೇಲೆ ಸಂಪೂರ್ಣ ಅಧಿಕಾರ ರೈತರಿಗೆ ಸೇರಿದ್ದಿತು. ಇದಕ್ಕೆ ಮಲಿಯಾಬಾದ್(೯)–೧೫೧೩ರ ಶಾಸನ, ಗಲಗ(೩೫)–೧೭೨೬ರ ಶಾಸನ ಹಾಗೂ ಗಬ್ಬೂರು(೧೪)–೧೭ನೆಯ ಶತಮಾನದ ಶಾಸನಗಳು ಸಾಕ್ಷಿಯಾಗಿವೆ. ಭೂದಾನ ಮಾಡಬೇಕಾದರೆ ಭೂಮಿ ಖರೀದಿಸಿ ದಾನ ನೀಡಿದ ಉಲ್ಲೇಖದ ಶಾಸನಗಳನ್ನು ಆಧರಿಸಿ ಈ

ಮಾತನ್ನು ಹೇಳಬಹುದಾಗಿದೆ. ಕ್ರಿ.ಶ. ೧೦೨೨ರಲ್ಲಿ ಕಲ್ಯಾಣ ಚಾಲುಕ್ಯರಸ ಎರಡನೆಯ ಜಯಸಿಂಹನು ಆಳ್ವಿಕೆ ನಡೆಸುತ್ತಿದ್ದನು. ಈ ಸಮಯದಲ್ಲಿ ಈತನ ರಾಣಿ ಮಹಾದೇವಿ ಬಲ್ಲಟಗಿಯಲ್ಲಿ ತ್ರೈಪುರುಷ ದೇವಾಲಯಕ್ಕೆ ಭೂಮಿ ದಾನ ಮಾಡಬೇಕಾದರೆ ಅಯ್ಯಣವಾಡಿ-೩೦೦ರ ಮನ್ನೆಯ ಲೋಕಾದಿತ್ಯನಿಂದ ಭೂಮಿಯನ್ನು ಪಡೆದು ದಾನ ಬಿಡುತ್ತಾಳೆ. ಇದು ಬಲ್ಲಟಗಿ (೯೦)-೧೦೨೨ರ ಶಾಸನದಿಂದ ತಿಳಿದುಬರುತ್ತದೆ.[೨೦೨] ಅರಸನ ರಾಣಿ ಭೂಮಿ ದಾನ ಮಾಡಬೇಕಾದರೆ ಬೇರೊಬ್ಬರಿಂದ ಪಡೆದದ್ದು ಗಮನಿಸಿದರೆ ಭೂಮಿಯ ಮೇಲೆ ರಾಜನ ಅಧಿಕಾರವಿರಲಿಲ್ಲವೆಂಬುದು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ರೈತರು ಭೂಮಿಯನ್ನು ಹೊಂದಿದ್ದರೆಂದು ಹೇಳಬಹುದಾಗಿದೆ. ಅರಸರು, ಸಾಮಂತರು ಮುಂತಾದವರು ಭೂದಾನ ಮಾಡಬೇಕೆಂದಾಗ ಸಹಜವಾಗಿಯೇ ಭೂಮಿಯನ್ನು ಖರೀದಿಸಿ ದಾನ ಮಾಡಬೇಕಿತ್ತು. ಹಾಗೆಯೇ ಭೂ ಮಾಪನ ಅಳತೆಯ ಕೋಲುಗಳು ಸಹ ಭೂಮಿಯನ್ನು ಆಗಾಗ ಅಥವಾ ಯಾರಾದರೂ ಖರೀದಿಸಿದಾಗ ಅಳತೆ ಮಾಡಿಕೊಡಲು ಈ ಮಾಪನಗಳನ್ನು ಬಳಸುತ್ತಿದ್ದರು. ಇದು ಭೂಮಿಯನ್ನು ಮಾರುವ, ಖರೀದಿಸುವ ವ್ಯವಸ್ಥೆಯನ್ನು ಸೂಚಿಸುತ್ತದೆ. ಹೀಗೆ ಕೊಡು-ಕೊಳ್ಳುವಿಕೆಯನ್ನು ನಿರ್ವಹಿಸುವುದು ಆರ್ಥಿಕತೆಯನ್ನು ಬಿಂಬಿಸುತ್ತದೆ. ಆರ್ಥಿಕತೆಯನ್ನು ಹೆಚ್ಚಾಗಿ ನಾಣ್ಯಗಳ ಮೂಲಕ ರಾಜ್ಯದ ಸ್ಥಿತಿಗತಿಯನ್ನು ಗುರುತಿಸುವಂತದ್ದಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ನಾಣ್ಯಗಳನ್ನು ಟಂಕಿಸುವ ಟಂಕಸಾಲೆಗಳು ಸಹ ಅಸ್ತಿತ್ವದಲ್ಲಿದ್ದವು ಎಂಬುದು ಇಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ಮಲಿಯಾಬಾದ್(೯)-೧೫೧೩,[೨೦೩] ಗಬ್ಬೂರು(೨)-೧೧೦೩,[೨೦೪] ಗಬ್ಬೂರು(೧೮)-೧೧೨೬,[೨೦೫] ಗಬ್ಬೂರು(೧೯)-೧೧೪೮,[೨೦೬] ಕರಡಿಕಲ್(೬)-೧೦೭೯,[೨೦೭] ಹಿರೇಹೆಸರೂರು(೨೫)-೧೩ನೆಯ ಶತಮಾನ,[೨೦೮] ಮುದಗಲ್(೪೯)-೧೨೧೫,[೨೦೯] ಕುರುಡಿ(೪೫)-೧೧೩೪,[೨೧೦] ಕಲ್ಲೂರು(೬೮)-೧೧೫೧,[೨೧೧] ಮುಕ್ಕುಂದಿ(೮)-೧೦೮೮,[೨೧೨] ಹಾಗೂ ಬಳಗಾನೂರು (೩೮)-೧೧೮೨ರ ಶಾಸನಗಳು[೨೧೩] ನಾಣ್ಯಗಳನ್ನು ಸೂಚಿಸುತ್ತವೆ. ಇಲ್ಲಿ ವರಹ, ಟಂಕ, ದೊಡ್ಡಹೊನ್ನ, ಪರಪ್ತ, ಹಣ, ಪಣ, ಹಾಗ, ವೀಸ, ಗದ್ಯಾಣ, ಪಣವಡ್ಡ, ವೀಸಕ, ದಸಕ, ಪಂಚಕ ಮುಂತಾದವು ಹೆಚ್ಚುವರಿ ಉತ್ಪಾದನೆಯನ್ನು ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ರೈತರು ಭೂಮಿಯನ್ನು ಪ್ರಾಚೀನ ಕಾಲದಿಂದಲೂ ಹೊಂದಿದ್ದರೆಂದು ಗುರುತಿಸಬಹುದಾಗಿದೆ. ಕೃಷಿಯ ಮೂಲಕ ಜೀವನ ಸಾಗಿಸುತ್ತಿದ್ದ ರೈತಾಪಿ ವರ್ಗ ಸರಕಾರ ಹೇರಿದ ಕೆಲವು ತೆರಿಗೆಗಳನ್ನು ಕಟ್ಟಲೇಬೇಕೆಂಬ ಸ್ಥಿತಿ ತಲುಪಿರುವುದು ಕಂಡುಬರುತ್ತದೆ. ಅರಸರು, ಸಾಮಂತರು ವಿವಿಧ ಬಗೆಯ ತೆರಿಗೆಗಳನ್ನು ಹಾಕಿದ್ದರು. ಒಕ್ಕಲುದೆರೆ, ಗಾಣದೆರೆ, ದಶವಂದ, ಬಿರಾಡ ಸಿದ್ಧಾಯ, ಬೆಳೆದೆರೆ, ಭತ್ತಾಯ ಹಾಗೂ ಲೆವಿ ಸಂಗ್ರಹ ಮುಂತಾದ ಭೂಕಂದಾಯಗಳನ್ನು ರೈತರ ಮೇಲೆ ಹೇರಲಾಯಿತು. ಅರಸರು, ಸಾಮಂತರು ಹೆಚ್ಚಿನ ಆದಾಯಕ್ಕಾಗಿ ಕೆರೆ-ಕಟ್ಟೆಗಳನ್ನು ನಿರ್ಮಿಸಿ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಕೃಷ್ಣಾ-ತುಂಗಭದ್ರ ಎಂಬ ಎರಡು ನದಿಗಳು ಹರಿಯುತ್ತಿದ್ದರೂ ನೀರಾವರಿ ವ್ಯವಸ್ಥೆ ಇರಲಿಲ್ಲ. ಈ ಮೂಲಕ ರೈತಾಪಿ ವರ್ಗವನ್ನು ಬೆಂಬಲಿಸಿದಂತೆ ಮಾಡಿ ಭೂಮಿಯ ಮೇಲೆ ಅನೇಕ ತೆರಿಗೆಗಳನ್ನು ವಿಧಿಸಿರುವುದು ಕಂಡುಬರುತ್ತದೆ.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಗ್ರಾಮೀಣ ಭೂಮಾಲಿಕ ವ್ಯವಸ್ಥೆ ಇದ್ದಿತು. ಈ ಪ್ರದೇಶದ ಬ್ರಾಹ್ಮಣರು ಅಗ್ರಹಾರಗಳಿಗೆ ಹೇರಳವಾದ ಭೂಮಿಯನ್ನು ದಾನವಾಗಿ ಪಡೆದು, ಆ ಭೂಮಿಯ ಮೇಲಿನ ಸಂಪೂರ್ಣ ಅಧಿಕಾರವನ್ನು ಹೊಂದಿದ್ದರು. ಈ ಪ್ರದೇಶದಲ್ಲಿ ೨೦-೨೨ ಅಗ್ರಹಾರಗಳು ಸ್ವಾಯತ್ತತೆ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ಪ್ರದೇಶದಲ್ಲಿ ರಾಷ್ಟ್ರಕೂಟ,

ಕಲ್ಯಾಣ ಚಾಲುಕ್ಯರು, ಯಾದವರು, ವಿಜಯನಗರ, ಬಹಮನಿ ಹಾಗೂ ಆದಿಲ್‌ಶಾಹಿಗಳು ಕಾಲದಲ್ಲಿ ಬಿಟ್ಟಿ ಪದ್ಧತಿ ಇತ್ತು. ಭೂಮಿಯನ್ನು ದಾನ ನೀಡಿ ಶಾಶ್ವತವಾಗಿ ಕಂದಾಯದಿಂದ ಮುಕ್ತಗೊಳಿಸಲಾಯಿತು. ರಾಜನಿಗೆ ಆ ಭೂಮಿಗಳಿಂದ ರೈತರಿಂದ ಬರಬೇಕಾಗಿದ್ದಂತಹ ಎಲ್ಲ ಕಂದಾಯ, ತೆರಿಗೆಗಳನ್ನು ಸಂಗ್ರಹಿಸಿಕೊಳ್ಳುವ ಅಧಿಕಾರ ಅವರಿಗೆ ದೊರೆಯಿತು. ಮಾನ್ಯದಾರರಿಗೆ ನೀಡಿದ ಗ್ರಾಮಗಳಿಗೆ ರಾಜನ ಆಯುಕ್ತರಾಗಲಿ, ಆಡಳಿತಾಧಿಕಾರಿಗಳಾಗಲಿ ಪ್ರವೇಶಿಸುವಂತಿರಲಿಲ್ಲ. ಇವರು ಅಪರಾಧಿಗಳನ್ನು ಶಿಕ್ಷಿಸುವ ಅಧಿಕಾರವನ್ನು ಪಡೆದುಕೊಳ್ಳಲಾಗಿತ್ತೆಂದು ತಿಳಿದುಬರುತ್ತದೆ.

ಕೆಳಹಂತದ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಜಮೀನ್ದಾರ, ಗೇಣಿದಾರ ಹಾಗೂ ಜೀತಗಾರ ಎಂಬ ರೀತಿಯ ಶ್ರೇಣಿ ವ್ಯವಸ್ಥೆ ಕಂಡುಬರುತ್ತದೆ. ಈ ವ್ಯವಸ್ಥೆಯಲ್ಲಿ ಬಹುತೇಕವಾಗಿ ಜಮೀನ್ದಾರನೇ ಅಧಿಪತಿಯಾಗಿದ್ದನು. ಇಲ್ಲಿ ಜಮೀನ್ದಾರರೆಂದರೆ ಅರಸರಿಂದ, ಸಾಮಂತರಿಂದ ಭೂಮಿಯನ್ನು ಪಡೆದವರು. ಅವರು ಅಧಿಕಾರಿಗಳಾಗಿರಬಹುದು, ಬ್ರಾಹ್ಮಣರಾಗಿರಬಹುದು, ಮಠಮಾನ್ಯಗಳಾಗಿರ ಬಹುದು. ಇವರಿಗೆ ಸಾಮಂತ ಅಥವಾ ರಾಜರು ಭೂಮಿಯನ್ನು ದಾನವಾಗಿ ಕೊಡುತ್ತಿದ್ದರು. ಹಾಗೆಯೇ ಹಿಂದೆ ತಿಳಿಸಿದಂತೆ ಹಕ್ಕುಗಳನ್ನು ಪಡೆದಿದ್ದರು. ಇದರಿಂದಾಗಿ ಸ್ಥಳೀಯವಾಗಿ ಬಲಾಢ್ಯರಾಗಿದ್ದ ಜಮೀನ್ದಾರರು ಕೃಷಿ ಮಾಡದೆ ಭೂಮಿಯನ್ನು ಗೇಣಿದಾರರಿಗೆ ನೀಡುತ್ತಿದ್ದರು. ಅವರು ವರ್ಷಕ್ಕೆ ಇಂತಿಷ್ಟು ಎಂದು ರಕಮು ಕೊಡಬೇಕೆಂಬ ಕರಾರನ್ನು ವಿಧಿಸುತ್ತಿದ್ದರು. ಈ ವಿಚಾರಕ್ಕೆ ಸಂಬಂಧಪಟ್ಟಂತೆ ಅನೇಕ ಶಾಸನಗಳು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕಂಡುಬರುತ್ತವೆ. ಸ್ಥಳೀಯವಾಗಿ ಗ್ರಾಮೀಣ ಮಟ್ಟದಲ್ಲಿ ಗಾವುಂಡ, ಪ್ರಭುಗಾವುಂಡ, ಪೆರ್ಗಡೆ ಮುಂತಾದವರು ಈ ವ್ಯವಸ್ಥೆಯ ರೂವಾರಿಗಳು. ಈ ವ್ಯವಸ್ಥೆ ಈ ಪ್ರದೇಶದಲ್ಲಿ ಕ್ರಿ.ಶ. ೯೯೨ರಿಂದ ಅಂದರೆ ೧೦ನೆಯ ಶತಮಾನದಿಂದ ಅಸ್ತಿತ್ವದಲ್ಲಿತ್ತೆಂದು ಬೆಳಗುರ್ಕಿ(೪೯)-೯೯೨ರ ಶಾಸನದಿಂದ ತಿಳಿದುಬರುತ್ತದೆ. ಈ ಪದ್ಧತಿಯಲ್ಲಿ ಜಮೀನ್ದಾರರ ದಬ್ಬಾಳಿಕೆ ಅಧಿಕವಾಗಿ ಕಂಡುಬರುತ್ತದೆ. ಜಮೀನ್ದಾರಿ ವ್ಯವಸ್ಥೆಯಾಗಿ ರೂಪಗೊಳ್ಳುವ ಪೂರ್ವದಲ್ಲಿ ಗಾವುಂಡ, ಪ್ರಭುಗಾವುಂಡ ಮತ್ತು ಪೆರ್ಗಡೆಗಳು ಗ್ರಾಮೀಣ ಅಧಿಕಾರಿಗಳಾಗಿದ್ದರು. ಭೂಮಿ ಹೆಚ್ಚಾಗಿ ಬ್ರಾಹ್ಮಣ ಮತ್ತು ಅಧಿಕಾರಿಗಳಿಗೆ ಸೇರಿದ್ದಿತು. ಅದರ ನಿರ್ವಹಣೆಗಾಗಿ ರೈತರನ್ನು ಬಳಸಿಕೊಳ್ಳುತ್ತಿದ್ದರು. ಜೀತಪದ್ಧತಿ ಪ್ರಾಚೀನ ಕಾಲದಿಂದ ಜಾರಿಗೆ ಬಂದ ಸಂಗತಿಯಾಗಿದೆ. ಬಲ್ಲಟಗಿ (೯೪)-೧೧ನೆಯಶತಮಾನ,[೨೧೪] ಜಾಲಿಹಾಳು(೨೩)-೧೧೦೫,[೨೧೫] ಜೋಳದರಾಶಿ(೧೧೬) ೧೨ನೆಯ ಶತಮಾನ,[೨೧೬] ಮುದಗಲ್(೫೦)-೧೪೩೬,[೨೧೭] ಬಳಗಾನೂರು(೪೦)-೧೧೮೬,[೨೧೮] ಮುಕ್ಕುಂದಿ (೧೪)-೧೫೫೬,[೨೧೯] ವಡವಾಟಿ(೧೧೧)-೧೬ನೆಯ ಶತವಾನ,[೨೨೦] ಕಲ್ಲೂರು(೬೩)-೧೬೫೨,[೨೨೧] ಗೋರ್ಕಲ್ಲು(೩೩)-೧೬-೧೭ನೆಯ ಶತಮಾನ,[೨೨೨] ಕಲ್ಲೂರು(೭೬)- ೧೦೭೬,[೨೨೩] ಇವು ಗಾವುಂಡರನ್ನು ಸೂಚಿಸುತ್ತವೆ. ಪ್ರಭುಗಾವುಂಡರನ್ನು ಕುರಿತು ಭೋಗಾವತಿ(೧೬)-೧೦ನೆಯ ಶತಮಾನ,[೨೨೪] ದೇವರಗುಡಿ(೨೮)-೧೧೦೧,[೨೨೫] ಮಲ್ಲಟ(೧೦೩)-೧೧೪೮,[೨೨೬] ಮುಂತಾದವು ತಿಳಿಯಪಡಿಸುತ್ತವೆ. ಹಾಗೆಯೇ ಮುಂದುವರೆದು ಪೆರ್ಗಡೆಗಳನ್ನು ಕುರಿತು ಬೆಳಗುರ್ಕಿ(೪೯)-೯೯೨[೨೨೭] ಬಲ್ಲಟಗಿ(೮೧)-೧೦೨೮,[೨೨೮] ಮಾಡಶಿರವಾರ(೪೬)-೧೦೩೩,[೨೨೯] ಬಾಗೂರು(೩೦)-೧೦೬೩,[೨೩೦] ಕಲ್ಲೂರು(೭೬)-೧೦೭೬,[೨೩೧] ಕರಡಕಲ್(೪)-೧೦೭೯,[೨೩೨] ಜಲದುರ್ಗ(೧೩)-೧೦೮೭[೨೩೩] ಮುಂತಾದ ಶಾಸನಗಳು ಆಧಾರಗಳಾಗಿವೆ. ಈ ರೀತಿಯಾಗಿ ಅಧಿಕಾರಿ ವರ್ಗ ಭೂಮಿಯ ಒಡೆಯರಾಗಿದ್ದರು. ಇವರು ಗೇಣಿದಾರರಿಗೆ ವರ್ಷಕ್ಕೆ ಇಂತಿಷ್ಟು ಗೇಣಿ ಅಥವಾ ರಕುಮು ಅನ್ನು ನಿಗದಿಪಡಿಸಲಾಗಿತ್ತು. ವರ್ಷಕ್ಕೊಮ್ಮೆ

ಬೆಳೆ ಬಂದ ಮೇಲೆ ಜಮೀನ್ದಾರರಾಗಿದ್ದ ಹಾಗೂ ಸ್ಥಳೀಯ ಆಡಳಿತಗಾರರಾಗಿದ್ದ ಗಾವುಂಡ, ಪ್ರಭುಗಾವುಂಡ, ಪೆರ್ಗಡೆ, ಬ್ರಾಹ್ಮಣರು ಮತ್ತು ಮಠಮಾನ್ಯಗಳು ಮುಂತಾದ ಈ ಹೊಸ ಭೂಮಾಲಿಕ ವರ್ಗಕ್ಕೆ ಗೇಣಿಯನ್ನು ಸಲ್ಲಿಸಲಾಗುತ್ತಿತ್ತು.

### ೪.೩. ರಾಜಕೀಯ ಅಸ್ತಿತ್ವಕ್ಕಾಗಿ ಸಂಸ್ಥಾನಿಕರ ಹೋರಾಟ

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಹಲವು ಬೇಡ ನಾಯಕ ಸಂಸ್ಥಾನಗಳು ಅಸ್ತಿತ್ವದಲ್ಲಿದ್ದವು. ಈ ಸಂಸ್ಥಾನಿಕರನ್ನು ನಾಯಕರು ಅಥವಾ ಬೇಡರು ಎಂಬುದಕ್ಕೆ ಅವರ ಬೆಡಗುಗಳನ್ನು ಆಧರಿಸಿ ನಿರ್ಧಾರಕ್ಕೆ ಬರಲಾಗಿದೆ. ಅವರ ಬೆಡಗುಗಳೆಂದರೆ, ಗೋಸಲವರು, ಜಂಪಲವರು, ಗುಜ್ಜಲವರು, ಮುಮ್ಮಡಲವರು, ಮನ್ನಲವರು, ಕುರ್ಲೆಯವರು ಮುಂತಾದವು. ಈ ಪ್ರದೇಶದಲ್ಲಿ ಗುಡಗುಂಟಿ, ಗುಂತಗೋಳ, ದೇವದುರ್ಗ, ಕರಿಗುಡ್ಡ, ಅರಕೇರಿ, ಕ್ಯಾದಿಗ್ಗೇರಿ, ಜಾಲಹಳ್ಳಿ ಹಾಗೂ ಗಲಗ ಮುಂತಾದ ಪ್ರದೇಶಗಳಲ್ಲಿ ಸಂಸ್ಥಾನಿಕರು ಕಂಡುಬರುತ್ತಾರೆ. ಇಲ್ಲಿ ಬೇಡ ನಾಯಕರ ಆಳ್ವಿಕೆಯ ಕೇಂದ್ರಗಳನ್ನು ಬಹುತೇಕವಾಗಿ ಪಾಳೆಯಪಟ್ಟಗಳು ಎಂದು ಕರೆಯುವುದುಂಟು. ಇವುಗಳ ಒಡೆಯರನ್ನು ಪಾಳೆಯ ಗಾರರೆಂದು ಕರೆಯಲಾಗುತ್ತದೆ. 'ಪಾಳೆಯಗಾರ' ಎಂಬ ಪದ ಕರ್ನಾಟಕದಲ್ಲಿ ಕಂಡುಬರುವ ಎಲ್ಲ ಬೇಡನಾಯಕರಿಗೆ ಅನ್ವಯವಾಗುವುದಿಲ್ಲ. ವಿರೂಪಾಕ್ಷಿ ಪೂಜಾರಹಳ್ಳಿ ಅವರು ಅದರ ವಿಂಗಡಣೆಯನ್ನು ಹೀಗೆ ಸೂಚಿಸುತ್ತಾರೆ. ಕರ್ನಾಟಕದಲ್ಲಿ ತುಂಗಭದ್ರ ನದಿಯ ದಕ್ಷಿಣಕ್ಕಿರುವ ಪಾಳೆಯಪಟ್ಟುಗಳ ಒಡೆಯರನ್ನು ಪಾಳೆಯಗಾರರೆಂದೂ ತುಂಗಭದ್ರ ನದಿಯ ಉತ್ತರಕ್ಕಿರುವ ಬೇಡನಾಯಕರನ್ನು ಸಂಸ್ಥಾನಿಕರೆಂದೂ ಕರೆಯುತ್ತಾರೆಂದು ತಿಳಿಸುತ್ತಾರೆ. ಇದಕ್ಕೆ ಪೂರಕವಾಗಿ ಒಂದು ಜನಪದ ನುಡಿಯನ್ನು ಈ ಕೆಳಗಿನಂತೆ ನೋಡಬಹುದು.

> ಮಾಮಲೆ ಮುದಗಲ್, ಕಿಲ್ಲೆ ಜಲದುರ್ಗ
> ಸಮತ್‌ಗೋನವಾಟ್ಲ, ಸಂಸ್ಥಾನ ಗುಂತಗೋಳ
> ನಮ್ಮ ರಾಜದು(ಯತಗಲ್ ೨೦೦೭:೧೦೩).

ಹಾಗಾಗಿ ಈ ಪ್ರದೇಶದಲ್ಲಿನ ಬೇಡನಾಯಕರ ಆಳ್ವಿಕೆ ಕೇಂದ್ರಗಳನ್ನು ಸಂಸ್ಥಾನಗಳೆಂದು ಗುರುತಿಸಬಹುದಾಗಿದೆ. ಆದರೆ ಇವರು ಹೆಚ್ಚಾಗಿ ಭೂಮಿಯನ್ನು ಜಹಾಗೀರ್ ಪಡೆದದ್ದೇ ಹೆಚ್ಚು. ಈ ಹಿನ್ನೆಲೆಯಲ್ಲಿ ಬೇಡನಾಯಕರನ್ನು ದೊಡ್ಡ ಪ್ರಮಾಣದ ಜಹಗೀರ್‌ದಾರರೆಂದು ಕರೆದರೂ ತಪ್ಪಾಗಲಿಕ್ಕಿಲ್ಲ. ಇವರು ತೆರಿಗೆಯನ್ನು ಸಂಗ್ರಹಿಸಿ ಕೇಂದ್ರಕ್ಕೆ ನಿಗದಿಪಡಿಸಿದ ಹಣವನ್ನು ಸಲ್ಲಿಸಿ ಉಳಿದ ಹಣವನ್ನು ತಾವೇ ಇಟ್ಟುಕೊಳ್ಳುತ್ತಿದ್ದರು ಎಂಬುದು ತಿಳಿದುಬರುವ ಸಂಗತಿಯಾಗಿದೆ. ಒಟ್ಟಾರೆಯಾಗಿ ಈ ಪ್ರದೇಶದಲ್ಲಿನ ಬೇಡನಾಯಕರ ಆಳ್ವಿಕೆ ಕೇಂದ್ರಗಳನ್ನು ಸಂಸ್ಥಾನಗಳೆಂದೂ, ಅವುಗಳ ಒಡೆಯರನ್ನು ಸಂಸ್ಥಾನಿಕರೆಂದೂ ಕರೆಯಲಾಗುತ್ತದೆ. ಈ ಸಂಸ್ಥಾನಿಕರೆಲ್ಲ ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ. ಇವರ ಹೋರಾಟ ಬಿಜಾಪುರ ಆದಿಲ್‌ಶಾಹಿ, ಮೊಗಲರು ಹಾಗೂ ಹೈದರಾಬಾದ್ ನಿಜಾಮರ ಕಾಲಘಟ್ಟಗಳಲ್ಲಿ ನಡೆದಿದ್ದು ಈ ಸಂಸ್ಥಾನಗಳು ಸ್ವತಂತ್ರವಾಗಿ ಆಳ್ವಿಕೆಯಲ್ಲಿದ್ದವು. ಆದರೂ ಇವು ಅಧೀನತೆಯನ್ನು ಒಪ್ಪಿಕೊಂಡು ಕಪ್ಪಗಳನ್ನು ಸಲ್ಲಿಸುತ್ತಿದ್ದರು. ಹಾಗೆಯೇ ಅಗತ್ಯವಿದ್ದಾಗ ಸೈನಿಕ ಸಹಾಯವೂ ಮಾಡಿದ್ದುಂಟು. ಇವು ತಮಗೆ ದೊರೆತ ಜಹಾಗೀರ್ ಭೂಮಿಯಲ್ಲಿ ಅನೇಕ ಜನರಿಗೆ ರಾಜ್ಯದ ಸೇವೆಯ ಹಿನ್ನೆಲೆಯಲ್ಲಿ ಇನಾಮ್ ನೀಡಿದ್ದುಂಟು. ಬಹುತೇಕವಾಗಿ ಸಂಸ್ಥಾನಿಕರು ಸ್ಥಳೀಯವಾಗಿ ಗ್ರಾಮೀಣ ಮಟ್ಟದಲ್ಲಿ ಭೂಮಿಯನ್ನು ವೃತ್ತಿಯನ್ನು ಆಧರಿಸಿ ಇನಾಮ್ ನೀಡಿರುವುದು

ಗೋಚರಿಸುತ್ತದೆ. ಇದಕ್ಕೆ ಈ ಪ್ರದೇಶದಲ್ಲಿನ ಹೊಲಗಳಿಗೆ ಕರೆಯುವ ಹೆಸರುಗಳಿಂದ ತಿಳಿದುಬರುತ್ತದೆ. ಉದಾಹರಣೆ– ಜಟ್ಟೆಯವರ ಹೊಲ, ಮುಲ್ಲವರ ಹೊಲ, ಕುದುರೆಮಾನ್ಯದ ಹೊಲ, ಜೀರ್(ಹೂಗಾರ) ಹೊಲ, ಕಾವಲಿಯವರ ಹೊಲ, ನಾದಿರ ಹೊಲ, ಅಗಸರ ಹೊಲ, ಗರಡಿಯವರ ಹೊಲ, ಕುಲ್ಕರ್ಣಿಮಾಗಿ ಹೊಲ, ರೊಕ್ಕದ ಹೊಲ, ಗೌಡರ ಪಟ್ಟಿ, ಡಂಬರ ಮಾನ್ಯದ ಹೊಲ ಹಾಗೂ ಕಪಿಲೆನ ಮಾಗಿ ಇನ್ನು ಸಾಕಷ್ಟು ಹೊಲಗಳ ಹೆಸರುಗಳು ಗೋಚರಿಸುತ್ತವೆ. ಈ ಹೊಲಗಳ ಮೇಲೆ ಸಂಸ್ಥಾನಿಕರು ತೆರಿಗೆಯನ್ನು ವಿಧಿಸುತ್ತಿರಲಿಲ್ಲ. ಅವು ತೆರಿಗೆರಹಿತ ಭೂಮಿಗಳಾಗಿದ್ದವು. ಕಸುಬುದಾರರು ಸಂಸ್ಥಾನಿಕರಿಗೆ ಸಲ್ಲಿಸುವ ಸೇವೆಯ ಆಧಾರದ ಮೇಲೆ ಇನಾಮ್ ನೀಡಲಾಗುತ್ತಿತ್ತು ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ(ತಿಮ್ಮಯ್ಯ ಮಕ್ಕಾಳಿ: ೨೦೧೦).

ಪ್ರಸ್ತುತ ಸಂದರ್ಭದಲ್ಲಿ ಕಪಟರಾಳ ಕೃಷ್ಣರಾಯ, ಬಿ. ಕೃಷ್ಣಮಾಚಾರ್ಯ, ಬಿ. ಷೇಕ್ಅಲಿ, ದೇವರಕೊಂಡಾರೆಡ್ಡಿ, ಕೃಷ್ಣಕೊಲ್ಹಾರ ಕುಲಕರ್ಣಿ, ದುರುಗಪ್ಪ ಎಂ.ಕೆ, ಅಮರೇಶ ಯತಗಲ್, ಚನ್ನಬಸವ ಹಿರೇಮಠ, ಶಾಶ್ವತಸ್ವಾಮಿ ಮುಕ್ಕಂದಿಮಠ ಮುಂತಾದವರ ಬರಹಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ವಿಜಯನಗರೋತ್ತರ ಕಾಲಘಟ್ಟದಲ್ಲಿ ಅನೇಕ ಸಣ್ಣಪುಟ್ಟ ಪಾಳೆಯಗಾರರು, ಸಂಸ್ಥಾನಿಕರು ಸ್ವತಂತ್ರರಾದರು ಎಂಬುದು ತಿಳಿದ ಮಾತು. ಆದರೆ ರಾಯಚೂರು ದೋ–ಅಬ್ ಪ್ರದೇಶದಲ್ಲಿ ಸ್ವತಂತ್ರರಾಗಲು ಯಾವ ಸಂಸ್ಥಾನವೂ ಇರಲಿಲ್ಲ. ಆದರೂ ಕೆಲವು ಸಂಶೋಧಕರು ವಿಜಯನಗರದ ಅಧೀನರಾಗಿ ಆಳ್ವಿಕೆ ಮಾಡಿದ್ದಾರೆಂದು ಹೇಳುತ್ತಿರುವುದು ತಪ್ಪು. ಕೃಷ್ಣಾನದಿಯ ಉತ್ತರದಲ್ಲಿರುವ ಸುರಪುರ ಸಂಸ್ಥಾನವಾದರೂ ವಿಜಯನಗರದ ಅಧೀನಕ್ಕೆ ಒಳಪಟ್ಟಿತ್ತೇ ಎಂಬುದನ್ನು ಕುರಿತು ನಿರೂಪಿಸಲು ಬಹಳಷ್ಟು ಸಂಶೋಧನೆ ಮಾಡಿದ ಕಪಟರಾಳ ಕೃಷ್ಣರಾಯರಿಗೆ ದಾಖಲೆಗಳ ಕೊರತೆ ಎದುರಾಗುತ್ತದೆ. ಕೊನೆಗೆ ಅವರು ಒಂದು ನಿರ್ಧಾರಕ್ಕೆ ಬಂದು, ಬಹಮನಿ ಮತ್ತು ವಿಜಯನಗರ ಪತ್ರಗಳು ದೊರೆಯದ ಕಾರಣ "ಆನೆಗುಂದಿ ಅರಸರು ಸುರಪುರಕ್ಕೆ ಬಂದರೆ ಸುರಪುರದ ದೊರೆಗಳು ಪಾದಚಾರಿಯಾಗಿ ಅಗಸಿ ಬಾಗಿಲ ಬಳಿ ಹೋಗಿ, ಸಾಷ್ಟಾಂಗ ನಮನಗೈದು, ಕುದುರೆಯನ್ನು ಹಿಡಿದು ಊರೊಳಗೆ ಕರೆತರುವ ರೂಢಿ ಇದೆ. ಇದರಿಂದಲೂ ಸುರಪುರದ ಮನೆತನದ ಪೂರ್ವಜರು ವಿಜಯನಗರ ಅರಸರ ಸೈನಿಕರು ಅವರ ಅಧೀನಕ್ಕೊಳಪಟ್ಟವರೆಂಬುದು ದೃಢವಾಗುತ್ತದೆ" ಎನ್ನುತ್ತಾರೆ(ಧ್ರುವನಾರಾಯಣ ೨೦೦೫–೫). ಆದರೆ ಸುರಪುರ ಸಂಸ್ಥಾನ ಸ್ಥಾಪನೆಯಾಗಿರುವುದೇ ಕ್ರಿ.ಶ. ೧೬೩೬ರಲ್ಲಿ, ಇದರ ಸಹೋದರ ಸಂಸ್ಥಾನ ಗುಡಗುಂಟಿ ಸ್ಥಾಪನೆಯೂ ಕೂಡಾ ಕ್ರಿ.ಶ. ೧೬೩೬ರಲ್ಲಿ ಎಂಬುದಾಗಿ ತಿಳಿಯ ಬಹುದಾಗಿದೆ. ಈ ಸಂಸ್ಥಾನಗಳ ಕಾಲಘಟ್ಟವನ್ನು ನೋಡಿದಾಗ ವಿಜಯನಗರ ಪತನವಾಗಿ ೭೦ ವರ್ಷಗಳ ನಂತರದಲ್ಲಿ ಸ್ಥಾಪನೆಯಾಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ರಾಯಚೂರು ದೋ–ಅಬ್ ಪ್ರದೇಶದಲ್ಲಿನ ಸಂಸ್ಥಾನಗಳು ಸ್ವತಂತ್ರವಾಗುವ ಸಂದರ್ಭವೇ ಬರುವುದಿಲ್ಲ. ಜನಸಾಮಾನ್ಯರೊಂದಿಗೆ ಬೆರೆತು ಜನಮುಖಿಗಳಾಗಿ ಆಳ್ವಿಕೆ ಮಾಡಿದ ಸಂಸ್ಥಾನಿಕರ ಚರಿತ್ರೆಯನ್ನು ಮತ್ತಷ್ಟು ಹಿಂದಕ್ಕೊಯ್ಯುವುದಲ್ಲ. ಅವರು ಸಮಾಜಕ್ಕೆ ನೀಡಿದ ಕೊಡುಗೆಯನ್ನು ಅವಲೋಕಿಸಬೇಕಾಗಿದೆ. ಈ ಪ್ರದೇಶದ ಸಂಸ್ಥಾನಿಕರು ರಾಜ್ಯವನ್ನು ಕಟ್ಟುವಾಗ ಸ್ವತಂತ್ರರಾಗಿದ್ದರು. ಈ ಸಂಸ್ಥಾನಗಳು ರಾಜಕೀಯ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕಾಗಿ ಹೋರಾಡಿದವು. ಈ ಸಂದರ್ಭದಲ್ಲಿ ಎದುರಿಸಿದ ಸಮಸ್ಯೆ–ಸವಾಲುಗಳನ್ನು ಅವಲೋಕಿಸುವುದು ಬಹುಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶವನ್ನು ಆಳಿದ ಸಂಸ್ಥಾನಗಳನ್ನು ಕುರಿತು ತಿಳಿದುಕೊಳ್ಳುವುದು ಅಗತ್ಯವಾಗಿದೆ.

### ೪.೩.೧. ಸಂಸ್ಥಾನಗಳ ಸ್ಥೂಲ ಪರಿಚಯ

ವಿಜಯನಗರೋತ್ತರ ಕಾಲಘಟ್ಟದಲ್ಲಿ ಹಲವು ಸಂಸ್ಥಾನಗಳು ಇಲ್ಲಿ ಆಳ್ವಿಕೆ ಮಾಡಿವೆ. ಅವು ಗುಡಗುಂಟಿ, ಗುಂತಗೋಳ, ದೇವದುರ್ಗ, ಕರಿಗುಡ್ಡ, ಅರಕೇರಿ, ಕ್ಯಾದಿಗೇರಿ, ಜಾಲಹಳ್ಳಿ, ಗಲಗ, ಮುಂಡರಗಿ ಹಾಗೂ ರಾಮದುರ್ಗ ಮುಂತಾದವುಗಳ ಸ್ಥೂಲ ಪರಿಚಯವನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

### ೪.೩.೧.೧. ಗುಡಗುಂಟಿ ಸಂಸ್ಥಾನ

ಇದು ರಾಯಚೂರು ದೋ-ಅಬ್ ಪ್ರದೇಶದ ಲಿಂಗಸೂಗೂರು ತಾಲೂಕಿನ ಗುಡಗುಂಟಿಯಲ್ಲಿದೆ. ಇದರ ಸ್ಥಾಪನೆಯ ಕುರಿತು ಸ್ಪಷ್ಟ ಆಕರಗಳಿಲ್ಲ. ಆದರೂ ಈ ಸಂಸ್ಥಾನದ ಬಗೆಗೆ ಅಧ್ಯಯನ ನಡೆಸಿದ ಅಮರೇಶ ಯತಗಲ್ ಅವರು ಕ್ರಿ.ಶ. ೧೬೯೯ರಲ್ಲಿ ಸ್ಥಾಪನೆಗೊಂಡಿತೆಂದು ಹೇಳಿದರೆ, ಚನ್ನಬಸವ ಹಿರೇಮಠ ಅವರು ಕ್ರಿ.ಶ. ೧೬೨೦ ಎಂದು ತಿಳಿಸುತ್ತಾರೆ. ಇಲ್ಲಿ ಅಮರೇಶ ಯತಗಲ್ ಅವರ ಹೇಳಿಕೆ ಕಪಟರಾಳ ಕೃಷ್ಣರಾಯರನ್ನು ಆಧರಿಸಿದೆ. ಕಪಟರಾಳ ಕೃಷ್ಣರಾಯ ಕ್ರಿ.ಶ. ೧೬೯೯ ಎಂದು ಎಲ್ಲ ಲೆಕ್ಕಾಚಾರ ಹಾಕಿ ಊಹಿಸಿ ದಾಖಲಿಸಿದ್ದಾರೆ. ಇಲ್ಲಿ ಚನ್ನಬಸವ ಹಿರೇಮಠರ ಚರ್ಚೆ ಭಿನ್ನವಾಗಿದೆ. ಕಪಟರಾಳ ಕೃಷ್ಣರಾಯ ಗುಡಗುಂಟಿ ಮತ್ತು ಸುರಪುರದ ಸಂಸ್ಥಾನಗಳ ಸ್ಥಾಪಕರು ಕ್ರಮವಾಗಿ ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡ ನಾಯಕರು ಎನ್ನುತ್ತಾರೆ. ಹಿರೇಮಠ ಅವರು ಗಡ್ಡಿಲಿಂಗನಾಯಕ ಮತ್ತು ಪಿಡ್ಡನಾಯಕರು ಜಕ್ಕಪ್ಪ ದೇಸಾಯಿಯ ಮಕ್ಕಳಲ್ಲ. ಅವರು ಪಾಮನಾಯಕನ ಮಕ್ಕಳೆಂದು ಹೇಳುತ್ತಾರೆ(ಹಿರೇಮಠ ೨೦೦೮:೧೦೨). ಆದರೆ ವಂಶಾವಳಿಯನ್ನು ನೀಡುವ ಸಂದರ್ಭದಲ್ಲಿ ಹಿರೇಮಠ ಅವರು ಕಪಟರಾಳ ಕೃಷ್ಣರಾಯ ಅವರನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಹಾಗೆಯೇ ಹೆಳವರ ಪ್ರಕಾರ ಸೋಮಸರ್ಜಾನಾಯಕನಿಗೆ ಕ್ರಮವಾಗಿ ಗಡ್ಡಿಪಿಡ್ಡನಾಯಕ, ಸೋಮಸರ್ಜಾ ನಾಯಕ, ವೆಂಕಟಪ್ಪ ನಾಯಕ, ರಾಮನಾಯಕ ಎಂಬ ನಾಲ್ಕು ಜನ ಮಕ್ಕಳಿದ್ದರು ಎಂದು ತಿಳಿದುಬರುತ್ತದೆ. ಇಲ್ಲಿ ಕಪಟರಾಳ ಕೃಷ್ಣರಾಯರು ಗುರುತಿಸಿದ ಜಕ್ಕಪ್ಪನಾಯಕನಿಗೆ ಇಬ್ಬರು ಮಕ್ಕಳು. ಹೆಳವರು ಗುರುತಿಸಿದ್ದು ಮೂಲಪುರುಷ ಜಕ್ಕಪ್ಪನಾಯಕನಲ್ಲ. ಬದಲಾಗಿ ಸೋಮಸರ್ಜಾ ನಾಯಕ ಎಂದು. ಈತನಿಗೆ ನಾಲ್ಕು ಜನ ಮಕ್ಕಳು. ಇವರು ಕ್ರಮವಾಗಿ ಸುರಪುರ, ಗುಡಗುಂಟಿ, ಕೊಡೇಕಲ್ ಮತ್ತು ಕೋಸಗಿ ಸಂಸ್ಥಾನಗಳ ರಾಜರಾಗಿದ್ದರೆಂದು ತಿಳಿದುಬರುತ್ತದೆ. ಇಲ್ಲಿ ಹೆಳವರ ಮಾಹಿತಿಯೂ ಸಹ ಭಿನ್ನವಾಗಿ ನಿಲ್ಲುತ್ತದೆ. ಇದರಲ್ಲಿ ಕಪಟರಾಳ ಕೃಷ್ಣರಾಯ ತಿಳಿಸಿದ ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕರು ಒಡಹುಟ್ಟಿದ ಸಹೋದರರಲ್ಲ ಎಂಬುದಾಗಿ ತಿಳಿದುಬರುತ್ತದೆ. ಸಂಸ್ಥಾನದ ಸ್ಥಾಪಕ ಗಡ್ಡಿಲಿಂಗನಾಯಕ. ಆದರೆ ಹೆಳವರು ಸೋಮಸರ್ಜಾನಾಯಕ ಎಂದು ಸೂಚಿಸುತ್ತದೆ. ಈ ಸೋಮ ಸರ್ಜಾನಾಯಕನ ಮಗ ಗಡ್ಡಿಲಿಂಗನಾಯಕ ಎಂದು ತಿಳಿಪಡಿಸುತ್ತದೆ. ಹಾಗೆಯೇ ಗಡ್ಡಿಪಿಡ್ಡ ನಾಯಕ ಸೋಮಸರ್ಜಾನಾಯಕನ ಮೊದಲನೆಯ ಮಗನೆಂದು ಬಿಂಬಿಸಲಾಗಿದೆ. ಇಲ್ಲಿ ಹಿರೇಮಠ ಅವರು ಕ್ಷೇತ್ರಕಾರ್ಯ ಮಾಡಿ ಗುಡಗುಂಟಿಗೆ ಸಂಬಂಧಿಸಿದ ಖಾಜಾಸಾಬ, ಗಜೇಂದ್ರನಾಯಕ, ರಾಜಾ ಅಮರಪ್ಪನಾಯಕ ಮತ್ತು ಜಾಗಟಕಲ್ ಬಸವರಾಜಪ್ಪ ಅವರಿಂದ ಸಂಗ್ರಹಿಸಿದ ವಂಶಾವಳಿ ಮತ್ತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ ಹೆಳವರ ಫಕೀರಪ್ಪ ರುದ್ರಪ್ಪ ಹೆಳವರ ಸಾಕೀನ ಜಕ್ಕಾನಹಟ್ಟಿ ತಾಲೂಕು ಗೋಕಾಕ ಇವರು ನೀಡಿದ ವಂಶಾವಳಿಗೆ ವ್ಯತ್ಯಾಸವಿರುವುದನ್ನು ಗಮನಿಸ ಬಹುದಾಗಿದೆ. ಇಲ್ಲಿ ಪ್ರತಿಯೊಂದು ಮಾಹಿತಿಯೂ ಭಿನ್ನವಾಗಿ, ಅಸ್ಪಷ್ಟವಾಗಿ ಕಂಡುಬರುತ್ತದೆ. ಈ ಎಲ್ಲ ಸಂಗತಿಗಳ ಹಿನ್ನೆಲೆಯಲ್ಲಿ ಕಪಟರಾಳ ಕೃಷ್ಣರಾಯರ ಚರ್ಚೆ ಮುಖ್ಯವಾಗುತ್ತದೆ.

ಗುಡಗುಂಟಿ ಸಂಸ್ಥಾನ ಭದ್ರವಾದ ಕೋಟೆಯನ್ನು ಹೊಂದಿದೆ. ಕಕ್ಕೇರಿ ಅಗಸಿಯ ಕೋಟೆ ಎರಡು ಸುತ್ತಿನಿಂದ ಕೂಡಿದೆ. ಹಾಗೆಯೇ ಈ ಎರಡು ಸುತ್ತಿನ ಕೋಟೆಯ ಮಧ್ಯ ನೀರನ್ನು ನಿಲ್ಲಿಸಲಾಗುತ್ತಿತ್ತು. ಗುಡಗುಂಟಿ ಗ್ರಾಮ ಈ ಕೋಟೆಯ ಒಳಗಡೆಯೇ ಇದೆ. ಇತ್ತೀಚಿಗೆ ಜನಸಂಖ್ಯೆಯ ಬೆಳವಣಿಗೆಯಿಂದಾಗಿ ಗ್ರಾಮ ಕೋಟೆಯ ಹೊರಗಡೆಯೂ ಹರಡುತ್ತಿದೆ. ಅರಮನೆ-ದರ್ಬಾರ್ ಇನ್ನೂ ಭದ್ರವಾಗಿದೆ. ಈ ಸಂಸ್ಥಾನ ಬಿಜಾಪುರ ಆದಿಲ್‌ಶಾಹಿ, ಮೊಗಲರು ಮತ್ತು ನಿಜಾಮರ ಅಧೀನತೆಯನ್ನು ಒಪ್ಪಿಕೊಂಡು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈ ಸಂಸ್ಥಾನ ೪೨ ಹಳ್ಳಿಗಳನ್ನು ಹೊಂದಿತ್ತೆಂದು ಚನ್ನಬಸವ ಹಿರೇಮಠ ಅವರು ತಿಳಿಸುತ್ತಾರೆ. ಅಮರೇಶ ಯತಗಲ್ ಅವರು ೪೪ ಹಳ್ಳಿಗಳನ್ನು ಗುರುತಿಸುತ್ತಾರೆ. ಇವರಿಬ್ಬರು ಒಬ್ಬರು ಗುರುತಿಸಿದ ಕೆಲವು ಹಳ್ಳಿಗಳನ್ನು ಇನ್ನೊಬ್ಬರು ಗುರುತಿಸದೆ ಇರುವುದು ಗೋಚರಿಸುತ್ತದೆ. ಈ ಇಬ್ಬರ ಸಂಶೋಧನೆಯಿಂದ ಒಟ್ಟು ೫೧ ಹಳ್ಳಿಗಳು ಈ ಸಂಸ್ಥಾನಕ್ಕೆ ಸೇರಿದ್ದವೆಂದು ತಿಳಿದು ಬರುತ್ತದೆ(ಯತಗಲ್ ೨೦೦೭:೨೩-೨೪ ಹಾಗೂ ಹಿರೇಮಠ ೨೦೦೮:೧೦೬). ಈ ಗ್ರಾಮಗಳನ್ನು ನೋಡಿಕೊಳ್ಳಲು ತಿಪ್ಪರಾಜ ಸರ್ಜಾ ಬಹದ್ದೂರ ಎಂಬ ದೊರೆ ಸಣ್ಣ ಪುಟ್ಟ ಜಮೀನ್ದಾರರನ್ನು ನೇಮಿಸಿದ್ದನು. ಅವರಲ್ಲಿ ಗೆಜ್ಜಲಗಟ್ಟಿ, ಅನ್ವರಿ, ಐದಬಾವಿ, ನಗನೂರು, ರೌಡಲಬಂಡಿ ಜಮೀನ್ದಾರರು ಪ್ರಮುಖರಾದವರು. ಇವರನ್ನು ನಾಡಗೌಡರೆಂದು ಕರೆಯಲಾಗುತ್ತದೆ. ಇವರಿಂದ ಸಂಸ್ಥಾನಕ್ಕೆ ರೂ. ೫೦,೦೦೦ ಕಂದಾಯ ಬರುತ್ತಿತ್ತು. ಈ ಕಂದಾಯದಲ್ಲಿ ನಿಜಾಮ್ ಸರ್ಕಾರಕ್ಕೆ ವರ್ಷಕ್ಕೆ ರೂ. ೭೦೦೦ಗಳನ್ನು ಕೊಡಲಾಗುತ್ತಿತ್ತೆಂದು ತಿಳಿದುಬರುತ್ತದೆ(ಯತಗಲ್ ೨೦೦೭:೨೪). ಈ ಸಂಸ್ಥಾನಿಕರು ವಿನೋಬಾಭಾವೆಯವರ ಭೂದಾನ ಚಳವಳಿಯ ಹಿನ್ನೆಲೆಯಲ್ಲಿ ೨೦೦ ಎಕರೆ ಭೂಮಿಯನ್ನು ದಾನ ನೀಡಿರುವುದು ಗಮನಾರ್ಹ. ಮಹಿಳೆಯಾದ ರಾಣಿ ಗೌರಮ್ಮ ರಾಜ್ಯಭಾರ ಮಾಡಿರುವುದಾಗಿ ತಿಳಿದುಬರುತ್ತದೆ. ಇದನ್ನು ಗಮನಿಸಿದರೆ ಬಿಜಾಪುರ, ಮೊಗಲರ ಕಾಲದಲ್ಲಿ ಜಹಾಗೀರು ಸಂಸ್ಥಾನಗಳಾಗಿದ್ದರಿಂದ ಯಾವುದೇ ಬಗೆಯ ಹಣವನ್ನು ಸಂದಾಯ ಮಾಡುವುದು ಕಂಡುಬರುವುದಿಲ್ಲ. ಆದರೆ ನಿಜಾಮನ ಕಾಲದಲ್ಲಿ ವಾರ್ಷಿಕ ಕಪ್ಪವನ್ನು ಸಲ್ಲಿಸುವುದನ್ನು ಕಾಣಬಹುದು. ಈ ಸಂಸ್ಥಾನದ ವಿರುದ್ಧ ಗೆಜ್ಜಲಗಟ್ಟಿಯ ನಾಡಗೌಡರು ಭೂವ್ಯಾಜ್ಯದ ಹಿನ್ನೆಲೆಯಲ್ಲಿ ತಗಾದೆ ತೆಗೆದು ನಿಜಾಮನಲ್ಲಿ ತಮ್ಮ ಪರವಾಗಿ ನ್ಯಾಯ ಪಡೆದದ್ದನ್ನು ಗಮನಿಸಿದರೆ ಸಂಸ್ಥಾನಿಕರ ಪ್ರಭಾವ ಕುಗ್ಗಿತ್ತು ಎಂಬುದು ಗೋಚರಿಸುತ್ತದೆ. ಜೊತೆಗೆ ಅಧೀನರು ಪ್ರಧಾನರಾಗಬೇಕೆಂಬ ಆಕಾಂಕ್ಷೆಯನ್ನು ಹೊಂದಿರುತ್ತಿದ್ದರು. ಜೊತೆಗೆ ಸರ್ಕಾರದೊಂದಿಗೆ ಸಂಬಂಧಗಳನ್ನು ಸುಗಮವಾಗಿಸಿಕೊಳ್ಳುವ ತಂತ್ರಗಾರಿಕೆ ಇದಾಗಿರಬಹುದು. ಇಲ್ಲಿ ನಿಜಾಮರು ಸಂಸ್ಥಾನಿಕರ ಬದಲಾಗಿ ಹೊಸ ಭೂಮಾಲಿಕ ವರ್ಗದ ಪರವಾಗಿ ತೀರ್ಮಾನ ನೀಡಿರುವುದು ಸಂಸ್ಥಾನಿಕರನ್ನು ಕುಗ್ಗುವಂತೆ ಮಾಡಿತು.

### ೪.೩.೧.೨. ಗುಂತಗೋಳ ಸಂಸ್ಥಾನ

ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಬೇಡ ನಾಯಕರ ಸಂಸ್ಥಾನವಾಗಿದೆ. ಇದರ ಚರಿತ್ರೆ ಅಸ್ಪಷ್ಟವಾಗಿದೆ. ಲಭ್ಯವಿದ್ದ ಮಾಹಿತಿಯಲ್ಲಿ ಈ ಸಂಸ್ಥಾನದ ಕುರಿತು ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಈ ಸಂಸ್ಥಾನದ ನಾಯಕರು ವರ್ತಮಾನದ ರಾಜ್ಯ ರಾಜಕಾರಣದಲ್ಲಿ ಗುರುತಿಸಿಕೊಂಡಿದ್ದರೂ ಚಾರಿತ್ರಿಕವಾಗಿ ಗುರುತಿಸುವ ಕಾರ್ಯದಗತ್ಯ ಎದ್ದು ಕಾಣುತ್ತದೆ. ಈ ಸಂಸ್ಥಾನದ

ಸ್ಥಾಪಕ ಕಾಳಭೈರವನಾಯಕ. ಈತನ ಸಮಾಧಿ ಗುಂತಗೋಳದಲ್ಲಿದೆ. ಅದನ್ನು ಕಾಳಭೈರವನಾಯಕನ 'ಗಚ್ಚಿನಕಟ್ಟೆ' ಎಂದು ಕರೆಯುತ್ತಾರೆಂದು ಯತಗಲ್ ಅವರು ತಿಳಿಸುತ್ತಾರೆ(ಯತಗಲ್ ೨೦೦೭:೫೭). ಹಾಗೆಯೇ ಈ ಸಂಸ್ಥಾನ ಕ್ರಿ.ಶ. ೧೪೪೯–೧೬೮೬ರಲ್ಲಿ ಸ್ಥಾಪನೆಯಾಗಿದೆಯೆಂದು ತಿಳಿದುಬರುತ್ತದೆ. ಆದರೆ ಈ ಸಂಸ್ಥಾನ ಗುಡಗುಂಟಿ ಸಂಸ್ಥಾನದ ಹೆಚ್ಚು ಕಡಿಮೆ ಸಮಕಾಲೀನ ಸಂಸ್ಥಾನವಾಗಿತ್ತೆಂದು ಗುರುತಿಸಬಹುದಾಗಿದೆ. ಸ್ಥಾಪನೆಯ ಕಾಲ ನಿರ್ಣಯ ಮಾಡಲು ಆಕರಗಳ ಕೊರತೆಯಿದೆ. "ಗುಂತಗೋಳದ ನಾಯಕರು ಬಿಜಾಪುರ ಆದಿಲ್‌ಶಾಹಿಗಳ ಅಧೀನರಾಗಿದ್ದರು. ಆದಿಲ್‌ಶಾಹಿಗಳು ತಮ್ಮ ಅಧೀನದವರಿಗೆ ಜಹಗೀರು ಹಾಕಿಕೊಡುತ್ತಿದ್ದರು. ಆಯಾ ಜಹಗೀರುಗಳಿಗೆ ಮುಖಂಡರಾದವರನ್ನು ಜಹಗೀರುದಾರರು ಎಂದು ಕರೆಯುತ್ತಿದ್ದರು. ಹೀಗಾಗಿ ಇವರು ಮೊದಲು ಜಹಗೀರುದಾರರಾಗಿದ್ದರು. ನಂತರದಲ್ಲಿ ಔರಂಗಜೇಬನು ಬಿಜಾಪುರವನ್ನು ಮುತ್ತಿ ಸಿಕಂದರನನ್ನು ಸೆರೆ ಹಿಡಿದು ಆದಿಲ್‌ಶಾಹಿಗಳ ಆಳ್ವಿಕೆಯನ್ನು ಸಮಾಪ್ತಿಗೊಳಿಸಿದ ಮೇಲೆ ಸ್ವತಂತ್ರವಾಗಿ ಆಳ್ವಿಕೆ ಮಾಡಿದರು" ಎಂದು ತಿಳಿದುಬರುತ್ತದೆ (ಯತಗಲ್ ೨೦೦೭:೫೦–೫೭).

ಈ ಒಂದು ಸುಳಿವಿನ ಆಧಾರದ ಮೇಲೆ ಗುಂತಗೋಳದ ನಾಯಕರು ಆದಿಲ್‌ಶಾಹಿಗಳ ಜಹಗೀರದಾರರಾಗಿದ್ದರು. ೧೬೮೬ರಲ್ಲಿ ಸ್ವತಂತ್ರವಾಗಿ ಆಳ್ವಿಕೆ ನಡೆಸಿದರೆಂಬುದನ್ನು ಅವಲೋಕಿಸಿದಾಗ ಹೆಚ್ಚು ಕಡಿಮೆ ಕ್ರಿ.ಶ. ೧೬೯೦ರಲ್ಲಿ ಈ ಸಂಸ್ಥಾನ ಸ್ಥಾಪನೆಗೊಂಡಿರಬಹುದಾದ ಸಾಧ್ಯತೆಯಿದೆ. ಸ್ಪಷ್ಟತೆಯಿಲ್ಲ. ಇವರ ಆಡಳಿತ ವ್ಯವಸ್ಥೆಯಲ್ಲಿ ಪಾಟೀಲ, ಕುಲಕರ್ಣಿ, ನಾಡಗೌಡ, ಮಾಲಿಗೌಡ, ಪೊಲೀಸ್ ಪಾಟೀಲ್ ಎಂಬ ಅಧಿಕಾರಿಗಳಿದ್ದದ್ದು ಕಂಡುಬರುತ್ತದೆ. ಮಾಲಿಗೌಡ, ಪೊಲೀಸ್‌ಗೌಡ, ಪಾಟೀಲ್ ಮತ್ತು ಕುಲಕರ್ಣಿಗಳಿಂದ ಕೂಡಿದ ಆಡಳಿತ ವ್ಯವಸ್ಥೆ ಹೈದರಬಾದ್ ನಿಜಾಮನ ಕಾಲದಲ್ಲಿ ಇದ್ದಿತು. ಈ ಸಂಸ್ಥಾನಕ್ಕೆ ೧೫೦ ಹಳ್ಳಿಗಳು ಸೇರಿದ್ದು, ಇವರ ಗಡಿಯನ್ನು ಸೂಚಿಸುವ ಜನಪದ ನುಡಿಯನ್ನು ಈ ಕೆಳಗಿನಂತೆ ಗಮನಿಸಬಹುದು.

> ಮಾಮಲೆ ಮುದಗಲ್, ಕಿಲ್ಲೆ ಜಲದುರ್ಗ
> ಸಮತ್‌ಗೋನವಾಟ್ಲ ಸಂಸ್ಥಾನ ಗುಂತಗೋಳ
> ನಮ್ಮ ರಾಜರದು(ಯತಗಲ್ ೨೦೦೭:೫೭).

ಈ ಜನಪದ ನುಡಿ ಈ ಸಂಸ್ಥಾನದ ಆಡಳಿತ ವ್ಯಾಪ್ತಿಯನ್ನು ಪ್ರತಿಫಲಿಸುತ್ತದೆ. ಇವರು ನಿಜಾಮನಿಗೆ ಕಪ್ಪಕಾಣಿಕೆಗಳನ್ನು ವಾರ್ಷಿಕವಾಗಿ ಸಲ್ಲಿಸುತ್ತಿದ್ದರು. ಕಾವಲುಗಾರನ ಹೆಂಡತಿ ಮಾಳಗುಂಡಮ್ಮ ಈ ಸಂಸ್ಥಾನವನ್ನು ರಕ್ಷಿಸಿದ ವೀರ ಮಹಿಳೆ. ಅವಳ ಧೈರ್ಯ, ಸಾಹಸ ಮೆಚ್ಚತಕ್ಕದ್ದು. ಈ ವಿಚಾರವಾಗಿ "ಒಂದು ಸಲ ೨೦ ಜನ ವೈರಿ ಸೈನಿಕರು(ಆದಿಲ್‌ಶಾಹಿಗಳೋ, ಸುರಪುರದ ನಾಯಕರೋ) ಗುಂತಗೋಳಕ್ಕೆ ರಾತ್ರೋರಾತ್ರಿ ಮುತ್ತಿಗೆ ಹಾಕಲು ಪ್ರಯತ್ನಿಸಿ ಕಾವಲುಗಾರನನ್ನು ಕೊಲೆಗೈದರು. ಮಡದಿ ಮಾಳಗುಂಡಮ್ಮ ಸುದ್ದಿ ತಿಳಿದು ವೀರಾವೇಶದಿಂದ ಕೈಯಲ್ಲಿ ಖಡ್ಗವಿಡಿದು ಅವರನ್ನು ಕೊಚ್ಚಿ ಹಾಕುವುದರೊಂದಿಗೆ ವೀರಮರಣವನ್ನಪ್ಪುತ್ತಾಳೆ. ಹೀಗಾಗಿ ಈ ಊರನ್ನು ರಕ್ಷಿಸಿದ ಈಕೆಯ ಹೆಸರಿನಲ್ಲಿ ಜನ ದೇವಾಲಯವನ್ನು ಕಟ್ಟಿಸಿ ಪೂಜಿಸುತ್ತಿದ್ದಾರೆ. ಅರಸರು ಈ ಮನೆತನದವರಿಗೆ ಇನಾಮುಗಳನ್ನು ನೀಡಿದ್ದರು. ಈಗ ಈ ಸಂತತಿಯವರು ಇಲ್ಲಿ ನೆಲೆಸಿರುವುದಿಲ್ಲ"ವೆಂದು ತಿಳಿದುಬರುತ್ತದೆ (ಯತಗಲ್ ೨೦೦೭:೫೮). ಈ ಸಂಗತಿ ಚಿತ್ರದುರ್ಗದ ಓಬವ್ವಳನ್ನು ನೆನಪಿಸುತ್ತದೆ. ಸಂಸ್ಥಾನದ ರಕ್ಷಣೆಗೆ ತನ್ನ ಪ್ರಾಣವನ್ನೇ ಒತ್ತೆ ಇಟ್ಟದ್ದು ಗಮನಾರ್ಹ. ಈ ಸಂಸ್ಥಾನ ತನ್ನ ಅಸ್ತಿತ್ವಕ್ಕಾಗಿ ಹೋರಾಡಿತು. ಪ್ರತಿಯೊಂದು ರಾಜ್ಯಗಳ ರಕ್ಷಣೆಯಲ್ಲಿ ಕೆಳ ಸಮುದಾಯಗಳ ಪಾತ್ರ ಅನನ್ಯವಾಗಿರುವುದು ಗೋಚರಿಸುತ್ತದೆ.

### ೪.೩.೧.೩. ದೇವದುರ್ಗ ಸಂಸ್ಥಾನ

ಈ ಸಂಸ್ಥಾನ ಪ್ರಸ್ತುತ ತಾಲೂಕು ಕೇಂದ್ರವಾಗಿರುವ ದೇವದುರ್ಗದಲ್ಲಿತ್ತು. ಇದು ಮೊದಲು ಚಂದನಕೇರಿಯಲ್ಲಿತ್ತು. ಈ ಸಂಸ್ಥಾನವನ್ನು ಕುರಿತು ಸೂರ್ಯಕಾಂತ ಗುಣಕಿಮಠ, ಅಮರೇಶ ಯತಗಲ್ ಹಾಗೂ ಅಮರೇಶ ಆಲ್ಕೋಡ ಅವರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಈ ಸಂಸ್ಥಾನ ಸುರಪುರದೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದೆ. ಕೆಲವು ಸಲ ವಿರೋಧವನ್ನು ಸಹ ವ್ಯಕ್ತಪಡಿಸಿದೆ. ಈ ಪ್ರದೇಶದಲ್ಲಿ ತನ್ನ ಅಸ್ತಿತ್ವಕ್ಕಾಗಿ ಹೋರಾಟ ಮಾಡಿದ ಪ್ರಮುಖ ಸಂಸ್ಥಾನವಾಗಿದೆ. ಇದರ ವಾರ್ಷಿಕ ಆದಾಯ ೩ ಲಕ್ಷವಿತ್ತೆಂದು ತಿಳಿದುಬರುತ್ತದೆ. ಇದರ ಬಗ್ಗೆ ಸ್ಪಷ್ಟವಾಗಿ ತಿಳಿದುಬರುತ್ತಿಲ್ಲ.

ಸೂರ್ಯಕಾಂತ ಗುಣಕಿಮಠ ಮತ್ತು ಅಮರೇಶ ಯತಗಲ್ ಅವರು ದೇವದುರ್ಗ ಸಂಸ್ಥಾನದ ಅಧೀನದಲ್ಲಿ ಜಾಲಹಳ್ಳಿ, ಅರಕೇರಿ, ಗಲಗ, ಮುಂಡರಗಿ, ಕ್ಯಾದಿಗ್ಗೇರಿ, ರಾಮದುರ್ಗ ಸಂಸ್ಥಾನಗಳಿದ್ದವೆಂದು ಹೇಳುತ್ತಾರೆ. ಮುಂಡರಗಿ ಮತ್ತು ಅರಕೇರಿಯನ್ನು ಹೊರತು ಪಡಿಸಿದರೆ ಉಳಿದ ಸಂಸ್ಥಾನಗಳು ಸುರಪುರದೊಂದಿಗೆ ವೈವಾಹಿಕ ಮತ್ತು ರಾಜಕೀಯ ಸಂಬಂಧವನ್ನು ಹೊಂದಿದ್ದವು. ದೇವದುರ್ಗದ ಅಧೀನದಲ್ಲಿ ಯಾವ ಸಂಸ್ಥಾನವೂ ಇರಲಿಲ್ಲ. ಅವು ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದವು. ಅವು ಸೀಮಿತ ಪ್ರದೇಶವನ್ನು ಹೊಂದಿ ಆಳುತ್ತಿದ್ದವು. ಇವು ಸುರಪುರದ ಮಾತು ಕೇಳುತ್ತಿದ್ದವು. ಈ ಹಿನ್ನೆಲೆಯಲ್ಲಿ ದೇವದುರ್ಗದ ಅಧೀನದಲ್ಲಿ ಈ ಪ್ರದೇಶಗಳು ಇರಲಿಲ್ಲವೆಂದು ಹೇಳಬಹುದಾಗಿದೆ.

ಅಮರೇಶ ಆಲ್ಕೋಡ ಅವರು ಈ ಸಂಸ್ಥಾನದ ಸ್ಥಾಪನೆ ಕ್ರಿ.ಶ. ೧೫೯೦ರಲ್ಲಿ ಆಗಿರಬಹುದೆಂದು ಸುಜಾತಮಲ್ಲಗೌಡ, ಎಂ.ಕೆ. ದುರುಗಪ್ಪ, ದೇವರಕೊಂಡಾರೆಡ್ಡಿ ಅವರ ಅಧ್ಯಯನದ ಹಿನ್ನೆಲೆಯಲ್ಲಿ ಗುರುತಿಸಿರುವುದು ಕಂಡುಬರುತ್ತದೆ. ಆದರೆ ಇನ್ನೂ ಪೂರಕವಾದ ದಾಖಲೆಗಳ ಅಗತ್ಯವಿದೆಯೆಂದು ಗೋಚರಿಸುತ್ತದೆ. ಸುರಪುರ ಸಂಸ್ಥಾನ ಸ್ಥಾಪನೆಯ ಕಾಲಕ್ಕೆ ಇದು ಕೂಡಾ ಸ್ಥಾಪನೆಯಾಗಿರಬಹುದು. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೬೩೬ರಲ್ಲಿ ದೇವದುರ್ಗ ಸಂಸ್ಥಾನ ಸ್ಥಾಪನೆಯಾಗಿರಬಹುದೆಂದು ಅರಿಯ ಬಹುದಾಗಿದೆ. ಈ ಸಂಸ್ಥಾನಿಕರು 'ಜಂಪಲ' ಗೋತ್ರದವರಾಗಿದ್ದಾರೆ. ಈ ಸಂಸ್ಥಾನ ಆದಿಲ್‌ಶಾಹಿಗಳ, ಮೊಗಲರ ಮತ್ತು ನಿಜಾಮರ ಕಾಲದಲ್ಲಿ ಅಸ್ತಿತ್ವಕ್ಕಾಗಿ ಹೋರಾಡಿ ರಾಯಚೂರು ಜಹಗೀರ್‌ನ್ನು ಪಡೆದಿರುವುದು ಕಂಡುಬರುತ್ತದೆ. ಇದರ ವ್ಯಾಪ್ತಿ ಏರುಪೇರಿನಿಂದ ಕೂಡಿದ್ದಿತು. ಸಂಸ್ಥಾನಕ್ಕೆ ಸಂಬಂಧಿಸಿ ದವರು ದೇವದುರ್ಗದಲ್ಲಿದ್ದಾರೆ. ಅವರನ್ನು ಈಗಲೂ ಧಣಿಗಳೆಂದೇ ಕರೆಯುತ್ತಾರೆ. ವರ್ತಮಾನದಲ್ಲಿ ರಾಜಕೀಯದಲ್ಲಿದ್ದಾರೆ. ದೇವದುರ್ಗದಲ್ಲಿ ದರ್ಬಾರ್ ಇದೆ. ಅದು ಇಂದು ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದೆ. ಜೀರ್ಣೋದ್ಧಾರ ಮಾಡುವ ಅಗತ್ಯವಿದೆ. ಇದು ತನ್ನ ಅಸ್ತಿತ್ವಕ್ಕಾಗಿ ಹೋರಾಡಿದ್ದನ್ನು ಗಮನಿಸಬಹುದು.

### ೪.೩.೧.೪. ಕರಿಗುಡ್ಡ ಸಂಸ್ಥಾನ

ಸುರಪುರ ಸಂಸ್ಥಾನದ ಸಮಕಾಲೀನ ಸಂಸ್ಥಾನವಾಗಿದ್ದು, ದೇವದುರ್ಗ ತಾಲೂಕಿನಲ್ಲಿದೆ. ದೇವದುರ್ಗದ ಪಶ್ಚಿಮಕ್ಕೆ ಜಾಲಹಳ್ಳಿಗೆ ಹೋಗುವ ಮಾರ್ಗದಲ್ಲಿದೆ. ಈ ಸಂಸ್ಥಾನ ಸುರಪುರದೊಂದಿಗೆ ವೈವಾಹಿಕ ಸಂಬಂಧ ಹೊಂದಿರುವುದನ್ನು ಕಪಟರಾಳ ಕೃಷ್ಣರಾಯ ಗುರುತಿಸುತ್ತಾರೆ. "ಗಡ್ಡಿ ಲಿಂಗನಾಯಕ ಮತ್ತು ಗಡ್ಡಿಪಿಡ್ಡನಾಯಕರ ಮಧ್ಯ ಪಿತ್ರಾರ್ಜಿತ ಭೂ ವ್ಯಾಜ್ಯ ನಡೆದಿತ್ತು. ಅದನ್ನು ಈ ಕರಿಗುಡ್ಡದ ಎಂಕಮ್ಮ ಎಂಬಾಕೆಯು ತನ್ನ ಅಣ್ಣತಮ್ಮಂದಿರ ನ್ಯಾಯವನ್ನು ಮಧ್ಯಸ್ಥಿಕೆ ವಹಿಸಿ ಬಗೆಹರಿಸಿರುವುದು ಕಂಡುಬರುತ್ತದೆ"(ಧ್ರುವನಾರಾಯಣ ೨೦೦೫:೨೧). ಆದರೆ ಈ ಕುರಿತು ದಾಖಲೆಗಳ ಕೊರತೆ

ಎದ್ದು ಕಾಣುತ್ತದೆ. ಸುರಪುರದವರು ಆಗಾಗ ಈ ಪ್ರದೇಶದ ಮೇಲೆ ದಾಳಿ ಮಾಡಿದ್ದುಂಟು. ಕಪಟರಾಳರು ಉಲ್ಲೇಖಿಸುವಂತೆ "ಕರಿಗುಡ್ಡದ ಮೇಲೆ ದಾಳಿ" ಮಾಡಿ ಅದನ್ನು ಸಂಪೂರ್ಣವಾಗಿ ದೋಚಿಕೊಂಡು, ಚಂದನಕೇರಿಯ ಮೇಲೆ ದಾಳಿ ಮಾಡಿದ ಇಮ್ಮಡಿ ವೆಂಕಟಪ್ಪ ನಾಯಕ ಹಣವನ್ನು ದೋಚಿಕೊಂಡು ಹೋದನೆಂದು ತಿಳಿದುಬರುತ್ತದೆ (ಧ್ರುವನಾರಾಯಣ ೨೦೦೫: ೧೨೨).

ಈ ಸಂಸ್ಥಾನ ಕುರಿತು ಅಷ್ಟಾಗಿ ಅಧ್ಯಯನಗಳು ನಡೆದಿಲ್ಲ. ಆದರೂ ಅಮರೇಶ ಯತಗಲ್ ಅವರು ಮೌಖಿಕ ಆಕರಗಳ ಮೂಲಕ ಇಲ್ಲಿನ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. ಆದರೆ ಆಧಾರಗಳ ಕೊರತೆಯನ್ನು ಗುರುತಿಸಬಹುದಾಗಿದೆ. ಹಾಗೆಯೇ ಸಂಬಂಧಗಳನ್ನು ಗುರುತಿಸುವಾಗ ಕಾಲಗಣನೆಯಲ್ಲಿ ವ್ಯತ್ಯಾಸವನ್ನು ನೋಡಬಹುದಾಗಿದೆ. ಅವರು "ಸುರುಪುರದ ಅರಸರಿಗೆ ಅಧೀನನಾಗಿದ್ದ ರಾಮಚಂದ್ರನಾಯಕ ಎಂಬಾತ ಈ ಸಂಸ್ಥಾನದ ಮೂಲಪುರುಷನಾಗಿದ್ದನು. ಈತನು ಹೈದರಾಬಾದ್ ನಿಜಾಮನಿಂದ ಕೆಲವು ಹಳ್ಳಿಗಳನ್ನು ಇನಾಮ್ ಆಗಿ ಪಡೆದಿದ್ದನು. ಈತನು ಈ ಸಂಸ್ಥಾನವನ್ನು ಕ್ರಿ.ಶ. ೧೬೧೦ರಲ್ಲಿ ಸ್ಥಾಪಿಸಿದನೆಂದು" ಅಮರೇಶ ಯತಗಲ್ ಅವರು ತಿಳಿಸುತ್ತಾರೆ(ಯತಗಲ್ ೨೦೦೮:೨೧). ಆದರೆ ಕ್ರಿ.ಶ. ೧೬೧೦ರಲ್ಲಿ ನಿಜಾಮ್ ಸಂಸ್ಥಾನದ ಉದಯವೆ ಆಗಿರಲಿಲ್ಲ. ಅಲ್ಲದೆ ಸುರಪುರ ಸಂಸ್ಥಾನದ ಸ್ಥಾಪನೆಯಾದದ್ದು ಕ್ರಿ.ಶ. ೧೬೩೬ರಲ್ಲಿ. ಇಲ್ಲಿ ನಿಜಾಮರೊಂದಿಗೆ ಸಂಬಂಧ ಬೆಳೆಸುವ ಪ್ರಮೇಯವೇ ಇಲ್ಲ. ವಿಜಯನಗರೋತ್ತರ ಕಾಲಘಟ್ಟದಲ್ಲಿ ಸ್ಥಾಪಿತಗೊಂಡ ಈ ಸಂಸ್ಥಾನ ಬಹುತೇಕ ಸುರಪುರದ ಸಮಕಾಲೀನವಾಗಿತ್ತು. ಈ ಸಂಸ್ಥಾನದ ಚರಿತ್ರೆ ಅಸ್ಪಷ್ಟತೆಯಿಂದ ಕೂಡಿದೆ. ಇದಕ್ಕೆ ೨೬ ಹಳ್ಳಿಗಳು ಸೇರಿದ್ದವೆಂದು ಹೇಳಲಾಗಿದೆ. ಈ ಕುರಿತು ಅಧ್ಯಯನ ನಡೆಸುವ ಅಗತ್ಯವಿದೆ.

**೪.೩.೧.೫. ಅರಕೇರಿ ಸಂಸ್ಥಾನ**

ಇದು ದೇವದುರ್ಗ ತಾಲೂಕಿನ ಅರಕೇರಿ ಗ್ರಾಮವೇ ಅಂದಿನ ಸಂಸ್ಥಾನದ ಕೇಂದ್ರ ಸ್ಥಳವಾಗಿತ್ತು. ಇದು ಗತ ಮತ್ತು ವರ್ತಮಾನದ ಸ್ಥಿತ್ಯಂತರಗಳ ನೆಲೆಯಾಗಿದೆ. ಈ ಸಂಸ್ಥಾನದ ಸ್ಥಾಪಕರು ಮತ್ತು ಅದರ ಬೆಳವಣಿಗೆಗೆ ಕಾರಣರಾದವರು ಯಾರೆಂಬುದು ಅಸ್ಪಷ್ಟ. ಆದರೆ, ಚೊಕ್ಕಪ್ಪ ನಾಯಕ, ಬಡೇಸಾಹೇಬ, ಕೇಸವಯ್ಯ ಗೌಡ ಎಂಬ ಹೆಸರುಗಳು ಮಾತ್ರ ಕಂಡುಬರುತ್ತವೆ. ದೇವದುರ್ಗದ ಶಾಸನದ ಪ್ರಕಾರ ಕ್ರಿ.ಶ. ೧೮೦೦ರಿಂದ ಪ್ರಸ್ತುತದವರೆಗೆ ಈ ಸಂಸ್ಥಾನದ ವಿರುಪಣ್ಣ ನಾಯಕ ದೊರೆ ಎಂಬುವವರು ಸಿದ್ಧಪಡಿಸಿದ ವಂಶಾವಳಿಯನ್ನು ಗಮನಿಸಬಹುದಾಗಿದೆ. ಅಧ್ಯಯನದ ಅಗತ್ಯವಿದೆ. ಇದರ ವ್ಯಾಪ್ತಿಯೂ ಕೂಡ ಚಿಕ್ಕದಾಗಿತ್ತು. ಇಲ್ಲಿ ಅನೇಕ ವೀರಗಲ್ಲುಗಳು ಇವೆ. ಪ್ರಸ್ತುತ ಈ ಕುಟುಂಬ ಶಿಕ್ಷಕ ವೃತ್ತಿಯಲ್ಲಿ ಸೇವೆಸಲ್ಲಿಸುತ್ತಿದೆ. ಹಬ್ಬ ಹರಿದಿನಗಳಂದು ಇವರಿಗೆ ಗೌರವ ಸಿಗುತ್ತದೆ ಎಂಬುದು ತಿಳಿದುಬರುತ್ತದೆ. ಕಟ್ಟಿಮನೆಗಳ ಮೂಲಕ ಆಡಳಿತ ನಡೆಸಲಾಗುತ್ತಿತ್ತು. ಕೊನೆಗೆ ನಿಜಾಮನ ಅಧೀನಕ್ಕೆ ಒಳಗಾಗಬೇಕಾಯಿತು.

**೪.೩.೧.೬. ಕ್ಯಾದಿಗ್ಗೇರಿ ಸಂಸ್ಥಾನ**

ಇದು ದೇವದುರ್ಗ ತಾಲೂಕದಲ್ಲಿದೆ. ಅರಕೇರಿ ಸಂಸ್ಥಾನದ ದಕ್ಷಿಣಕ್ಕಿದೆ. ಏಳು ಹಳ್ಳಿಗಳನ್ನು ಒಳಗೊಂಡಿತ್ತು. ಇದರ ಚರಿತ್ರೆಯೂ ಸಹ ಅಸ್ಪಷ್ಟವಾಗಿದೆ. ಸರಿಯಾದ ದಾಖಲೆಗಳಿಲ್ಲ. ಮೌಖಿಕ ಆಕರಗಳನ್ನು ಬಳಸಿಕೊಂಡರೂ ಅವು ನಿಖರತೆಯಿಂದ ಕೂಡಿಲ್ಲ. ಆದರೂ ಇದು ಈ ಪ್ರದೇಶದಲ್ಲಿ

ಕಂಡುಬರುವ ಇತರೆ ಸಂಸ್ಥಾನಗಳಿಗಿಂತ ಬಲಿಷ್ಠವಾಗಿತ್ತು. ಸುರಪುರದೊಂದಿಗೆ ವೈವಾಹಿಕ ಸಂಬಂಧ ಹೊಂದಿತ್ತು. ಅಲ್ಲದೆ ಪ್ರಭಾವಿಯಾಗಿತ್ತು. ಇಲ್ಲಿ ಅನೇಕ ವೀರಗಲ್ಲುಗಳು ಸಂಸ್ಥಾನದಾದ್ಯಂತ ಕಂಡುಬರುತ್ತವೆ. ಇವನ್ನು ಗಮನಿಸಿದರೆ ಅನೇಕ ಯುದ್ಧಗಳು ಇಲ್ಲಿ ಜರುಗಿರಬೇಕು. ಈ ಗ್ರಾಮದಲ್ಲಿ ಎರಡು ಶಾಸನಗಳಿವೆ. ಅವು ಸಂಸ್ಥಾನವನ್ನು ಕುರಿತು ಏನನ್ನೂ ಹೇಳುವುದಿಲ್ಲ. ಈ ಸಂಸ್ಥಾನದಲ್ಲಿ ಭೂಮಿಯನ್ನು ಗುತ್ತಿಗೆ ಆಧಾರದ ಮೇಲೆ ಉಳುಮೆ ಮಾಡುತ್ತಿರುವುದು ಕ್ಯಾದಿಗ್ಗೇರಿ (೩೭)– ಕ್ರಿ.ಶ.೧೭–೧೮ನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ. ವಡವಟ್ಟಿ ರಂಗನಾಥ ಇವರ ಕುಲದೇವರು. ಕೋಟೆಯಿಂದ ಆವೃತ್ತವಾದ ಗ್ರಾಮವಾಗಿತ್ತು. ಇತ್ತೀಚೆಗೆ ಜನರು ಗುಡ್ಡದ ಮೇಲಿಂದ ಇಳಿದು ಕೆಳಗಡೆ ನೆಲೆಸಿರುವುದು ಕಂಡುಬರುತ್ತದೆ. ಇದರ ಬಗ್ಗೆ ಅಧ್ಯಯನ ಮಾಡುವುದು ಅವಶ್ಯಕತೆಯಿದೆ. ರುದ್ರಮುನಿ ರಾಜಗುರು ಮತ್ತು ಅಮರೇಶ ಆಲ್ಕೋಡ ಅವರು ಮಾಹಿತಿ ರೂಪದ ವಿಚಾರಗಳನ್ನು ಅಭ್ಯಸಿಸಿರುವುದು ಕಂಡುಬರುತ್ತದೆ. ಮೌಖಿಕ ಆಕರಗಳನ್ನು ಬಳಸಿಕೊಂಡು ಅಭ್ಯಸಿಸುವ ಪ್ರಯತ್ನ ನಡೆಯಬೇಕಿದೆ. ಇವರು ಕಟ್ಟೆಮನೆಗಳ ಮೂಲಕ ಆಡಳಿತ ನಡೆಸುತ್ತಿದ್ದು, ಈ ಸಂಸ್ಥಾನಕ್ಕೆ ಸಂಬಂಧಪಟ್ಟ ತಿಮ್ಮಪ್ಪನಾಯಕ, ರಂಗಪ್ಪನಾಯಕ, ವೆಂಕಟಪ್ಪನಾಯಕ ಮುಂತಾದವರ ಹೆಸರು ಮಾತ್ರ ಗೋಚರಿಸುತ್ತವೆ. ಸ್ಪಷ್ಟ ದಾಖಲೆಗಳ ಕೊರತೆಯಿದೆ. ವೀರಗಲ್ಲು, ಕೋಟೆ, ಕೆರೆಕಟ್ಟೆಗಳನ್ನು ಆಧರಿಸಿ ವಾಸ್ತವದ ಹಿನ್ನೆಲೆಯಲ್ಲಿ ಚರಿತ್ರೆಯ ವಿವಿಧ ಆಯಾಮ ಗಳನ್ನು ಕುರಿತು ಗಮನಹರಿಸಬೇಕಾದ ಅಗತ್ಯತೆಯನ್ನು ಒತ್ತಿಹೇಳಬಹುದಾಗಿದೆ.

### ೪.೩.೧.೭. ಜಾಲಹಳ್ಳಿ ಸಂಸ್ಥಾನ

ಇದು ದೇವದುರ್ಗ ತಾಲೂಕಿನಲ್ಲಿದೆ. ದೇವದುರ್ಗ ತಿಂಥಿಣಿ ಬ್ರಿಜ್ ಮಾರ್ಗ ಮಧ್ಯದಲ್ಲಿದೆ. ಇದು ದೇವದುರ್ಗದ ಸಹೋದರ ಸಂಬಂಧಿ ಸಂಸ್ಥಾನವೆಂದು ಇಲ್ಲಿನ ಸಂಸ್ಥಾನಿಕರು ಹೇಳಿಕೊಳ್ಳುತ್ತಾರೆ. ಇದು ಸುರಪುರದೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿತ್ತು. ರಂಗಪ್ಪನಾಯಕ, ತಿಮ್ಮಪ್ಪನಾಯಕರ ಹೆಸರು ಪ್ರಮುಖವಾಗಿ ಕೇಳಿಬರುತ್ತದೆ. ಈ ಸಂಸ್ಥಾನದ ಬಗ್ಗೆ ಅಧ್ಯಯನಗಳಾಗಿಲ್ಲ. ಈ ಸಂಸ್ಥಾನದ ವ್ಯಾಪ್ತಿಗೆ ೨೫ ಹಳ್ಳಿಗಳು ಸೇರಿದ್ದವು. ವತನದಾರರ ಮೂಲಕ ಸಂಸ್ಥಾನದಲ್ಲಿ ಆಡಳಿತ ನಡೆಸಲಾಗುತ್ತಿತ್ತು. ಸುರಪುರವಲ್ಲದೆ ಕೊಡೇಕಲ್ಲು, ಜಾಲಿಬೆಂಚಿ, ಪಂದಿಕುಂಟಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದಿತು. ರಾಜಕೀಯವಾಗಿ ಇತ್ತೀಚೆಗೆ ಅಷ್ಟೇನು ಗುರುತಿಸಿಕೊಂಡಿಲ್ಲ. ಆದರೂ ಪ್ರಯತ್ನ ದಲ್ಲಿರುವುದು ಗೋಚರಿಸುತ್ತದೆ. ಇದು ಕೂಡ ಸುರಪುರದ ಸಮಕಾಲೀನ ಸಂಸ್ಥಾನವಾಗಿದೆ. ದೊಡ್ಡ ದೊಡ್ಡ ಸಂಸ್ಥಾನಗಳಿಗೆ ಬೆನ್ನೆಲುಬಾಗಿದ್ದ ಇಂತಹ ಸಂಸ್ಥಾನಗಳ ಕುರಿತು ಅಧ್ಯಯನಗಳು ಇನ್ನಷ್ಟು ನಡೆಯಬೇಕಾಗಿದೆ.

### ೪.೩.೧.೮. ಗಲಗ ಸಂಸ್ಥಾನ

ಇದು ದೇವದುರ್ಗ ತಾಲೂಕಿನಲ್ಲಿದೆ. ಚಿಕ್ಕದಾದರೂ ಉತ್ತಮವಾದ ಕೋಟೆ, ಅರಮನೆಯ ದರ್ಬಾರ್‌ಗಳನ್ನು ಹೊಂದಿದೆ. ಇದು ಕೂಡಾ ಸುರಪುರದೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿತ್ತು. ವೆಂಕಟಪ್ಪನಾಯಕ, ರಂಗಪ್ಪನಾಯಕರ ಹೆಸರು ಕೇಳಿಬರುತ್ತವೆ. ಈ ಸಂಸ್ಥಾನದ ವ್ಯಾಪ್ತಿಯ ಬಗ್ಗೆ ಏನೂ ತಿಳಿದುಬರುವುದಿಲ್ಲ. ಇದು ಸೀಮೆಯ ಕೇಂದ್ರವೂ ಆಗಿತ್ತು. ಗಲಗ ಸೀಮೆಯಲ್ಲಿ ಅಧಿಕ ತೆರಿಗೆ, ದಂಡವನ್ನು ವಸೂಲಿ ಮಾಡಲಾಗುತ್ತಿತ್ತೆಂದು ಗಲಗ(೩೫)–೧೭೨೬ರ ಶಾಸನದಿಂದ ತಿಳಿದುಬರುತ್ತದೆ.[೩೪] ಆದರೆ ಈ ಶಾಸನ ಮುಂದುವರೆದು ದಂಡವನ್ನು ವಸೂಲಿ ಮಾಡಬಾರದೆಂದು ತಿಳಿಸುತ್ತದೆ. ಕೋಟೆ ಮತ್ತು ಅರಮನೆ ಈಗಲೂ ಇವೆ. ಈ ಸಂಸ್ಥಾನದ ಕುರಿತು ಅಧ್ಯಯನ ಆಗಬೇಕಿದೆ.

### ೪.೩.೧.೯. ಮುಂಡರಗಿ ಸಂಸ್ಥಾನ

ಇದು ದೇವದುರ್ಗ ತಾಲೂಕಿನಲ್ಲಿದೆ. ಇದು ಕೂಡಾ ಬೇಡನಾಯಕರ ಆಳ್ವಿಕೆಯ ಕೇಂದ್ರವೆಂದು ಹೇಳಲಾಗುತ್ತದೆ. ಆದರೆ ಮುಂಡರಗಿ ೩೫ ಹಳ್ಳಿಗಳನ್ನು ಹೊಂದಿತ್ತೆಂದು ಜನಸಾಮಾನ್ಯರು ಹೇಳುತ್ತಾರೆ. ಯಾರು ಆಳ್ವಿಕೆ ಮಾಡುತ್ತಿದ್ದರೆಂಬ ಬಗ್ಗೆ ತಿಳಿದುಬರುವುದಿಲ್ಲ. ಇದರ ಬಗ್ಗೆ ಅಸ್ಪಷ್ಟ ಮಾಹಿತಿಯಿದೆ. ಅಧ್ಯಯನ ನಡೆಸುವ ಅವಶ್ಯಕತೆಯಿದೆ.

### ೪.೩.೧.೧೦. ರಾಮದುರ್ಗ ಸಂಸ್ಥಾನ

ಇದು ದೇವದುರ್ಗ ತಾಲೂಕಿನಲ್ಲಿದೆ. ಗಬ್ಬೂರು ಹೋಬಳಿಗೆ ಸೇರುತ್ತದೆ. ಇಲ್ಲಿ ಬೇಡನಾಯಕರು ಆಳಿದ ಬಗ್ಗೆ ತಿಳಿದುಬರುತ್ತದೆ. ಇಲ್ಲಿ ಕೋಟೆ-ಕೊತ್ತಲುಗಳು ಇರುವುದನ್ನು ಗಮನಿಸಿದರೆ ಆಳ್ವಿಕೆ ಪ್ರದೇಶವಾಗಿರಬೇಕು. ಈ ಸಂಸ್ಥಾನದ ಬಗೆಗೂ ಸರಿಯಾದ ಮಾಹಿತಿ ಲಭ್ಯವಿಲ್ಲ. ಅಲ್ಲದೆ ಇದರ ಆಡಳಿತ ವ್ಯಾಪ್ತಿಯೂ ಕೂಡ ಹೇಳಲಾಗುವುದಿಲ್ಲ. ಇದರ ಅಧ್ಯಯನದ ಅಗತ್ಯವಿದೆ.

ಒಟ್ಟಾರೆ ಬೇಡನಾಯಕರ ಸಂಸ್ಥಾನಗಳು ತಮ್ಮ ತಮ್ಮ ಸಾಮರ್ಥ್ಯದ ಹಿನ್ನೆಲೆಯಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ಮುಖ್ಯವಾಗಿ ಮುಸ್ಲಿಂ ಅರಸರು ಕೇಂದ್ರದಲ್ಲಿ ಆಳುತ್ತಿದ್ದರೂ ಅವರು ಈ ಪ್ರದೇಶದಲ್ಲಿ ಹಿಂದೂಗಳಿಗೆ ಅಧಿಕಾರವನ್ನು ನೀಡಿರುವುದು ಗಮನಾರ್ಹ. ಒಂದು ಬಗೆಯಲ್ಲಿ ಮುಸ್ಲಿಂ ಅರಸರು ಜಾತ್ಯಾತೀತರಾಗಿದ್ದರು. ಅವರು ಅಧೀನ ಜಹಗೀರ್‌ದಾರರೆಲ್ಲ ಹಿಂದೂಗಳೆ ಆಗಿದ್ದರು. ಈ ಜಹಗೀರ್‌ದಾರರ ಅಧೀನದಲ್ಲಿ ಜನಸಾಮಾನ್ಯರು ಜೀವನ ಸಾಗಿಸುತ್ತಿದ್ದರು.

### ೪.೩.೨. ಸಂಸ್ಥಾನಿಕರು ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಡಿದ ಕಾಲ

ವಿಜಯನಗರೋತ್ತರ ಕಾಲಘಟ್ಟದಲ್ಲಿ ರಾಯಚೂರು ದೋ-ಅಬ್ ಪ್ರದೇಶ ಸಂಪೂರ್ಣವಾಗಿ ಬಿಜಾಪುರ ಆದಿಲ್‌ಶಾಹಿಗಳ ಅಧೀನಕ್ಕೆ ಸೇರಲ್ಪಟ್ಟಿತ್ತು. ಆದಿಲ್‌ಶಾಹಿಗಳು ತಮ್ಮ ಅಧೀನ ಹಿಂದೂ ಅಧಿಕಾರಿಗಳಿಗೆ ಕೆಲವು ಪ್ರದೇಶಗಳಲ್ಲಿ ಜಹಗೀರು ನೀಡಿದ್ದರು. ಆ ಜಹಗೀರ್‌ದಾರರೇ ತಮ್ಮ ರಾಜಕೀಯ ಚಾಣಕ್ಷತನದಿಂದ ಮೇಲೆ ಬಂದು ಅಧಿಪತ್ಯವನ್ನು ಸ್ಥಾಪಿಸಿ ಸಣ್ಣ-ಮಟ್ಟ ಸಂಸ್ಥಾನಗಳನ್ನು ಸ್ಥಾಪಿಸಿ ಕೊಂಡರು. ಹೀಗೆ ಸ್ಥಾಪಿಸಿಕೊಂಡ ಸಂಸ್ಥಾನಗಳು ರಾಜಕೀಯವಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸಿದವು. ಅಂತಹ ಈ ಪ್ರದೇಶದಲ್ಲಿ ಸುಮಾರು ೮-೧೦ ಸಂಸ್ಥಾನಗಳು ಕಂಡು ಬರುತ್ತವೆ. ಅವುಗಳೆಂದರೆ ಗುಡಗುಂಟಿ, ಗುಂತಗೋಳ, ದೇವದುರ್ಗ, ಕರಿಗುಡ್ಡ, ಜಾಲಹಳ್ಳಿ, ಅರಕೇರಿ, ಕ್ಯಾದಿಗ್ಗೇರಿ, ಗಲಗ, ಮುಂಡರಗಿ ಮತ್ತು ರಾಮದುರ್ಗ ಸಂಸ್ಥಾನಗಳಾಗಿವೆ. ಇವು ಜಹಗೀರ್‌ಗಳಾಗಿದ್ದವು, ನಂತರ ಸಂಸ್ಥಾನಗಳಾಗಿ ರೂಪಗೊಂಡಿವೆ. ಈ ಸಂದರ್ಭದಲ್ಲಿ ಕಪಟರಾಳ ಕೃಷ್ಣರಾಯ, ಶಾಶ್ವತಸ್ವಾಮಿ ಮುಕ್ಕುಂದಿಮಠ ಮತ್ತು ಚನ್ನಬಸವ ಹಿರೇಮಠ ಅವರ ಬರಹಗಳನ್ನು ಬಳಸಿಕೊಳ್ಳಲಾಗಿದೆ. ಈ ಸಂಸ್ಥಾನಿಕರು ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಡಿದ ಸ್ವರೂಪವನ್ನು ಆದಿಲ್‌ಶಾಹಿ, ಮೊಗಲ ಮತ್ತು ನಿಜಾಮರ ಕಾಲಘಟ್ಟಗಳ ಹಿನ್ನೆಲೆಯಲ್ಲಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

### ೪.೩.೨.೧. ಬಿಜಾಪುರದ ಆದಿಲ್‌ಶಾಹಿಗಳ ಕಾಲ

ವಿಜಯನಗರೋತ್ತರ ಕಾಲಘಟ್ಟದಲ್ಲಿ ಈ ಪ್ರದೇಶ ಸಂಪೂರ್ಣವಾಗಿ ಆದಿಲ್‌ಶಾಹಿಗಳ ವಶವಾಗಿತ್ತು. ಈ ಕಾಲಾವಧಿಯಲ್ಲಿ ಹಲವು ಸಂಸ್ಥಾನಗಳು ಸ್ವತಂತ್ರವಾಗಿ ತಲೆ ಎತ್ತಿದವು. ಇವು ಆದಿಲ್‌ಶಾಹಿಗಳ ಆಳ್ವಿಕೆಗೆ ಎಂದೂ ಅಡ್ಡಿಯಾಗಿರಲಿಲ್ಲ. ಆದರೆ ಇವು ತಮ್ಮ ತಮ್ಮಲ್ಲಿಯೇ ಕಚ್ಚಾಡುತ್ತಿದ್ದವು. ಇಂತಹ

ರಾಜಕೀಯ ಸ್ಥಿತ್ಯಂತರ ಪ್ರಕ್ರಿಯೆಯ ಸಂದರ್ಭದಲ್ಲಿ ತಮ್ಮ ಪ್ರಾಬಲ್ಯವನ್ನು ಹಿಂದಿನಂತೆ ಉಳಿಸಿಕೊಂಡು ಹೋಗಲು ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಟ ಮಾಡಲೇಬೇಕಾಯಿತು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಪ್ರದೇಶದಲ್ಲಿರುವ ಸಂಸ್ಥಾನಿಕರ ಮಧ್ಯ ದೊಡ್ಡ ಪ್ರಮಾಣದ ಭಿನ್ನಾಭಿಪ್ರಾಯಗಳೇನು ಇರಲಿಲ್ಲ. ಯಾರ ಗೊಡವೆಗೂ ಹೋಗದೆ ತಮ್ಮ ಸಂಸ್ಥಾನಗಳಲ್ಲಿ ಯಾವುದೇ ರೀತಿಯ ಅಹಿತಕರ ಘಟನೆಗಳು ನಡೆಯದಂತೆ ನೋಡಿಕೊಳ್ಳುತ್ತಿದ್ದರು. ಈ ಕಾಲಾವಧಿಯಲ್ಲಿ ಈ ಪ್ರದೇಶದ ಸಂಸ್ಥಾನಿಕರು ಯಾವುದಾದರೂ ಯುದ್ಧಗಳಲ್ಲಿ ಭಾಗವಹಿಸಿದ್ದರೆ ಅದಕ್ಕೆ ಮುಖ್ಯವಾಗಿ ಸುರಪುರ ಸಂಸ್ಥಾನವೇ ಕಾರಣವೆನ್ನಬಹುದು. ಈ ಪ್ರದೇಶಗಳ ಮೇಲೆ ಸುರಪುರದವರು ಹಿಡಿತವನ್ನು ಸಾಧಿಸಿದ್ದರು. ಇವರದು ಒಂದು ರೀತಿಯಲ್ಲಿ ಒಡೆದಾಳುವ ನೀತಿ. ಆದಿಲ್‌ಶಾಹಿಗಳ ಕಾಲಘಟ್ಟದಲ್ಲಿ ಸುರಪುರ ಸಂಸ್ಥಾನದ ಬೆಳವಣಿಗೆಯನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ.

ಈ ಸಂಸ್ಥಾನ ಒಂದು ಕಡೆ ನಿಜಾಮ, ಮತ್ತೊಂದು ಕಡೆ ಮರಾಠರು ಹಾಗೂ ಮತ್ತೊಂದು ಕಡೆ ಆದಿಲ್‌ಶಾಹಿಗಳು, ಈ ಮೂರು ರಾಜ್ಯಗಳ ಮಧ್ಯ ಅನಭಿಷಿಕ್ತ ದೊರೆಯಂತೆ ಆಡಳಿತ ಮಾಡಿದ್ದದು ಸುರಪುರ ಸಂಸ್ಥಾನ. ಇದು ಸೈನಿಕ ಸಾಮರ್ಥ್ಯದ ಹಿನ್ನೆಲೆಯಲ್ಲಿ ಬಲಾಢ್ಯ ಸಂಸ್ಥಾನವಾಗಿ ಗುರುತಿಸಿಕೊಂಡಿತು. ಇಂತಹ ಸಮರ್ಥರನ್ನು ಬಿಟ್ಟು ಕೊಡದ ಬಿಜಾಪುರದವರು ಅನೇಕ ಜಹಾಗೀರ್, ಇನಾಮ್ ಭೂಮಿಗಳನ್ನು, ಗ್ರಾಮಗಳನ್ನು, ದೊಡ್ಡ ಪ್ರದೇಶಗಳನ್ನು ನೀಡಿದ್ದರು. ಅವುಗಳಿಂದ ಬರುವ ಕಂದಾಯದಿಂದ ಮೇಲಿನವರಿಗೆ ನಿಷ್ಠರಾಗಿ, ವಾರ್ಷಿಕ ಪೊಗದಿ ಮತ್ತು ಸೈನಿಕ ಸೇವೆ ಈ ಮೂರು ಅಂಶಗಳನ್ನು ಪಾಲಿಸುತ್ತ ಬಂದ ಸುರಪುರ ಧುತ್ತೆಂದು ಫಿನಿಕ್ಸ್ ಹಕ್ಕಿಯಂತೆ ಮೇಲೆದ್ದಿತು. ಇದರಿಂದಾಗಿ ಸಹಜವಾಗಿ ರಾಯಚೂರು ದೋ-ಅಬ್ ಪ್ರದೇಶದ ಮೇಲೆ ಅಧಿಕಾರವನ್ನು ಸ್ಥಾಪಿಸಿಕೊಂಡಿತು. ಹಾಗಾಗಿ ಆದಿಲ್‌ಶಾಹಿಗಳ ಅಧೀನಕ್ಕಿಂತ ಮೊದಲು ಸುರಪುರದ ಅಧೀನತೆಯನ್ನು ಒಪ್ಪಿಕೊಳ್ಳಬೇಕಿತ್ತು. ಪ್ರತಿಭಟಿಸುವಂತಿರಲಿಲ್ಲ. ಆದರೂ ರಾಜ್ಯದ ಹಿತಕ್ಕೆ ಧಕ್ಕೆಯಾದಾಗ ಪ್ರತಿರೋಧಿಸಿದ ಸಂದರ್ಭಗಳೂ ಉಂಟು. ಈ ಪ್ರದೇಶದ ಸಂಸ್ಥಾನಿಕರು ಪರಸ್ಪರ ಹೋರಾಡಿದ್ದು ತೀರಾ ವಿರಳ, ಆಂತರಿಕ ಕಲಹಗಳೂ ಕಂಡು ಬರುವುದಿಲ್ಲ. ಆದರೆ ಸುರಪುರದ ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸಿದ್ದಂತೂ ಸತ್ಯ. ಹಾಗೆಯೇ ಆದಿಲ್‌ಶಾಹಿ ಮತ್ತು ಸುರಪುರದವರ ಮೇಲಿನ ಸೇಡಿಗಾಗಿ ಅನ್ಯ ರಾಜರು ಈ ಪ್ರದೇಶದ ಮೇಲೆ ದಾಳಿಯನ್ನು ಮಾಡಿದ್ದುಂಟು. ಇದಕ್ಕೆ ಅಧಿಕಾರದ ದಾಹವೇ ಪ್ರಮುಖ ಕಾರಣ. ಇಂತಹ ಅಧಿಕಾರದ ಮತ್ತು ಸಂಪತ್ತಿನ ಬೆನ್ನತ್ತಿ ನಡೆದ ಸುರಪುರ ಸದಾ ಈ ಪ್ರದೇಶದ ಮೇಲೆ ಹದ್ದಿನ ಕಣ್ಣಿಟ್ಟಿತ್ತು. ಸಣ್ಣ ಪುಟ್ಟ ಕಾರಣಗಳಿಂದಾಗಿ ದಾಳಿ ಮಾಡುತ್ತಿತ್ತು. ಇಂತಹ ಸಂದರ್ಭದಲ್ಲಿ ಸುರಪುರದ ವಿರುದ್ಧ ಈ ಪ್ರದೇಶದ ಸಂಸ್ಥಾನಗಳು ಹೋರಾಡುತ್ತಿದ್ದವು. ಆದರೆ ಗೆದ್ದದ್ದು ಕಡಿಮೆ, ಸೋತದ್ದೇ ಹೆಚ್ಚು. ಈ ಪ್ರದೇಶದಲ್ಲಿ ಸುರಪುರದವರಿಗೆ ಹೆಚ್ಚು ಪೈಪೋಟಿ ನೀಡಿದ್ದ ಸಂಸ್ಥಾನವೆಂದರೆ ದೇವದುರ್ಗ ಸಂಸ್ಥಾನ. ಕೆಲವು ಸಲ ಸುರಪುರವನ್ನು ನಿಯಂತ್ರಿಸುವಷ್ಟು ಸಾಮರ್ಥವನ್ನು ಹೊಂದಿತ್ತು. ಇದಲ್ಲದೆ ಸುರಪುರದವರಿಗೆ ದೇವದುರ್ಗ ಸಂಸ್ಥಾನದ್ದೇ ಭಯವಿದ್ದಿತ್ತು. ಗುಡಗುಂಟಿಯಂತೂ ಸಹೋದರ ಸಂಬಂಧಿ ಸಂಸ್ಥಾನ ವಾಗಿತ್ತು. ಉಳಿದವು ಸುರಪುರದ ಅಧೀನತೆಯನ್ನು ಒಪ್ಪಿಕೊಂಡು ಹೋಗುತ್ತಿದ್ದವು. ಆದರೆ ದೇವದುರ್ಗ ಸಂಸ್ಥಾನ ಮಾತ್ರ ಅಧೀನತೆಯನ್ನು ಒಪ್ಪಿಕೊಳ್ಳದೆ ಪ್ರಶ್ನೆ ಮಾಡುತ್ತಿತ್ತು. ಪ್ರಬಲ ಪೈಪೋಟಿಯಾಗಿ ದೇವದುರ್ಗ ಗುರುತಿಸಿಕೊಂಡಿತ್ತು. ಹಾಗಾಗಿ ಪದೇಪದೇ ಈ ಪ್ರದೇಶದ ಮೇಲೆ ದಾಳಿ ಮಾಡಲಾಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೬೬೫-೬೬ರಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಈ ಪ್ರದೇಶದ ಮೇಲೆ ರಾಜ್ಯದ ಭದ್ರತೆಯನ್ನು ಸರಿಪಡಿಸುವ, ಪ್ರಭುತ್ವವನ್ನು ಸಾಧಿಸುವ ಹಾಗೂ ಹತೋಟಿಯಲ್ಲಿಟ್ಟುಕೊಳ್ಳುವ ಧೋರಣೆಯ ಹಿನ್ನೆಲೆಯಲ್ಲಿ ಇಮ್ಮಡಿ ಅಲಿ ಆದಿಲ್‌ಶಾಹನು ದಾಳಿ ಮಾಡಿರುವುದಾಗಿ ಕಪಟರಾಳ ಕೃಷ್ಣರಾಯ ತಿಳಿಸುತ್ತಾರೆ(ಧ್ರುವನಾರಾಯಣ ೨೦೦೫:೨೨). ಈ ಒಂದು ಕಾರಣದಿಂದ ಆದಿಲ್‌ಶಾಹಿಗಳು ರಾಜ್ಯದ ಹಿತದೃಷ್ಟಿಯಿಂದ ಈ ಪ್ರದೇಶದ ಮೇಲೆ ದಾಳಿ ಮಾಡಿರುವುದು ಕಂಡುಬರುತ್ತದೆ. ಕ್ರಿ.ಶ.೧೬೭೪ರಲ್ಲಿ ಕನಕಗಿರಿಯ ಇಮ್ಮಡಿ ಉಡಚ ನಾಯಕನು ದೇವದುರ್ಗದ ಕಿಲ್ಲೆಯ ಕೆಳಗಿನ ಪ್ರದೇಶಗಳ ಮೇಲೆ ದಾಳಿ ಮಾಡಿ ವಶಪಡಿಸಿಕೊಳ್ಳುತ್ತಾನೆ(ಧ್ರುವನಾರಾಯಣ ೨೦೦೫:೨೯). ಇದಕ್ಕೆ ಬಲವಾದ ಕಾರಣವೂ ಕಂಡುಬರುತ್ತದೆ. ಅದೇಂದರೆ ಆದಿಲ್‌ಶಾಹಿಗಳ ಸರ್ದಾರರಾದ ದಖನಿ ಮತ್ತು ಪಠಾಣ ಎಂಬ ಎರಡು ಬಣಗಳ ನಡುವಿನ ಆಂತರಿಕ ಕಲಹ ರಾಜ್ಯವ್ಯಾಪಿಯಾಗಿ ಪಸರಿಸಿಕೊಂಡಿತ್ತು. ಇಂತಹ ಸಂದರ್ಭವನ್ನು ಬಳಸಿಕೊಂಡ ಕನಕಗಿರಿ ನಾಯಕರು ಪಠಾಣರ ಪಕ್ಷ ಸೇರಿ ಆದಿಲ್‌ಶಾಹಿಗಳ ವಿರುದ್ಧ ಸೇಡು ತೀರಿಸಿಕೊಳ್ಳುವುದು ಮೂಲ ಉದ್ದೇಶವಾಗಿತ್ತು ಎಂಬುದಾಗಿ ತಿಳಿಯಬೇಕಾಗಿದೆ(ಆಲ್ಕೋಡ ೨೦೧೨: ೧೫೫-೧೫೯).

ಕನಕಗಿರಿಯವರ ದಾಳಿಯ ನಂತರ ಈ ಪ್ರದೇಶವನ್ನು ಸುರಪುರದ ಪಾಮನಾಯಕ ಇನಾಮ್ ಪಡೆದು ವರ್ಷಕ್ಕೆ ೫೦೦೦ ನಜರಾಣಿ ಕಟ್ಟುವ ಕರಾರಿಗೆ ಒಪ್ಪಿಕೊಂಡಿದ್ದನು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಕನಕಗಿರಿ, ದೇವದುರ್ಗದ ಮೇಲೆ ದಾಳಿ ಮಾಡಲಿಲ್ಲ. ಬದಲಾಗಿ ಕಿಲ್ಲೆಯ ಕೆಳಗಿನ ಹಳ್ಳಿಗಳ ಮೇಲೆ ದಾಳಿ ಮಾಡಿರುವುದನ್ನು ಗಮನಿಸಬಹುದು. ಆ ಹಳ್ಳಿಗಳು ದೇವದುರ್ಗಕ್ಕೆ ಹತ್ತಿರವಾಗಿದ್ದು, ಆದಿಲ್‌ಶಾಹಿಗಳ ಅಧೀನದಲ್ಲಿದ್ದವು. ಅವನ್ನು ತನ್ನ ಹತೋಟಿಗೆ ತೆಗೆದುಕೊಳ್ಳಬೇಕೆಂಬ ಆಕಾಂಕ್ಷೆಯಿಂದಾಗಿ ಇನಾಮ್ ಪಡೆದಿದೆ. ಸುರಪುರ ಮತ್ತು ಕನಕಗಿರಿಯವರ ಮಧ್ಯೆ ಯಾವುದೇ ವೈರತ್ವವಿರಲಿಲ್ಲ. ರಾಜಕೀಯ ಅಸ್ತಿತ್ವವೇ ಇದಕ್ಕೆ ಕಾರಣವೆನ್ನಬಹುದು. ಈ ಪ್ರದೇಶದಲ್ಲಿನ ಕೆಲವು ಹಳ್ಳಿಗಳನ್ನು ಇನಾಮ್ ಪಡೆದದ್ದು, ಸುರಪುರವನ್ನು ಮತ್ತಷ್ಟು ಬಲಶಾಲಿಯಾಗುವಂತೆ ಮಾಡಿತು. ಬಿಜಾಪುರ ಆದಿಲ್‌ಶಾಹಿಗಳಿಂದ ದೇವದುರ್ಗ ಕಿಲ್ಲೆಯನ್ನು ಇನಾಮ್ ಆಗಿ ಪಡೆದದ್ದು, ದೇವದುರ್ಗ ಸುರಪುರದ ನೇರ ಆಳ್ವಿಕೆಗೆ ಒಳಗುಮಾಡಿಕೊಂಡಿತು. ಇದಕ್ಕೆ ದೇವದುರ್ಗ(೪೬)-೧೬೯೦ರ ಕೇಶವನಾಯಕನಿಂದ ಹೊರಡಿಸಲಾದ ಶಾಸನ ದೇವದುರ್ಗ ಸುರಪುರದ ಅಧೀನ ಸಂಸ್ಥಾನವಾಗಿತ್ತೆಂಬುದನ್ನು ತಿಳಿಸುತ್ತದೆ. ಈ ಸಂದರ್ಭದಲ್ಲಿ ರಾಜಕೀಯ ಅಸ್ತಿತ್ವವನ್ನು ಹೊಂದುವುದರ ಜೊತೆಗೆ ಭೀತಿಯನ್ನು ಎದುರಿಸುತ್ತಿರುವುದು ಕಂಡುಬರುತ್ತದೆ. ಈ ಶಾಸನದ ಹಿನ್ನೆಲೆಯಲ್ಲಿ ದೇವದುರ್ಗ ಯಾವುದೇ ಪ್ರತಿಭಟನೆ ತೋರದೆ ಅಧೀನತೆಯನ್ನು ಒಪ್ಪಿಕೊಂಡಂತೆ ತೋರುತ್ತದೆ. ಅಷ್ಟೊಂದು ಪ್ರಾಬಲ್ಯ ಸಾಧಿಸಿದ ಸುರಪುರ ಅಧೀನ ಸಂಸ್ಥಾನಗಳೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿತು. ದೇವದುರ್ಗ ಸಂಸ್ಥಾನದೊಂದಿಗೆ ಹೊಂದಿದಷ್ಟು ಸಂಬಂಧವನ್ನು ಬೇರೆ ಸಂಸ್ಥಾನಗಳೊಂದಿಗೆ ಹೊಂದಿರಲಿಲ್ಲ ಎಂಬುದು ಕೂಡಾ ಗಮನಾರ್ಹ. ಈ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿನ ಸಂಸ್ಥಾನಗಳಲ್ಲಿ ಯಾವುದೇ ಅಂತಃ ಕಲಹಗಳಿಲ್ಲದೆ ತಮ್ಮಷ್ಟಕ್ಕೆ ತಾವೇ ತಮ್ಮ ರಾಜ್ಯಗಳ ಗಡಿಗಳನ್ನು ರಕ್ಷಿಸಿಕೊಂಡರೇ ಹೊರತು, ಗಡಿಯನ್ನು ವಿಸ್ತರಿಸಲಿಲ್ಲವೆಂಬುದು ಸರ್ವವಿದಿತ. ಈ ರೀತಿಯಾಗಿ ಆದಿಲ್‌ಶಾಹಿಗಳ ಕಾಲಘಟ್ಟದಲ್ಲಿ ಇಲ್ಲಿನ ಸಂಸ್ಥಾನಗಳು ಸ್ವತಂತ್ರವಾಗಿ ತಮ್ಮಷ್ಟಕ್ಕೆ ತಾವೇ ಆಳ್ವಿಕೆಯನ್ನು ಮಾಡಿರುವುದಾಗಿ ತಿಳಿದುಬರುತ್ತದೆ.

ಆದಿಲ್‌ಶಾಹಿಗಳ ಕಾಲಘಟ್ಟದಲ್ಲಿ ಮಹತ್ವದ ಬದಲಾವಣೆಗಳನ್ನು ಕಾಣಬಹುದಾಗಿದೆ. ಆದಿಲ್‌ಶಾಹಿಗಳು ಸ್ವತಂತ್ರವನ್ನು ಘೋಷಿಸಿಕೊಂಡ ಮೇಲೆ ರಾಜ್ಯದ ಹಿತದೃಷ್ಟಿಯಿಂದ ಆಡಳಿತದಲ್ಲಿ ಸುಧಾರಣೆಯನ್ನು ತರಲು ಬಯಸಿದರು. ಯೂಸುಫ್ ಆದಿಲ್‌ಶಾಹನು ಬಹಮನಿ ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದ ತರಫ್ ಮತ್ತು ತರಫ್‌ದಾರ ಪದ್ಧತಿಯನ್ನು ರದ್ದು ಪಡಿಸಿದನು. ಇದರ ಬದಲಾಗಿ ಜಾಗೀರ್ ಮತ್ತು ಜಾಗೀರ್‌ದಾರ ಪದ್ಧತಿಯನ್ನು ಜಾರಿಗೆ ತಂದನು. ಇದು ಆಡಳಿತದ ಸ್ವರೂಪದಲ್ಲಿ ಬದಲಾವಣೆಯೇನೂ ಇರದೆ ಪದಗಳ ಬದಲಾವಣೆಯಷ್ಟೆ ಆಗಿದೆ.

ಜಹಗೀರ್ ಪದ್ಧತಿಯನ್ನು ಬಿಜಾಪುರದ ಆದಿಲ್‌ಶಾಹಿಗಳು ಮೊದಲಿಗೆ ಜಾರಿಗೆ ತಂದರು. ಆಗ ಜಹಾಗೀರು ಪಡೆದವರು ಗುಂತಗೋಳ ಮತ್ತು ಗುಡಗುಂಟಿ ಸಂಸ್ಥಾನಿಕರು. ಇವರ ಸಮಕಾಲೀನರಾಗಿದ್ದ ಮುಸ್ಲಿಂ ಜಹಗೀರ್‌ದಾರರು ಜಹಗೀರ್ ಪಡೆದದ್ದುಂಟು. ಅವರು ಸಿಂಧನೂರು ಮತ್ತು ಮಾನವಿ ತಾಲೂಕಿನಲ್ಲಿ ಕಂಡುಬರುತ್ತಾರೆ. ಆದರೆ ಇವರ ಅಧೀನದಲ್ಲಿ ಅನೇಕ ನಾಡಗೌಡರು ಜಹಗೀರನ್ನು ಪಡೆದು ಆಡಳಿತ ಮಾಡಿದ್ದುಂಟು. ಇವರು ನೇರವಾಗಿ ಆದಿಲ್‌ಶಾಹಿಗಳ ಅಧೀನಕ್ಕೆ ಒಳಪಟ್ಟಿರಲಿಲ್ಲ, ಬದಲಾಗಿ ಗುಡಗುಂಟಿ ಮತ್ತು ಸುರಪುರ ಸಂಸ್ಥಾನಗಳ ಅಧೀನದಲ್ಲಿದ್ದವು. ಅವನ್ನು ಗುರುತಿಸುವಲ್ಲಿ ಶಾಶ್ವತಸ್ವಾಮಿ ಮುಕ್ಕುಂದಿಮಠ ಹಾಗೂ ಚನ್ನಬಸವ ಹಿರೇಮಠ ಅವರು ಪ್ರಯತ್ನಿಸಿರುವುದು ಕಂಡುಬರುತ್ತದೆ. ಚನ್ನಬಸವ ಹಿರೇಮಠ ಅವರು ಗೆಜ್ಜಲಗಟ್ಟಿ, ಉದ್ಬಾಳ, ಬೆಳ್ಳಿಗನೂರು, ಪೋತ್ನಾಳ, ಪಾಮನಕಲ್ಲೂರು, ಜೀನೂರು, ಜವಳಗೇರಿ, ಮೆದಕಿನಾಳ ಎಂಬ ನಾಡಗೌಡ ಮನೆತನಗಳನ್ನು ಕ್ಷೇತ್ರಕಾರ್ಯದ ಮೂಲಕ ಗುರುತಿಸಿರುವುದು ಕಂಡುಬರುತ್ತದೆ. ಹಾಗೆಯೇ ಶಾಶ್ವತಸ್ವಾಮಿ ಮುಕ್ಕುಂದಿ ಮಠ ಅವರು ಈ ಮೇಲಿನವನ್ನು ಗುರುತಿಸುತ್ತಾ ಅವುಗಳ ಜೊತೆಗೆ ಜಾಲವಾಡಗಿ, ಉಮಲೂಟಿ ಹಾಗೂ ಮುಸ್ಲಿಂ ಜಹಗೀರ್‌ದಾರರಾದ ಮಲ್ಲಾಪುರ, ಗೋಮರ್ಸಿ, ಸಾಲಗುಂದೆ ಹಾಗೂ ಪನ್ನೂರು ಎಂಬ ನಾಲ್ಕು ಮುಸ್ಲಿಂ ಜಹಗೀರ್‌ದಾರರನ್ನು ಗುರುತಿಸಿದರು. ಮುಂದುವರೆದು ಮಾನ್ವಿ, ಮುದಗಲ್, ರೌಡಲಬಂಡಿ, ಕಾಳಾಪುರ, ಚಿಕ್ಕನಗನೂರು, ಅನ್ವರಿ, ಸರ್ಜಾಪುರ, ಎನ್.ಗಣೇಕಲ್, ಗಣಜಲಿ ಮತ್ತು ಮದರಕಲ್ ನಾಡಗೌಡ ಮನೆತನಗಳನ್ನು ಗುರುತಿಸಲಾಗಿದೆ. ಇವರೆಲ್ಲ ಲಿಂಗಾಯತ ಸಮುದಾಯಕ್ಕೆ ಸೇರಿದವರೆಂದು ತಿಳಿಸುತ್ತಾರೆ(ಮುಕ್ಕುಂದಿ ಮಠ ೨೦೧೦: ೬೦). ಈ ನಾಡಗೌಡ ಮನೆತನಗಳಲ್ಲಿ ಕೆಲವು ೧-೨ ಹಳ್ಳಿಗಳನ್ನೂ ಹೊಂದಿದ್ದರೆ, ಇನ್ನು ಕೆಲವು ೧-೫ ಗ್ರಾಮಗಳನ್ನು ಹೊಂದಿರುತ್ತವೆ. ಇನ್ನೂ ಕೆಲವು ೧೫-೩೦ ಹಳ್ಳಿಗಳನ್ನು ಹೊಂದಿ ಆಡಳಿತ ನಿರ್ವಹಣೆ ಮಾಡುತ್ತಿದ್ದವು. ಇವರು ಆಳ್ವಿಕೆ ಮಾಡಿದವರಲ್ಲ, ಆಡಳಿತದ ಭಾಗವಾಗಿದ್ದವರು ಎಂಬುದು ಗಮನಿಸಬೇಕಾದುದು.

ಚನ್ನಬಸವ ಹಿರೇಮಠ ಮತ್ತು ಶಾಶ್ವತಸ್ವಾಮಿ ಮುಕ್ಕುಂದಿಮಠ ಅವರು ಈ ಕುರಿತು ವೈಭವೀಕರಿಸಿದಂತೆ ಕಾಣುತ್ತದೆ ಮತ್ತು ಹಿರೇಮಠ ಅವರು ಗೆಜ್ಜಲಗಟ್ಟಿಯನ್ನು ವಿಜಯನಗರ ಸಾಮ್ರಾಜ್ಯದ ಸಮಕಾಲೀನ ಮನೆತನವೆಂದು ಸಮೀಕರಿಸಲು ಪ್ರಯತ್ನಿಸಿರುವುದು, ನಾಡಗೌಡ ಮನೆತನಗಳನ್ನು ಸಂಸ್ಥಾನಗಳೆಂದು ಕರೆಯುವ ಪ್ರಯತ್ನ ಕೂಡ ಅತಿಶಯೋಕ್ತಿ ಎನಿಸುತ್ತದೆ. ನಾರಾಯಣಪ್ಪ ಅವರು ಭೂಮಾಲಿಕ ವ್ಯವಸ್ಥೆಗೆ ಗೆಜ್ಜಲಗಟ್ಟಾ ಮತ್ತು ಜವಳಗೇರಾ ನಾಡಗೌಡರನ್ನು ಉದಾಹರಿಸುತ್ತಾರೆ. ಇವರು ಸಾವಿರಾರು ಎಕರೆ ಭೂಮಿಯನ್ನು ಹೊಂದಿ ಸ್ಥಳೀಯ ಜನರ ಮೇಲೆ ಹತೋಟಿ ಸಾಧಿಸಿರುವ ಬಗ್ಗೆ ಗಮನಸೆಳೆಯುತ್ತಾರೆ. ಭೂಮಾಲಿಕರ ದಬ್ಬಾಳಿಕೆ, ದೌರ್ಜನ್ಯಗಳಿಗೆ ಮಿತಿಯಿರಲಿಲ್ಲವೆಂದು ಹೇಳುತ್ತಾ, "ನಿಜಾಂ ಕಾಲದಲ್ಲಿ ಈ ಭೂಮಾಲಿಕ ವರ್ಗದ ಕ್ರೌರ್ಯ ಎಷ್ಟಿತ್ತೆಂದು ಅಳೆಯಲಾಗದು. ಇದೇ

ಮನೆತನಗಳು ಸ್ವಾತಂತ್ರ್ಯಪೂರ್ವ ನಿಜಾಂ ಆಡಳಿತದಲ್ಲಿ ಇದ್ದವು ಮತ್ತು ಈಗಲೂ ಇವೆ" ಎಂದು ತಿಳಿಸುತ್ತಾರೆ(ನಾರಾಯಣಪ್ಪ ೨೦೧೨: ೧೫೩-೧೬೫). ಈ ಎಲ್ಲ ಸಂಗತಿಗಳಿಂದ ಜಹಗೀರ್‌ದಾರರ ದಬ್ಬಾಳಿಕೆಗೆ ಒಳಗಾದ ಸಂದರ್ಭಗಳು ಕಂಡುಬರುತ್ತವೆ.

**೪.೩.೨.೨. ಮೊಗಲರ ಕಾಲ**

ಮೊಗಲರ ಬಹುದಿನಗಳ ಕನಸು ದಖ್ಖನ್ ಮೇಲೆ ಅಧಿಪತ್ಯ ಸ್ಥಾಪನೆ ಮಾಡಬೇಕೆಂಬುದಾಗಿತ್ತು. ಅದು ಬಾಬರನ ಕಾಲದಿಂದ ಹಿಡಿದು ಔರಂಗಜೇಬನ ಕಾಲದವರೆಗೆ ಎಲ್ಲರೂ ಬಿಜಾಪುರ ಮತ್ತು ದಖ್ಖನ್ ಪ್ರಾಂತ್ಯವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರೂ ಸಾಧ್ಯವಾಗಿರಲಿಲ್ಲ. ಔರಂಗಜೇಬನ ಕಾಲಾವಧಿಯಲ್ಲಿ ದೆಹಲಿ ಚಕ್ರವರ್ತಿಗಳ ಆರಂಭದ ಕನಸು ನನಸಾದಂತಾಯಿತು. ಔರಂಗಜೇಬನು ಕ್ರಿ.ಶ.೧೬೮೬ ಸೆಪ್ಟೆಂಬರ್ ೧೨ರಂದು ಬಿಜಾಪುರ ಕೋಟೆಗೆ ಮುತ್ತಿಗೆ ಹಾಕಿ ವಶಪಡಿಸಿಕೊಂಡನು (ಷೇಕ್‌ಅಲಿ ೧೯೯೭: ೧೮೨-೧೮೬). ಬಿಜಾಪುರ ಮೊಗಲರ ಕೈಗೆ ಸೇರುತ್ತದೆ. ಆದರೆ ಸುರಪುರ ಮತ್ತು ರಾಯಚೂರು ದೋ-ಅಬ್ ಪ್ರದೇಶ ಮೊಗಲರ ವಶವಾಗದೆ ಸ್ವತಂತ್ರವಾಗಿದ್ದವು. ಈ ವಿಚಾರವನ್ನು ತಿಳಿದ ಔರಂಗಜೇಬನು ಕ್ರಿ.ಶ.೧೭೦೫ರಲ್ಲಿ ಸುರಪುರದ ಮೇಲೆ ದಾಳಿ ಮಾಡಿದನು. ಈ ಸಂದರ್ಭದಲ್ಲಿ ಸುರಪುರದ ಅರಸ ಪೀತಾಂಬರಿ ಬಹರಿ ಪಿಡ್ಡನಾಯಕ ತಪ್ಪಿಸಿಕೊಂಡು ದಕ್ಷಿಣಾಭಿಮುಖವಾಗಿ ಪರಾರಿಯಾಗಿದ್ದನು. ಈ ಸಮಯದಲ್ಲಿ ಔರಂಗಜೇಬನು ಸ್ಥಳೀಯವಾಗಿರುವ ಸಂಸ್ಥಾನಗಳಿಗೆ ಕರೆಕೊಟ್ಟು ಸೂಕ್ತ ಅಧಿಕಾರವನ್ನು ಕಲ್ಪಿಸುತ್ತೇನೆಂಬ ಭರವಸೆಯ ಹಿನ್ನೆಲೆಯಲ್ಲಿ ಸುರಪುರದ ಅರಸನನ್ನು ಹಿಡಿದು ತರಬೇಕೆಂದು ಆಜ್ಞೆಮಾಡಿದನು. ಇಂತಹ ಮಹತ್ವದ ಸಮಯಕ್ಕಾಗಿ ಕಾಯುತ್ತಿದ ದೇವದುರ್ಗ ಸಂಸ್ಥಾನ ತನ್ನ ಎಲ್ಲ ಸಂಬಂಧಗಳಿಗೆ ಕಡಿವಾಣ ಹಾಕಿ ಸುರಪುರದ ಸಾಮರ್ಥ್ಯ ಕಡಿಮೆ ಮಾಡಲು ಹಾಗೂ ದೇವದುರ್ಗದ ಕೀರ್ತಿ ಪತಾಕೆಯನ್ನು ಹಾರಿಸಲು ಸಜ್ಜಾಯಿತು. ಸ್ವಜಾತಿ ಎಂಬ ಪಕ್ಷಪಾತ ಮರೆತು ಮೊಗಲರೊಂದಿಗೆ ಕೈಜೋಡಿಸಿದ ಈ ಸಂಸ್ಥಾನದ ಅರಸ ವಾಸುದೇವನಾಯಕ ಕೃಷ್ಣಾನದಿ ತೀರದ ವೀರಗೋಟದಲ್ಲಿ ಸುರಪುರದೊಂದಿಗೆ ಯುದ್ಧ ಮಾಡಿ ಸೋಲನ್ನನುಭವಿಸಿದನು. ಇಂತಹ ಸಂದರ್ಭದಲ್ಲಿ ಮೊಗಲರಿಗೆ ಬೆಂಬಲ ಸೂಚಿಸಿದ್ದಕ್ಕಾಗಿ ಔರಂಗಜೇಬನ ಮಗ ಶಾಹಾ ಆಲಂ ಎಂಬುವವನು ಅರಸನಿಗೆ ರಾಯಚೂರು ಪ್ರದೇಶವನ್ನು ಜಹಾಗೀರ್ ಆಗಿ ನೀಡಿದನು(ಆಲ್ಕೋಡ ೨೦೧೨: ೩೩-೩೪).

ದೇವದುರ್ಗದ ಸಾಮರ್ಥ್ಯವನ್ನು ಕಂಡ ಸುರಪುರ ವೈವಾಹಿಕ ಸಂಬಂಧವನ್ನು ಬೆಳೆಸುವುದರ ಮೂಲಕ ಪುನ: ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತು. ಸುರಪುರಕ್ಕೆ ಪ್ರಬಲ ಪೈಪೋಟಿ ನೀಡಿದ ಹೋರಾಟ ಮಾಡಿದ ಏಕೈಕ ಸಂಸ್ಥಾನವಾಗಿ ದೇವದುರ್ಗ ರೂಪಗೊಂಡಿತ್ತು. ಇಂತಹ ಸಂದರ್ಭದಲ್ಲಿ ಗುಡಗುಂಟಿ ದೇವದುರ್ಗವನ್ನು ವಿರೋಧಿಸಿತು, ಸಹೋದರ ಸಂಸ್ಥಾನವಾಗಿದ್ದ ಸುರಪುರಕ್ಕೆ ಬೆಂಬಲ ನೀಡಿತು. ಹಾಗೆಂದು ದೇವದುರ್ಗದೊಂದಿಗೆ ಹೋರಾಡಿರುವುದು ಕಂಡುಬರುವುದಿಲ್ಲ. ಬಲಿಷ್ಠ ಸಂಸ್ಥಾನ ಸುರಪುರದ ವಿರುದ್ಧ ಮೊಗಲರ ಕಾಲಾವಧಿಯಲ್ಲಿ ಹೋರಾಡಿ, ಮೊಗಲರಿಂದ ರಾಯಚೂರು ಪ್ರಾಂತ್ಯವನ್ನು ಜಹಗೀರು ಪಡೆದು ಅಧಿಕಾರ ಸ್ಥಾಪನೆ ಮಾಡಿರುವುದು ಗಮನಾರ್ಹ ಅಂಶವಾಗಿದೆ.

ಮೊಗಲರು ಈ ಪ್ರದೇಶದಲ್ಲಿ ಸ್ವಲ್ಪ ಕಾಲ ಸ್ವಾಯತ್ತತೆಯನ್ನು ಕಲ್ಪಿಸಿದರು. ಸುರಪುರ ಸಂಸ್ಥಾನದ ದಬ್ಬಾಳಿಕೆಯ ವಿರುದ್ಧ ದೇವದುರ್ಗ ಪ್ರತಿಭಟಿಸಿತು. ಮೊಗಲರ ಬೆಂಬಲ ಪಡೆದು ಹೋರಾಟ ಮಾಡಿದ ದೇವದುರ್ಗ ತನ್ನ ರಾಜಕೀಯ ಅಸ್ತಿತ್ವ ಉಳಿಸಿಕೊಳ್ಳುವುದರ ಜೊತೆಗೆ ವರ್ಚಸ್ಸು

ಹೆಚ್ಚಿಸಿಕೊಂಡಿತು. ದೇವದುರ್ಗದ ವಾಸುದೇವನಾಯಕನ ಮೂಲಕ ಈ ಸಂಸ್ಥಾನದ ಕೀರ್ತಿ ದೆಹಲಿ ಸುಲ್ತಾನರಿಗೆ ಮನವರಿಕೆಯಾಯಿತು. ಈ ಕಾಲಾವಧಿಯಲ್ಲಿ ದೇವದುರ್ಗ ನಿರ್ಣಾಯಕ ಮತ್ತು ಆಯಕಟ್ಟಿನ ಕೇಂದ್ರವಾಗಿ ರೂಪಗೊಂಡಿತ್ತು.

**೪.೩.೨.೩. ಹೈದರಾಬಾದ್ ನಿಜಾಮರ ಕಾಲ**

ಹೈದರಾಬಾದ್ ನಿಜಾಮರ ಸಂಸ್ಥಾನ ಭಾರತದ ಸಂದರ್ಭದಲ್ಲಿ ಹೆಚ್ಚು ಚರ್ಚೆಗೆ ಗ್ರಾಸವಾದ ಸಂಸ್ಥಾನವಾಗಿತ್ತು. ಇಂದಿನ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶ ರಾಜ್ಯಗಳ ಹದಿನಾರು ಜಿಲ್ಲೆಗಳನ್ನು ಈ ಸಂಸ್ಥಾನ ಹೊಂದಿತ್ತು. ಇಲ್ಲಿಯವರೆಗೆ ನಡೆದ ಅಧ್ಯಯನಗಳು ನಿಜಾಮರನ್ನು ವಿರೋಧಿ ನೆಲೆಯಲ್ಲೇ ನೋಡಿರುವುದೇ ಹೆಚ್ಚು. ಆದರೆ ನಿಜಾಮರನ್ನು ಅರ್ಥ ಮಾಡಿಕೊಂಡಿರುವುದೇ ವಿರಳ. ಈ ಹಿನ್ನೆಲೆಯಲ್ಲಿ ಕಪಟರಾಳ ಕೃಷ್ಣರಾಯ, ಬಿ.ಕೃಷ್ಣಮಾಚಾರ್ಯ, ಬಿ.ಸಿ.ಮಹಾಬಲೇಶ್ವರಪ್ಪ, ಗೋಪಾಲರಾವ್ ಹೇಜೀಬ್, ಅಮರೇಶ ನುಗಡೋಣಿ, ಪರ್ವಿನ್ ಸುಲ್ತಾನಾ ಮುಂತಾದವರ ಬರಹಗಳನ್ನು ಬಳಸಿಕೊಳ್ಳಲಾಗಿದೆ.

ಹೈದರಾಬಾದ್ ನಿಜಾಮರ ಕಾಲದಲ್ಲಿ ಈ ಪ್ರದೇಶದಲ್ಲಿನ ಸಂಸ್ಥಾನಿಕರು ರಾಜಕೀಯ ಅಸ್ತಿತ್ವಕ್ಕಾಗಿ ಹೋರಾಡಿರುವುದು ಕಂಡುಬರುತ್ತದೆ. ಮೊಗಲರ ಮಾಂಡಳಿಕ ಅಥವಾ ಸುಬೇದಾರನಾಗಿ ಮೀರ್‌ಕಮರುದ್ದೀನ್ ಅಥವಾ ನಿಜಾಮ್ ಉಲ್ ಮುಲ್ಕ ಅಸಫ್ ಜಹಾ ಬಿಜಾಪುರಕ್ಕೆ ನೇಮಕಗೊಂಡನು. ನಂತರ ಕೆಲಕಾಲ ಬೇರೆ ಬೇರೆ ಕಡೆ ಸುಬೇದಾರನಾಗಿ ಸೇವೆ ಸಲ್ಲಿಸಿ, ಕೊನೆಗೆ ಇವನು ಹೈದರಾಬಾದ್‌ನಲ್ಲಿ ಮೊಗಲರ ಪ್ರತಿನಿಧಿಯಾಗಿ ಆಳ್ವಿಕೆ ಮಾಡುತ್ತಿದ್ದನು. ಕ್ರಿ.ಶ. ೧೬೮೬ರಲ್ಲಿ ಬಿಜಾಪುರ ರಾಜ್ಯ ಅವನತಿಯಾದ ನಂತರ ರಾಯಚೂರು ದೋ-ಅಬ್ ಪ್ರದೇಶ ಮೊಗಲರ ವಶವಾಯಿತು. ಆಗ ಔರಂಗಜೇಬನು ಈ ಪ್ರದೇಶದಲ್ಲಿ ಅಧಿಕಾರವನ್ನು ಸ್ಥಾಪಿಸಬೇಕೆಂಬ ಹಿನ್ನೆಲೆಯಲ್ಲಿ ಒಬ್ಬ ಗುಲಾಮನನ್ನು ಈ ಪ್ರದೇಶದ ಅಧಿಕಾರಿಯನ್ನಾಗಿ ನೇಮಿಸಿದನು. ಇದರ ಉಸ್ತುವಾರಿಯನ್ನು ತಕೂಕ್‌ಸಿಂಗ್ ಎಂಬುವವನಿಗೆ ಕ್ರಿ.ಶ. ೧೬೯೯-೧೭೦೦ ಕಾಲಾವಧಿಯಲ್ಲಿ ವಹಿಸಲಾಗಿತ್ತೆಂದು ಜಲದುರ್ಗ(೧೪)-೧೬೯೯-೧೭೦೦ರ ಶಾಸನದಿಂದ ತಿಳಿದುಬರುತ್ತದೆ. ತದನಂತರ ದೇವದುರ್ಗದ ವಾಸುದೇವನಾಯಕನಿಗೆ ರಾಯಚೂರು ಪ್ರಾಂತ್ಯವನ್ನು ಜಹಗೀರಾಗಿ ಔರಂಗಜೇಬನ ಮಗ ನೀಡಿದನು. ಮೊಗಲರು ದಿಲ್ಲಿಯಲ್ಲಿ ಅಂತಃಕಲಹದ ಹಿನ್ನೆಲೆಯಲ್ಲಿ ಔರಂಗಜೇಬ್ ಮತ್ತು ಶಹಾ ಆಲಂ ದೆಹಲಿ ಸೇರಿದರು. ಅವರ ಆಡಳಿತವನ್ನು ನಿರ್ವಹಿಸಲು ಬಿಜಾಪುರಕ್ಕೆ ಸುಭೇದಾರನಾಗಿದ್ದ ಮೀರ್ ಕಮರುದ್ದೀನ್ ಕಾಲಾನಂತರದಲ್ಲಿ ಹೈದರಾಬಾದ್‌ನ್ನು ರಾಜಧಾನಿ ಕೇಂದ್ರವನ್ನಾಗಿಸಿಕೊಂಡು ಆಳ್ವಿಕೆಗೆ ಬಂದನು. ಆಗ ರಾಯಚೂರು ದೋ-ಅಬ್ ಪ್ರದೇಶ ನಿಜಾಮನ ವಶಕ್ಕೆ ಸೇರಿತು. ಹೀಗೆ ಅಧಿಕಾರವನ್ನು ಪಡೆದ ಮೊದಲನೆಯ ಅಸಫ್ ಜಹಾನು ಪ್ರಬಲನಾಗಿದ್ದನು. ಸಹಜವಾಗಿಯೇ ಮೊಗಲರ ಆಡಳಿತ ಪ್ರದೇಶಗಳು ನಿಜಾಮನ ಅಧೀನಕ್ಕೆ ದೊರೆತಿದ್ದವು.

ನಿಜಾಮ್ ಉಲ್‌ಮುಲ್ಕ್ ಅಸಫ್‌ಜಹಾನು ೧೭೨೦ರ ವೇಳೆಗೆ ಪ್ರಭಾವಿಯಾಗಿ ಗುರುತಿಸಿಕೊಂಡಿದ್ದನು. ಇಂತಹ ಸಂದರ್ಭದಲ್ಲಿ ಈ ಪ್ರದೇಶದಲ್ಲಿನ ಸಂಸ್ಥಾನಿಕರು ಅಧೀನತೆಯನ್ನು ಒಪ್ಪಿಕೊಂಡಿದ್ದರು. ನಿಜಾಮನಿಗೆ ವಾರ್ಷಿಕ ಕಪ್ಪವನ್ನು ಸಲ್ಲಿಸುತ್ತಿದ್ದರು. ದೇವದುರ್ಗ ಮೊಗಲರ ಪರವಾಗಿದ್ದರಿಂದ ಅದು ಸಹಜವಾಗಿಯೇ ಅಧೀನತೆಯನ್ನು ಒಪ್ಪಿಕೊಂಡಿತ್ತು. ಆದರೂ ದೇವದುರ್ಗದ ಭಯ ಮೊದಲನೆಯ ಅಸಫ್‌ಜಹಾನಿಗೆ ಇದ್ದಿತು. ಆದ್ದರಿಂದ ವಾಸುದೇವನಾಯಕ ಅಥವಾ

ಕಿಲಚನಾಯಕರನ್ನು ಸಹಾಯ ಕೋರಿರುವ ಬಗ್ಗೆ ತಿಳಿದುಬರುತ್ತದೆ. ಈ ಸಮಯದಲ್ಲಿ ಕೊಹರನ್ ಎಂಬ ಅರಬ್ ದಳವಾಯಿ ಕೆಲಕಾಲ ದೇವದುರ್ಗದಲ್ಲಿದ್ದನೆಂದು ತಿಳಿದುಬರುತ್ತದೆ.ಆತನ ಅನುಚಿತ ವರ್ತನೆಯನ್ನು ಕಂಡ ನಿಜಾಮ ಕೊಹರನ್ ಮೇಲೆ ದಾಳಿ ಮಾಡಿ ಈ ಪ್ರದೇಶವನ್ನು ವಶಪಡಿಸಿ ಕೊಂಡನು(ಕವಿವಿ ೨೦೦೭: ೨೮-೨೯). ಸುರಪುರ ಸಂಸ್ಥಾನ ನಿಜಾಮನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿತ್ತು. ನಿಜಾಮನ ಪ್ರಭಾವ ಇದ್ದರೂ ಯಾವುದೇ ಅಹಿತಕರ ಘಟನೆ ನಡೆಯದಂತೆ ನೋಡಿಕೊಳಲಾಗುತ್ತಿತ್ತು. ಈ ಪ್ರದೇಶದಲ್ಲಿನ ಸಂಸ್ಥಾನಿಕರು ಆಂತರಿಕ ಕಚ್ಚಾಟಗಳಲ್ಲಿ ತೊಡಗಿಕೊಂಡಿದ್ದರು. ದೇವದುರ್ಗ ಕಿಲಚನಾಯಕನ ಕಾಲದಲ್ಲಿ ಮಹತ್ವದ ಸ್ಥಾನಮಾನವನ್ನು ಪಡೆದಿತ್ತು. ದೇವದುರ್ಗ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಲು ಕ್ಯಾದಿಗ್ಗೇರಿಯ ಮೇಲೆ ದಾಳಿ ಮಾಡಿತು. ಕ್ಯಾದಿಗ್ಗೇರಿ ಸುರಪುರಕ್ಕೆ ದೂರು ನೀಡಿತು. ಇದರ ಪರಿಣಾಮ ದೇವದುರ್ಗ ಮತ್ತು ಸುರಪುರಗಳ ನಡುವೆ ಕ್ಯಾದಿಗ್ಗೇರಿಯಲ್ಲಿ ಯುದ್ಧ ನಡೆಯಿತು. ಇದರಲ್ಲಿ ಸುರಪುರ ಗೆದ್ದು, ದೇವದುರ್ಗವನ್ನು ಅಧೀನವಾಗಿಸಿಕೊಳ್ಳಲು ಪ್ರಯತ್ನಿಸಿತು. ಆನೆಗುಂದಿ ತಿರುಮಲರಾಯ ಮುದಗಲ್‌ನ ಲೊದ್ದಪ್ಪರೆಡ್ಡಿಯ ಮೇಲೆ ದಾಳಿ ಮಾಡಿದನು. ಲೊದ್ದಪ್ಪರೆಡ್ಡಿ ನಿಜಾಮನಿಗೆ ತಿಳಿಸಿದನು. ನಿಜಾಮ ಸುರಪುರದ ಸಹಾಯದಿಂದ ಆನೆಗುಂದಿಯನ್ನು ಸೋಲಿಸಿ ಈ ಪ್ರದೇಶವನ್ನು ಅಧೀನಕ್ಕೆ ಬರುವಂತೆ ಮಾಡಿರುವುದು ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫:೮೧-೮೨). ಹೀಗೆ ನಿಜಾಮನು ಈ ಪ್ರದೇಶದಲ್ಲಿನ ಸಣ್ಣ ಪುಟ್ಟ ಆಡಳಿತಗಾರರ ಹಿತಕಾಯುತ್ತ ಅಧಿಕಾರವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಗಿದ್ದನು.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕ, ಹಣಮಪ್ಪನಾಯಕ ದೇವದುರ್ಗವನ್ನು ಹೆಚ್ಚು ಕಾಡಿದರು. ಜೊತೆಗೆ ಹೆಚ್ಚು ವೈವಾಹಿಕ ಸಂಬಂಧವನ್ನು ಬೆಳೆಸಿದರು. ಆದರೆ ಪ್ರಬಲವಾಗಿದ್ದ ಸುರಪುರವನ್ನು ವಿರೋಧಿಸುತ್ತ ತನ್ನ ಸ್ಥಾನವನ್ನು ಉಳಿಸಿಕೊಂಡ ದೇವದುರ್ಗ ಸಂಸ್ಥಾನ ನಿಜಕ್ಕೂ ಸಮರ್ಥವಾಗಿತ್ತು. ಈ ಪ್ರದೇಶದ ಸಂಸ್ಥಾನಿಕರು ಹೆಚ್ಚು ಕಚ್ಚಾಡಿದ್ದು ಕಂಡುಬರುವುದಿಲ್ಲ. ಇಲ್ಲಿಯವರು ತಮ್ಮ ರಾಜ್ಯದ ಗಡಿರಕ್ಷಣೆಯನ್ನು ಮಾಡಿಕೊಂಡರೆ ಸಾಕಾಗಿತ್ತು. ನಿಜಾಮನ ಕಾಲಾವಧಿಯಲ್ಲಿ ನಾಡಗೌಡರು, ಗೌಡರು, ಪಟೇಲರು, ಬ್ರಾಹ್ಮಣರು ಹೆಚ್ಚು ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಿದ್ದರು. ಇಂತಹ ಸಂದರ್ಭದಲ್ಲಿ ವಾರ್ಷಿಕ ಕಪ್ಪವನ್ನು ಸಲ್ಲಿಸುವುದು, ತಮ್ಮ ಪಾಡಿಗೆ ತಾವಿರುವುದು, ಯಾರ ಗೊಡವೆಗೆ ಹೋಗದೆ ಅಧೀನತೆಯನ್ನು ಒಪ್ಪಿಕೊಂಡು ಕಾಲಕ್ಕೆ ತಕ್ಕಂತೆ ಹೊಂದಿಕೊಂಡು ಹೋಗುವ ಗುಣವನ್ನು ಬೆಳೆಸಿಕೊಂಡಿದ್ದರು.

ಸುರಪುರ ಸಂಸ್ಥಾನದ ವಿರುದ್ಧ ಪ್ರಬಲ ಪೈಪೋಟಿ ನೀಡುತ್ತಿದ್ದ ಮರಾಠರು, ನಿಜಾಮ ಮತ್ತು ಬ್ರಿಟಿಶ್‌ರು ದೇವದುರ್ಗವನ್ನು ರಾಜಕೀಯ ಕೇಂದ್ರವನ್ನಾಗಿಸಿಕೊಂಡಿದ್ದರು. ಇವರ ವಿರುದ್ಧ ಸಂಚು ಮಾಡುತ್ತಿದ್ದವರ ಹೋರಾಟಗಳು ದೇವದುರ್ಗದಿಂದಲೇ ರೂಪುಗೊಳ್ಳುತ್ತಿತ್ತು. ಕೃಷ್ಣಾನದಿಗೆ ಹೊಂದಿ ಕೊಂಡಂತಿರುವ "ಅಂಜಳ" ಒಂದು ರೀತಿಯಲ್ಲಿ ಗೋವಾ ಬಂದರಿನಂತೆ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸುವಂತದ್ದಾಗಿತ್ತು. ಪ್ರತಿಯೊಬ್ಬ ರಾಜರು ಈ ಮಾರ್ಗವನ್ನು ಬಳಸುತ್ತಿದ್ದರು. ಎಂಥದ್ದೇ ದೊಡ್ಡ ಸೈನ್ಯವಿರಲಿ ಯಾವುದೇ ತೊಂದರೆಯಿಲ್ಲದೆ ಸರಳವಾಗಿ ಕಾಲು(ಹೊಳೆ)ದಾರಿಯಲ್ಲಿ ದಾಟಲು ಅನುಕೂಲಕರವಾಗಿತ್ತು. ಇದು ಕೂಡ ದೇವದುರ್ಗದ ವರ್ಚಸ್ಸು ಬೆಳೆಯಲು ಕಾರಣವೆಂದು ಹೇಳಬಹುದು.

ಕಪಟರಾಳ ಕೃಷ್ಣರಾಯ ತಿಳಿಸುವಂತೆ ದೇವದುರ್ಗ ರಾಜಕೀಯದ ರೂಪುರೇಷೆಯನ್ನು ಸಿದ್ಧಪಡಿಸುವ ಆಯಕಟ್ಟಿನ ಕೇಂದ್ರವಾಗಿ ರೂಪಗೊಂಡಿತ್ತು. ಮರಾಠರ ಮಾಧವರಾವ ಮತ್ತು ನಿಜಾಮನ ಸೈನ್ಯ ಹೈದರಾಲಿಯ ಮೇಲೆ ದಾಳಿ ಮಾಡಲು ಸಿದ್ಧಗೊಳ್ಳಲು ದೇವದುರ್ಗವನ್ನು ಬಳಸಿಕೊಂಡರು. ಹಾಗೆಯೇ ಸುರಪುರದ ವಿರುದ್ಧ ದಾಳಿ ಮಾಡಲು ಆಯ್ಕೆಮಾಡಿಕೊಂಡ ಪ್ರದೇಶವಾಗಿ ದೇವದುರ್ಗ ಕಾಣಿಸಿಕೊಳ್ಳುತ್ತದೆ(ಧ್ರುವನಾರಾಯಣ ೨೦೦೫: ೧೦೨-೦೩). ಹಂತ ಹಂತವಾಗಿ ಸುರಪುರ ಸಂಸ್ಥಾನವನ್ನು ಏಕಾಂಗಿಯನ್ನಾಗಿ ಮಾಡಲು ನಿಜಾಮ್ ಸರ್ಕಾರ ಮತ್ತು ಬ್ರಿಟಿಶ್‌ರು ತಮ್ಮ ರೆಸಿಡೆಂಟುಗಳ ಮೂಲಕ ಈ ಪ್ರದೇಶದಲ್ಲಿ ಪ್ರಮುಖ ಆದಾಯ ತರುವ ಪ್ರದೇಶಗಳನ್ನು ನಿಜಾಮನಿಗೆ ಬಿಟ್ಟು ಕೊಡುವಂತೆ ಮಾಡಲಾಯಿತು. ದೇವದುರ್ಗ, ಅರಕೇರಿ, ಜಾಲಹಳ್ಳಿ, ಗೋನವಾಟ್ಲ ಪ್ರದೇಶಗಳನ್ನು ನಿಜಾಮನಿಗೆ ಬಿಟ್ಟು ಕೊಡುವಂತೆ ಮಾಡಲಾಯಿತು. ೧೮೫೭ರ ಸಂದರ್ಭದಲ್ಲಿ ಬ್ರಿಟಿಶ್ ಸೈನ್ಯ ದೇವದುರ್ಗದಲ್ಲಿ ಬಂದು ಬೀಡು ಬಿಟ್ಟಿತ್ತು. ಸಂಪೂರ್ಣವಾಗಿ ಸುರಪುರದ ವಿರೋಧಿ ಗಳೆಲ್ಲರೂ ದೇವದುರ್ಗದಲ್ಲಿ ನೆಲೆನಿಂತುಕೊಂಡಿದ್ದರು. ಈ ಮೂಲಕ ಸುರಪುರವನ್ನು ನಿಯಂತ್ರಿಸುವ ಪ್ರಯತ್ನ ಮಾಡಲಾಯಿತು(ಧ್ರುವನಾರಾಯಣ ೨೦೦೫: ೧೫೦-೧೯೦).

ಈ ಪ್ರದೇಶದ ಸಂಸ್ಥಾನಗಳು ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ಪರಸ್ಪರ ಕಚ್ಚಾಡಿದರೂ ಸುರಪುರದ ಅಧೀನತೆಯನ್ನು ಒಪ್ಪಿಕೊಂಡಿದ್ದವು. ದೇವದುರ್ಗ, ಕ್ಯಾದಿಗ್ಗೇರಿ, ಜಾಲಹಳ್ಳಿ ಮತ್ತು ಗಲಗ ಸಂಸ್ಥಾನಗಳು ನೇರವಾಗಿ ಸುರಪುರದೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದ್ದವು. ಸುರಪುರಕ್ಕೆ ರಾಯಚೂರು ದೋ-ಅಬ್ ಪ್ರದೇಶದ ಸಂಸ್ಥಾನಿಕರ ಬೆಂಬಲ, ಪ್ರತಿಭಟನೆ, ಸಂಬಂಧಗಳನ್ನು ಹೊಂದುತ್ತಾ ಬಂದಿ ರುವುದು ಗೋಚರಿಸುತ್ತದೆ. ಚರಿತ್ರೆಯ ಸಂದರ್ಭದಲ್ಲಿ ಈ ಸಂಸ್ಥಾನಿಕರನ್ನು ಹೆಚ್ಚು ಬೆಳಕಿಗೆ ತರಲಾಗಿಲ್ಲ. ಇತ್ತೀಚೆಗೆ ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ಸಂಸ್ಥಾನಿಕರ ಅನನ್ಯತೆಯನ್ನು ಕುರಿತು ಅಭ್ಯಸಿಸುವ ಕ್ರಮ ನಡೆಯುತ್ತಿದೆ. ಇಲ್ಲಿ ಬಹುಮುಖ್ಯವಾಗಿ ಇಲ್ಲಿನ ಸಂಸ್ಥಾನಗಳು ನಿಜಾಮರ ಮತ್ತು ಬ್ರಿಟಿಶ್‌ರ ಅಧೀನತೆಯನ್ನು ಒಪ್ಪಿಕೊಂಡರೇ ಹೊರತು ಪ್ರತಿಭಟಿಸಲಿಲ್ಲ. ಅವು ಅಂತಹ ಶಕ್ತಿಯನ್ನು ಹೊಂದಿರಲಿಲ್ಲ. ಈ ಸಮಯದಲ್ಲಿ ನಾಡಗೌಡರು, ದೇಸಾಯಿಗಳು, ಗೌಡರು, ಪಟೇಲರು ಮುಂತಾದವರು ರಾಜಕೀಯದ ಮುಖ್ಯವಾಹಿನಿಯತ್ತ ಹಂತ ಹಂತವಾಗಿ ಪ್ರವೇಶಿಸಲು ಪ್ರಯತ್ನಿಸಿದರು. ಜೊತೆಗೆ ಯಶಸ್ವಿ ಕೂಡ ಆದರು. ಅಲ್ಲದೆ ನಿಜಾಮರು ಹೊಸ ಭೂಮಾಲಿಕ ವರ್ಗದ ಪರವಾಗಿ ವಕಾಲತ್ತು ವಹಿಸಿ, ಸಂಸ್ಥಾನಿಕರನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುತ್ತಾ, ಗೌರವವನ್ನು ಸೂಚಿಸುತ್ತಾ ಅವರ ಪ್ರಭಾವವನ್ನು ಕುಗ್ಗಿಸಲಾಯಿತು. ನಿಧಾನವಾಗಿ ಈ ಸಂಸ್ಥಾನಿಕರು ಜನಸಾಮಾನ್ಯರೊಂದಿಗೆ ಬೆರೆಯುವಂತಾದರು. ಸಂಸ್ಥಾನಿಕರ ಸ್ಥಿತಿ ಆರ್ಥಿಕವಾಗಿ ಕೆಳಮಟ್ಟಕ್ಕೆ ತಲುಪಿತ್ತು.

ನಿಜಾಮರ ಕಾಲದಲ್ಲಿನ ಆಡಳಿತ ವ್ಯವಸ್ಥೆಯ ಕುರಿತು ಚರ್ಚಿಸಲು ಪ್ರಯತ್ನಿಸಲಾಗಿದೆ. ನಿಜಾಮರ ಕಾಲದಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಆಡಳಿತಗಾರರಾಗಿದ್ದವರು ಪರಂಪರಾಗತವಾಗಿ, ಸಾಮಾನ್ಯವಾಗಿ ಸ್ಥಳೀಯವಾಗಿ ಪ್ರಭಾವಿಯಾಗಿರುವವರು, ಅದರಲ್ಲಿ ಮೇಲ್ವರ್ಗಕ್ಕೆ ಸೇರಿದವರಾಗಿದ್ದವರು. ಕೆಲವು ಕಡೆ ಬೇಡನಾಯಕರು ಹೆಚ್ಚಿರುವುದರಿಂದ ಬೆರಳೆಣಿಕೆಯ ಕಡೆ ಸ್ಥಾನಗಳನ್ನು ಪಡೆದಿದ್ದರು. ಬಹುತೇಕವಾಗಿ ಲಿಂಗಾಯತರು ಪ್ರಮುಖ ಸ್ಥಾನಮಾನಗಳನ್ನು ಹೊಂದಿದ್ದರು. ಭೂಮಾಲಿಕರು, ಜಹಗೀರ್‌ದಾರರಾದವರು ಬ್ರಾಹ್ಮಣರು, ಲಿಂಗಾಯತರು ಮುಂತಾದವರಾಗಿದ್ದಾರೆ. ಹಾಗೆಯೇ ಈ

ಪ್ರದೇಶದಲ್ಲಿ ಅಧಿಕಾರದ ನೆಲೆಯಲ್ಲಿ ಗುರುತಿಸಿಕೊಂಡವರು ಮತ್ತು ಪ್ರಭಾವಿಯಾಗಿ ಬೆಳೆದವರು ಬ್ರಾಹ್ಮಣರು ಮತ್ತು ಲಿಂಗಾಯತರು. ಹಾಗೆಯೇ ಜೀತಗಾರಿಕೆ ಮತ್ತು ಬಿಟ್ಟಿ ಚಾಕರಿಯನ್ನು ಮಾಡಿಸಿಕೊಂಡವರು ಬಹುತೇಕವಾಗಿ ಆರ್ಥಿಕವಾಗಿ ಬಲಾಢ್ಯರಾಗಿದ್ದವರು ಈ ಪದ್ಧತಿಗಳ ರೂವಾರಿಗಳು. ಸಂಸ್ಥಾನಿಕರನ್ನು ಕಡೆಗಣಿಸಿ ಮುಖ್ಯವಾಹಿನಿಗೆ ಬಂದವರು ನಾಡಗೌಡರು, ದೇಸಾಯಿಗಳು, ಗೌಡರು, ಕುಲಕರ್ಣಿ, ಪಟೇಲರು ಮುಂತಾದವರು ಪ್ರಮುಖರು.

ನಿಜಾಮರ ಕಾಲದಲ್ಲಿ ಕನ್ನಡ ಭಾಷೆಗೆ ಆದ್ಯತೆ ನೀಡಲಾಗಿತ್ತು. ಕಪಟರಾಳ ಕೃಷ್ಣರಾಯ ಅವರು "ಈ ಪ್ರದೇಶದಲ್ಲಿ ರಾಯಚೂರು ಮತ್ತು ಲಿಂಗಸೂಗೂರು ಎಂಬ ಎರಡು ಜಿಲ್ಲೆಗಳಲ್ಲಿ ರಾಜ್ಯಭಾಷೆ ಮತ್ತು ಆಡಳಿತ ಭಾಷೆ ಉರ್ದುವಿದ್ದರೂ ಕನ್ನಡದಲ್ಲಿಯೇ ಪತ್ರ ವ್ಯವಹಾರ ನಡೆದ ಬಗ್ಗೆ ಗಮನ ಸೆಳೆಯುತ್ತಾರೆ. "ರಾಯಚೂರು–ಪೂರ್ವದಲ್ಲಿ ಈ ಜಿಲ್ಲೆಯ ತಾಲೂಕು ಮತ್ತು ಹಳ್ಳಿಗಳಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ಕೆಲಸ ನಡೆಯುತ್ತಿತ್ತು. ಆದರೆ ಸನ್ ೧೩೦೨ನೆಯ ಇಸವಿಯಲ್ಲಿ ಆಗಿನ ಅವ್ವಲ್(ತಾಲೂಕು ಅಧಿಕಾರಿ) ತಾಲೂಕುದಾರನು ಮಾನ್ವಿ, ದೇವದುರ್ಗ, ಯರಗೇರಿ ಮತ್ತು ರಾಯಚೂರು ತಾಲೂಕುಗಳು ಸಂಪೂರ್ಣವಾಗಿ ಕನ್ನಡ ತಾಲೂಕಗಳಾದ ಕನ್ನಡದಲ್ಲಿಯೇ ಸರಕಾರಿ ಕೆಲಸ ಸಾಗಬೇಕೆಂದೂ, ಆಲಂಪೂರದಲ್ಲಿ ತೆಲುಗುವಿರುವುದರಿಂದ ಅಲ್ಲಿ ತೆಲುಗು ನಡೆಯಬೇಕೆಂದು ಅಪ್ಪಣೆ ಕೊಟ್ಟು ಅದರಂತೆ ನಡೆಸಿದನು. ಆದರೆ ಯಾದಗಿರಿ ತಾಲೂಕಿನಲ್ಲಿ ಮೊದಲಿನಿಂದ ಕನ್ನಡ ಮಾತನಾಡುತ್ತಿದ್ದರೂ ಪೂರ್ವದಿಂದ ಮರಾಠಿಯೇ ನಡೆದುಬಂದಿದೆ. ಮತ್ತು ಗೌಡ, ಕುಲಕರ್ಣಿಯವರಿಗೆ ಮರಾಠಿ ಮೈಯುಂಡಂತಾಗಿದೆ. ಆದುದರಿಂದ ಈಗಿದ್ದ ಸ್ಥಿತಿಯಲ್ಲಿ ಬದಲಾವಣೆ ಮಾಡುವ ಅವಶ್ಯಕತೆಯಿಲ್ಲ. ಲಿಂಗಸೂಗೂರು ಜಿಲ್ಲೆಯಲ್ಲಿ ಗಂಗಾವತಿ, ಕುಷ್ಟಗಿ, ಲಿಂಗಸೂಗೂರು ಮತ್ತು ಸಿಂಧನೂರು ಈ ನಾಲ್ಕು ತಾಲೂಕುಗಳಲ್ಲಿ ಸಾಮಾನ್ಯವಾಗಿ ಪೂರ್ವಕಾಲದಿಂದ ತಹಸೀಲು ಮತ್ತು ಗ್ರಾಮಸ್ಥರ ನಡುವೆ ದೇಶ ಭಾಷೆಯಾದ ಕನ್ನಡದಲ್ಲಿ ಪತ್ರ ವ್ಯವಹಾರ ನಡೆದಿರುವುದು ಗ್ರಾಮಸ್ಥರು ತಮ್ಮ ಲೆಕ್ಕ ಪತ್ರಗಳನ್ನು ಕನ್ನಡದಲ್ಲಿ ಇಡುತ್ತಿರುವರು. ಈ ಮೇಲಿನ ಅವತರಣಿಕೆಗಳಿಂದ ಕೃಷ್ಣೆಯ ಮೇಲ್ಭಾಗದಲ್ಲಿ ಮರಾಠಿ ಮತ್ತು ಅದರ ಕೆಳಭಾಗದಲ್ಲಿ ಕನ್ನಡ ಪ್ರಚಾರದಲ್ಲಿತ್ತೆಂದು" ತಿಳಿಸುತ್ತಾರೆ (ಕೃಷ್ಣರಾಯ ೨೦೦೭:೫೯–೬೦).

"೧೯೨೮ರಲ್ಲಿ ರಾಯಚೂರಿನಲ್ಲಿ "ರಾಯಚೂರು ಕರ್ನಾಟಕ ತರುಣ ಸಂಘ" ಹುಟ್ಟಿತು. ಇದು ಹೈದರಾಬಾದ್ ಕರ್ನಾಟಕದಲ್ಲಿಯ ಮೊದಲ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಜೊತೆಗೆ ಇಂದಿನ ಕರ್ನಾಟಕ ರಾಜ್ಯದಲ್ಲಿ ಮೂರನೆಯ ಅತಿ ಹಳೆಯ ಸಂಘವೂ ಹೌದು. ಮೊದಲಿನೆಯದ್ದು ೧೮೯೦ರಲ್ಲಿ ಧಾರವಾಡದಲ್ಲಿ "ಕರ್ನಾಟಕ ವಿದ್ಯಾವರ್ಧಕ ಸಂಘ". ಎರಡನೆಯದ್ದು ೧೯೧೫ರಲ್ಲಿ ಸ್ಥಾಪನೆಯಾದ "ಕನ್ನಡ ಸಾಹಿತ್ಯ ಪರಿಷತ್ತು". ಮೂರನೆಯದ್ದು ೧೯೨೮ರಲ್ಲಿ ರಾಯಚೂರಿನಲ್ಲಿ ಸ್ಥಾಪನೆಗೊಂಡ "ರಾಯಚೂರು ಕರ್ನಾಟಕ ತರುಣ ಸಂಘ", ಶಿವಮೊಗ್ಗ(೧೯೩೦) ಹಾಗೂ ಕಲಬುರ್ಗಿ(೧೯೪೦), ಕರ್ನಾಟಕ ಸಂಘಗಳು ಹುಟ್ಟಿಕೊಂಡವು. ರಾಯಚೂರಿನಲ್ಲಿ ಕೆಲವು ಜನ ಸಾಹಿತ್ಯಾಭಿಮಾನಿಗಳು ಸೇರಿ ಈ "ಕರ್ನಾಟಕ ತರುಣ ಸಂಘ" ಎಂಬ ಹೆಸರಿನ ಸಂಘವನ್ನು ಹುಟ್ಟುಹಾಕಿದರು. ಅನಂತರ ಅವರೇ ಸಂಘದ ಹೆಸರಿನಲ್ಲಿಯ 'ತರುಣ' ಎಂಬ ಶಬ್ದವನ್ನು ತೆರೆದು ಹಾಕಿ ಎಲ್ಲ ಕನ್ನಡಿಗರಿಗೆ ಅನುಕೂಲವಾಗುವಂತೆ 'ಕರ್ನಾಟಕ ಸಂಘ' ಎಂಬುದಾಗಿ ಮಾರ್ಪಡಿಸಿದರು. ಈ ಸಂಘವು ಕನ್ನಡ ಪ್ರಜ್ಞೆಯನ್ನು ಬೆಳೆಸುವುದಕ್ಕಾಗಿ ಪುಟ್ಟ ಪುಟ್ಟ ಪುಸ್ತಕಗಳನ್ನು ಪ್ರಕಟಿಸಿತು. ಕನ್ನಡದಲ್ಲಿ

ಗ್ರಂಥ ಬರೆಯುವವರಿಗೆ ಉತ್ತೇಜನ ನೀಡಿತು. ಕನ್ನಡದ ಮೂಲಕ ಜನಜಾಗೃತಿ ಮಾಡುವ ಪ್ರಯತ್ನ ಮಾಡಿತು. ಈ ಸಂಘ ಹುಟ್ಟಿದ ಕೇವಲ ಆರು ವರ್ಷಗಳಲ್ಲಿ ರಾಯಚೂರುನಲ್ಲಿ ೧೯೩೪ರಲ್ಲಿ ೨೪ನೆಯ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವನ್ನು ನಡೆಸಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ದಕ್ಷಿಣ ಕನ್ನಡದ ಪಂಜೇ ಮಂಗೇಶರಾಯರು ವಹಿಸಿದ್ದರು. ೧೯೪೫ರಲ್ಲಿ ಡಿ.ಕೆ. ಭೀಮಸೇನರಾಯರ ಅಧ್ಯಕ್ಷತೆಯಲ್ಲಿ ಹೈದರಾಬಾದ್ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿ ಯಶಸ್ವಿಯಾಯಿತು. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇದ್ದಂತೆ ಹೈದರಾಬಾದ್‌ನಲ್ಲೂ ಒಂದು "ನಿಜಾಮ್ ಸಾಹಿತ್ಯ ಪರಿಷತ್ತು" ಇತ್ತು. ಈ ರೀತಿಯಾಗಿ ರಾಯಚೂರಿನ ಕರ್ನಾಟಕ ಸಂಘವು ತನ್ನದೆಯಾದ ಕಾರ್ಯ ಚಟುವಟಿಕೆಗಳನ್ನು ನಡೆಸುತ್ತಿತ್ತು. ಆ ದಿನಗಳಲ್ಲಿ ಅಂದಿನ ನಿಜಾಮ ಸರ್ಕಾರದ ವತಿಯಿಂದ ರಾಯಚೂರಿನ 'ಕರ್ನಾಟಕ ಸಂಘ'ಕ್ಕೆ ಒಂದು ಸ್ವಂತ ಕಟ್ಟಡಕ್ಕಾಗಿ ನಿವೇಶನವನ್ನು ಪಡೆಯಲು ಸಾಧ್ಯವಾಯಿತು. ೧೯೪೭ರಲ್ಲಿ ಅಂದಿನ ಹೈದರಾಬಾದ್ ಸಂಸ್ಥಾನದ ಮುಖ್ಯಮಂತ್ರಿಗಳಾಗಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರಿಂದ ರಾಯಚೂರಿನ 'ಕರ್ನಾಟಕ ಸಂಘ'ದ ಕಟ್ಟಡದ ಶಂಕು ಸ್ಥಾಪನೆಯನ್ನು ಮಾಡಿಸಲಾಯಿತು" ಎಂದು ತಿಳಿದುಬರುತ್ತದೆ(ಕೃಷ್ಣಕೊಲ್ಹಾರ ಕುಲಕರ್ಣಿ ೨೦೦೬: ೫೫-೧೭೧).

ಈ ಪ್ರದೇಶದಲ್ಲಿ ಶಿಕ್ಷಣ ಪಡೆಯುತ್ತಿದ್ದವರು ಶ್ರೀಮಂತರು, ಪ್ರತಿಷ್ಠಿತ ಕುಟುಂಬಗಳು ಮಾತ್ರ ಇತರೆ ವರ್ಗದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಎಂಬಂತೆ ಬೆರಳೆಣಿಕೆ ರೂಪದಲ್ಲಿ ವಿರಳವಾಗಿ ಕಾಣಿಸಿ ಕೊಳ್ಳುತ್ತಾರೆ. ಬಹುತೇಕ ನೌಕರಿಗೆ ಸೇರಿದವರು ಮುಸ್ಲಿಂರೆಂದು ಗೋಚರಿಸಿದರೂ ಬಹುಸಂಖ್ಯಾತ ಹಿಂದೂಗಳು ಇರುವುದರಿಂದ ಬ್ರಾಹ್ಮಣರು ಶಿಕ್ಷಕರಾಗಿ ಕಾರ್ಯನಿರ್ವಹಿಸಿದ್ದನ್ನು ಗಮನಿಸಬಹುದಾಗಿದೆ. ರಾಮಣ್ಣ ಹವಳೆ ಅವರು "ಪಂಡಿತ ತಾರಾನಾಥ ಅವರು ೧೯೨೦ರಲ್ಲಿ ಹಮ್‌ದರ್ದ್ ಎಂಬ ಒಂದು ರಾಷ್ಟ್ರೀಯ ಶಾಲೆಯನ್ನು ತೆರೆದರು. ಈ ಶಾಲೆಯಲ್ಲಿ ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕಾಗಿತ್ತು. ಉರ್ದು ಮತ್ತು ಕನ್ನಡ ಮಾಧ್ಯಮದಲ್ಲಿ ಶಾಲೆ ನಡೆಯುತ್ತಿತ್ತು. ಶಾಲೆ ನಡೆಸಲು ಸರ್ಕಾರದಿಂದ ಲೈಸನ್ಸ್ ಪಡೆಯಬೇಕಿತ್ತು" ಎಂಬುದಾಗಿ ತಿಳಿಸುತ್ತಾರೆ(ಹವಳೆ ೨೦೧೦: ೩೬). ಪ್ರಸ್ತುತದಲ್ಲಿಯೂ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಬೇಕಾದರೆ ಸರ್ಕಾರದ ಅನುಮತಿ ಪಡೆಯಲೇಬೇಕು. ಅಂದು ಕೂಡಾ ನಿಜಾಮನ ಅನುಮತಿಯಿಂದ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸ ಬಹುದಾಗಿತ್ತು, ಕನ್ನಡವನ್ನು ಕಲಿಸಬಹುದಾಗಿತ್ತು. ಜವಳಗೇರಾದ ನಾಡಗೌಡತಿಯಾದ ಜಡೆಯಮ್ಮ ಸಹ ಮಾನ್ವಿಯ ಸರಕಾರಿ ಕನ್ಯಾ ಪ್ರಾಥಮಿಕ ಶಾಲೆಯಲ್ಲಿ ಉರ್ದು ಮತ್ತು ಕನ್ನಡ ಮಾಧ್ಯಮದಲ್ಲಿ ಬೋಧನೆ ಮಾಡುತ್ತಿದ್ದದ್ದು ಗಮನಾರ್ಹ ಅಂಶವಾಗಿದೆ. ಹೈದರಾಬಾದ್ ನಿಜಾಮ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ ೧೯೧೯ರಲ್ಲಿ 'ಮುಲ್ಕಿ' ಕಾನೂನನ್ನು ಜಾರಿಗೆ ತಂದಿದ್ದನು. ಇದು ಪ್ರಸ್ತುತ ೩೭೧ ಜೆ ಕಲಂನ ಸ್ವರೂಪದಲ್ಲಿತ್ತು. ಈ ಪ್ರದೇಶದ ಪ್ರಜೆಗಳನ್ನು ಆರ್ಥಿಕವಾಗಿ, ಶೈಕ್ಷಣಿಕವಾಗಿ ಮೇಲೆತ್ತುವ ಪ್ರಯತ್ನ ಮಾಡಿರುವುದನ್ನು ಗಮನಿಸಬಹುದು. ಹೈದ್ರಾಬಾದ್ ಕರ್ನಾಟಕದ ಕುರಿತು ನಿಜಾಮನು ಒಂದು ಶತಮಾನದ ಹಿಂದೆಯೇ ಚಿಂತನೆಯನ್ನು ಮಾಡಿರುವುದು ಗಮನಾರ್ಹ.

"ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಶಿಕ್ಷಣದ ಮಾಧ್ಯಮ ಮರಾಠಿ ಆಗಿತ್ತು. ಈ ಜಿಲ್ಲೆಗಳಲ್ಲಿ ಇನ್ನು ಮುಂದೆ ಶಿಕ್ಷಣದ ಮಾಧ್ಯಮ ಕನ್ನಡವಾಗಬೇಕೆಂದು ಕ್ರಿ.ಶ. ೧೮೮೭-೮೮ರಲ್ಲಿ ಆಜ್ಞೆ ಹೊರಡಿಸಲಾಗಿದೆ. ನಿಜಾಮ ೧೯೨೧-೨೨ರಲ್ಲಿ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ

ನೀಡಲು ಪ್ರಾರಂಭಿಸಲಾಯಿತು. ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿ ಸಾಧಿಸಲಾಯಿತು. ೧೯೩೨ರ ವೇಳೆಗೆ ಪ್ರತಿಯೊಂದು ತಾಲೂಕಿನಲ್ಲಿ ಒಂದು ಮಾಧ್ಯಮಿಕ ಶಾಲೆ ತೆರೆಯಲಾಯಿತು. ಯಾದಗಿರಿ, ರಾಯಚೂರು ಮತ್ತು ಬೀದರಗಳಲ್ಲಿ ಉಸ್ಮಾನಿಯಾ ಹೈಸ್ಕೂಲುಗಳಿದ್ದವು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಶಿಕ್ಷಕರ ತರಬೇತಿ ಶಾಲೆಯನ್ನೂ ಪ್ರಾರಂಭಿಸಲು ಪ್ರಣಾಳಿಕೆಯನ್ನು ಸಿದ್ಧಪಡಿಸಲಾಗಿತ್ತು. ಅನಿವಾರ್ಯ ಕಾರಣಗಳಿಂದಾಗಿ ರದ್ದುಗೊಳಿಸಲಾಯಿತು. ಶಿಕ್ಷಕರ ತರಬೇತಿ ಶಾಲೆಯನ್ನು ತೆರೆಯಲು ನಿಜಾಮ ಪ್ರಯತ್ನಿಸಿದನು. ಈ ಚಿಂತನೆ ಮಿಡ್ಲ್‌ಸ್ಕೂಲ್ ಪರೀಕ್ಷೆ ಪಾಸಾದ ಅಭ್ಯರ್ಥಿಗಳನ್ನು ಪ್ರಾಥಮಿಕ ಶಾಲೆಯ ಶಿಕ್ಷಕರನ್ನಾಗಿ ನೇಮಿಸಲಾಗುತ್ತಿತ್ತು. ಹೈದರಾಬಾದಿನ "ಗೌರ್ನ್‌ಮೆಂಟ್ ನಾರ್ಮಲ್ ಸ್ಕೂಲ್"ನಲ್ಲಿ ಮೊದಲು ಕೇವಲ ಉರ್ದು ಮತ್ತು ತೆಲುಗು ವರ್ಗಗಳಿದ್ದವು. ಆದರೆ ೧೮೮೯-೯೦ರಲ್ಲಿ ಅದಕ್ಕೊಂದು ಕನ್ನಡ ವರ್ಗ ಸೇರಿಸಲಾಯಿತು" ಎಂದು ಜೋಶಿಯವರು ತಿಳಿಸುತ್ತಾರೆ(ಜೋಶಿ ೨೦೦೬: ೪೧೨-೧೪). ನಿಜಾಮ ಸರ್ಕಾರ ಉಚಿತ ಶಿಕ್ಷಣವನ್ನು ೧೯೨೧-೨೨ರ ವೇಳೆಗೆ ಜಾರಿಗೆ ತಂದದ್ದು ಗಮನಾರ್ಹ.

"ಹೈದರಾಬಾದ್ ಸಂಸ್ಥಾನದಲ್ಲಿ ೨೧,೨೨೩ ಹಳ್ಳಿಗಳಿದ್ದವು. ಅವುಗಳಲ್ಲಿ ೪೮೪೨ ಪ್ರಾಥಮಿಕ ಶಾಲೆಗಳಿವೆ. ಹೈದರಾಬಾದ್ ಪಟ್ಟಣವೊಂದರಲ್ಲಿಯೇ ೧೬೮ ಪ್ರಾಥಮಿಕ ಶಾಲೆಗಳಿದ್ದು. ಇತರ ದೊಡ್ಡ ಪಟ್ಟಣಗಳಲ್ಲಿ ಹತ್ತಾರು ಪ್ರಾಥಮಿಕ ಶಾಲೆಗಳಿರುವ ಮೂಲಕ ಹಳ್ಳಿಗಳ ಪಾಲಿಗೆ ಪ್ರಾಥಮಿಕ ಶಾಲೆಗಳ ಸಂಖ್ಯೆ ಬಹಳ ಕಡಿಮೆ. ತೀರ ಒಳಭಾಗದಲ್ಲಿರುವ ಗೌಡ, ಶಾನಭೋಗರು, ಕೂಡ ನಿರಕ್ಷರರಿತ್ತಾರೆ. ಎಂಬುದು ಅನುಭವದ ಮಾತಾಗಿದೆ. ರಾಯಚೂರು ಜಿಲ್ಲೆಯಲ್ಲಿ ೧೭೪೮ ಹಳ್ಳಿಗಳಿದ್ದವು. ೨೬೯ ಶಾಲೆಗಳಿದ್ದವು. ಕಲಬುರ್ಗಿಯ ಜಿಲ್ಲೆಯಲ್ಲಿ ಹಳ್ಳಿಗಳ ಸಂಖ್ಯೆ ಕಡಿಮೆ ಇದ್ದು, ಶಾಲೆಗಳ ಸಂಖ್ಯೆ ಹೆಚ್ಚಾಗಿದ್ದರೂ ರಾಯಚೂರು ಜಿಲ್ಲೆಗಿಂತಲೂ ಸಾಕ್ಷರತೆಯ ಪ್ರಮಾಣ ಕಡಿಮೆ. ಜನಸಾಮ್ಯರ ಭಾಷೆಯಲ್ಲದೆ ಬೇರೆ ಭಾಷೆಯಲ್ಲಿ ಇಲ್ಲಿಯ ಪ್ರಾಥಮಿಕ ಶಿಕ್ಷಣವಾಗುವದೆ ಸಾಕ್ಷರತೆಯ ಈ ಅಲ್ಪಪ್ರಮಾಣಕ್ಕೆ ಕಾರಣ. ರಾಯಚೂರು ಜಿಲ್ಲೆಯಲ್ಲಿ ಮಾತ್ರ ಪ್ರಾಥಮಿಕ ಶಿಕ್ಷಣ ಕ್ರಮವು ಕನ್ನಡದಲ್ಲಿಯೇ ಜರುಗುತ್ತದೆ. ಹಾಗಾಗಿ ಕಲಬುರ್ಗಿ ಮತ್ತು ಬೀದರ್ ಜಿಲ್ಲೆಗಳಲ್ಲಿ ಸಾಕ್ಷರತೆಯ ಪ್ರಮಾಣವು ರಾಯಚೂರಿನಗಿಂತಲೂ ಕಡಿಮೆ ಇತ್ತೆಂದು" ಪದ್ಮನಾಭಾಚಾರ್ಯ ಪುರಾಣಿಕ್‌ರು ತಿಳಿಸುತ್ತಾರೆ(ಜಾಗೀರದಾರ ಮತ್ತು ವಿಠಲರಾವ ೧೯೪೧: ೪೬). ಅಲ್ಲದೆ ಕನ್ನಡ ಭಾಷೆ, ಸಂಸ್ಕೃತಿಯ ಏಳಿಗೆಗಾಗಿ ನಡೆದಿರುವ ಚಟುವಟಿಕೆಗಳನ್ನು ರಾಯಚೂರು ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತವೆ. "ರಾಯಚೂರಿನಲ್ಲಿ ಕನ್ನಡದ ಮುನ್ನಡೆಗೆ ಪ್ರೋಷಕವಾದ ಕೆಲವು ಸಾರ್ವಜನಿಕ ಸಂಸ್ಥೆಗಳೆಂದರೆ, ಹಮ್‌ದರ್ದ್ ಹೈಸ್ಕೂಲು, ಶಾರದಾ ಕನ್ಯಾಶಾಲೆ, ಹರಿಜನ ಶಾಲೆ, ವೀರಶೈವ ಬೋರ್ಡಿಂಗು, ಕರ್ನಾಟಕ ತರುಣ ಸಂಘ, ಸಾಹಿತ್ಯ ಸೇವಾ ಸಂಘ, ಭಾರತ ರೀಡಿಂಗ ರೂಮ್ ಶಾರದಾ ವಾಚನಾಲಯ ಸಿಂಧನೂರು, ಉಸ್ಮಾನಿಯ ಕನ್ನಡ ವಾಚನಾಲಯ ಲಿಂಗಸೂಗೂರು, ಕ್ರಿಶ್ಚಿಯನ್ ಸ್ಕೂಲ್ ರಾಯಚೂರು, ಮುದಗಲ್ ಮತ್ತು ಕವಿತಾಳ ಶಾಲೆಗಳು ಶೈಕ್ಷಣಿಕ ರಂಗದಲ್ಲಿ ತಕ್ಕಷ್ಟು ಸೇವೆ ಸಲ್ಲಿಸಿವೆ" ಎಂದು ಕಂದಿ ಶ್ರೀನಿವಾಸ ರಾಯ ಹೇಳುತ್ತಾರೆ(ಜಾಗೀರದಾರ ಮತ್ತು ವಿಠಲರಾವ ೧೯೪೧:೬೩-೬೫). "ನಿಜಾಮ ಸರ್ಕಾರದ ವತಿಯಿಂದ ಶಾಲೆಗಳು ಆರಂಭ ವಾಗುವುದಕ್ಕಿಂತ ಪೂರ್ವದಲ್ಲಿ ರಾಯಚೂರು ಜಿಲ್ಲೆಯಲ್ಲಿ ಅಯ್ಯನವರ ಶಾಲೆಗಳು ಮತ್ತು ಗಾವಂಟಿ ಶಾಲೆಗಳಲ್ಲಿ ಕನ್ನಡವನ್ನು ಮತ್ತು ಮಗ್ಗಿಗಳನ್ನು ಕಲಿಸಲಾಗುತ್ತಿತ್ತು. ವಿದ್ಯಾವಂತರ ಸಂಖ್ಯೆ ಕಡಿಮೆ ಇತ್ತು. ಈ ಕಾರಣಕ್ಕಾಗಿ ನಿಜಾಮ ಸರ್ಕಾರವು ಅನಕ್ಷರತೆಯನ್ನು ಹೋಗಲಾಡಿಸಲು ಪ್ರಯತ್ನಿಸಿತು. ಕನ್ನಡದ ಕೆಲಸಗಳಿಗೆ ಯಾರೂ ಅಡ್ಡಿಯಾಗುವುದಿಲ್ಲ. ಸರಕಾರದಿಂದ ಅಕ್ಷರಾಭ್ಯಸ ಮಾಡುವವರಿಗೆ

ಅವಕಾಶ ಕಲ್ಪಿಸಿಕೊಡಲಾಗಿತ್ತು. ಕನ್ನಡದ ಜಾಗೃತಿಗಾಗಿ ಪ್ರಭುತ್ವದಿಂದ ಯಾವುದೇ ರೀತಿಯಲ್ಲಿ ತೊಂದರೆ ಇರಲಿಲ್ಲ" ಎಂಬುದಾಗಿ ಡಿ.ಕೆ. ಭೀಮಸೇನರಾಯರು ತಮ್ಮ ಮುನ್ನುಡಿಯಲ್ಲಿ ಉಲ್ಲೇಖಿಸಿದ್ದಾರೆ (ಜಾಗೀರದಾರ ಮತ್ತು ವಿಠಲರಾವ ೧೯೪೧: ೨-೪).*

"ನಿಜಾಮನು ಹೈದರಾಬಾದಿನಲ್ಲಿ ಬಿ.ಎ.ಪದವಿಯಲ್ಲಿ ಕನ್ನಡವನ್ನು ಪಠ್ಯಕ್ರಮದಲ್ಲಿ ಅಳವಡಿಸಿ, ಕನ್ನಡ ಮಾಧ್ಯಮದಲ್ಲಿ ಕಲಿಯಲು ಅವಕಾಶ ಕಲ್ಪಿಸಿದ್ದನು. ೧೯೨೭ರಲ್ಲಿ ಡಿ.ಕೆ. ಭೀಮಸೇನರಾವ್ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಕಲಿಯುತ್ತಿದ್ದರು. ಆಗ ಉಸ್ಮಾನಿಯಾ ವಿಶ್ವವಿದ್ಯಾನಿಲಯ ಕನ್ನಡ "ಉನ್ನತ ವ್ಯಾಸಂಗ ವೇತನ"ವನ್ನು ಭೀಮಸೇನರಾಯರಿಗೆ ಕೊಟ್ಟಿತು" (ರಾಘವೇಂದ್ರರಾವ್ ೨೦೦೧:೩). ಡಿ.ಕೆ. ಭೀಮಸೇನರಾವ್ ಅವರು "ಉಸ್ಮಾನಿಯಾ ವಿಶ್ವವಿದ್ಯಾನಿಲಯ ದಲ್ಲಿ ೧೯೩೩ರಿಂದ ೧೯೬೦ರವರೆಗೆ ಕನ್ನಡ ಶಾಖೆಯ ಮುಖ್ಯಸ್ಥರಾಗಿ, ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಇವರು ಈ ಭಾಗವನ್ನು ವಿಸ್ತೃತಗೊಳಿಸಿ ಬೆಳೆಸಿದರು. ಕನ್ನಡ ಎಂ.ಎ., ಪಿಎಚ್.ಡಿ.ಗಳನ್ನು ಆರಂಭಿಸಿದರು. ಹೈದರಾಬಾದಿನ ಆರೇಳು ಕಾಲೇಜುಗಳಲ್ಲಿ ಕನ್ನಡ ಅಧ್ಯಯನಕ್ಕಾಗಿ ವ್ಯವಸ್ಥೆಗೊಳಿಸಿದರು. ಗುಲ್ಬರ್ಗಾ, ರಾಯಚೂರು, ಯಾದಗಿರಿ ಕಾಲೇಜುಗಳಲ್ಲಿ ಕನ್ನಡ ವ್ಯಾಸಂಗಕ್ಕಾಗಿ ಏರ್ಪಾಡು ಮಾಡುವಲ್ಲಿ ಪ್ರೋತ್ಸಾಹವನ್ನಿತ್ತರು. ಈ ವಿಶ್ವವಿದ್ಯಾನಿಲಯದಲ್ಲಿ ಕರ್ನಾಟಕ ಸಂಘದ ಚಟುವಟಿಕೆಗಳನ್ನು ವ್ಯಾಪಕಗೊಳಿಸಿದರು. 'ತಾವರೆ' ಎಂಬ ಪತ್ರಿಕೆಯನ್ನು ಕನ್ನಡ ವಿಭಾಗದಿಂದ ಹೊರಡಿಸಲು ಅನುವು ಮಾಡಿಕೊಟ್ಟರು. ವಿಶ್ವವಿದ್ಯಾನಿಲಯದ ಗ್ರಂಥಾಲಯದಲ್ಲಿ ಕನ್ನಡ ಗ್ರಂಥಗಳನ್ನು ಹೇರಳವಾಗಿ ತರಿಸುತ್ತಿದ್ದರು. ಹಳಗನ್ನಡದ ಅಪರೂಪದ ಗ್ರಂಥಗಳೂ ಅಲ್ಲಿ ದೊರೆಯುತ್ತಿದ್ದವು" ಎಂಬುದಾಗಿ ತಿಳಿದುಬರುತ್ತದೆ(ರಾಘವೇಂದ್ರರಾವ್ ೨೦೦೧: ೧೭).

"ಹೈದರಾಬಾದ್ ಸಂಸ್ಥಾನದಲ್ಲಿ ಪ್ರಕಟವಾಗುವ ಕನ್ನಡ ನಿಯತಕಾಲಿಕೆ ಪತ್ರಿಕೆಗಳ ಸಂಖ್ಯೆ ನಾಲ್ಕು. ಹೈದರಾಬಾದಿನ ಸುದ್ದಿ ಖಾತೆಯಿಂದ ಹೊರಡುವ ಮಾಸ ಪತ್ರಿಕೆ 'ಹೈದರಾಬಾದ್ ಸಮಾಚಾರ'. 'ಹೈದರಾಬಾದು' ಮದ್ಯಪಾನ ನಿರೋಧಕ ಸಭೆಯಿಂದ ಹೊರಡುವ ಎರಡನೆಯ ಮಾಸಿಕ ಪತ್ರಿಕೆ. ಸಹಕಾರ ಕೇಂದ್ರ ಸಮಿತಿಯವರು ಹೊರಡಿಸುತ್ತಿದ್ದ 'ಗ್ರಾಮ ಸುಧಾರಕ'ವೂ ಮೂರನೆಯದು. ಈ ಮೂರು ಪತ್ರಿಕೆಗಳು ಸರಕಾರಿ ಪತ್ರಿಕೆಗಳು. ರಾಯಚೂರಿನಿಂದ ರಾಚೋಟೆಯ್ಯನವರ ಸಂಪಾದಕತ್ವದಲ್ಲಿ "ಡೆಕ್ಕನ್ ಪ್ರಭಾತ್" ಎಂಬ ವಾರ ಪತ್ರಿಕೆ ಹೊರಡುತ್ತಿತ್ತು. ಇದು ಹೈದರಾಬಾದ್ ಕರ್ನಾಟಕದ ಸಂಗತಿಗಳನ್ನು ಎಲ್ಲ ಕನ್ನಡಿಗರಿಗೆ ಮುಟ್ಟಿಸುವ ಕಾರ್ಯ ಮಾಡುತ್ತಿತ್ತು" ಎಂದು ಪದ್ಮನಾಭಾಚಾರ್ಯ ಪುರಾಣಿಕ್ ಅವರು ತಿಳಿಸುತ್ತಾರೆ( ಜಾಗೀರದಾರ ಮತ್ತು ವಿಠಲರಾವ ೧೯೪೧: ೫೦-೫೧). ನಿಜಾಮನು ದಿನ ಪತ್ರಿಕೆ, ಮಾಸಪತ್ರಿಕೆಗಳನ್ನು ಕನ್ನಡದಲ್ಲಿ ಪ್ರಕಟಿಸಲು ಅನುಮತಿ ಮತ್ತು ಅವಕಾಶವನ್ನು ಕಲ್ಪಿಸಿದ್ದನು. ಅಲ್ಲದೆ ಸ್ವತಃ ಮೀರ್ ಉಸ್ಮಾನ್ ಅಲಿಖಾನ್‌ನು ಕನ್ನಡದ ಬಗೆಗೆ ಕಾಳಜಿವುಳ್ಳವನಾಗಿದ್ದನು. ಹೈದರಾಬಾದ್ ಸಂಸ್ಥಾನದಲ್ಲಿ ನಿಜಾಮನ ಗಮನ ಸೆಳೆದ ಕನ್ನಡದ ಪತ್ರಿಕೆಯೆಂದರೆ ರಾಯಚೂರಿನಿಂದ ರಾಚೋಟಯ್ಯ ಅವರ ಸಂಪಾದಕತ್ವದಲ್ಲಿ ಮುದ್ರಣಗೊಳ್ಳುತ್ತಿದ್ದ ಮತ್ತು ೧೯೪೦ ನವೆಂಬರ್ ೯ರಿಂದ ಪ್ರಾರಂಭವಾದ "ಡೆಕ್ಕನ್-ಪ್ರಭಾತ" ಎಂಬ ಕನ್ನಡ ವಾರ ಪತ್ರಿಕೆ. ಕನ್ನಡದಲ್ಲಿ ಪ್ರಕಟಗೊಂಡ ಈ ಪತ್ರಿಕೆಯ ಸಂಪಾದಕರಿಗೆ ಅನೇಕ ಜನ ಗಣ್ಯರು ಶುಭ ಸಂದೇಶಗಳನ್ನು ಕಳುಹಿಸಿದ್ದರು. ಹಾಗೆಯೇ ಮೈಸೂರು ಸಂಸ್ಥಾನದ

---

* ಪ್ರಸ್ತುತ ಗ್ರಂಥವನ್ನು ಒದಗಿಸಿದ ಹಾಗೂ ಈ ಕುರಿತು ಮಾಹಿತಿ ನೀಡಿದ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರಿಗೆ ನಾನು ಆಭಾರಿಯಾಗಿದ್ದೇನೆ.

ದಿವಾನರಾಗಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಸಂದೇಶ ಕಳುಹಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ(ಮುಕ್ಕುಂದಿಮಠ ೨೦೦೮: ೯೪-೯೮).

ನಿಜಾಮರ ಕಾಲದಲ್ಲಿ ಈ ಪ್ರದೇಶದಲ್ಲಿ ಅನೇಕ ಮಠ, ಮಂದಿರ, ಮಸೀದಿಗಳಿಗೆ ಭೂದಾನ ಮಾಡಿರುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಅನೇಕ ವೀರಶೈವ ಮಠಗಳಿವೆ. ಅವುಗಳಿಗೆ ನಿಜಾಮರು ಭೂದಾನ ನೀಡಿದ್ದುಂಟು. ಭೂದಾನ ಪಡೆದ ಮಠಗಳೆಂದರೆ, "ಗಬ್ಬೂರು-ಬೂದಿ ಬಸವೇಶ್ವರ ಮಠಕ್ಕೆ - ४೦ ಎಕರೆ, ಮಾನವಿಯ ಕಲ್ಮಠ-೧೫ ಎಕರೆ, ರಾಯಚೂರು ಕಿಲ್ಲೆ ಬೃಹನ್ಮಠಕ್ಕೆ ನಿಜಾಮ ಭೂದಾನ ಎಷ್ಟು ನೀಡಿದ್ದನೆಂದು ತಿಳಿದುಬರುವುದಿಲ್ಲ. ನಿಜಾಮನಿಂದ ಭೂಮಿ ಪಡೆದದ್ದಂತೂ ಸ್ಪಷ್ಟ. ಹಾಗೆಯೇ ಈ ಮಠ ಆರೋಲಿಯಲ್ಲಿ ೫೦ ಎಕರೆ ನೀರಾವರಿ, ೩೦ ಎಕರೆ ಒಣಭೂಮಿ, ೧४ ಎಕರೆ ಬೀಳು ಹಾಗೂ ಕೋಳಂಕಿಯಲ್ಲಿ ೨೦ ಎಕರೆ ಭೂಮಿಯನ್ನು ಹೊಂದಿದೆ. ರಾಮಗಡ್ಡೆ ಮಠ-ನಿಜಾಮನಿಂದ ೧೨೦ ಎಕರೆ ದಾನ ಪಡೆದಿದೆ. ಗುಡಗುಂಟಿಯ ರಾಜಗುರು ಮಠಕ್ಕೆ ಇನಾಮ್ ಭೂಮಿ ನೀಡಲಾಗಿತ್ತು. ಸಿಂಧನೂರಿನ ಕಲ್ಮಠ-ಸ್ವಂತ ೧೫ ಎಕರೆ ಭೂಮಿಯನ್ನು ಹೊಂದಿರುವ" ಬಗ್ಗೆ ಚಂದ್ರಶೇಖರ ನಾರಣಾಪುರ ಅವರು ತಿಳಿಸುತ್ತಾರೆ(ನಾರಣಾಪುರ ೨೦೦೨: ೧೨೧-೧೫೮). ಇನ್ನೂ ಪ್ರತಿ ಗ್ರಾಮದಲ್ಲಿಯೂ ದೇವಸ್ಥಾನಗಳಿಗೆ ४ ಎಕರೆಗಿಂತ ಹೆಚ್ಚಿನ ಭೂಮಿಯನ್ನೇ ದಾನ ಮಾಡಿರುವುದನ್ನು ಗಮನಿಸಬಹುದಾಗಿದೆ.

ಅಮರೇಶ ಯತಗಲ್ ಅವರು "ಈ ಪ್ರದೇಶ ೧೯೨೮-೧೯೩೫ರ ಸುಮಾರಿನಲ್ಲಿ ಇಡೀ ಜಿಲ್ಲೆ ಭೀಕರ ಬರಗಾಲಕ್ಕೆ ತುತ್ತಾಗಿತ್ತು. ನೀರಿನ ಭವಣೆ ಅಪಾರವಾಗಿತ್ತು, ನಾರುರೋಗದ ದಾಳಿಯೂ ಕೂಡಾ ಹಬ್ಬಿಕೊಂಡಿತ್ತು. ಇಂತಹ ಸಂದರ್ಭದಲ್ಲಿ ಕ್ಯಾಪ್ಟನ್ ಲಿಯೋನಾರ್ಡ್‌ಮನ್ ಎಂಬ ಭೂಗರ್ಭಶಾಸ್ತ್ರಜ್ಞನನ್ನು ಈ ಪ್ರದೇಶಕ್ಕೆ ಕಳುಹಿಸಿ ನೀರಿನ ಕೊರತೆಯನ್ನು ನಿವಾರಿಸಲು ಕ್ರಮಕೈಗೊಳ್ಳಲು ನಿಜಾಮ ಈತನನ್ನು ರಾಯಚೂರು ಜಿಲ್ಲೆಯ ಭೌಗೋಳಿಕ ಸಮೀಕ್ಷೆಯ ನಿರ್ದೇಶಕ ಮತ್ತು ಬಾವಿ ಕೊರೆತ ವಿಭಾಗದ ವಿಶೇಷಾಧಿಕಾರಿಯಾಗಿ ನೇಮಿಸಿದನು. ಈತನು ಸುಮಾರು ೧೨೦೦ ಕ್ಕಿಂತಲೂ ಹೆಚ್ಚು ಬಾವಿಗಳನ್ನು ತೋಡಿಸಿದನು. ಈ ಬಾವಿಗಳ ರಚನೆ ತ್ರಿಕೋನಾಕಾರ, ಚತುರ್ಕೋನಾಕಾರ, ಪಂಚಕೋನಾಕಾರ, ಷಟ್ಕೋನಾಕಾರ, ಸಪ್ತಕೋನಾಕಾರ, ಅಷ್ಟಕೋನಾಕಾರ, ನವಕೋನಾಕಾರ ಹಾಗೂ ದಶಕೋನಾಕಾರಗಳಲ್ಲಿ ನಿರ್ಮಾಣಗೊಂಡಿರುವ" ಬಗ್ಗೆ ತಿಳಿಸುತ್ತಾರೆ(ಯತಗಲ್ ೨೦೦೭: ೩೮-೩೯). ಕ್ಯಾಪ್ಟನ್ ಲಿಯೋನಾರ್ಡ್‌ಮನ್‌ನು ವಿದೇಶಿಯನಾಗಿದ್ದರೂ ಈ ಭಾಗದ ಜನರನ್ನು ಅರ್ಥ ಮಾಡಿಕೊಂಡಿದ್ದನು, ಅವಶ್ಯಕತೆಗಳನ್ನು ಅರಿತಿದ್ದನು. ಮೂಲಭೂತವಾದ ಸೌಕರ್ಯಗಳನ್ನು ಒದಗಿಸುವಲ್ಲಿ ಮನ್‌ರವರ ಪಾತ್ರ ಬಹುಮುಖ್ಯವಾಗಿದೆ. ಇದಕ್ಕೆ ನಿಜಾಮನಿಗೆ ಈ ಪ್ರದೇಶದ ಮೇಲಿನ ಅಭಿಮಾನವೇ ಕಾರಣವಾಗಿದೆ. ನಿಜಾಮರ ಕಾಲದಲ್ಲಿ ಈ ಪ್ರದೇಶದಲ್ಲಿ ಪ್ರತಿಯೊಂದು ಗ್ರಾಮಕ್ಕೆ ತೆರಳಲು ಸರಿಯಾದ ರಸ್ತೆಗಳಿರಲಿಲ್ಲ, ಬಂಡಿದಾರಿಗಳಿರುತ್ತಿದ್ದವು. ಆದರೆ ಅವು ಗಿಡ-ಮರಗಳಿಂದ ಮುಚ್ಚಿಕೊಂಡಿರುತ್ತಿದ್ದವು, ಭಯಾನಕವಾಗಿರುತ್ತಿದ್ದವು. ಬಹುತೇಕವಾಗಿ ಕಾಲುದಾರಿಗಳೆ ಅಂದಿನ ಜನಜೀವನ ಮುಖ್ಯ ರಸ್ತೆಗಳಾಗಿದ್ದವು. ಇಂತಹ ಪರಿಸ್ಥಿತಿಯಲ್ಲಿ ಮನ್ ಅವರಂಥ ಸಮರ್ಥ ಅಧಿಕಾರಿಗಳನ್ನು ನೇಮಿಸಿಕೊಂಡು ನಿಜಾಮ ಆಡಳಿತ ನಡೆಸುತ್ತಿದ್ದ, ಈ ಹಿನ್ನೆಲೆಯಲ್ಲಿ ರಸ್ತೆಗಳಿಲ್ಲದಿದ್ದರೂ ಕುಡಿಯುವ ನೀರಿಗಾಗಿ ಸಾವಿರಾರು ಬಾವಿಗಳನ್ನು ತೋಡಿಸಿದ್ದು, ನಿಜಾಮನು ತನ್ನ ಪ್ರದೇಶವನ್ನು ಉತ್ತಮವಾದ ರೀತಿಯಲ್ಲಿಟ್ಟು ಕೊಂಡಿದ್ದನೆಂಬುದನ್ನು ಸೂಚಿಸುತ್ತದೆ.

ನಿಜಾಮ ಸರ್ಕಾರ ಜನರಿಗೆ ನೀರು ಕುಡಿಯಲು ಬಾವಿಗಳನ್ನು ತೋಡಿಸಿತು. ಇಂತಹ ಸಂದರ್ಭದಲ್ಲಿ ಪ್ರಭಾವಿಯಾಗಿದ್ದ ಸ್ಥಳೀಯ ಗ್ರಾಮಾಧಿಕಾರಿಗಳಾದ ಗೌಡ, ಕುಲಕರ್ಣಿ, ಮಾಲಿಗೌಡ, ಪೋಲೀಸ್ ಗೌಡರುಗಳು ಸೂಚಿಸಿದ ಹಾಗೆ ಬಾವಿಗಳನ್ನು ನಿರ್ಮಿಸಿರುವುದು ಗಮನಿಸಬಹುದು. ಸ್ಥಳೀಯಾಡಳಿತದಲ್ಲಿ ರುವವರೆಲ್ಲರು ಹಿಂದುಗಳು. ಇವರು ತಮ್ಮ ಸಾಮಾಜಿಕ ಏಣಿಶ್ರೇಣಿಯ ಹಿನ್ನೆಲೆಯಲ್ಲಿ ಬಾವಿಗಳನ್ನು ತೋಡಿಸಿರುವುದು ಕಂಡುಬರುತ್ತದೆ. ಅದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ. ಮಾನ್ವಿ ತಾಲೂಕಿನ ಪ್ರತಿಹಳ್ಳಿಗಳಲ್ಲಿ ಕೆಳಜಾತಿಗಳಾದ ಹೊಲೆಯರಿಗೆ ಒಂದು ಬಾವಿ, ಮಾದಿಗರಿಗೆ ಒಂದು ಬಾವಿ ಹಾಗೂ ಇನ್ನಿತರ ಸಮುದಾಯಗಳಿಗೆ ಪ್ರತ್ಯೇಕ ಬಾವಿಗಳನ್ನು ತೋಡಿಸಲಾಗುತ್ತಿತ್ತು. ಅದಕ್ಕೆ ವಡವಾಟಿ, ಕುರಕುಂದಿ, ಗುಡಗುಂಟಿ, ಆಲ್ಕೋಡ, ಶಾವಂತಗಲ್, ಚಿಂಚರಕಿ ಮುಂತಾದ ಇಡೀ ಜಿಲ್ಲೆಯ ಗ್ರಾಮಗಳಲ್ಲಿ ಮೂರು ಅಥವಾ ನಾಲ್ಕು ಬಾವಿಗಳನ್ನು ಕಾಣಬಹುದಾಗಿದೆ. ಇಷ್ಟಲ್ಲದೆ ಅನುಕೂಲಸ್ಥರು ಅದರಲ್ಲಿ ಮೇಲ್ಜಾತಿಯವರೆಂದು ಗುರುತಿಸಿಕೊಂಡವರೆಲ್ಲರೂ ಸ್ವಂತ ಕುಡಿಯುವ ನೀರಿನ ಬಾವಿಗಳನ್ನು ಹೊಂದಿದ್ದರು. ಇದು ಸಿಂಧೂ ನಾಗರಿಕತೆಯನ್ನು ನೆನಪಿಸುತ್ತದೆ. ಸ್ಥಳೀಯರ ಅಗತ್ಯತೆಯ ಹಿನ್ನೆಲೆಯಲ್ಲಿ ನಿಜಾಮ ಸರ್ಕಾರ ಕಾರ್ಯ ನಿರ್ವಹಿಸುತ್ತಿತ್ತು. ಮೇಲಾಗಿ ಹಿಂದುಗಳೆ ಆಡಳಿತಾಧಿಕಾರಿಗಳು ಆಗಿರುವುದರಿಂದ ಅವರ ಇಚ್ಚೆಗನುಸಾರವಾಗಿ ನಡೆಯುತ್ತಿತ್ತು.

ಆಡಳಿತದಲ್ಲಿ, ಶಿಕ್ಷಣದಲ್ಲಿ, ಪ್ರಸಾರ ಮಾಧ್ಯಮದಲ್ಲಿ ವ್ಯವಹಾರ ಮಾಡಲು ಕನ್ನಡವನ್ನೇ ಬಳಸಲಾಗುತ್ತಿತ್ತು. ಕನ್ನಡ ಮಾಧ್ಯಮ ಶಿಕ್ಷಣದಲ್ಲಿ ಕಡಿಮೆ ಉದ್ಯೋಗಾವಕಾಶಗಳಿದ್ದವು. ಆದರೆ ಆದ್ಯತೆ ನೀಡಿದ್ದು ಮಾತ್ರ ಉರ್ದುವಿಗೆ. ಹಾಗಾಗಿ ಪ್ರಸ್ತುತದಲ್ಲಿ ಇಂಗ್ಲಿಷನ್ನು ಸ್ವೀಕರಿಸಿದಂತೆ ಉರ್ದುವನ್ನು ಸ್ವೀಕರಿಸಿದರು. ಈ ಪ್ರದೇಶದಲ್ಲಿ ಬಹುತೇಕವಾಗಿ ಲಿಂಗಾಯತರು, ಬ್ರಾಹ್ಮಣರು, ವೈಶ್ಯರು ಶಿಕ್ಷಣ ವಂತರಾಗಿದ್ದರು. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಜನಸಾಮಾನ್ಯರು ಮಾತನಾಡುವ ಭಾಷೆಯಲ್ಲಿಯೇ ಅಂದರೆ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣ ನೀಡಲಾಗುತ್ತಿತ್ತು. ಇದಕ್ಕೆ ನಿಜಾಮ ಸರ್ಕಾರದ ಸಹಕಾರವಿತ್ತು. ಕನ್ನಡದ ಪ್ರಜ್ಞೆಯನ್ನು ಬೆಳೆಸುವುದಕ್ಕಾಗಿ ನಿಜಾಮರು ವಿರೋಧಿಸಲಿಲ್ಲ. ಮೇಲಾಗಿ ಸರ್ಕಾರದ ವತಿಯಿಂದ ರಾಯಚೂರು ಜಿಲ್ಲೆಯಲ್ಲಿ ೨೬೯ ಶಾಲೆಗಳನ್ನು ತೆರೆಯಲಾಗಿತ್ತು. ಸರ್ಕಾರಿ ಕಚೇರಿಗಳಲ್ಲಿ ಪತ್ರ ವ್ಯವಹಾರವೂ ಕನ್ನಡದಲ್ಲಿತ್ತು. ನಿಜಾಮ ಸರ್ಕಾರದ ವತಿಯಿಂದ ಕನ್ನಡದ ಜಾಗೃತಿಗಾಗಿ ಹೈದರಾಬಾದ್ ಸಮಾಚಾರ, ಹೈದರಾಬಾದು, ಗ್ರಾಮಸುಧಾರಕ ಎಂಬ ಪತ್ರಿಕೆಗಳನ್ನು ಹೊರಡಿಸಲಾಗಿತ್ತು. ಅಲ್ಲದೆ ರಾಯಚೂರಿನಿಂದ 'ಡೆಕ್ಕನ್ ಪ್ರಭಾತ್' ಪತ್ರಿಕೆ ಕನ್ನಡಕ್ಕಾಗಿ ಮೀಸಲಾದ ಪತ್ರಿಕೆಯಾಗಿತ್ತು. ಅಲ್ಲದೆ ಕರ್ನಾಟಕ ಸಂಘವು ಕನ್ನಡದ ಏಳಿಗೆಗಾಗಿ ಶ್ರಮಿಸಿದ ಪ್ರಮುಖ ಸಂಘವಾಗಿದೆ. ಈ ಸಂಘವು ೧೯೩೪ ಮತ್ತು ೧೯೪೫ರಲ್ಲಿ ಎರಡು ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿತು. ಈ ಮೂಲಕ ಕನ್ನಡಪರ ಸಾರ್ವಜನಿಕ ಸಂಸ್ಥೆಗಳು ಕನ್ನಡದ ಪ್ರಚಾರದ ಕಾರ್ಯದಲ್ಲಿ ತೊಡಗಿದವು. ರಾಯಚೂರಿನ ಕರ್ನಾಟಕ ಸಂಘಕ್ಕೆ ನಿಜಾಮ ಸರ್ಕಾರದಿಂದ ಸ್ವಂತ ನಿವೇಶನ ನೀಡಿದ್ದು ಮತ್ತು ಕಟ್ಟಡದ ಶಂಕುಸ್ಥಾಪನೆ ಮಾಡಿದ್ದು ಸ್ಪಷ್ಟವಾಗಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ನಿಜಾಮರು ಕನ್ನಡದ ವಿರೋಧಿಗಳಾಗಿರದೆ ಕನ್ನಡದ ಬೆಳವಣಿಗೆಗೆ ಸಹಕರಿಸಿದವರಾಗಿದ್ದಾರೆಂದು ಈ ಮೂಲಕ ತಿಳಿದುಬರುತ್ತದೆ. ಹಾಗಾಗಿ ರಾಯಚೂರು ಜಿಲ್ಲೆಯಲ್ಲಿ ಕನ್ನಡವನ್ನೇ ಬಳಸಲಾಗುತ್ತಿತ್ತು ಎಂದು ಗುರುತಿಸಬಹುದಾಗಿದೆ. ಅಲ್ಲದೆ ನಿಜಾಮರು ಎಲ್ಲ ಕ್ಷೇತ್ರಗಳ ಅಭಿವೃದ್ಧಿಗೆ ಆದ್ಯತೆ ನೀಡಿರುವುದನ್ನು ಗಮನಿಸಬಹುದಾಗಿದೆ.

### ೪.೩.೩. ಸಾಮಂತರು ಮತ್ತು ಸಂಸ್ಥಾನಿಕರ ಕಾಲದ ಆಡಳಿತ ವಿಭಾಗಗಳು

ರಾಯಚೂರು ದೋ-ಅಬ್ ಪ್ರದೇಶದಲ್ಲಿ ವಿವಿಧ ಅರಸು ಮನೆತನಗಳ ಆಳ್ವಿಕೆಯ ಕಾಲಘಟ್ಟದಲ್ಲಿ ಆಡಳಿತದ ನಿರ್ವಹಣೆಗಾಗಿ ಆಡಳಿತ ಘಟಕಗಳನ್ನು ಹೊಂದಲಾಗಿತ್ತು. ಇಲ್ಲಿ ಕೇವಲ ಆಡಳಿತ ವಿಭಾಗಗಳನ್ನು ಮಾತ್ರ ಗುರುತಿಸಲು ಪ್ರಯತ್ನಿಸಲಾಗಿದೆ.

ಈ ಪ್ರದೇಶದಲ್ಲಿ ಮೌರ್ಯರ ಕಾಲದ ಆಡಳಿತ ವಿಭಾಗವಾಗಿ ಮಸ್ಕಿ ಗುರುತಿಸಿಕೊಂಡಿತ್ತು. ನಂತರದಲ್ಲಿ ರಾಷ್ಟ್ರಕೂಟರ ಆಳ್ವಿಕೆ ಆರಂಭವಾಗುವ ವೇಳೆಗೆ ಈ ಪ್ರದೇಶವನ್ನು ಎಡದೊರೆ-೨೦೦೦ ಎಂದು ಕರೆಯಲಾಗಿದೆ. ಇದರ ವ್ಯಾಪ್ತಿ ಬಹುದೊಡ್ಡದಾಗಿದೆ. ಬೇರೆ ಜಿಲ್ಲೆಗಳಲ್ಲಿ ಎಡೆದೊರೆ-೨೦೦೦ದ ಉಲ್ಲೇಖಗಳು ಕಂಡುಬರುತ್ತವೆ. ಆದರೆ ವಾಸ್ತವವಾಗಿ ಈ ಪ್ರದೇಶವೇ ಎಡೆದೊರೆ-೨೦೦೦ ಆಗಿತ್ತು ಎಂಬುದು ಸ್ಪಷ್ಟ, ಈ ಎಡೆದೊರೆ-೨೦೦೦ ಎನ್ನುವ ಪದ ಬಳಕೆ ಕ್ರಿ.ಶ. ೧೨೧೫ರವರೆಗೆ ಕಂಡು ಬರುತ್ತದೆ. ನಂತರ ವಿಜಯನಗರ ಮತ್ತು ಬಹಮನಿ, ಆದಿಲ್‌ಶಾಹಿಗಳ ಕಾಲದಲ್ಲಿ "ದೋ-ಅಬ್" ಪ್ರದೇಶವೆಂದು ಕರೆಯಲಾಗುತ್ತಿತ್ತು. ಇದೇ ಪದ ಬಳಕೆ ಪ್ರಸ್ತುತದವರೆಗೆ ಬಳಸಲಾಗುತ್ತಿದೆ. ಈ ಎಲ್ಲವುಗಳ ಮಧ್ಯ ಕಾಲಕ್ಕೆ ತಕ್ಕಂತೆ ವಿವಿಧ ಆಡಳಿತ ವಿಭಾಗಗಳನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತಿತ್ತು. ಕೆಲವು ಆಡಳಿತ ವಿಭಾಗಗಳ ಜೊತೆಗೆ ಸಂಖ್ಯೆಗಳನ್ನು ಹೇಳಲಾಗಿದೆ. ಈ ಸಂಖ್ಯೆ ಆ ವಿಭಾಗ ಹೊಂದಿದ ಗ್ರಾಮಗಳನ್ನು ಸೂಚಿಸುತ್ತದೆಯೋ ಅಥವಾ ಸೈನಿಕ ತುಕಡಿಗಳನ್ನು ಸೂಚಿಸುತ್ತದೆಯೋ ಎಂಬುದು ಅಸ್ಪಷ್ಟ, ಗ್ರಾಮಗಳ ಸಂಖ್ಯೆಯಂತೂ ಅಲ್ಲ. ಪ್ರಸ್ತುತ ಈ ಜಿಲ್ಲೆಯಲ್ಲಿ ೮೮೯ ಗ್ರಾಮಗಳು ಕಂಡುಬರುತ್ತವೆ. ಇದಕ್ಕೆ ಇನ್ನು ೧೧೧೧ ಗ್ರಾಮಗಳ ಅಗತ್ಯವುಂಟಾಗುತ್ತದೆ. ಇದನ್ನು ಗಮನಿಸಿದರೆ ಸಂಖ್ಯೆಯಿಂದ ಗುರುತಿಸಿಕೊಂಡಿದ್ದ ವಿಭಾಗಗಳು ಗ್ರಾಮಗಳನ್ನು ಹೊಂದಿರಲಿಲ್ಲ ಎಂಬುದಾಗಿ ತಿಳಿಯಬಹುದಾಗಿದೆ.

ಈ ಪ್ರದೇಶದಲ್ಲಿ ಕಂಡುಬರುವ ಆಡಳಿತ ವಿಭಾಗಗಳನ್ನು ಕಂಪಣ, ಸೀಮೆ, ಪರಗಣೆ, ಮಾಮಲೆ, ಸಮತು, ಕಿಲ್ಲೆ, ಮಹಲು, ಸರದೇಶಗತಿ, ಮಿರಾಸಿ ಹಾಗೂ ಗ್ರಾಮ ಮುಂತಾದ ಹೆಸರುಗಳಿಂದ ಗುರುತಿಸಲಾಗಿದೆ. ಇವುಗಳ ಉಲ್ಲೇಖಗಳು ರಾಷ್ಟ್ರಕೂಟರ ಕಾಲದಿಂದ ನಿಜಾಮರ ಕಾಲದವರೆಗೆ ಕಂಡುಬರುತ್ತವೆ. ಶಾಸನಾಧಾರಿತ ಮತ್ತು ಬರಹಗಳನ್ನಾಧರಿಸಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

#### ೪.೩.೩.೧. ಕಂಪಣ

ಈ ಪ್ರದೇಶದ ಶಾಸನಗಳಲ್ಲಿ ಏಳು ಪ್ರಮುಖ ಕಂಪಣಗಳ ಉಲ್ಲೇಖ ದೊರೆಯುತ್ತದೆ. ಅದರಲ್ಲಿ ಐದು ಈ ಪ್ರದೇಶದಲ್ಲಿರುವ ಕಂಪಣಗಳಾಗಿವೆ. ಅವು ಮುದಗುಂದೂರು-೩೦೦,[೨೩೬] ಅಯ್ಯಣವಾಡಿ-೩೦೦,[೨೩೭] ಕರಡಿಕಲ್-೩೦೦,[೨೩೮] ಮೊಸಳಿಕಲ್-೩೦೦,[೨೩೯] ಹಾಗೂ ಮೊರಟ-೩೦೦,[೨೪೦] ಎಡದೊರೆ-೨೦೦೦ ವ್ಯಾಪ್ತಿಯಲ್ಲಿದ್ದು, ಈ ಪ್ರದೇಶದ ಹೊರಗಡೆಯಿರುವ ಕಂಪಣಗಳೆಂದರೆ, ಕೆಳವಾಡಿ-೩೦೦ ಮತ್ತು ೩೨೦[೨೪೧] ಹಾಗೂ ಬಲ್ಲಕುಂದೆ-೩೦೦[೨೪೨] ಎಂಬವುಗಳಾಗಿವೆ. ಇವು ಸಾಮಂತರ ರಾಜಧಾನಿ ಕೇಂದ್ರಗಳಾಗಿದ್ದವು. ಆಡಳಿತ ಪ್ರಮುಖ ಕೇಂದ್ರಗಳಾಗಿ ಪ್ರಸಿದ್ಧಿಯನ್ನು ಪಡೆದಿದ್ದವು. ಅಲ್ಲದೆ ಇವು ಉಪಾಡಳಿತ ವಿಭಾಗಗಳನ್ನು ಹೊಂದಿದ್ದವು. ಅವು ಕಿಸುಕಾಡು-೭೦,[೨೪೩] ಸಾಲಗುಂದೆ-೭೦,[೨೪೪] ನಿಟ್ಟರವೆ-೭೦,[೨೪೫] ಕುಂದರಗೆ-೭೦,[೨೪೬] ಕುದಿಯಪರ್ವಿ-೭೦,[೨೪೭] ಗೋನು-೭೦.[೨೪೮] ಇವುಗಳಲ್ಲಿ

ಮೊದಲಿನ ಎರಡು ಈ ಪ್ರದೇಶದಲ್ಲಿವೆ. ಅಲ್ಲದೆ ಮಸ್ಕಿ,[೨೫೯] ಮುದಗಲ್,[೨೬೦] ಬನ್ನಿಗೋಳ,[೨೬೧] ಮಾನ್ವಿ,[೨೬೨] ಗೋರಿಕಲ್ಲು-೧೨,[೨೬೩] ಕುರುಡಿ,[೨೬೪] ಕಲ್ಲೂರು,[೨೬೫] ಬಲ್ಲಟಗಿ,[೨೬೬] ಸಿರವಾರ,[೨೬೭] ಮುಕ್ಕುಂದ,[೨೬೮] ಬಳಗಾನೂರು,[೨೬೯] ಬನ್ನಿಗನೂರು,[೨೭೦] ಬೇವಿನೂರು,[೨೭೧] ಒಳಬಳ್ಳಾರಿ[೨೭೨] ಹಾಗೂ ಹರಳು-೧೨[೨೭೩] ಮುಂತಾದವು ಕೆಲವು ಸಲ ಉಪಕೇಂದ್ರಗಳಾಗಿದ್ದವು. ಇನ್ನೂ ಕೆಲವು ಸಲ ಪ್ರಧಾನ ಆಡಳಿತ ಕೇಂದ್ರಗಳಾಗಿಯೂ ಗುರುತಿಸಿಕೊಂಡಿದ್ದವು. ಇವುಗಳಲ್ಲಿ ಸಾಮಂತ, ಉಪಸಾಮಂತ ಮುಂತಾದವರು ಆಡಳಿತವನ್ನು ನೋಡಿಕೊಂಡು ಹೋಗುತ್ತಿದ್ದರು.

### ೪.೩.೩.೨. ಸೀಮೆಗಳು

ಈ ಪ್ರದೇಶದಲ್ಲಿ ಕಂಪಣಗಳ ಆಡಳಿತ ಸ್ವರೂಪ ಬದಲಾಗಿ ಅದು ಸೀಮೆಯ ಆಡಳಿತ ವ್ಯವಸ್ಥೆಯಾಗಿ ಪರಿವರ್ತನೆಗೊಂಡಿತು. ಇಲ್ಲಿ ಅಮರನಾಯಕರ ಆಳ್ವಿಕೆ ಕಂಡುಬರುತ್ತದೆ. ಸೀಮೆಗಳ ಕಲ್ಪನೆ ಒಂಬತ್ತನೆಯ ಶತಮಾನದಲ್ಲಿದ್ದರೂ ಅದು ೧೬ ರಿಂದ ೧೮ನೆಯ ಶತಮಾನದಲ್ಲಿ ಅದರ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಇದರ ಉಲ್ಲೇಖ ಈಗಲೂ ಬಳಸಲಾಗುತ್ತದೆ. ಗ್ರಾಮೀಣ ಜನರು ಸಾಮಾನ್ಯವಾಗಿ ಮಾತಾನಾಡುವಾಗ ಯಾವ ಸೀಮೆಯವರು ನೀವು ಎಂಬ ಮಾತು ಕೇಳಿಬರುತ್ತದೆ. ಸೀಮೆ ಎನ್ನುವ ಪದ ಗ್ರಾಮ, ಹೊಲಗಳ ಹಿನ್ನೆಲೆಯಾಗಿಯೂ ಕಂಡುಬರುತ್ತದೆ. ಈ ಪ್ರದೇಶದಲ್ಲಿ ಕಂಡುಬರುವ ಸೀಮೆಗಳು ಹೀಗಿವೆ. ಮಸ್ಕಿ ಸೀಮೆ,[೨೭೪] ಮುದಗಲ್ ಸೀಮೆ,[೨೭೫] ಮುಕ್ಕುಂದಿ ಸೀಮೆ,[೨೭೬] ರಾಯಚೂರು ಸೀಮೆ,[೨೭೭] ರೌಡಕುಂದೆ ಸೀಮೆ,[೨೭೮] ಕೂಡಲೂರು ಸೀಮೆ,[೨೭೯] ಗುಂಜಹಳ್ಳಿ ಸೀಮೆ,[೨೮೦] ಹಾಗೂ ಗಲಗು ಮತ್ತು ರಾಯದುರ್ಗ ಸೀಮೆ[೨೮೧] ಮುಂತಾದವು. ಇವುಗಳಲ್ಲಿ ಅಮರನಾಯಕರು ಆಳುತ್ತಿದ್ದರು. ಇವು ಹೆಚ್ಚಾಗಿ ವಿಜಯನಗರ ಮತ್ತು ಆದಿಲ್‌ಶಾಹಿಗಳ ಕಾಲದಲ್ಲಿ ಬೆಳಕಿಗೆ ಬಂದವು.

### ೪.೩.೩.೩. ಪರಗಣೆ

ಇದು ಪರ್ಶಿಯನ್ ಪದ. ಇದರ ಅರ್ಥ ಪ್ರದೇಶ ಎಂದಾಗುತ್ತದೆ. ಒಂದು ತಾಲೂಕಿನಷ್ಟು ವ್ಯಾಪ್ತಿಯನ್ನು ಹೊಂದಿರುವ ಪ್ರದೇಶವನ್ನು ಪರಗಣೆ ಎನ್ನುವರು. ಇದು ೫೦ರಿಂದ ೨೦೦ ಹಳ್ಳಿಗಳನ್ನು ಒಳಗೊಂಡಿರುತ್ತಿತ್ತು. ಈ ಪರಗಣೆಯ ಅಧೀನದಲ್ಲಿ ತರಫ್, ಸಮತ್ ಹಾಗೂ ಕರ್ಯಾತ್ ಎಂಬ ಉಪವಿಭಾಗಗಳಿರುತ್ತಿದ್ದವು. ಪರಗಣೆಯ ಅಧಿಕಾರಿಗಳಾಗಿ ದೇಶಪಾಂಡೆ ಅಥವಾ ದೇಶಮುಖ ಅಥವಾ ದೇಸಾಯಿಗಳು ಕಾರ್ಯ ನಿರ್ವಹಿಸುತ್ತಿದ್ದರು. ಇವರ ಕೆಲಸ ಕಂದಾಯವನ್ನು ವಸೂಲಿ ಮಾಡುವುದಾಗಿತ್ತು (ಕುಲಕರ್ಣಿ ೨೦೦೨: ೧೮೧-೮೨).

ಈ ಪ್ರದೇಶದಲ್ಲಿ ಹಲವು ಪರಗಣೆಗಳು ಇರುವುದು ಕಂಡುಬರುತ್ತದೆ. ಅವು ಬೆಳಡೋಣಿ,[೨೮೨] ಸಿರವಾರ,[೨೮೩] ಗುಡಗುಂಟಿ ಮತ್ತು ಮಾದರಾಯನ ಕೋಟೆ,[೨೮೪] ವೀರಗೋಟ,[೨೮೫] ಮುದಗಲ್,[೨೮೬] ದೇವದುರ್ಗ, ಅರಕೇರಿ, ಕ್ಯಾದಿಗ್ಗೇರಿ, ಗೋನವಾಟ್ಲ, ಐದಬಾವಿ ಮುಂತಾದವು.[೨೮೭] ಇವು ಬಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ಪ್ರಭಾವಿತವಾಗಿ ಕಾಣಿಸಿಕೊಂಡಿದ್ದವು. ಈ ಆಡಳಿತ ಕೇಂದ್ರಗಳ ಮೂಲಕ ದೇಸಾಯಿಗಳು ಬಲಿತುಕೊಂಡರು. ದೇಸಾಯಿ, ದೇಶಮುಖ, ದೇಶಪಾಂಡೆಗಳು ಸುಲ್ತಾನನಿಂದ ಜಹಗೀರನ್ನು ಪಡೆದು ಸೇವೆ ಸಲ್ಲಿಸುತ್ತಿದ್ದರು.

**೪.೩.೩.೪. ಮಾಮಲೆ**

ಇದು ಅರೇಬಿಕ್ ಭಾಷೆಯ ಪದವಾಗಿದೆ. ಈ ಬಗೆಯ ಆಡಳಿತ ವಿಭಾಗ ಕಂಡುಬರುವುದು ಬಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ. ಮಾಮಲೆ ಎಂದರೆ ನಿರ್ಧಾರಿತವಾದದ್ದು ಅಥವಾ ಒಪ್ಪಂದವಾದದ್ದು ಎಂದಾಗುತ್ತದೆ. ಮಾಮಲೆಯ ಮುಖ್ಯಸ್ಥನನ್ನು ಹವಾಲ್ದಾರ ಎಂದು ಕರೆಯಲಾಗುತ್ತದೆ. ಹವಾಲ್ದಾರನು ನೌಕರನಾಗಿದ್ದನು. ಯಾವುದೇ ಬಗೆಯ ಅಧಿಕಾರಗಳನ್ನು ನೀಡಲಾಗಿರಲಿಲ್ಲ. ಸರ್ಕಾರ ನೀಡುವ ಸಂಬಳದ ಆಧಾರದ ಮೇಲೆ ಜೀವನ ನಡೆಸಬೇಕಾಗಿತ್ತು. ಅಲ್ಲದೆ ಹಲವು ಬಗೆಯ ಆದಾಯದ ಮೂಲಗಳಿದ್ದವೆಂದು ತಿಳಿದುಬರುತ್ತದೆ(ಮಹಾದೇವಪ್ಪ ೨೦೧೦: ೨೨). ಈ ಪ್ರದೇಶದಲ್ಲಿ ರಾಯಚೂರು, ಮುದಗಲ್ ಮತ್ತು ದೇವದುರ್ಗಗಳು ಮಾಮಲೆಗಳಾಗಿದ್ದವು. ಈ ಬಗೆಯ ಆಡಳಿತ ವಿಭಾಗಗಳ ಮೂಲಕ ಆದಿಲ್‌ಶಾಹಿಗಳು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಇದರಲ್ಲಿ ಹತ್ತೆಂಟು ಸಮತುಗಳು ಇರುತ್ತವೆ. ಪ್ರಮುಖ ಪಟ್ಟಣಗಳು, ಕೋಟೆಗಳು ಈ ಪ್ರದೇಶದ ವ್ಯಾಪ್ತಿಯಲ್ಲಿದ್ದವು.

**೪.೩.೩.೫. ಸಮತು**

ಇದು ಕೂಡ ಒಂದು ಆಡಳಿತ ವಿಭಾಗ. ಇದು ಕೂಡ ಹಲವು ಹಳ್ಳಿಗಳನ್ನು ಒಳಗೊಂಡಿತ್ತು. ಇದರ ಮುಖ್ಯಸ್ಥರು ದೇಸಾಯಿ ಅಥವಾ ದೇಶಪಾಂಡೆಯವರಾಗಿದ್ದರು. ಈ ಪ್ರದೇಶದಲ್ಲಿ ಎರಡು ಸಮತುಗಳು ಕಂಡುಬರುತ್ತದೆ. ಲಿಂಗಸೂಗೂರು ಮತ್ತು ಗೋನವಾಟ್ಲಗಳು.[೨೮] ಇವು ಪ್ರಮುಖ ಸಮತುಗಳಾಗಿವೆ.

**೪.೩.೩.೬. ಕಿಲ್ಲೆ**

ಕಿಲ್ಲೆ ಎಂದರೆ ಕೋಟೆ ಎಂದರ್ಥ. ಕಿಲ್ಲೆಯ ಅಧಿಪತಿಯನ್ನು ಕಿಲ್ಲೇದಾರ ಎಂದು ಕರೆಯಲಾಗುತ್ತದೆ. ಇದು ಅನೇಕ ಸಮತು, ಪರಗಣೆಗಳು, ಪೇಟೆಗಳು, ಬಜಾರಗಳನ್ನು ಹೊಂದಿದ್ದಿತು. ಈ ಕಿಲ್ಲೆಗೆ ಸಂಬಂಧಪಟ್ಟಂತೆ ಹಲವು ಅಧಿಕಾರಿಗಳಿದ್ದರು. ಅವರೆಂದರೆ. ಹವಾಲ್ದಾರ, ಠಾಣೆದಾರ, ಕಾರಕೂನ, ನಾಯಕೋಡಿ ಮುಂತಾದವರಿದ್ದ ಬಗ್ಗೆ ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫: ೩೭). ಕಿಲ್ಲೆಯ ಮುಖ್ಯಸ್ಥನನ್ನು ಹವಾಲ್ದಾರನೆಂದು ಗುರುತಿಸಲಾಗಿದೆ. ಈ ಪ್ರದೇಶದಲ್ಲಿ ರಾಯಚೂರು,[೨೯] ದೇವದುರ್ಗ,[೩೦] ಮುದಗಲ್[೩೧] ಮತ್ತು ಜಲದುರ್ಗ[೩೨] ಮುಂತಾದ ಕಿಲ್ಲೆಗಳು ಆದಿಲ್‌ಶಾಹಿಗಳ ಅಧೀನದಲ್ಲಿ ಅಸ್ತಿತ್ವದಲ್ಲಿದ್ದವು.

**೪.೩.೩.೭. ಮಹಲು**

ಇದರ ವ್ಯಾಪ್ತಿ ಸ್ವಲ್ಪ ದೊಡ್ಡದೆಂದೇ ಹೇಳಬಹುದು. ರಾಯಚೂರು ದೋ-ಅಬ್ ಪ್ರದೇಶ ಗೋಗಿ ಮಹಲಿಗೆ ಸೇರಿತ್ತು. ಗೋಗಿ ಪ್ರಮುಖ ಕೇಂದ್ರವಾಗಿತ್ತು. ಇದು ಕಿಲ್ಲೆ, ಸಮತು, ತರಫ್ ಮುಂತಾದವನ್ನು ಹೊಂದಿತ್ತು. "ಈ ಮಹಲಿಗೆ ದೇವದುರ್ಗ ಕಿಲ್ಲೆ, ಸಮತ ಲಿಂಗಸೂಗೂರು, ಗೋನವಾಟ್ಲ ಈ ಪ್ರದೇಶದ ಹಳ್ಳಿಗಳು ಸೇರಿದ್ದವೆಂದು ತಿಳಿದುಬರುತ್ತದೆ"(ಧ್ರುವನಾರಾಯಣ ೨೦೦೫: ೩೧).

**೪.೩.೩.೮. ಮೌಜೆ**

ಮೌಜೆ ಅಂದರೆ ತಾಲೂಕು ಎಂದರ್ಥ. ಅಮಲ್ದಾರ ಇಲ್ಲಿನ ಅಧಿಕಾರಿ. ಈ ಪ್ರದೇಶದಲ್ಲಿ ಮಾಡ ಸಿರವಾರ ಮತ್ತು ಖಾನಪುರಗಳು ಮೌಜೆಗಳಾಗಿದ್ದವೆಂದು ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫:೩೪). ಆದಿಲ್‌ಶಾಹಿಗಳ ಕಾಲಾವಧಿಯಲ್ಲಿ ಇದು ಒಂದು ಆಡಳಿತ ವಿಭಾಗವಾಗಿ ಗುರುತಿಸಿ ಕೊಂಡಿತ್ತು.

### ೪.೩.೩.೯. ಸರದೇಶಗತಿ

ಇದು ಹಲವು ಹಳ್ಳಿಗಳನ್ನು ಹೊಂದಿರುವ ಆಡಳಿತ ವಿಭಾಗ. ಆದಿಲ್‌ಶಾಹಿಗಳ ಕಾಲದಲ್ಲಿ ರಾಯಚೂರು ಒಂದು ಸರದೇಶಗತಿಯಾಗಿತ್ತು. ಇದರ ಮುಖ್ಯಸ್ಥರನ್ನು ಸರದೇಸಾಯಿ ಎನ್ನಲಾಗುತ್ತದೆ. ಇವರ ಕೆಲಸ ದಹಿಜಾ ಎಂಬ ತೆರಿಗೆಯನ್ನು ೧೦೦ಕ್ಕೆ ೧೦ರಂತೆ ವಸೂಲಿ ಮಾಡುವುದು. ಹಾಗೆಯೇ ಯುದ್ಧಕ್ಕೆ ಸೈನ್ಯವನ್ನು ಹೊಯ್ಯಬೇಕಾಗಿತ್ತೆಂದು ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫:೮-೯). ರಾಯಚೂರು ಮಿರಾಸಿಯೂ ಆಗಿತ್ತು.

### ೪.೩.೩.೧೦. ನಾಡಗೌಡಿಕೆ

ಈ ಪ್ರದೇಶದಲ್ಲಿ ಅನೇಕ ನಾಡಗೌಡಿಕೆ ಮನೆತನಗಳು ಅಸ್ತಿತ್ವದಲ್ಲಿವು. ಇವು ಅನೇಕ ಹಳ್ಳಿಗಳನ್ನು ಹೊಂದಿದ್ದವು. ನಾಡಗೌಡರು ಹಲವು ಜಹಗೀರ್‌ಗಳನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಅಲ್ಲಲ್ಲಿ ಈ ಮನೆತನಗಳ ಆಡಳಿತ ಕಂಡುಬರುತ್ತದೆ. ಅವು ಸಿಂಧನೂರು ತಾಲೂಕಿನಲ್ಲಿ- ಜವಳಗೇರಾ, ಜಾಲವಾಡಗಿ, ಉದ್ಬಾಳ, ಉಮಲೂಟಿ, ಬೆಳ್ಳಿಗನೂರು, ಮಲ್ಲಾಪುರ, ಗೋಮರ್ಸಿ ಮತ್ತು ಸಾಲಗುಂದೆ, ಮಾನ್ವಿ ತಾಲೂಕಿನಲ್ಲಿ-ಪೋತ್ನಾಳ, ಜೀನೂರು, ಪಾಮನಕಲ್ಲೂರು, ಮಾನ್ವಿ ಮತ್ತು ಪನ್ನೂರು, ಲಿಂಗಸೂಗೂರು-ತಾಲೂಕಿನಲ್ಲಿ  ಚಿಕ್ಕನಗನೂರು, ಅನ್ವರಿ ಮತ್ತು ಸರ್ಜಾಪುರ. ದೇವದುರ್ಗ- ತಾಲೂಕಿನಲ್ಲಿ ಎನ್. ಗಣೇಕಲ್, ಗಣಜಲಿ ಮತ್ತು ಮದರಕಲ್‌ಗಳಾಗಿವೆ(ಮುಕ್ಕುಂದಿ ಮಠ ೨೦೧೦: ೬೧-೬೨). ಈ ಪ್ರದೇಶದಲ್ಲಿ ಕಂಡುಬರುವ ನಾಡಗೌಡರು ಪ್ರಭಾವಿಗಳಾಗಿದ್ದರು. ದೊಡ್ಡ ಪ್ರಮಾಣದ ಭೂಮಾಲಿಕರಾಗಿದ್ದರು, ಜಹಗೀರುಗಳನ್ನು ಪಡೆದಿದ್ದರು. ತಮ್ಮ ಪ್ರಭಾವವನ್ನು ಈಗಲೂ ಉಳಿಸಿಕೊಂಡಿರುವುದು ಕಂಡುಬರುತ್ತದೆ.

### ೪.೩.೩.೧೧. ಗ್ರಾಮಾಡಳಿತ

ಈ ಪದ್ಧತಿ ಪ್ರಾಚೀನ ಕಾಲದಿಂದ ನಡೆದುಬಂದ ಕೊನೆಯ ಆಡಳಿತ ಘಟಕವಾಗಿದೆ. ಗಾವುಂಡ, ಪ್ರಭುಗಾವುಂಡ, ಪೆರ್ಗಡೆಗಳನ್ನು ಗ್ರಾಮಾಧಿಕಾರಿಗಳನ್ನಾಗಿ ನೇಮಿಸಲಾಗುತ್ತಿತ್ತು. ನಂತರ ಆದಿಲ್‌ಶಾಹಿಗಳ ಕಾಲದಲ್ಲಿ ಪಟೇಲ, ಕುಲಕರ್ಣಿ ಮತ್ತು ಚೌಕಿದಾರ ಎಂದು ಗುರುತಿಸಲಾಯಿತು. ಹೈದರಾಬಾದ್ ನಿಜಾಮರ ಕಾಲದಲ್ಲಿ ಮಾಲಿಗೌಡ, ಪೋಲೀಸಗೌಡ, ಕುಲಕರ್ಣಿ, ತಳವಾರ, ಓಲೇಕಾರ, ಶೇಕ್‌ಸಿಂಧಿ ಮುಂತಾದವರು ಗ್ರಾಮ ಘಟಕ ಅಧಿಕಾರಿಗಳಾಗಿದ್ದರು.

ಈ ಮೇಲಿನ ಎಲ್ಲಾ ಆಡಳಿತ ವಿಭಾಗಗಳಲ್ಲಿ ವಂಶಪಾರಂಪರ್ಯವಾಗಿ ಬಂದ ದೇಸಾಯಿ, ದೇಶಮುಖ, ದೇಶ ಪಾಂಡೆಗಳು, ನಾಡಗೌಡರು, ಗ್ರಾಮಾಧಿಕಾರಿಗಳು ಬಹುತೇಕವಾಗಿ ಮೇಲು ವರ್ಗದ ಹಿಂದುಗಳಾಗಿದ್ದರು. ಬ್ರಾಹ್ಮಣರು, ಲಿಂಗಾಯತ, ಮರಾಠ, ಕಾಯಸ್ಥ ಪ್ರಭುಗಳಾಗಿರುತ್ತಿದ್ದರು. ಕ್ವಚಿತ್ತಾಗಿ ಮುಸಲ್ಮಾನರ ಹೆಸರುಗಳು ಕಂಡರೂ ಅವರು ಮತಾಂತರಗೊಂಡವರಾಗಿದ್ದರು. ಹವಾಲ್ದಾರ ಮತ್ತು ಅದಕ್ಕೆ ಮೇಲಿನ ಅಧಿಕಾರಿ ವರ್ಗದವರು ಮುಸಲ್ಮಾನರಾಗಿರುತ್ತಿದ್ದರು. ಸ್ಥೂಲವಾಗಿ ಹೇಳುವುದಾದರೆ ಜನಸಂಪರ್ಕ, ಕಂದಾಯ ಸಂಗ್ರಹಣೆಯ ಅಧಿಕಾರ ಹಿಂದುಗಳದ್ದಾದರೆ, ಅವರನ್ನು ನಿಯಂತ್ರಿಸುವ ಅಧಿಕಾರ ಮುಸಲ್ಮಾನರದ್ದಾಗಿತೆಂದು ಕೃಷ್ಣ ಕೊಲ್ಹಾರ ಕುಲಕರ್ಣಿ ಅವರು ತಿಳಿಸುತ್ತಾರೆ. ಅಲ್ಲದೆ ಆಡಳಿತದ ನಿಯಂತ್ರಣ ಬಿಜಾಪುರ ರಾಜಧಾನಿಯಿಂದ ನಡೆಯುತ್ತಿತ್ತಾದರೂ ಕೆಳಹಂತದ

ಅಧಿಕಾರ ಕೇಂದ್ರೀಕರಣದ ಜಾಗಗಳೆಲ್ಲೆಲ್ಲ ಹಿಂದೂಗಳೇ ಮುಖ್ಯಸ್ಥರಾಗಿರುತ್ತಿದ್ದರು. ಹಿಂದುಗಳ ನಂಬುಗೆಯ ಹೊರತಾಗಿ ಆದಿಲ್‌ಶಾಹಿ ರಾಜ್ಯ ನಡೆಯುವುದೇ ಕಷ್ಟ ಎಂಬಷ್ಟರ ಮಟ್ಟಿಗೆ ಅದು ಹಿಂದುಗಳ ಮೇಲೆ ಅವಲಂಬಿತವಾಗಿತ್ತು(ಕುಲಕರ್ಣಿ ೨೦೦೨:೧೮೩). ಆಡಳಿತದಲ್ಲಿ ಬ್ರಾಹ್ಮಣರನ್ನು ಸೇರಿಸಿಕೊಳ್ಳಲಾಗಿತ್ತು ಹಾಗೂ ಅವರಿಂದಲೇ ರಾಜ್ಯದ ಜಮಾ ಖರ್ಚುನ್ನು ಸ್ಥಳೀಯ ಭಾಷೆಯಲ್ಲಿ ಬರೆದಿಡಲು ಪ್ರಾರಂಭಿಸಿತ್ತು. ಹೀಗೆ ಮೊದಲ ಇಬ್ರಾಹಿಂನ ಕಾಲದಲ್ಲಿಯೇ ರಾಜ್ಯದಲ್ಲಿ ಹಿಂದುಗಳ ಬ್ರಾಹ್ಮಣರ ವರ್ಚಸ್ಸು ಬೆಳೆದುಬಂದದ್ದನ್ನು ಕಾಣುತ್ತೇವೆ(ಕುಲಕರ್ಣಿ ೨೦೦೨: ೧೭೯). ಇದು ಹೈದರಾಬಾದ್ ನಿಜಾಮರ ಕಾಲದಲ್ಲಿಯೂ ಮುಂದುವರೆಯಿತು. ಆಗ ಮಾಲಿಗೌಡ, ಪೊಲೀಸ್‌ಗೌಡ, ಕುಲಕರ್ಣಿ, ತಳವಾರ ಮುಂತಾದವರು ಗ್ರಾಮಾಧಿಕಾರಿಗಳಾಗಿದ್ದರು. ಇವರು ಕೂಡಾ ಹಿಂದೂ ಗಳಾಗಿದ್ದಾರೆ. ಬ್ರಾಹ್ಮಣರು, ಲಿಂಗಾಯತರು ಪ್ರಭಾವಿಯಾಗಿ ಅಧಿಕಾರವನ್ನು ಹೊಂದಿದ್ದರು, ಅಲ್ಲದೆ ತಳವಾರಿಕೆಯನ್ನು ಕೆಳಸಮುದಾಯವಾದ ಬೇಡನಾಯಕರು ಮಾಡುತ್ತಿದ್ದರು. ಇವರು ಮೇಲಿನ ಗೌಡ, ಕುಲಕರ್ಣಿಗಳು ಹೇಳುವ ಮಾತನ್ನು ಕೇಳಬೇಕಾಗಿತ್ತು, ಅದು ಸ್ವಾತಂತ್ರ್ಯ ನಂತರ ಕೆಲಕಾಲ ಮುಂದುವರೆಯಿತು. ಹಾಗೆಯೇ ಪ್ರತಿ ಗ್ರಾಮಗಳಿಗೆ 'ದಳಪತಿ' ಎಂಬ ಅಧಿಕಾರಿಯನ್ನು ಸರ್ಕಾರವೇ ನೇಮಿಸಿತ್ತೆಂದು ತಿಳಿದುಬರುತ್ತದೆ. ದಳಪತಿಯಾದವರು ಗ್ರಾಮದಲ್ಲಿನ ಎಲ್ಲಾ ಬಗೆಯ ನ್ಯಾಯ ಬಗೆಹರಿಸುತ್ತಿದ್ದರು. ಪೊಲೀಸ್ ಠಾಣೆಯ ಅಧಿಕಾರಿಗಳು ದಳಪತಿಗಳನ್ನು ಭೇಟಿಯಾಗಿ ಆಗಾಗ ಸಮಾಚಾರಗಳನ್ನು ತಿಳಿದುಕೊಳ್ಳುತ್ತಿದ್ದರು. ಆದರೆ ಜನ ಸಾಮಾನ್ಯರೆಲ್ಲರೂ ಗ್ರಾಮಾಡಳಿತದ ಗೌಡ, ಕುಲಕರ್ಣಿ, ಮಾಲಿಗೌಡ, ಪೊಲೀಸ್‌ಗೌಡ, ದಳಪತಿಗಳನ್ನು ಅದೇ ಹೆಸರುಗಳ ಮೂಲಕ ಕರೆಯುವುದು ಕಾಣುತ್ತೇವೆ. ಆ ಕುಟುಂಬಗಳು ತಮ್ಮ ಅಡ್ಡ ಹೆಸರನ್ನಾಗಿ ಬರೆದುಕೊಳ್ಳುವುದನ್ನು ಗಮನಿಸಬಹುದಾಗಿದೆ.

### ೪.೪. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬ್ರಿಟಿಶರು

ರಾಯಚೂರು ದೋ-ಅಬ್ ಪ್ರದೇಶ ನಿಜಾಮನ ಅಧೀನದಲ್ಲಿದ್ದರೂ ಅದನ್ನು ಬ್ರಿಟಿಶರು ತಮ್ಮ ಅಧಿಕಾರದ ಮೂಲಕ ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿರುವುದು ಕಂಡುಬರುತ್ತದೆ. ಯುರೋಪಿ ಯನ್ನರಾದ ಬ್ರಿಟಿಶರು ಈ ಪ್ರದೇಶದೊಂದಿಗೆ ಆರ್ಥಿಕ ಮತ್ತು ರಾಜಕೀಯ ಸಂಬಂಧವನ್ನು ಹೊಂದಿದ್ದರು. ಇದಕ್ಕೂ ಮುಂಚೆ ಈ ಪ್ರದೇಶ ರಾಜಕೀಯದ ಹಿನ್ನೆಲೆಯಲ್ಲಿ ಯುರೋಪಿಯನ್ನರ ಪ್ರಭಾವವನ್ನು ಕಂಡಿದೆ. ಕ್ರಿ.ಶ. ೧೫೨೧ರಲ್ಲಿ ವಿಜಯನಗರದ ಅರಸ ಕೃಷ್ಣದೇವರಾಯನು ರಾಯಚೂರು ಕೋಟೆಗೆ ಮುತ್ತಿಗೆ ಹಾಕಿದಾಗ ಪೋರ್ಚುಗೀಸ್ ಸೈನ್ಯವನ್ನು ಬಳಸಿ ವಶಪಡಿಸಿಕೊಂಡನು. ಪೋರ್ಚುಗೀಸರು ಕೃಷ್ಣದೇವರಾಯನಿಗೆ ಸಹಾಯ ಮಾಡಲು ಆರ್ಥಿಕ ಮತ್ತು ರಾಜಕೀಯ ಸಂಬಂಧಗಳೇ ಕಾರಣ ವಾಗಿದ್ದವು. ಯುರೋಪಿಯನ್ನರ ಸ್ಪರ್ಶಕ್ಕೆ ಒಳಗಾದ ಈ ಪ್ರದೇಶ ಹೆಚ್ಚುವರಿ ಉತ್ಪಾದನೆಯ ಮೂಲಕ ಅನೇಕ ಬದಲಾವಣೆ, ಬೆಳವಣಿಗೆಗಳನ್ನು ಕಂಡಿತು, ಅಲ್ಲದೆ ನಗರೀಕರಣದ ಪ್ರಭಾವಕ್ಕೆ ಒಳಗಾಯಿತು. ರಾಯಚೂರು ಮತ್ತು ಲಿಂಗಸೂಗೂರುಗಳಲ್ಲಿ ಪುರಸಭೆಗಳನ್ನು ಹೊಂದಿದ್ದು, ವ್ಯಾಪಾರಗಳಲ್ಲಿ ಸಂಬಂಧಗಳನ್ನು ಹೆಚ್ಚಾಗಿ ಹೊಂದಿತ್ತು. ಅವು ದೊಡ್ಡ ಪಟ್ಟಣಗಳಿಗೆ ಸಂಪರ್ಕದ ಕೊಂಡಿಯಾಗಿತ್ತು. ಬಾಂಬೆ ಮತ್ತು ಮದ್ರಾಸ್ ರೈಲು ಮಾರ್ಗಕ್ಕೆ ಸಂಪರ್ಕವನ್ನು ಕಲ್ಪಿಸುತ್ತದೆ. ಗೋವಾ, ಬಾಂಬೆ ಮುಂತಾದ ಬಂದರುಗಳೊಂದಿಗೂ ಈ ಪ್ರದೇಶ ಸಂಬಂಧ ಹೊಂದಿತ್ತು. ಇಂಗ್ಲೆಂಡ್‌ಗೆ ಅಗತ್ಯವಾಗಿದ್ದ ಹತ್ತಿಯನ್ನು ಹೆಚ್ಚಾಗಿ ಬೆಳೆಯುವ ಪ್ರದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೮೦೦ರಿಂದ ೧೯೪೮ರವರೆಗೆ

ಹಂತ ಹಂತವಾಗಿ ತಮ್ಮ ಪ್ರಭುತ್ವವನ್ನು ಸಾಧಿಸಿದ ಬ್ರಿಟಿಶರು ಈ ಪ್ರದೇಶವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡಿದ್ದರು. ಪ್ರಸ್ತುತ ಸಂದರ್ಭದಲ್ಲಿ ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್ ಸ್ಥಾಪನೆ, ೧೮೫೩ರ ಬೀರಾರ್ ಒಪ್ಪಂದ ಹಾಗೂ ೧೮೫೭ರ ದಂಗೆಯ ಕುರಿತು ಅಭ್ಯಸಿಸಲಾಗಿದೆ.

**೪.೪.೧. ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್ ಸ್ಥಾಪನೆ-೧೮೪೨**

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಲಿಂಗಸೂಗೂರು ಒಂದು ಆಯಕಟ್ಟಿನ ಪ್ರದೇಶ. ಇದು ಚಾರಿತ್ರಿಕವಾಗಿಯೂ ನಿರ್ಣಯಕವಾದ ಸ್ಥಳವಾಗಿತ್ತು. ಹಾಗೆಯೇ ಸುರಪುರ ಸಂಸ್ಥಾನಕ್ಕೆ ಹತ್ತಿರದ ಕೇಂದ್ರವಾಗಿತ್ತು. ಈ ಎಲ್ಲ ಹಿನ್ನೆಲೆಗಳು ಇಲ್ಲಿ ಕಂಟೋನ್ಮೆಂಟ್ ಸ್ಥಾಪಿಸಲು ಸಹಕಾರಿಯಾಗಿದ್ದವು. ಲಿಂಗಸೂಗೂರನ್ನು ಆಯಕಟ್ಟಿನ ಪ್ರದೇಶವೆಂದು ಗುರುತಿಸಿ ೧೮೪೨ ಏಪ್ರಿಲ್‌ನಲ್ಲಿ ಕಂಟೋನ್ಮೆಂಟನ್ನು ಹೊಸದಾಗಿ ರಚನೆ ಮಾಡಲಾಯಿತು. ಈ ಕಂಟೋನ್ಮೆಂಟ್‌ನಲ್ಲಿ ಪ್ರಾರಂಭದಲ್ಲಿ ಕಡಿಮೆ ಪ್ರಮಾಣದ ಫಿರಂಗಿ ಪಡೆಯನ್ನು ನಿಯೋಜಿಸಲಾಯಿತು. ೧೮೪೩ರಲ್ಲಿ ಸ್ವಲ್ಪ ಪ್ರಮಾಣದಲ್ಲಿ ಬದಲಾವಣೆ ತಂದು ಅಲ್ಲಿ ಅಶ್ವದಳದ ಪಡೆಯನ್ನು ಸ್ಥಾಪಿಸಲಾಯಿತು ಎಂಬುದಾಗಿ ಹೆನ್ರಿ ಜಾರ್ಜ್ ಬ್ರಿಗ್ಸ್ ಎಂಬುವವರು ತಿಳಿಸುತ್ತಾರೆ(ಬ್ರಿಗ್ಸ್ ೧೮೬೧: ೧೫೩-೧೫೫). ಇಲ್ಲಿ ಸೇನೆಯ ೫ನೆಯ ತುಕಡಿಯನ್ನು ಇರಿಸಲಾಗಿತ್ತೆಂದು ತಿಳಿದುಬರುತ್ತದೆ.

ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್‌ನ್ನು ಸ್ಥಾಪಿಸಲು ಬಲವಾದ ಕಾರಣವಿರಬೇಕು. ಬ್ರಿಟಿಶರು ಟಿಪ್ಪುವನ್ನು ಸೋಲಿಸುವ ಮೂಲಕ ಕರ್ನಾಟಕ ಪ್ರದೇಶಗಳಲ್ಲಿ ಅಧಿಪತ್ಯವನ್ನು ಸಾಧಿಸಿದ್ದರು. ಕಾಲಾನಂತರದಲ್ಲಿ ಬಾಂಬೆ ಪ್ರೆಸಿಡೆನ್ಸಿ, ಮರಾಠವಾಡ ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿ ಬ್ರಿಟಿಶರ ಅಧಿಕಾರ ಸ್ಥಾಪನೆಯಾಯಿತು. ನಿಜಾಮನ ರಾಜ್ಯದಲ್ಲಿ ೧೬ ಜಿಲ್ಲೆಗಳು ಮಾತ್ರ ಇದ್ದವು. ಅವು ಬ್ರಿಟಿಶರ ಪ್ರಾಂತ್ಯದ ಗಡಿಗಳಿಗೆ ಹೊಂದಿಕೊಂಡಿದ್ದವು. ಟಿಪ್ಪುವನ್ನು ಸೋಲಿಸಿದಂತೆ ನಿಜಾಮನನ್ನು ಸೋಲಿಸಿ ಈ ಪ್ರದೇಶವನ್ನು ಅಧೀನಕ್ಕೆ ಒಳಪಡಿಸಿಕೊಳ್ಳಲು ಬ್ರಿಟಿಶರು ಬಯಸಿರಬೇಕು. ಹಾಗಾಗಿ ಕರ್ನೂಲು, ಬಳ್ಳಾರಿ, ಗದಗ, ಕಲಾದಗಿ, ಸೋಲಾಪುರ, ಸಿಕಿಂದರಾಬಾದ್ ಮುಂತಾದ ಕಡೆಗಳಲ್ಲಿ ಕಂಟೋನ್ಮೆಂಟ್‌ಗಳನ್ನು ಸ್ಥಾಪಿಸಲಾಗಿತ್ತೆನ್ನಬಹುದು. ಕನ್ನಡ ಪ್ರದೇಶಗಳಲ್ಲಿ ಫಲವತ್ತಾದ ಅಧಿಕ ಆದಾಯವನ್ನು ತರುವ ಈ ಭೂಭಾಗವನ್ನು ಪಡೆಯಲು ಪ್ರಯತ್ನಿಸಿದರು. ಈ ಹಿನ್ನೆಲೆಯಲ್ಲಿ ನಿಜಾಮನು ಬ್ರಿಟಿಶರ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕಿದ ನಂತರ ನಿಜಾಮನ ರಾಜಧಾನಿಯಲ್ಲಿ ಬ್ರಿಟಿಶರು ತಮ್ಮ ಪ್ರತಿನಿಧಿಯನ್ನಾಗಿ ಒಬ್ಬ ರೆಸಿಡೆಂಟನನ್ನು ನೇಮಿಸಿದರು. ನಿಜಾಮ ರಾಜ್ಯದಲ್ಲಿ ನಡೆಯುವ ಪ್ರತಿಯೊಂದು ವಿಷಯ ಸಹ ಈ ರೆಸಿಡೆಂಟನಿಗೆ ತಿಳಿಸಬೇಕಿತ್ತು. ಎಲ್ಲ ತೀರ್ಮಾನಗಳು ರೆಸಿಡೆಂಟನ ಮೂಲಕ ನಡೆಯುತ್ತಿದ್ದವು. ನಿಜಾಮನ ರಾಜ್ಯದಲ್ಲಿ ಸಂಸ್ಥಾನಿಕರ ಸಂಸ್ಥಾನಗಳಲ್ಲಿ ಬ್ರಿಟಿಶರ ಪ್ರತಿನಿಧಿಗಳನ್ನು ನೇಮಿಸಲಾಯಿತು. ಅದರಂತೆ ಸುರಪುರ ಸಂಸ್ಥಾನದಲ್ಲಿ ಕ್ಯಾಪ್ಟನ್ ಗ್ರೀಸ್ಲೆ ಮತ್ತು ಕ್ಯಾಪ್ಟನ್ ಮೆಡೋಸ್ ಟೇಲರ್ ಎಂಬುವವರು ಬ್ರಿಟಿಶರ ಪ್ರತಿನಿಧಿಗಳಾಗಿ ಸೇವೆ ಸಲ್ಲಿಸಿದರು. ಪ್ರತಿಭಟನೆ ತೋರುತ್ತಿದ್ದ ಸುರಪುರ ಸಂಸ್ಥಾನವನ್ನು ಹಂತ ಹಂತವಾಗಿ ನಿಯಂತ್ರಿಸುವುದು ಕೂಡ ಬ್ರಿಟಿಶರಿಗೆ ಅಷ್ಟೇ ಮುಖ್ಯವಾಗಿತ್ತು. ಈ ಪ್ರದೇಶದ ಆರ್ಥಿಕತೆಯ ಮೇಲೆ ಹತೋಟಿಯನ್ನು ಸಾಧಿಸುವುದು ಬಹುಮುಖ್ಯವಾಗಿತ್ತು. ಅಲ್ಲದೆ ಮುದಗಲ್ ಮಾರ್ಗ ಬಾಂಬೆ ಮತ್ತು ಮದ್ರಾಸ್ ಮಾರುಕಟ್ಟೆಗಳಿಗೆ ಉತ್ತಮ ಸಾರಿಗೆ ಸಂಬಂಧ ಹೊಂದಿತ್ತು. ಇಂತಹ ಹತ್ತು ಹಲವು ವಿಚಾರಗಳು ಬ್ರಿಟಿಶರ ತಲೆಯಲ್ಲಿದ್ದವು. ಕಂಟೋನ್ಮೆಂಟನ್ನು ಸ್ಥಾಪಿಸಲು ಅವಕಾಶಕ್ಕಾಗಿ ಕಾಯಲಾಗುತ್ತಿತ್ತು. ಇಂತಹ ಸಂದರ್ಭದಲ್ಲಿ "ಸುರಪುರ ಸಂಸ್ಥಾನಿಕರು ಸಿಂಹಾಸನಕ್ಕಾಗಿ ಬಡಿದಾಡುತ್ತಿದ್ದರು. ಸಂಸ್ಥಾನಿಕರಾದ ಇವರು ತಮ್ಮ ಜಗಳವನ್ನು

ತಾವೇ ಬಗೆಹರಿಸಿಕೊಂಡಿದ್ದರೆ ನಿಜಾಮನ, ರೆಸಿಡೆಂಟರ ಮಧ್ಯಸ್ಥಿಕೆಗೆ ಅವಕಾಶವೇ ಇರುತ್ತಿರಲಿಲ್ಲ. ಆದರೆ ಅಧಿಕಾರದ ಗದ್ದುಗೆಯನ್ನೇರಲು ತಮಗೆ ಅವಕಾಶ ಕಲ್ಪಿಸಿ ಎಂದು ಕೃಷ್ಣಪ್ಪನಾಯಕ ಮತ್ತು ಮಲತಮ್ಮ ಹನುಮಪ್ಪನಾಯಕ ಇಬ್ಬರೂ ನಿಜಾಮನಲ್ಲಿ ಮೊರೆಹೊಕ್ಕರು. ಆಗ ಇಂತಹ ಸಮಯಕ್ಕಾಗಿ ಕಾಯುತ್ತಿದ್ದ ನಿಜಾಮನು ಸಮಯ ಸಾಧಿಸಿ ಕೃಷ್ಣಪ್ಪನಾಯಕನನ್ನು ರೂ. ೧೫,೦೦,೦೦೦ ನಜರಾಣೆಯನ್ನು ಬೇಡಿದನು. ಕೃಷ್ಣಪ್ಪನಾಯಕ ೪೧/೨ ಲಕ್ಷ ರೂ.ಗಳನ್ನು ಕೊಟ್ಟು, ಉಳಿದ ಹಣವನ್ನು ಪ್ರತಿವರ್ಷ ೧,೨೫,೦೦೦ ಕಂತಿನಂತೆ ಕೊಡುವಂತೆ ಕರಾರು ಮಾಡಿಕೊಂಡನು. ಇದರಂತೆ ಆರಂಭದ ಮೂರು ವರ್ಷಗಳ ಕಾಲ ಸರಿಯಾಗಿ ಕಂತುಗಳ ವಸೂಲಿಯಾಯಿತು. ನಂತರ ೧೮೩೦ರಲ್ಲಿ ನಿಜಾಮನು ಈ ವಿಷಯದಲ್ಲಿ ಬ್ರಿಟಿಶರ ಸಹಾಯವನ್ನು ಕೋರಿದನು. ಮುಂದಿನ ಒಂಬತ್ತು ವರ್ಷಗಳವರೆಗೆ ಹಣದ ವಸೂಲಿ ನಿಜಾಮನಿಂದ ಸಾಧ್ಯವಿರಲಿಲ್ಲ. ಹಾಗಾಗಿ ಬ್ರಿಟಿಶ್ ಸೈನ್ಯದ ನೆರವಿನಿಂದ ಒಂಬತ್ತು ವರ್ಷಗಳ ಕಾಲ ಹಣವನ್ನು ವಸೂಲಿ ಮಾಡಿದನು. ಮೇಲಿಂದ ಮೇಲೆ ಹೈದರಾಬಾದಿನಿಂದ ಬ್ರಿಟಿಶ್ ಅಧಿಕಾರಿಗಳು ಬಂದು ಹೋಗಬೇಕಾಗಿತ್ತು. ಇದು ಒಂದು ರೀತಿಯಲ್ಲಿ ತಾತ್ಕಾಲಿಕ ವ್ಯವಸ್ಥೆಯಾಗಿ ರೂಪುಗೊಂಡಿತು"(ಧ್ರುವನಾರಾಯಣ ೨೦೦೫: ೧೫೨-೫೩). ಹೈದರಾಬಾದಿನಿಂದ ಸುರಪುರಕ್ಕೆ ಪದೇ ಪದೇ ಹೋಗಿ ಬರುವುದು ತೊಂದರೆಯಾಯಿತು. ಅಲ್ಲದೆ ಇದಕ್ಕೊಂದು ಪರಿಹಾರ ಕಂಡುಕೊಳ್ಳಲು ಕ್ರಿ.ಶ.೧೮೪೨ರಲ್ಲಿ ನಿಜಾಮನಿಗೆ ಸೇರಬೇಕಾದ ಹಣದ ವಿಷಯವಾಗಿ ಮತ್ತು ಇನ್ನೂ ಹಲವು ಸಂಗತಿಗಳನ್ನು ತಿಳಿಯಲು ನಿಜಾಮ ಸರ್ಕಾರ ರೆಸಿಡೆಂಟನ ಮೂಲಕ ಒಂದು ವರದಿಯನ್ನು ಸಿದ್ಧಪಡಿಸಲು ಬಯಸಿತು. ಅದರ ಪ್ರಕಾರ ರೆಸಿಡೆಂಟನು ಸುರಪುರಕ್ಕೆ ಸಂಬಂಧಿಸಿದ ವರದಿ ನೀಡುವಂತೆ ಕೋರಿ ಸುರಪುರಕ್ಕೆ ಕ್ಯಾಪ್ಟನ್ ಗ್ರೀಸ್ಲೆಯನ್ನು ಕಳುಹಿಸಿದನು. ಗ್ರೀಸ್ಲೆ ವರದಿ ಸಿದ್ಧಪಡಿಸಿದ ಪ್ರಕಾರ ಸುರಪುರ ಸಂಸ್ಥಾನಕ್ಕೆ ಸೇರಿದ್ದ ಕೃಷ್ಣಾನದಿಯ ಕೆಳಗಿನ ಭಾಗದ ದೇವದುರ್ಗ, ಅರಕೇರಿ, ಜಾಲಹಳ್ಳಿ ಮತ್ತು ಗೋನವಾಟ್ಲಗಳಂತಹ ೬೦,೦೦೦ಗಳ ಉತ್ಪನ್ನದ ಪ್ರದೇಶವನ್ನು ನಿಜಾಮನಿಗೆ ಬಿಟ್ಟು ಕೊಡಬೇಕು. ಇವು ಮೂಲತಃ ಸುರಪುರಕ್ಕೆ ಸೇರಿದವುಗಳಲ್ಲ. ೧೭೭೦ರಲ್ಲಿ ನಿಜಾಮನಾದ ಅಲಿಖಾನನು ವಾರ್ಷಿಕ ಕಂದಾಯ ನೀಡುವ ಹಿನ್ನೆಲೆಯಲ್ಲಿ ಸುರಪುರ ಸಂಸ್ಥಾನಕ್ಕೆ ನೀಡಲಾಗಿತ್ತು. ಇದನ್ನು ನಿಜಾಮನಿಗೆ ಮರಳಿ ನೀಡಬೇಕೆಂದು ವರದಿಯಿಂದ ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫: ೧೫೪-೧೫೫).

ಗ್ರೀಸ್ಲೆಯ ವರದಿಯನ್ನಾಧರಿಸಿ ಸುರಪುರ ಸಂಸ್ಥಾನದಲ್ಲಿ ಒಬ್ಬ ಇಂಗ್ಲಿಶ್ ಅಧಿಕಾರಿಯನ್ನು ನೇಮಿಸುವುದು ಸೂಕ್ತವೆಂದು ನಿಜಾಮನಿಗೆ ಅವನ ಮಂತ್ರಿ ಸಲಹೆ ನೀಡಿದನು. ಈ ಪ್ರಕಾರ ಕ್ಯಾಪ್ಟನ್ ಹ್ಯಾಂಪಟನ್‌ನನ್ನು ಅಧಿಕಾರಿಯನ್ನಾಗಿಸಲಾಯಿತು. ಇವನ ನಂತರ ಕ್ಯಾಪ್ಟನ್ ಜ್ಯಾಕ್ಸನ್ ನೇಮಕಗೊಂಡನು. ತರುವಾಯ ಕ್ಯಾಪ್ಟನ್ ಗ್ರೀಸ್ಲೆಯನ್ನು ಸುರಪುರ ಸಂಸ್ಥಾನದಲ್ಲಿ ಬ್ರಿಟಿಶ್ ಸರಕಾರದ ಪ್ರತಿನಿಧಿಯನ್ನಾಗಿ ನೇಮಿಸಲಾಯಿತು. ಕ್ಯಾಪ್ಟನ್ ಗ್ರೀಸ್ಲೆ ಪ್ರತಿನಿಧಿಯಾಗಿರುವಾಗಲೇ ಕೃಷ್ಣಪ್ಪನಾಯಕ ಮೃತಪಟ್ಟನು. ಈ ಕೃಷ್ಣಪ್ಪನಾಯಕನಿಗೆ ವೆಂಕಟಪ್ಪನಾಯಕನೆಂಬ ಏಳು ವರ್ಷದ ಮಗನಿದ್ದನು. ಕೃಷ್ಣಪ್ಪನಾಯಕನ ಹೆಂಡತಿ ಈಶ್ವರಮ್ಮ ಎಂಬುವವಳು ತನ್ನ ಮಗನ ಹೆಸರಿನಿಂದ ರಾಜ್ಯ ಕಾರಭಾರವನ್ನು ವಹಿಸಿದಳು. ಈ ಈಶ್ವರಮ್ಮ ರಾಣಿಯ ನಡತೆಯಿಂದ ಬೇಸತ್ತು ಕೃಷ್ಣಪ್ಪನಾಯಕನ ಬಂಧುಗಳೆಲ್ಲರೂ ಕೂಡಿ ಕೃಷ್ಣಪ್ಪನಾಯಕನ ತಮ್ಮನಾದ ಪಿಡ್ಡನಾಯಕನನ್ನು ವೆಂಕಟಪ್ಪನಾಯಕನ ಪಾಲಕನೆಂದೂ ಅವನಿಗೆ ರಾಜ್ಯಭಾರ ವಹಿಸಬೇಕೆಂದೂ ಠರಾವು ಮಾಡಿದರು. ಈ ಠರಾವಿಗೆ ಬ್ರಿಟಿಶ್ ಸರ್ಕಾರ ಕೂಡ ಒಪ್ಪಿಕೊಂಡಿತು. ರಾಣಿ ಈಶ್ವರಮ್ಮ ತನ್ನ ಮೈದುನ ಪಿಡ್ಡನಾಯಕ ಮತ್ತು ಬ್ರಿಟಿಶ್ ಸರ್ಕಾರ ಇಬ್ಬರನ್ನು ವಿರೋಧಿಸತೊಡಗಿದಳು. ಈ ಪ್ರಸಂಗ ಒದಗಿದ್ದುದನ್ನು ನೋಡಿ, ಪಿಡ್ಡನಾಯಕನ ಕಾರಭಾರದ ಸ್ಥಾನವನ್ನು ಸ್ಥಿರಗೊಳಿಸಲು ಮತ್ತು ರಾಣಿಯ ಅನುಯಾಯಿಗಳನ್ನು ಚದುರಿಸಲು ಮತ್ತು ಸಾಲವನ್ನು

ತೀರಿಸುವ ತನ್ನ ಯೋಜನೆಯನ್ನು ಕೊನೆಗಾಣಿಸಲು ಸೈನ್ಯದ ಸಹಾಯವಿಲ್ಲೆಂದು ಬಗೆದು ಸೈನ್ಯವನ್ನು ಕಳಿಸಲು ಕ್ಯಾಪ್ಟನ್ ಗ್ರೀಸ್ಲೆ ರೆಸಿಡೆಂಟನಿಗೆ ಪತ್ರ ಬರೆದುಕೊಂಡನು. ಆಗ ಜನರಲ್ ಫ್ರೇಜರ್ ಎಂಬುವನು ರೆಸಿಡೆಂಟನಾಗಿದ್ದನು. ಈ ಫ್ರೇಜರನಿಗೆ ಫೌಜಿನ ಅವಶ್ಯಕತೆ ತೋರಲಿಲ್ಲ. ಅವನ ಕೈಕೆಳಗೆ ಕಳಿಸಲು ತಕ್ಕ ಸೈನ್ಯ ಕೂಡ ಇದ್ದಿರಲಿಲ್ಲ. ಪಂಜಾಬದಲ್ಲಿ ಮಹಾರಾಜಾ ರಣಜಿತಸಿಂಹನು ಮೃತಪಟ್ಟಿದ್ದನು. ಅಲ್ಲಿ ಅಶಾಂತತೆ ಇದ್ದಿತು. ಅಫ್ಘಾನಿಸ್ಥಾನದಿಂದ ಬ್ರಿಟಿಶರ ಸೈನ್ಯ ತಿರುಗಿ ಬರಬೇಕಾಯಿತು. ಅದರಂತೆ ದಕ್ಷಿಣದಿಂದ ಉತ್ತರಕ್ಕೆ ಸೈನ್ಯವನ್ನು ಕಳಿಸಲ್ಪಡುತ್ತಿದ್ದುದರಿಂದ ಮದ್ರಾಸ್ ಸೈನ್ಯದಲ್ಲಿ ಬಂಡಾಯದ ಚಿಹ್ನೆಗಳು ತಲೆದೋರ ಹತ್ತಿದ್ದವು. ಇಂತಹ ಪರಿಸ್ಥಿತಿಯಲ್ಲಿ ಮತ್ತೆಲ್ಲಿಯಾದರೂ ಯುದ್ಧ ಪ್ರಾರಂಭವಾದರೆ ಮದ್ದಿನಲ್ಲಿ ಕಿಡಿ ಬಿದ್ದಂತಾಗಿ, ಅದರ ಭಯಂಕರ ಪರಿಣಾಮ ನಾಲ್ಕು ಕಡೆ ಆಗುವ ಸಂಭವವಿತ್ತು. ಈ ಎಲ್ಲ ಕಾರಣಗಳಿಂದಾಗಿ ಸೈನ್ಯದ ಸಹಾಯವನ್ನು ನಿರಾಕರಿಸಲಾಯಿತು. ತನ್ನಿಂದ ಇಲ್ಲಿಯ ಕಾರ್ಯ ಸಾಗುವುದಿಲ್ಲೆಂದು, ರಾಣಿಯ ಸಾಮರ್ಥ್ಯ ದಿನೇ ದಿನೇ ಹೆಚ್ಚುತ್ತಲಿದೆಯೆಂದೂ, ಅರಬ ಮತ್ತು ರೋಹಿಲೆ ಜನರು ಬಂದು ಸೇರುವ ಸಂಭವವಿದೆಯೆಂದೂ, ಈ ಜನರಿಗೆ ಕೊಡಲು ರಾಣಿಯ ಹತ್ತಿರ ವಿಪುಲ ಹಣವಿದೆಯೆಂದೂ, ಈ ಎಲ್ಲ ಪರಿಸ್ಥಿತಿ ಭಯಂಕರ ಯುದ್ಧದಲ್ಲಿ ಪರಿಣಮಿಸ ಬಾರದೆಂಬ ಭಯದಿಂದಲೂ ಭೀಮಾ ಮತ್ತು ಕೃಷ್ಣಾ ನದಿಗಳನ್ನು ದಾಟುವ ಹರಿ-ಗೋಲುಗಳನ್ನು ಗ್ರೀಸ್ಲೆ ಹಿಡಿದಿಟ್ಟನು. ಅದು ಹೊಳೆ ಕಾಲು(ಕೃಷ್ಣಾ ನದಿ ಕಲವು ಸಲ ಕಡಿಮೆ ನೀರಿನಿಂದ ಕೂಡಿರುತ್ತಿತ್ತು. ದಾಟಬಹದಾಗಿತ್ತು) ಹೊಳೆಯಾಗಿದ್ದುದರಿಂದ. ಈ ಅರಬ ಮತ್ತು ರೋಹಿಲೆ ಜನರು ಬರುವುದನ್ನು ತಡೆಗಟ್ಟಲು ಸಾಧ್ಯವಾಗಲಿಲ್ಲ. ಈ ಕಾರ್ಯದಿಂದ ತನ್ನನ್ನು ಮುಕ್ತಗೊಳಿಸಬೇಕೆಂದು ಗ್ರೀಸ್ಲೆ ರೆಸಿಡೆಂಟನಿಗೆ ಪತ್ರ ಬರೆದುಕೊಂಡನೆಂದು ಕಪಟರಾಳ ಕೃಷ್ಣರಾಯ ತಿಳಿಸುತ್ತಾರೆ(ಧ್ರುವನಾರಾಯಣ ೨೦೦೫: ೧೬೩-೧೬೪).

ಈ ಹಿನ್ನೆಲೆಯಲ್ಲಿ ಈ ಭಾಗದಲ್ಲಿ ಒಂದು ಸೈನಿಕ ನೆಲೆಯ ಅಗತ್ಯವಿತ್ತು. ಅಲ್ಲದೆ ಸುರಪುರವನ್ನು ನಿಯಂತ್ರಿಸುವುದು ಬಹುಮುಖ್ಯವಾಗಿತ್ತು. ಕಾರಣ ಕ್ರಿ.ಶ. ೧೮೪೨ರಲ್ಲಿ ಏಪ್ರಿಲ್‌ನಲ್ಲಿ ಲಿಂಗಸೂಗೂರಿನಲ್ಲಿ ಒಂದು ಸಣ್ಣ ಪ್ರಮಾಣದ ಕಂಟೋನ್ಮೆಂಟನ್ನು ಸ್ಥಾಪಿಸಲಾಯಿತು. ಪ್ರತಿಯೊಬ್ಬ ಅಧಿಕಾರಿ ವಾಸಿಸಲು ಭದ್ರವಾದ ನೆಲೆಯ ಅಗತ್ಯವಾಗಿತ್ತು. ಈ ಕಂಟೋನ್ಮೆಂಟ್ ಕಲಾದಗಿ, ಬಳ್ಳಾರಿ, ಕರ್ನೂಲು ಮತ್ತು ಸಿಕಂದರಾಬಾದಿನ ಕಂಟೋನ್ಮೆಂಟಗಳ ಮಧ್ಯದಲ್ಲಿ ನೆಲೆಗೊಂಡಿತು. ಸುರಪುರದಲ್ಲಿ ನಡೆಯುವ ಗುಂಪು ಘರ್ಷಣೆಗಳನ್ನು ನಿಯಂತ್ರಿಸಲೆಂದೇ ಸ್ಥಾಪಿತವಾಯಿತು. ಅನೇಕ ದೊಂಬಿ ಗಲಾಟೆಗಳು ಆಗಾಗ ರಾಯಚೂರು ದೋ-ಅಬ್ ಪ್ರದೇಶದಲ್ಲಿ ನಡೆಯುತ್ತಿದ್ದುದ್ದೂ ಸಹ ಇದರಿಂದ ತಿಳಿಯುತ್ತದೆ. ಇನ್ನೂ ಅನೇಕ ಕಾರಣಗಳಿಂದಾಗಿ ತಮ್ಮ ರಾಜಕೀಯ ಅಸ್ತಿತ್ವವನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಮಹತ್ವಾಕಾಂಕ್ಷೆ ವುಳ್ಳವರಾಗಿದ್ದರು.

೧೮೫೮-೫೯ರ ಬ್ರಿಟಿಶರ ವರದಿಯ ಪ್ರಕಾರ ರಾಯಚೂರು ದೋ-ಅಬ್ ಪ್ರದೇಶದಲ್ಲಿ ರಾಯಚೂರು ಮತ್ತು ಲಿಂಗಸೂಗೂರುಗಳಲ್ಲಿ ಎರಡು ಜೈಲುಗಳನ್ನು ಸ್ಥಾಪಿಸಿದರು. ಈ ಜೈಲಿಗೆ ಅಧಿಕಾರಿಗಳನ್ನು ನೇಮಿಸಲಾಗಿತ್ತು. ರಾಯಚೂರಿಗೆ ಐದು ಜನ ಜೈಲರಗಳಿದ್ದರೆ, ಲಿಂಗಸೂಗೂರುಗೆ ಇಪ್ಪತ್ತು ಜನ ಸಿಬ್ಬಂದಿಯನ್ನು ನೇಮಿಸಲಾಗಿತ್ತು. ಅನೇಕ ಜನರನ್ನು ದೊಂಬಿ ಗಲಾಟೆಗಳ ಹಿನ್ನೆಲೆಯನ್ನು ಸೂಚಿಸಿ ಜೈಲುಗಳಿಗೆ ಹಾಕುತ್ತಿದ್ದರು. ಈ ಜೈಲುಗಳು ೧೮೬೦ರ ವೇಳೆಗೆ ಸ್ವಂತ ಕಟ್ಟಡವನ್ನು ಹೊಂದುತ್ತವೆಂದು ವರದಿ ಮಾಡಲಾಗಿದೆ. ಇಲ್ಲಿನ ಆಡಳಿತವನ್ನು ಡೆಪ್ಯೂಟಿ ಕಮಿಷನರ್, ಅಸಿಸ್ಟೆಂಟ್ ಕಮಿಷನರ್ ಮತ್ತು ತಹಸೀಲ್ದಾರರುಗಳ ಮೂಲಕ ನಿರ್ವಹಿಸಲಾಗುತ್ತಿತ್ತು. ಅದು ಈಗಲೂ

ಮುಂದುವರೆದಿದೆ. ಈ ಪ್ರದೇಶದಲ್ಲಿ ಪೊಲೀಸ್ ಇಲಾಖೆಯ ಜಮಾದಾರನ ಬದಲಾಗಿ ದೇಶಮುಖ ಮತ್ತು ದೇಶಪಾಂಡೆಯವರು ಸೇವೆ ಸಲ್ಲಿಸುತ್ತಿದ್ದರು. ಇಲ್ಲಿ ನ್ಯಾಯಗಳನ್ನು ಆತ್ಮೀಯತೆಯಿಂದ ಬಗೆಹರಿಸಲಾಗುತ್ತಿತ್ತೆಂದು ಹೈದರಾಬಾದ ರಾಜ್ಯದ ೧೮೫೮-೫೯ನೆಯ ಸಾಲಿನ ವಾರ್ಷಿಕ ವರದಿಯಿಂದ ತಿಳಿದುಬರುತ್ತದೆ(ವಾರ್ಷಿಕ ವರದಿ ೧೮೫೮-೫೯: ೧೧-೧೩೧). ಲಿಂಗಸೂಗೂರು ಜೈಲು ಸಿಬ್ಬಂದಿಯನ್ನು ಹೆಚ್ಚಿಸಲಾಗಿದೆ. ಲಿಂಗಸೂಗೂರು ಕಂಟೋನ್ಮೆಂಟನ್ನು ಬಲಪಡಿಸಬೇಕೆಂಬ ಧೋರಣೆಯ ಹಿಂದೆ ಸುರಪುರ ಮತ್ತು ಇತರ ಸಂಸ್ಥಾನಿಕರು ದಂಗೆ ಏಳಬಾರದೆಂದು ಸ್ಥಾಪಿಸಲಾಗಿದೆ ಎನ್ನಬಹುದು.

ಗ್ರೀಸ್ಲೆಯ ರಾಜೀನಾಮೆಯಿಂದ ತೆರವಾಗಿದ್ದ ಸ್ಥಾನಕ್ಕೆ ಕ್ಯಾಪ್ಟನ್ ಮೆಡೋಸ್ ಟೇಲರ್‌ನನ್ನು ನೇಮಕ ಮಾಡಲಾಯಿತು. ಅದರಂತೆ ಟೇಲರ್ ಸುರಪುರದಲ್ಲಿ ಬಂದು ನೆಲೆಸಿದನು. ಇವನು ಬಂದ ಕಾಲ ೧೮೪೨ ಆಗಿದೆ. ಇವನು ಸಮರ್ಥವಾಗಿ ಆಡಳಿತವನ್ನು ನಡೆಸಿದ ಸುರಪುರದ ಜನರಿಗೆ ಆತ್ಮೀಯನಾಗಿ ಗುರುತಿಸಿಕೊಂಡನು. ಆದರೂ ಆಗಾಗ ಎದುರಾಗುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಲಿಂಗಸೂಗೂರು ಕಂಟೋನ್ಮೆಂಟನ್ನು ಬಳಸಿಕೊಳುತ್ತಿದ್ದನು. ಒಂದು ಸಲ ರಾಣಿ ಈಶ್ವರಮ್ಮನ ಬಲಗೈ ಬಂಟನಾಗಿದ್ದ ಚನ್ನಬಸಪ್ಪ, ಕ್ಯಾಪ್ಟನ್ ಮೆಡೋಸ್ ಟೇಲರ್‌ನನ್ನು ಕೊಲೆ ಮಾಡಲು ಪ್ರಯತ್ನಿಸಿದನು. ಇದನ್ನು ಸೂಕ್ಷ್ಮವಾಗಿ ಅರಿತ ಟೇಲರ್ ಚನ್ನಬಸಪ್ಪನನ್ನು ಹಿಡಿದು ಲಿಂಗಸೂಗೂರಿಗೆ ಕಳುಹಿಸಿದನು ಎಂದು ತಿಳಿದುಬರುತ್ತದೆ(ಧ್ರುವನಾರಾಯಣ ೨೦೦೫: ೧೬೭). ಸುರಪುರದಲ್ಲಿ ಯಾವುದೇ ರೀತಿಯ ಪಿತೂರಿಗಳು ನಡೆದರೆ ಲಿಂಗಸೂಗೂರು ಕಂಟೋನ್ಮೆಂಟಿಗೆ ಕಳುಹಿಸಲಾಗುತ್ತಿತ್ತು. ಬ್ರಿಟಿಶರು ತಮ್ಮನ್ನು ಭದ್ರವಾಗಿರಿಸಿಕೊಳ್ಳಲು ಈ ಕಂಟೋನ್ಮೆಂಟ್ ಸಹಕಾರಿಯಾಗಿತ್ತು. ಲಿಂಗಸೂಗೂರಿನಲ್ಲಿ ಒಂದು ಜೈಲನ್ನು ಕೂಡ ಸ್ಥಾಪಿಸಲಾಗಿತ್ತು. ಸುರಪುರವನ್ನೇ ಗುರಿಯಾಗಿಸಿಕೊಂಡು ಸ್ಥಾಪಿಸಲಾದ ಈ ಕಂಟೋನ್ಮೆಂಟು ಅಂದು ಬಹುಮುಖ್ಯ ಪಾತ್ರವನ್ನು ವಹಿಸಿತು.

ಕ್ರಿ.ಶ. ೧೮೪೪-೪೫ನೆಯ ಇಸವಿಯಲ್ಲಿ ಸುರಪುರದ ಮಹಾನವಮಿಯ ಉತ್ಸವದ ಸಂದರ್ಭದಲ್ಲಿ ನಾಲ್ವಡಿ ವೆಂಕಟಪ್ಪನಾಯಕನ ಕೊಲೆಯ ಸಂಚು ಹೈದರಾಬಾದಿನಲ್ಲಿ ನಡೆಯುತ್ತಿತ್ತು. ಇದನ್ನು ಕೇಳಿದ ಕ್ಯಾಪ್ಟನ್ ಮಲ್ಕೋಮ ಎಂಬುವವನು ಟೇಲರನಿಗೆ ಈ ವಿಷಯವನ್ನು ತಿಳಿಸಿದನು. ಈ ಉತ್ಸವದಲ್ಲಿ ಯಾವುದೇ ಅಹಿತಕರ ಘಟನೆ ನಡೆಯಬಾರದೆಂದು ಲಿಂಗಸೂಗೂರಿನಿಂದ ಒಂದು ರೆಜಿಮೆಂಟ್‌ನ್ನು ಟೇಲರ್‌ನು ತರಿಸಿದನು. ಸ್ವತಃ ಟೇಲರ್‌ನೇ ಲಿಂಗಸೂಗೂರಿನಿಂದ ಬಂದ ಸಿಬ್ಬಂದಿಯೊಂದಿಗೆ ಅರಮನೆಗೆ ಹೋಗಿ ಕಾರ್ಯಕ್ರಮದಲ್ಲಿ ಯಾವುದೇ ಸಣ್ಣ ಪ್ರಮಾಣದ ತಪ್ಪು ನಡೆಯದಂತೆ ನೋಡಿಕೊಂಡನು (ಧ್ರುವನಾರಾಯಣ ೨೦೦೫: ೧೭೫-೭೬). ಲಿಂಗಸೂಗೂರು ಕಂಟೋನ್ಮೆಂಟ್ ಸುರಪುರ ರಕ್ಷಣೆಗಾಗಿ ಒದಗಿಬಂದರೂ ಸುರಪುರದ ಮೇಲೆ ಅಧಿಕಾರವನ್ನು ಸ್ಥಾಪಿಸಲು ಬ್ರಿಟಿಶರು ಮಾಡಿದ ಪ್ರಯತ್ನ ಇದರಿಂದ ಎದ್ದು ಕಾಣುತ್ತದೆ.

ಕ್ರಿ.ಶ. ೧೮೫೭-೫೮ರಲ್ಲಿ ಸುರಪುರ ಸಂಸ್ಥಾನ ಬ್ರಿಟಿಶರ ವಿರುದ್ಧ ದಂಗೆ ಎದ್ದಿತು. ಆಗ ಹೈದರಾಬಾದ್ ಮತ್ತು ಇತರೆ ಪ್ರದೇಶಗಳಿಂದ ಬಂದಿದ್ದ ಸೈನಿಕ ಅಧಿಕಾರಿಗಳಿಗೆ ಆಶ್ರಯ ನೀಡುತ್ತಿದ್ದದು ಲಿಂಗಸೂಗೂರು ಕಂಟೋನ್ಮೆಂಟಾಗಿತ್ತು. ಸುರಪುರದ ಮೇಲೆ ಕ್ರಮ ಕೈಗೊಳ್ಳಬೇಕಾದರೆ ಸೈನ್ಯಕ್ಕಾಗಿ ಲಿಂಗಸೂಗೂರಿನ ಕಮಾಂಡಿಂಗ್ ಆಫೀಸ್‌ರನೊಂದಿಗೆ ಪತ್ರವ್ಯವಹಾರ ಮಾಡಬೇಕೆಂದು ಥಾರ್ನ ಹಿಲ್ಲೆಂಬ ರೆಸಿಡೆಂಟನ ಮೊದಲನೆಯ ಅಸಿಸ್ಟಂಟನು ಎರಡನೆಯ ಅಸಿಸ್ಟಂಟನಾದ ಕ್ಯಾಂಬೆಲ್ಲನಿಗೆ ಪತ್ರ ಬರೆದಿರುವುದು ಕಂಡುಬರುತ್ತದೆ(ಧ್ರುವನಾರಾಯಣ ೨೦೦೫:೯೦). ಹಾಗೆಯೇ ಹೈದರಾಬಾದಿ ನಿಂದ ಬಂದಿದ್ದ ಕ್ಯಾಂಬೆಲ್ಲನು ಸುರಪುರಕ್ಕೆ ಬಂದ ನಂತರ ಲಿಂಗಸೂಗೂರು ಕಂಟೋನ್ಮೆಂಟಿಗೆ ಭೇಟಿ ನೀಡಿದನು.

ಬ್ರಿಟಿಶರು ಸುರಪುರವನ್ನು ಮುತ್ತಬೇಕೆಂಬ ಪೂರ್ವತಯಾರಿಯ ಪ್ರಕಾರ ಸುರಪುರ ಪ್ರದೇಶದ ಸುತ್ತ ಮುತ್ತಲಿರುವ ಕಂಟೋನ್ಮೆಂಟ್‌ಗಳಿಂದ ಸೈನಿಕರನ್ನು ಕರೆಸಲಾಯಿತು. ಅದರಂತೆ ಕಲಾದಗಿಯಿಂದ ಆರು ತೋಪು, ಹದಿನೈದುನೂರು ಸೈನಿಕರನ್ನು ತರಿಸುವ ವ್ಯವಸ್ಥೆಯಾಗಿತ್ತು. ಕರ್ನೂಲು ಮತ್ತು ಹೈದರಾಬಾದ್‌ಗಳಿಂದ ೮–೧೦ ತೋಪುಗಳು, ಸಾವಿರಕ್ಕೂ ಮಿಕ್ಕಿದ ಸೈನ್ಯವನ್ನು ಜಮಾಯಿಸ ಲಾಯಿತು. "ಈ ಸಂದರ್ಭದಲ್ಲಿ ಲಿಂಗಸೂಗೂರು ಕಂಟೋನ್ಮೆಂಟಿನಿಂದ ೧೮೫೮ರ ಫೆಬ್ರುವರಿ ೭ನೆಯ ತಾರೀಖಿನಂದು ಅನೇಕ ಜನ ಸೈನಿಕರು ಸುರಪುರದ ದಂಗೆಯಲ್ಲಿ ಭಾಗವಹಿಸಿದ್ದರೆಂದು" ತಿಳಿದುಬರುತ್ತದೆ (ಧ್ರುವನಾರಾಯಣ ೨೦೦೫:೨೦೫). ಲಿಂಗಸೂಗೂರಿನ ಸೈನ್ಯ ಸುರಪುರ ಮತ್ತು ಮದ್ರಾಸ ಸೈನ್ಯಗಳ ನಡುವೆ ನಿಂತಿತ್ತು ಎಂದು ಕಪಟರಾಳ ಕೃಷ್ಣರಾಯ ತಿಳಿಸುತ್ತಾರೆ. ಈ ದಂಗೆಯ ದಮನ ಮಾಡಿ ಬ್ರಿಟಿಶರು ಪ್ರಾಬಲ್ಯವನ್ನು ಮೆರೆದರು. ಇದರಲ್ಲಿ ಲಿಂಗಸೂಗೂರು ಕಂಟೋನ್ಮೆಂಟ್‌ನ ಪಾತ್ರ ಮುಖ್ಯವಾಗಿತ್ತು. ಅಲ್ಲದೆ ಮೆಡೋಸ್ ಟೇಲರ್‌ನ ಕಾಲದಲ್ಲಿ ಲಿಂಗಸೂಗೂರು ಕಂಟೋನ್ಮೆಂಟಿಗೆ ಸಂಬಂಧಪಟ್ಟ ಅಧಿಕಾರಿಗಳು ಲಿಂಗಸೂಗೂರಿಗೆ ಬಂದರೆ, ಇಂಗ್ಲಿಷ ಅಧಿಕಾರಿಗಳು ಟೇಲರ್‌ನನ್ನು ಭೇಟಿಯಾಗಲು ಸುರಪುರಕ್ಕೆ ಹೋಗುತ್ತಿದ್ದರು.

ರಾಯಚೂರು ದೋ–ಅಬ್ ಪ್ರದೇಶದಲ್ಲಿದ್ದ ಲಿಂಗಸೂಗೂರು ಕಂಟೋನ್ಮೆಂಟ್ ಹೈದರಾಬಾದಿನ ರೆಸಿಡೆಂಟರಿಗೆ ಸಹಾಯಕವಾಗಿತ್ತು. ಬ್ರಿಟಿಶರು ಸುರಪುರ ಸಂಸ್ಥಾನವನ್ನು ಹತ್ತಿಕ್ಕಲು ಸ್ಥಾಪಿಸಿದ ಈ ಕಂಟೋನ್ಮೆಂಟ್ ಹಲವು ಸಲ ಈ ಸಂಸ್ಥಾನದ ಉಳಿವಿಗಾಗಿ ನೆರವಾಗಿತ್ತು. ಆದರೆ ಹಂತ ಹಂತವಾಗಿ ತಮ್ಮ ಪ್ರಾಬಲ್ಯ ಸಾಧಿಸಿದ ಬ್ರಿಟಿಶರು ಸುರಪುರವನ್ನು ಏಕಾಂಗಿಯನ್ನಾಗಿಸಿ, ಅನಿವಾರ್ಯತೆಯನ್ನು ಒಪ್ಪಿಕೊಂಡು ಸಂಸ್ಥಾನವನ್ನು ಬ್ರಿಟಿಶರಿಗೆ ಸೇರುವಂತೆ ಮಾಡುವ ಮೂಲ ಉದ್ದೇಶಕ್ಕನುಸಾರವಾಗಿ ವಾರ್ಷಿಕ ಪೊಗದಿಯ ನೆಪದ ಮೂಲಕ ಸಂಕಷ್ಟಕ್ಕೆ ಸಿಲುಕುವಂತಾಯಿತು. ಆಗಾಗ ಪೊಗದಿಯ ವಸೂಲಿಗೆ ಬ್ರಿಟಿಶರ ಸೈನ್ಯ ಬೇಕಾಗುತ್ತಿತ್ತು. ಇಂತಹ ಸಮಯದಲ್ಲಿ ಲಿಂಗಸೂಗೂರು ಕಂಟೋನ್ಮೆಂಟ್ ಬಾಹ್ಯವಾಗಿ ಬೆಂಬಲಿಸುತ್ತಿತ್ತು. ಕೊನೆಗೆ ೧೮೫೮ರ ಸುರಪುರದ ದಂಗೆಯನ್ನು ಹತ್ತಿಕ್ಕಲು ಲಿಂಗಸೂಗೂರು ಕಂಟೋನ್ಮೆಂಟ್ ಭಾಗವಹಿಸಿತ್ತು.

### ೪.೪.೨. ೧೮೫೩ರ ಬೇರಾರ್ ಒಪ್ಪಂದ

ಭಾರತದಲ್ಲಿಯೇ ವಿಶಿಷ್ಟವಾದ ಒಪ್ಪಂದ ಇದಾಗಿದೆ. ಇದು ಬ್ರಿಟಿಶರ ಆರ್ಥಿಕ ಹಿನ್ನೆಲೆಯಲ್ಲಿ ಮಾಡಿಕೊಂಡ ಒಪ್ಪಂದವಾಗಿದೆ. ಇದು ರಾಯಚೂರು ದೋ–ಅಬ್ ಪ್ರದೇಶದಲ್ಲಿ ಭೂಸರ್ವೆ, ರಸ್ತೆಗಳ ನಿರ್ಮಾಣ, ರೈಲು ಮಾರ್ಗದ ಸಂಪರ್ಕ, ಹತ್ತಿ ಬೆಳೆಯಲು ಒತ್ತಾಯ, ಹತ್ತಿ ಗಿರಿಣಿಗಳ ಸ್ಥಾಪನೆ ಇನ್ನೂ ಮುಂತಾದ ಹಲವು ಬೆಳವಣಿಗೆಗಳಿಗೆ ಕಾರಣವಾಯಿತು. ಈ ಒಪ್ಪಂದದ ಪ್ರಕಾರ ನಿಜಾಮ ಬ್ರಿಟಿಶ್ ಸರ್ಕಾರಕ್ಕೆ ಕೊಡಬೇಕಾಗಿದ್ದ ವಾರ್ಷಿಕ ಹಣವನ್ನು ನೀಡದ ಕಾರಣ ರಾಯಚೂರು ಮತ್ತು ಉಸ್ಮಾನಾಬಾದ್ ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪೆನಿಗೆ ಬಿಟ್ಟು ಕೊಡಬೇಕಾಯಿತೆಂದು ತಿಳಿದುಬರುತ್ತದೆ. ಆದರೆ ವಾಸ್ತವವೇ ಬೇರೆಯಾಗಿತ್ತು. ಬ್ರಿಟನ್ನಿನಲ್ಲಿ ಹತ್ತಿಯ ಗಿರಿಣಿಗಳು ಹತ್ತಿಯ ಕೊರತೆಯನ್ನು ಅನುಭವಿಸಬಾರದೆಂಬ ಉದ್ದೇಶದಿಂದ ೧೮೫೩ರ ಈ ಒಪ್ಪಂದಕ್ಕೆ ಬರಲಾಯಿತು. ಹಾಗಾಗಿ ಹೈದರಾಬಾದ್ ಪ್ರಾಂತ್ಯದ ರಾಯಚೂರು ದೋ–ಅಬ್ ಮತ್ತು ಉಸ್ಮಾನಾಬಾದ್ ಜಿಲ್ಲೆಗಳನ್ನು ಬ್ರಿಟಿಶ್ ಕಂಪೆನಿಗೆ ಸೇರಿದವು.

ಭಾರತದ ಮದ್ರಾಸ್, ಬಾಂಬೆ ಪ್ರೆಸಿಡೆನ್ಸಿಗಳಲ್ಲಿ ಹತ್ತಿ ಬೆಳೆಗೆ ಆದ್ಯತೆ ನೀಡಿದಂತೆ ನಿಜಾಮ ಸಂಸ್ಥಾನದಲ್ಲಿಯೂ ಕೂಡ ಆದ್ಯತೆ ನೀಡಲಾಯಿತು. ಇದು ಮದ್ರಾಸ್ ಮತ್ತು ಬಾಂಬೆ ಪ್ರೆಸಿಡೆನ್ಸಿಗಳ ಮಧ್ಯದಲ್ಲಿದೆ. ಹೆಚ್ಚುಕಡಿಮೆ ಈ ಪ್ರದೇಶಗಳ ಭೂಮಿ ಒಂದೇ ತೆರನಾಗಿದೆ. ಹಾಗೆಯೇ ಬೆಳೆಯುವ ಬೆಳೆಗಳೂ ಒಂದೇ ಬಗೆಯವಾಗಿದ್ದವು. ಇಲ್ಲಿ ರಾಯಚೂರು ದೋ-ಅಬ್ ಪ್ರದೇಶವೂ ಫಲವತ್ತಾದ ಭೂಮಿಯನ್ನು ಹೊಂದಿತ್ತು. ಹತ್ತಿಯನ್ನು ಬೆಳೆಯುವುದರ ಜೊತೆಗೆ ಆಹಾರ, ವಾಣಿಜ್ಯ ಮುಂತಾದ ಬೆಳೆಯನ್ನು ಬೆಳೆಯಲಾಗುತ್ತಿತ್ತು. ಆದರೆ ನಿಜಾಮನ ಸಂಸ್ಥಾನದಲ್ಲಿ ಈ ಪ್ರದೇಶವಿರುವುದರಿಂದ ಬ್ರಿಟಿಶರು ಅಷ್ಟೇನೂ ಗಮನ ಹರಿಸಿರಲಿಲ್ಲ. ಜಾಗತಿಕ ಹತ್ತಿ ವ್ಯಾಪಾರದ ಮೇಲೆ ತಮ್ಮ ನಿಯಂತ್ರಣ ಸಾಧಿಸಿದ ನಂತರ ತಮ್ಮ ಕಂಪೆನಿಗಳು ಮುಚ್ಚಬಾರದು ಹಾಗೂ ಹಾಗೆಯೇ ಲಾಭದಾಯಕವಾಗಿರಬೇಕು ಎಂಬ ಉದ್ದೇಶವನ್ನು ಹೊಂದಿದ್ದವು. ಈ ಕಾರಣಕ್ಕಾಗಿ ಫಲವತ್ತಾದ ಭೂಮಿ ಹೊಂದಿರುವ ರಾಯಚೂರು ಮತ್ತು ಉಸ್ಮಾನಾಬಾದ್ ಜಿಲ್ಲೆಗಳನ್ನು ನಿಜಾಮನು ಬ್ರಿಟಿಶ್ ಸರ್ಕಾರಕ್ಕೆ ಕೊಡಬೇಕಾದ ವಾರ್ಷಿಕ ಹಣ ನೀಡದಿರುವುದನ್ನು ನೆಪಮಾಡಿಕೊಂಡು ಕ್ರಿ.ಶ. ೧೮೫೩ ಮೇ ೨೧ರಂದು ಈಸ್ಟ್ ಇಂಡಿಯಾ ಕಂಪೆನಿ ನಿಜಾಮನಿಂದ ಬೀರಾರ್ ಒಪ್ಪಂದಕ್ಕೆ ಸಹಿ ಹಾಕಿಸಿಕೊಂಡಿತು. ಈ ಒಪ್ಪಂದಗಳು ಜಾಗತಿಕ ಹತ್ತಿ ರಾಜಕಾರಣದ ಹಿನ್ನೆಲೆಯಲ್ಲಿ ನಡೆಯಿತೆಂದು ಹೇಳಬಹುದಾಗಿದೆ.

೧೮೫೩ರ ಮುಂಚೆ ಸುರಪುರ ಸಂಸ್ಥಾನ ನಿಜಾಮ ಸರ್ಕಾರಕ್ಕೆ ಕೊಡಬೇಕಾಗಿದ್ದ ಬಾಕಿ ಹಣವನ್ನು ಕೊಟ್ಟಿರಲಿಲ್ಲ. ಹಾಗಾಗಿ ಟೇಲರ್‌ನು ದೇವದುರ್ಗದ ಪರಗಣೆಯನ್ನು ನಿಜಾಮನಿಗೆ ಬಿಟ್ಟು ಕೊಡಬೇಕೆಂದು ಸೂಚಿಸಿದನು. ಆ ಪ್ರಕಾರ ದೇವದುರ್ಗ ನಿಜಾಮರ ಸರ್ಕಾರಕ್ಕೆ ಸೇರಿತು. ಯಾಕೆ ದೇವದುರ್ಗವನ್ನು ನೀಡಲಾಯಿತು? ಈ ಪರಗಣೆಯ ಜನರು ನಿಜಾಮನ ರಾಜ್ಯದಲ್ಲಿ ಸೇರಲು ಇಚ್ಚಿಸುತ್ತಿರಲಿಲ್ಲ. ಆ ಕಾರಣಕ್ಕಾಗಿ ನಿಜಾಮನಿಗೆ ನೀಡಲಾಯಿತೆಂದು ಹೇಳಲಾಗುತ್ತದೆ (ಧ್ರುವನಾರಾಯಣ ೨೦೦೫-೧೯೯). ಆದರೆ ಇದು ಒಂದು ನೆಪ ಮಾತ್ರವಾಗಿತ್ತು. ಇದರ ಹಿಂದೆ ಬ್ರಿಟಿಶ್‌ರ ಬೆಂಬಲವೂ ಕೂಡಾ ಇದ್ದಿತು. ಅಲ್ಲದೆ ೧೮೪೭-೧೮೫೦ರ ಈ ಕಾಲಾವಧಿಯಲ್ಲಿ ಸುರಪುರ ಸಂಸ್ಥಾನದ ಗ್ರಾಮಗಳ ಭೂಮಿ ಅಳತೆಯನ್ನು ಸಂಸ್ಥಾನದಲ್ಲಿ ಮಾಡುವ ಸೂಚನೆಯ ಹಿನ್ನೆಲೆಯ ೧೮೪೭ರಲ್ಲಿ ಈ ಭೂ ಅಳತೆ ಮಾಡಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲಾಯಿತು. "ಕ್ರಿ.ಶ. ೧೮೫೧-೧೮೫೩ರಲ್ಲಿ ಟೇಲರ್‌ನು ಸಂಸ್ಥಾನದ ಆಡಳಿತದ ವ್ಯವಸ್ಥೆಯ ಸಂಬಂಧವಾದ ವರದಿಯನ್ನು ಮೇಲಾಧಿಕಾರಿಗಳಿಗೆ ಕಳಿಸಿದನು. ಆತನು ಕೈಗೊಂಡ ವ್ಯವಸ್ಥೆ ಕೋರ್ಟ್-ಆಫ್-ಡೈರಕ್ಟರರ ಮನಸಿಗೆ ಬಂದಿತು. ಇದಲ್ಲದೆ ರಾಜನಿಗಾಗಿ ಹೊಸದಾದ ಅರಮನೆ ಕಟ್ಟಿಸಲಾಯಿತು. ರಾಜನ ಬಾಲ್ಯಾವಸ್ಥೆ ಮುಗಿಯುವ ಕಾಲ ಸಮೀಪಿಸಿತು. ಮತ್ತೊಂದು ಕಡೆ ದಂಡಿನ ವೆಚ್ಚಕ್ಕಾಗಿ, ನಿಜಾಮ ಸರ್ಕಾರ ಬ್ರಿಟಿಶ್‌ರಿಗೆ ಕೊಡತಕ್ಕ ಹಣ ಹೆಚ್ಚುತ್ತ ನಡೆಯಿತು. ಈ ವೆಚ್ಚದ ಹಣವನ್ನು ತೀರಿಸುವುದು ನಿಜಾಮನಿಗೆ ಕಷ್ಟವಾಯಿತು. ಆದುದರಿಂದ ಡಾಲ್‌ಹೌಸಿ ನಿಜಾಮನ ಸಂಗಡ ಹೊಸದೊಂದು ಒಪ್ಪಂದವನ್ನು ಮಾಡಿಕೊಂಡನು. ಈ ಪ್ರಕಾರ ಉಸ್ಮಾನಾಬಾದ ಜಿಲ್ಲೆ ಮತ್ತು ರಾಯಚೂರು ಜಿಲ್ಲೆಗಳನ್ನು ನಿಜಾಮನು ಬ್ರಿಟಿಶರಿಗೆ ಬಿಟ್ಟುಕೊಡಬೇಕೆಂದು ಠರಾವು ಮಾಡಿಕೊಂಡು, ಅವೆರಡೂ ಜಿಲ್ಲೆಗಳ ಆಡಳಿತದ ಅಧಿಕಾರ ಟೇಲರ್‌ನಿಗೆ ಒಪ್ಪಿಸಬೇಕೆಂದು ನಿರ್ಣಯವಾಯಿತು. ವೆಂಕಟಪ್ಪ ನಾಯಕನಿಗೆ ಅವನ ರಾಜ್ಯವನ್ನೊಪ್ಪಿಸಬೇಕು. ರಾಜ ತನಗಿಷ್ಟವಿದ್ದರೆ ಟೇಲರ್‌ನನ್ನು ಇರಿಸಿಕೊಳ್ಳಬಹುದು ಎಂದು ಒಪ್ಪಂದದಲ್ಲಿ ಉಲ್ಲೇಖವಾಗಿತ್ತು. ಆದರೆ ರಾಜ ಟೇಲರ್‌ನನ್ನು ಇಟ್ಟುಕೊಳ್ಳಲು ಇಷ್ಟವಿದೆ. ಆದರೆ ತಿಂಗಳಿಗೆ ೧೫೦೦ ರೂ.ಗಳನ್ನು ಕೊಡಲಾಗುವುದಿಲ್ಲವೆಂದನು. ಕೊನೆಗೆ ಟೇಲರ್‌ನಿಗೆ ಬ್ರಿಟಿಶ್ ಸರ್ಕಾರದಿಂದ ಒಂದು ಪತ್ರ ಬಂದಿತು. ಅದರ ಪ್ರಕಾರ ರಾಜನಿಗೆ

ಸುರಪುರ ಸಂಸ್ಥಾನವನ್ನು ಒಪ್ಪಿಸಬೇಕೆಂದು ತಿಳಿಯಿತು. ಈ ಹಿನ್ನೆಲೆಯಲ್ಲಿ ಟೇಲರ್‌ನು ೧೮೫೩, ೩೦ನೆಯ ಜೂನ್‌ರಂದು ರಾಜ್ಯಾಧಿಕಾರವನ್ನು ವೆಂಕಟಪ್ಪನಾಯಕನಿಗೆ ಒಪ್ಪಿಸಿದನು" ಎಂದು ಕಪಟರಾಳ ಕೃಷ್ಣರಾಯ ಹೇಳುತ್ತಾರೆ(ಧ್ರುವನಾರಾಯಣ ೨೦೦೫: ೧೮೩-೧೮೫). ಬ್ರಿಟಿಶರು ಹತ್ತಿ ರಾಜಕಾರಣದ ಹಿನ್ನೆಲೆಯಲ್ಲಿ ಸುರಪುರದವರಿಗೆ ಸಂಸ್ಥಾನವನ್ನು ನೀಡಿದಂತೆ ಮಾಡಿ, ನಿಜಾಮನಿಂದ ರಾಯಚೂರು ಮತ್ತು ಉಸ್ಮಾನಾಬಾದಗಳನ್ನು ಕಿತ್ತುಕೊಳ್ಳಲಾಯಿತು. ಒಂದು ಪ್ರದೇಶ ಮದ್ರಾಸ್ ಪ್ರೆಸಿಡೆನ್ಸಿಗೆ ಹತ್ತಿರವಿದ್ದರೆ, ಮತ್ತೊಂದು ಬಾಂಬೆ ಪ್ರೆಸಿಡೆನ್ಸಿಗೆ ಹತ್ತಿರವಿತ್ತು. ಮದ್ರಾಸ್ ಮತ್ತು ಬಾಂಬೆ ಹತ್ತಿ ಬೆಳೆಯನ್ನು ಹೆಚ್ಚು ಹೆಚ್ಚು ಬ್ರಿಟನ್ನಿಗೆ ರವಾನಿಸಲು ಅವುಗಳ ಸಂಪರ್ಕದಲ್ಲಿದ್ದ ಈ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡದ್ದು ಗಮನಾರ್ಹ.

೧೮೫೩ರ ಒಪ್ಪಂದವನ್ನು ಕುರಿತು ಪರ್ವಿನಾ ಸುಲ್ತಾನಾ ಅವರು ಹೀಗೆ ಹೇಳುತ್ತಾರೆ. "೧೮೪೮ರಲ್ಲಿ ಲಾರ್ಡ್ ಡಾಲ್‌ಹೌಸಿ ಗವರ್ನರ್ ಜನರಲ್ ಆಗಿ, ತನ್ನ ಆಕ್ರಮಣಕಾರಿ ನೀತಿಯನ್ನು ಜಾರಿಗೊಳಿಸಿದನು. ೧೮೫೦ರ ಮಧ್ಯದ ವೇಳೆಗೆ ಹೈದರಾಬಾದ್ ರಾಜ್ಯವೂ ಈಸ್ಟ್ ಇಂಡಿಯಾ ಕಂಪೆನಿಗೆ, ಸಾದಿಲ್ವಾರು ವೆಚ್ಚದ ಸೈನ್ಯದ ಪಾಲಿನ ಬಾಬ್ತಿಗಾಗಿ ೬೪ ಲಕ್ಷ ರೂಪಾಯಿ ಕೊಡಬೇಕಾದ ಬಾಕಿ ಉಳಿಸಿಕೊಂಡಿತ್ತು. ೧೮೫೧ರ ಆಗಸ್ಟ್ ವೇಳೆಗೆ ನಿಜಾಮನು ಈಸ್ಟ್ ಇಂಡಿಯಾ ಕಂಪನಿಗೆ ಕೊಡಬೇಕಾದ ಸಾಲದಲ್ಲಿ ಅರ್ಧಕ್ಕಿಂತ ಹೆಚ್ಚನ್ನು ತೀರಿಸಿದ್ದನು. ಉಳಿಕೆಯನ್ನು ವರ್ಷದ ಕೊನೆಯೊಳಗಾಗಿ ಕೊಟ್ಟು ಪೂರೈಸುವುದಾಗಿ ಮಾತು ಕೊಟ್ಟನು. ಆದರೆ ಅದು ನಡೆಯಲಿಲ್ಲ. ಹಾಗಾಗಿ ೧೮೫೩ ಮೇ ೨೧ರಂದು ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿ ಹಾಕುವಂತೆ ಬಲಾತ್ಕರಿಸಲಾಯಿತು. ಅದರ ಪ್ರಕಾರ ಬೀರಾರ್ ಪ್ರಾಂತದ ಉಸ್ಮಾನಾಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನೂ ಈಸ್ಟ್ ಇಂಡಿಯಾ ಕಂಪೆನಿಗೆ ಬಿಟ್ಟು ಕೊಡಬೇಕಾಯಿತು"(ಷೇಕ್ ಅಲಿ ೧೯೯೭: ೧೭೦).

ಕಪಟರಾಳ ಕೃಷ್ಣರಾಯ ಮತ್ತು ಪರ್ವಿನಾ ಸುಲ್ತಾನಾ ಅವರ ಹೇಳಿಕೆಗಳನ್ನಾಧರಿಸಿ ಈ ಪ್ರದೇಶ ೧೮೫೩ ಮೇ ೨೧ರಂದು ಬ್ರಿಟಿಶ್‌ರ ವಶವಾಯಿತು. ಜಾಗತಿಕ ಮಟ್ಟದಲ್ಲಿ ಹತ್ತಿ ವ್ಯಾಪಾರದ ಮೇಲೆ ಅಧಿಪತ್ಯವನ್ನು ಸಾಧಿಸುವುದು ಇದರ ಮೂಲ ಉದ್ದೇಶವಾಗಿತ್ತು. ಈ ಒಪ್ಪಂದದ ನಂತರ ಈ ಪ್ರದೇಶದಲ್ಲಿ ಅನೇಕ ಬೆಳವಣಿಗೆಗಳು ನಡೆದವು. ಅವುಗಳಲ್ಲಿ ಭೂಕಂದಾಯವನ್ನು ನಿಗದಿಪಡಿಸಲು ಭೂ ಸರ್ವೆ ಕಾರ್ಯವನ್ನು ಮಾಡಿರುವುದು ಕಂಡುಬರುತ್ತದೆ. ಬಾಂಬೆ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳಂತೆ ಈ ಪ್ರದೇಶದಲ್ಲಿಯೂ ಕ್ರಿ.ಶ. ೧೮೫೯ ಏಪ್ರಿಲ್ ೩೦ರಂದು ಭೂ ಸರ್ವೆಯನ್ನು ಬಾಂಬೆ ಮಾದರಿಯಲ್ಲಿ ಮಾಡಿ ಪ್ರತಿ ಗ್ರಾಮಗಳ ಗಡಿಗಳನ್ನು ನಿರ್ಧರಿಸಿರುವುದು ಕಂಡುಬರುತ್ತದೆ.

"ಕೃಷಿ ಭೂಮಿಯನ್ನು ವಿಸ್ತರಿಸುವ ಹಾಗೂ ರೈತರನ್ನು ಹೊಸ ಪ್ರಯೋಗಗಳಿಗೆ ಸಜ್ಜುಗೊಳಿಸುವ ರೀತಿಯಲ್ಲಿ ಹೊಸ ಕಂದಾಯ ನೀತಿಯನ್ನು ಬಾಂಬೆ ಸರ್ಕಾರ ಮಾಡಿತು. ಆ ಪ್ರಕಾರ ೧೮೩೫ರಲ್ಲಿ ಬಾಂಬೆ ಸರ್ವೆ ಪದ್ಧತಿ ಜಾರಿಗೆ ಬಂತು. ಜಿ. ವಿಂಗೇಟ್ ಮತ್ತು ಗೋಲ್ಡ್‌ಸ್ಮಿಡ್ ಇವರ ನೇತೃತ್ವದಲ್ಲಿ ಕೃಷಿ ಭೂಮಿಯನ್ನು ಸರ್ವೆ ಮಾಡುವ ಹಾಗೂ ವರ್ಗೀಕರಿಸುವ ಹೊಸ ಪದ್ಧತಿಯನ್ನು ರೂಪಿಸ ಲಾಯಿತು. ಈ ಸರ್ವೆ ಪದ್ಧತಿ ರೈತವಾರಿ ಪದ್ಧತಿಯನ್ನು ಗಟ್ಟಿಗೊಳಿಸಿತು. ಇದರ ವ್ಯವಸ್ಥಿತವಾದ ಭೂಸರ್ವೆ ಆರಂಭಗೊಂಡದ್ದು ೧೮೫೫ರಲ್ಲಿ" ಎಂಬುದಾಗಿ ಕೆ. ಮೋಹನ್‌ಕೃಷ್ಣ ರೈ ಅವರು ತಿಳಿಸುತ್ತಾರೆ (ರೈ ೨೦೧೧: ೭೬-೭೭). ಬಾಂಬೆ ಸರ್ವೆ ಪದ್ಧತಿ ಮದ್ರಾಸ್ ಮತ್ತು ಬಾಂಬೆಗಳಲ್ಲಿ ೧೮೫೫ರ ವೇಳೆಗೆ ಪ್ರಚಾರಕ್ಕೆ ಬಂದಿತು. ಅದು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕ್ರಿ.ಶ. ೧೮೫೯ರಲ್ಲಿ

ಬಾಂಬೆ ಮಾದರಿ ಸರ್ವೆ ಪದ್ಧತಿ ಪ್ರವೇಶ ಪಡೆಯಿತು. ಈ ಪ್ರದೇಶದ ಪ್ರತಿಯೊಂದು ಗ್ರಾಮಗಳ ಗಡಿಗಳನ್ನು ನಿರ್ಧರಿಸುವ ಕಾರ್ಯ ನಡೆಯಿತು. ಕೃಷಿಕರ ಸಾಮರ್ಥ್ಯಕ್ಕೆ ಅನುಗುಣವಾಗಿ ತೆರಿಗೆಯನ್ನು ವಿಧಿಸುವ ಕ್ರಮ ಜಾರಿಗೆ ಬಂದಿತು. ಈ ಸರ್ವೆ ಕಾರ್ಯದ ಜವಾಬ್ದಾರಿಯನ್ನು ಸರ್ವೆ ಆಫ್ ಬಾಂಬೆ ಅಥಾರಿಟಿಗೆ ವಹಿಸಲಾಗಿತ್ತು. ಇದರ ನೇತೃತ್ವವನ್ನು "ಸೂಪರಿಂಟೆಂಡೆನ್ಸ್ ಆಫ್ ಕ್ಯಾಪ್ಟನ್ ಡಬ್ಲ್ಯೂ ಸಿ ಆ್ಯಂಡ್ರೋಸನ್, ಸೂಪರಿಂಟೆಂಡೆಟ್ ರೆವಿನ್ಯೂ ಸರ್ವೆ ಅಂಡ್ ಅಸೆಸ್‌ಮೆಂಟ್ ಸದರ್ ಮರಾಠ ಕಂಟ್ರಿ" ಅವರು ವಹಿಸಿದ್ದರು. ಈ ಪ್ರದೇಶದ ಭೂಮಾಪನ ಕಾರ್ಯವನ್ನು ೩೦ನೆಯ ಏಪ್ರಿಲ್, ೧೮೫೯ರಲ್ಲಿ ಪೂರ್ಣಗೊಳಿಸಲಾಯಿತೆಂದು "ಹೈದರಾಬಾದ್ ರಾಜ್ಯದ ವಾರ್ಷಿಕ ವರದಿ ೧೮೫೮-೫೯ರಿಂದ ತಿಳಿದುಬರುತ್ತದೆ(ವಾರ್ಷಿಕವರದಿ ೧೮೫೮: ೧೩೩-೧೪೫). ಹಾಗೆಯೇ ಮುಂದುವರೆದು ಪರ್ವೀನಾ ಸುಲ್ತಾನಾ ಅವರು "೧೮೭೮ರಲ್ಲಿ ರಾಯಚೂರು, ಗುಲ್ಬರ್ಗಾ ಮತ್ತು ಬೀದರ್‌ಗಳಲ್ಲಿ ಮುಂಬಯಿ ಮಾದರಿಯಲ್ಲಿ ಮಣ್ಣಿನ ವರ್ಗೀಕರಣ ಕಾರ್ಯವನ್ನು ಕೈಗೊಳ್ಳಲಾಯಿತು. ಆ ಮೂಲಕ ಕಂದಾಯ ನಿರ್ಧರಿಸಲಾಗುತ್ತಿತ್ತು. ಒಟ್ಟಾರೆಯಾಗಿ ರೈತವಾರಿ ಭೂಮಿಯ ಸರ್ವೇ ಮತ್ತು ಕಂದಾಯ ವ್ಯವಸ್ಥೆಯನ್ನೂ ಭೂಕಂದಾಯಾಡಳಿತದ ಮೂಲತತ್ವಗಳನ್ನೂ ೧೯೦೭ರ ಹೈದರಾಬಾದ್ ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ಶಾಸನ ಸ್ಪಷ್ಟವಾಗಿ ನಿರೂಪಿಸುತ್ತದೆ. ಅದರ ಪ್ರಕಾರ ಹಿಡುವಳಿಯ ಹಕ್ಕನ್ನು ನೀಡಲಾಯಿತೆಂದು" ತಿಳಿಸುತ್ತಾರೆ(ಷೇಕ್ ಅಲಿ ೧೯೯೭: ೧೭೪-೭೫).

ಭೂಮಿಯನ್ನು ಹಂಚಿಕೆ ಮಾಡಿದ ನಂತರ ಬ್ರಿಟಿಶರು ಈ ಪ್ರದೇಶದ ಕಪ್ಪು ಭೂಮಿಯನ್ನು' ಹತ್ತಿ ಬೆಳೆಯಲು ಸೂಕ್ತವೆಂದು ಭಾವಿಸಿದರು. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿ ಕಾಡನ್ನು ಕಡಿದು ವ್ಯವಸಾಯ ಭೂಮಿಯನ್ನಾಗಿ ಮಾಡಲಾಯಿತು. ಸೆಟ್ಲಮೆಂಟ್ ಭೂಮಿಯನ್ನು ಗುತ್ತಿಗೆ ಆಧಾರ ಮೇಲೆ ನೀಡಲಾಯಿತು. ಇಲ್ಲಿನ ಭೂಮಿಯನ್ನು ಕುರಿತು ಡೇವಿಡ್‌ಸನ್ ಎಂಬ ಅಧಿಕಾರಿ ಬಹು ಮೆಚ್ಚುಗೆಯ ಮಾತುಗಳನ್ನಾಡಿದ್ದಾನೆ. "ಈ ಪ್ರದೇಶದ ಭೂಮಿ ಫಲವತ್ತತೆಯಿಂದ ಕೂಡಿದೆ. ರಾಯಚೂರು ದೋ-ಅಬ್‌ನಲ್ಲಿ ಮ್ಯಾಂಚೆಸ್ಟರ್ ಹತ್ತಿ ಗಿರಣಿ ಕಂಪೆನಿ ಹತ್ತಿ ಬೀಜಗಳ ಪ್ರಯೋಗವನ್ನು ನಡೆಸಿತು. ಅದು ಪ್ರಯೋಗಿಸಿದ ನ್ಯೂಓರಲೀನ್ಸ್, ಸೀ ಆಸ್ ಲ್ಯಾಂಡ್ ಮತ್ತು ಈಜಿಪ್ಟ್ ಮತ್ತು ಬ್ರೆಜಿಲ್ ಹತ್ತಿ ಬೀಜಗಳನ್ನು ಪ್ರಯೋಗ ಮಾಡಿ ಯಶಸ್ವಿಯಾಯಿತು"(ಫ್ರೇಜರ್ ೧೮೬೫:೩೬೨-೩೬೩) ಎಂದು ತಿಳಿಸುತ್ತಾನೆ.

೧೮೬೧ರಲ್ಲಿ ಅಮೆರಿಕಾದಲ್ಲಿ ಆಂತರಿಕ ಕಲಹ ಆರಂಭಗೊಂಡಾಗ ದಕ್ಷಿಣ ಅಮೆರಿಕಾದ ಹತ್ತಿಯನ್ನೇ ಅವಲಂಬಿಸಿಕೊಂಡಿದ್ದ ಬ್ರಿಟನ್ನಿನ ಹತ್ತಿಗಿರಿಣಿಗಳು ಅಮೆರಿಕಾದ ಆಂತರಿಕ ಕಲಹದಿಂದಾಗಿ ಹತ್ತಿ ಪೂರೈಕೆ ಸ್ಥಗಿತಗೊಂಡಾಗ ತತ್ತರಿಸಿ ಹೋದವು. ಬಾಂಬೆ ಪ್ರೆಸಿಡೆನ್ಸಿಯ ವ್ಯಾಪ್ತಿಯಲ್ಲಿದ್ದ ಹತ್ತಿ ಬೆಳೆಯುವ ಪ್ರದೇಶಗಳು ಬ್ರಿಟನ್ನಿನ ಹತ್ತಿ ಕಂಪನಿಗಳ ಹೊಸ ಪ್ರಯೋಗಗಳಿಗೆ ನೇರವಾಗಿ ಒಳಗಾದವು (ರೈ ೨೦೧೧: ೮೨). ಬಾಂಬೆ ಪ್ರೆಸಿಡೆನ್ಸಿಯಂತೆ ಹೈದರಾಬಾದ್ ಸಂಸ್ಥಾನದಲ್ಲಿ ರಾಯಚೂರು ದೋ-ಅಬ್ ಪ್ರದೇಶ ಕೂಡ ಇಂಗ್ಲೆಂಡಿನ ಮ್ಯಾಂಚೆಸ್ಟರ್ ಹತ್ತಿ ಕಂಪನಿಯ ಪ್ರಯೋಗಕ್ಕೆ ನೇರವಾಗಿ ಒಳಗಾಯಿತು. ೧೮೫೮-೫೯ರ ವೇಳೆಗೆ ಈ ಕಂಪನಿ ರಾಯಚೂರಿನಲ್ಲಿ ಹತ್ತಿ ಬೆಳೆಯ ಪ್ರಯೋಗ ಮಾಡಿ ಯಶಸ್ವಿಯಾಗಿತ್ತು. ಅಮೆರಿಕಾದ ಅಂತಃಕಲಹದ ಪರಿಣಾಮ ಹತ್ತಿಯ ಬೆಲೆ ಗಗನಕ್ಕೇರಿತ್ತು. ಇಂತಹ ಸಂದರ್ಭದಲ್ಲಿ ರಾಯಚೂರು ದೋ-ಅಬ್‌ನ್ನು ಅವಲಂಬಿಸಬೇಕಾಯಿತು. ಏಕೆಂದರೆ ಈ ಪ್ರದೇಶದ ಹತ್ತಿಗೆ ವಿಶೇಷವಾದ ಬೇಡಿಕೆ ಬಂದಿತು, ಅಲ್ಲದೆ ಹತ್ತಿಯ ಧಾರಣೆಯೂ ಕೂಡ ಹೆಚ್ಚಾಯಿತು. ಇದರಿಂದ ಕಂಗೆಟ್ಟ "ಯುರೋಪಿನ ಬಂಡವಾಳಶಾಹಿಗಳು ಹತ್ತಿಯನ್ನು ಖರೀದಿಸಲು ಏಜೆಂಟರು,

ಪಾಲುದಾರರು ಮತ್ತು ಮಧ್ಯವರ್ತಿಗಳ ಮೂಲಕ ಹತ್ತಿ ವ್ಯಾಪಾರ ಮಾಡಲು ಪ್ರಾರಂಭಿಸಿದರು. ರಾಯಚೂರು ಸೇರಿದಂತೆ ಭಾರತದ ಹತ್ತಿಗೆ ಬಹುಬೇಡಿಕೆ ಹೆಚ್ಚಾಗಿ ಸ್ಥಳೀಯವಾಗಿ ಹಾಗೂ ವಿದೇಶಿ ವ್ಯಾಪಾರದಲ್ಲಿ ಬ್ರಿಟಿಶ್ ವರ್ತಕರು ಹಾಗೂ ಸ್ಥಳೀಯ ಮಧ್ಯವರ್ತಿ ವರ್ಗಗಳು ಅಪಾರವಾದ ಲಾಭವನ್ನು ಕಂಡವು. ಇದು ಸ್ಥಳೀಯ ಕೃಷಿ ವ್ಯವಸ್ಥೆಯಲ್ಲಿ ಕೆಲವೊಂದು ಬದಲಾವಣೆಗಳಿಗೆ ಕಾರಣವಾಗಿದೆ"(ಫ್ರೇಜರ್ ೧೮೬೫: ३೭೨).

"ಹತ್ತಿಯ ಬರವನ್ನು ತೀವ್ರವಾಗಿ ಎದುರಿಸುತ್ತಿದ್ದ ಬ್ರಿಟನ್ ಪರ್ಯಾಯ ಮಾರ್ಗವನ್ನು ಭಾರತದಲ್ಲಿ ಕಂಡುಕೊಂಡಿತು. ಇದರಿಂದ ಭಾರತದ ಸ್ಥಳೀಯ ಆರ್ಥಿಕತೆ ಮೇಲೆ ಪ್ರತಿಕೂಲ ಪರಿಣಾಮಗಳನ್ನು ಬೀರತೊಡಗಿತು. ಹತ್ತಿ ವಾಣಿಜ್ಯ ಬೆಳೆಯಾಗಿದ್ದುದರಿಂದ ಈ ಬೆಳೆಯ ಲಾಭವನ್ನು ಎಲ್ಲ ವರ್ಗದ ರೈತರೂ ಪಡೆಯಲು ಸಾಧ್ಯವಿರಲಿಲ್ಲ. ಮತ್ತೊಮ್ಮೆ ಶ್ರೀಮಂತ ವರ್ಗದ ರೈತರು ಹಾಗೂ ವ್ಯಾಪಾರಸ್ಥರು ವಾಣಿಜ್ಯ ಬೆಳೆಗಳ ಲಾಭವನ್ನು ಪಡೆಯುವಂತಾಯಿತು. ಎಷ್ಟೋ ಸಣ್ಣ ರೈತರು ತಮ್ಮ ಜೀವನಾವಶ್ಯಕ ಬೆಳೆಗಳನ್ನು ಬೆಳೆಯುವುದನ್ನು ಕೈ ಬಿಡಬೇಕಾದ ಒತ್ತಾಯಕ್ಕೂ ಒಳಗಾಗಬೇಕಾಯಿತು. ಹೀಗಾಗಿ ಯುರೋಪಿನ ಹತ್ತಿ ರಾಜಕೀಯ ಸ್ಥಳೀಯ ಕೃಷಿಯಲ್ಲಿ ಹಲವಾರು ಬಗೆಯ ಸ್ಥಿತ್ಯಂತರಗಳಿಗೆ ಕಾರಣವಾಯಿತೆಂದು" ಮೋಹನ್‌ಕೃಷ್ಣ ರೈ ಅವರು ಗಮನ ಸೆಳೆಯುತ್ತಾರೆ(ರೈ ೨೦೧೦: ೯೮). ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬ್ರಿಟನ್ನಿಗೆ ಅಗತ್ಯವಾಗಿದ್ದ ಈಜಿಪ್ಟ್ ಮತ್ತು ಬ್ರೆಜಿಲ್ ಮುಂತಾದ ಹೈಬ್ರಿಡ್ ಹತ್ತಿ ಬೆಳೆಯನ್ನು ಈ ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಯುರೋಪಿನ ಆರ್ಥಿಕ ಬಿಕ್ಕಟ್ಟು ರಾಯಚೂರು ದೋ-ಅಬ್‌ನ ಹತ್ತಿಯಿಂದ ಚೇತರಿಸಿಕೊಂಡದ್ದು ಗಮನಾರ್ಹ. ಮ್ಯಾಂಚೆಸ್ಟರ್ ಹತ್ತಿ ಕಂಪೆನಿ ಈ ಪ್ರದೇಶದಲ್ಲಿ ತನ್ನ ವ್ಯಾಪಾರದ ಪ್ರಾಬಲ್ಯವನ್ನು ಸಾಧಿಸಿತ್ತು. ವಿದೇಶಿ ತಳಿಗಳನ್ನು ಈ ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಕ್ರಿ.ಶ. ೧೮೬೧ರಲ್ಲಿ ೪೩,೦೦೦ ಎಕರೆಗಿಂತ ಹೆಚ್ಚಿನ ಭೂಮಿಯಲ್ಲಿ ಹತ್ತಿಯನ್ನು ಬೆಳೆಯಲಾಯಿತು. ಈ ಬೆಳೆಗಳನ್ನು ಈ ಪ್ರದೇಶದಲ್ಲಿ ರಾಯಚೂರು-೧೦,೫೭೬ ಎಕರೆ, ಆಲಂಪುರ-೮,३೭೭ ಎಕರೆ, ಸಿಂಧನೂರು-೯೮೫೭ ಎಕರೆ, ಮಾನ್ವಿ-೭,೧೭೬ ಎಕರೆ, ದೇವದುರ್ಗ-೬,೮೯३ ಎಕರೆ, ಲಿಂಗಸೂಗೂರು ಹಾಗೂ ಕವಿತಾಳ ಮುಂತಾದ ತಾಲೂಕುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಹತ್ತಿ ಬೆಳೆಯಲಾಗುತ್ತಿತ್ತು. ಈ ಹತ್ತಿಯ ಬೆಲೆ ಬಾಂಬೆಯಲ್ಲಿ ೧೮೬೧ ನವೆಂಬರ್‌ನಲ್ಲಿ ಬಹುಬೇಡಿಕೆಯಿಂದ ಹೆಚ್ಚಿನ ಬೆಲೆಗೆ ಖರೀದಿಯಾಗಿರುವುದು ಕಂಡುಬರುತ್ತದೆ(ಫ್ರೇಜರ್ ೧೮೬೫: ३೭೨-३೬೭). ಈ ಪ್ರದೇಶದಲ್ಲಿ ಹತ್ತಿ ಬೆಳೆಯುವ ಕಪ್ಪುಭೂಮಿ ಶೇಕಡ ೬೦ಕ್ಕಿಂತ ಹೆಚ್ಚು ಪ್ರದೇಶವಿರುವುದು ಗಮನಾರ್ಹ.

ಬ್ರಿಟಿಶರು ಹತ್ತಿಯನ್ನು ಬೇರ್ಪಡಿಸುವ ದೇಶೀಯ ಮಾದರಿಯ ಚರಕಗಳನ್ನು ಬಳಸುವ ಬದಲು ಹೆಚ್ಚು ಲಾಭವನ್ನು ತಂದುಕೊಡುವ ಹತ್ತಿ ಗಿರಣಿಗಳನ್ನು ಸ್ಥಾಪಿಸಿದರು. ಕಡಿಮೆ ಅವಧಿಯಲ್ಲಿ ಹೆಚ್ಚು ಕೆಲಸ ಮಾಡುವ ಯಂತ್ರಗಳನ್ನು ಬಳಸಲಾಯಿತು. ಅಲ್ಲದೆ ದೇಶೀಯ ಗುಡಿಕೈಗಾರಿಕೆಗಳಿಗೆ ಇದರಿಂದ ಬಲವಾದ ಪೆಟ್ಟು ಬಿದ್ದಂತಾಯಿತು. ಆದರೂ ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಿತ್ತು. ಬ್ರಿಟನ್ನಿನ ಹಿತದೃಷ್ಟಿಯಿಂದ ಅಲ್ಲಿನ ಕಂಪೆನಿಗಳೆಲ್ಲವೂ ಭಾರೀ ಪ್ರಮಾಣದಲ್ಲಿ ಹತ್ತಿ ವ್ಯಾಪಾರದ ಮೇಲೆ ಅಧಿಪತ್ಯ ಸಾಧಿಸಿರುವುದು ಕಂಡುಬರುತ್ತದೆ. ರಾಯಚೂರು ಅತ್ಯುತ್ತಮವಾದ ಹತ್ತಿ ತಳಿಯನ್ನು ಬೆಳೆಯುವುದರ ಮೂಲಕ ಬಹುದೊಡ್ಡ ಹತ್ತಿ ವ್ಯಾಪಾರ ಕೇಂದ್ರವಾಗಿತ್ತು. ರಾಯಚೂರು ತೀವ್ರವಾಗಿ ಗುರುತಿಸಿಕೊಳ್ಳಲು ನಗರೀಕರಣಗೊಳ್ಳಲು ಕಾರಣವಾದದ್ದು ಹತ್ತಿಯೇ. ಹತ್ತಿಯ ಬಹುದೊಡ್ಡ

ಮಾರುಕಟ್ಟೆಯನ್ನು ನಿಜಾಮನ ಕಾಲದಲ್ಲಿ ನಿರ್ಮಿಸಲಾಯಿತು. ಪ್ರಸ್ತುತ ಸಂದರ್ಭದಲ್ಲಿ ಏಷ್ಯಾದಲ್ಲಿಯೇ ಮುಂಚೂಣಿಯಲ್ಲಿರುವ ಹತ್ತಿ ಮಾರುಕಟ್ಟೆಯನ್ನು ರಾಯಚೂರು ಹೊಂದಿರುವುದು ಕೂಡ ಗಮನಾರ್ಹ. ಇದರಿಂದ ಅನೇಕ ಜನ ಬಂಡವಾಳಶಾಹಿಗಳು, ವರ್ತಕರು, ದಲ್ಲಾಳಿಗಳು, ಉದ್ದಿಮೆದಾರರು ಮುಂತಾದ ವರ್ಗದವರೆಲ್ಲರೂ ರಾಯಚೂರಿನ ಬೆಳವಣಿಗೆಯ ಲಾಭವನ್ನು ಪಡೆದುಕೊಂಡದ್ದಂತೂ ನಿರ್ವಿವಾದ. ಹಾಗಾಗಿ ಹತ್ತಿ ಇಲ್ಲಿಯ ವಾಣಿಜ್ಯ ಪ್ರಧಾನ ಕೃಷಿ ಬೆಳೆಯಾಗಿದೆ. ಬಹುತೇಕ ಹಳ್ಳಿಗಳಲ್ಲಿ ಹತ್ತಿಯನ್ನು ಬೆಳೆಯಲಾಗುತ್ತಿತ್ತು. ಮನೆಯ ಖರ್ಚಿಗೆ ಅಂಗಡಿಗಳಲ್ಲಿ ಸಾಮಾನುಗಳನ್ನು ಖರೀದಿಸಬೇಕಾದರೆ ಹತ್ತಿಯನ್ನು ಕೆ.ಜಿ.ಲೆಕ್ಕದ ತೂಕದಲ್ಲಿ ಅಂಗಡಿಯವರಿಗೆ ಮಾರಿ ಅದರಿಂದ ಬಂದ ಹಣದಿಂದ ಅದೇ ಅಂಗಡಿಯಲ್ಲಿ ಅಗತ್ಯ ವಸ್ತುಗಳನ್ನು ತರಲಾಗುತ್ತಿತ್ತು. ಹತ್ತಿ ಬಹುಮುಖ್ಯವಾದ ವಾಣಿಜ್ಯ ಬೆಳೆಯಾಗಿ ವಿಸ್ತರಿಸಿಕೊಂಡಿತ್ತು. ಇದು ಕೆಲವೇ ಕೆಲವು ವರ್ತಕರಿಗೆ ಲಾಭವನ್ನು ತಂದುಕೊಟ್ಟಿತ್ತು. ದಲ್ಲಾಳಿಗಳಿಗೂ ಲಾಭ ಲಭಿಸಿರುವುದು ಕಂಡುಬರುತ್ತದೆ.

೧೮೫೭ರಲ್ಲಿ ಸ್ಥಾಪನೆಯಾದ ಬ್ರಿಟನ್ನಿನ ಹತ್ತಿ ಪೂರೈಕೆ ಸಂಸ್ಥೆ ಅಸ್ತಿತ್ವಕ್ಕೆ ಬರುವ ಪೂರ್ವದಲ್ಲಿ ಅಂದರೆ ೧೮೩೦ರ ದಶಕಗಳಲ್ಲಿ ಮಣ್ಣು ಹಾಗೂ ಹವಾಮಾನ ಪರೀಕ್ಷೆ ಬ್ರಾಂಬೆ ಪ್ರೆಸಿಡೆನ್ಸಿಯಲ್ಲಿ ಬ್ರಿಟನ್ನಿನ ಹತ್ತಿ ಕಂಪೆನಿಗಳು ಈ ಬಗೆಯ ಅಧ್ಯಯನ ನಡೆಸುತ್ತಿದ್ದವು. ಆದರೆ ರಾಯಚೂರು ದೋ-ಅಬ್ ಪ್ರದೇಶದಲ್ಲಿ ೧೮೫೭ರ ನಂತರ ಅಂದರೆ ೧೮೫೯ರಲ್ಲಿ ಭೂ ಸರ್ವೇ ಕಾರ್ಯ ನಡೆಯಿತು. ಈ ವೇಳೆಗಾಗಲೇ ಹತ್ತಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತಿತ್ತು. ೧೮೭೮ರಲ್ಲಿ ರಾಯಚೂರಿನ ಮಣ್ಣಿನ ಪರೀಕ್ಷೆ ಮಾಡಿರುವುದು ಕಂಡುಬರುತ್ತದೆ. ಆ ಎಲ್ಲಾ ಹಿನ್ನೆಲೆಗಳಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ರಸ್ತೆಗಳನ್ನು ಅಭಿವೃದ್ಧಿ ಪಡಿಸಲಾಯಿತು. ಈ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯಲ್ಲಿ ೧೮೫೫ರಲ್ಲಿ ರಾಯಚೂರು–ಕವಿತಾಳ–ಲಿಂಗಸೂಗೂರು ಮಧ್ಯ ಮೊಟ್ಟ ಮೊದಲ ಬಾರಿಗೆ ಪ್ರಥಮ ರಸ್ತೆ ನಿರ್ಮಾಣವಾಯಿತು. ಈ ಸಂದರ್ಭದಲ್ಲಿ ಕವಿತಾಳವನ್ನು ತಾಲೂಕು ಕೇಂದ್ರವನ್ನಾಗಿಸಿಕೊಳ್ಳಲಾಗಿತ್ತು. ಈಗ ಹೋಬಳಿ ಕೇಂದ್ರವಾಗಿದೆ. ಜೊತೆಗೆ ಇಲ್ಲಿ ಒಂದು ಚರ್ಚ್‌ನ್ನು ಕೂಡಾ ಸ್ಥಾಪಿಸಲಾಗಿದೆ. ಇದರಂತೆ ಯರಗೇರಾ ಕೂಡಾ ಈ ಕಾಲದಲ್ಲಿ ತಾಲೂಕು ಕೇಂದ್ರವಾಗಿತ್ತು. ಹಾಗೆಯೇ ಚರ್ಚ್‌ಗಳಿರುವ ಸ್ಥಳಗಳನ್ನು ಅಭಿವೃದ್ಧಿಪಡಿಸಲಾಗುತ್ತಿತ್ತು. ಈ ಪ್ರದೇಶದಲ್ಲಿ ಬೆಳೆಯುವ ಹತ್ತಿಯನ್ನು ಸಾಗಿಸಲು ಮುದಗಲ್ಲಿನಿಂದ ಬಾಂಬೆಗೆ ರಸ್ತೆಯ ಸಂಪರ್ಕ ಕಲ್ಪಿಸಲಾಗಿತ್ತು. ಹತ್ತಿಯನ್ನು ಮುದಗಲ್ ಮೂಲಕವೇ ಬ್ರಿಟನ್ನಿಗೆ ಸರಬರಾಜು ಆಗುತ್ತಿತ್ತು. ಮುದಗಲ್, ಮದ್ರಾಸ್ ಮತ್ತು ಬಾಂಬೆ ರಸ್ತೆ ಸಂಪರ್ಕವನ್ನು ಹೊಂದಿತ್ತು(ಫ್ರೇಜರ್ ೧೮೬೫: ೩೬೮). ಈ ಪ್ರದೇಶದಲ್ಲಿ ಬಹುತೇಕವಾಗಿ ಬಂಡಿ ದಾರಿಗಳೇ ಹೆಚ್ಚಾಗಿದ್ದವು. ಸುಧಾರಿತ ರಸ್ತೆಗಳಿರಲಿಲ್ಲ. ಸರಕುಗಳನ್ನು ಎತ್ತು, ಕುದುರೆ ಹಾಗೂ ಮನುಷ್ಯರು ಹೊತ್ತುಕೊಂಡು ಹೋಗುತ್ತಿದ್ದರು. ಬಂಡಿಯನ್ನು ಬಳಸಲಾಗುತ್ತಿತ್ತು.

"ಹೈದರಾಬಾದ್ ಕರ್ನಾಟಕದ ಗುಲ್ಬರ್ಗಾ ಪ್ರದೇಶದಲ್ಲಿ ಎರಡು ಪ್ರಮುಖ ಬ್ರಾಡ್‌ಗೇಜ್ ಮಾರ್ಗಗಳಿದ್ದವು. ಅವುಗಳೆಂದರೆ ಮದರಾಸಿನಿಂದ ರಾಯಚೂರು, ವಾಡಿ ಮತ್ತು ಗುಲ್ಬರ್ಗಾ ಮೂಲಕ ಮುಂಬಯಿಗೆ, ವಾಡಿಯಿಂದ ಚಿತ್ತಾಪುರ ಮತ್ತು ಸೇಡಂ ಮೂಲಕ ಸಿಕಂದರಾಬಾದ್‌ಗೆ. ೧೮೬೧–೧೮೭೧ರಲ್ಲಿ ರಾಯಚೂರು–ಶೋಲಾಪುರ ಮಾರ್ಗ ನಿರ್ಮಾಣಗೊಂಡಿತು. ಈ ಮಾರ್ಗ ಮದರಾಸು ಮತ್ತು ಮುಂಬಯಿ ಪ್ರೆಸಿಡೆನ್ಸಿಗಳ ಮಧ್ಯೆ ನೇರ ಸಂಪರ್ಕ ಕಲ್ಪಿಸಿತು. ೧೮೭೪ರಲ್ಲಿ ವಾಡಿ–ಸಿಕಂದರಾಬಾದ್ ಮಾರ್ಗ ನಿರ್ಮಾಣಗೊಂಡಿತು. ಇದು ಹೈದರಾಬಾದನ್ನು ಮದರಾಸು ಮತ್ತು ಮುಂಬಯಿಯೊಂದಿಗೆ

ಜೋಡಿಸಿತು. ಈ ಮಾರ್ಗವನ್ನು ಗ್ರೇಟ್ ಇಂಡಿಯನ್ ಪೆನಿನ್‌ಶುಲಾರ್ ರೈಲ್ವೆ ೧೮೭೮ರವರೆಗೆ ನೋಡಿಕೊಂಡಿತು. ನಂತರ ೧೮೮೫ರವರೆಗೆ ಸ್ಟೇಟ್ ರೈಲ್ವೆ ಏಜನ್ಸಿ, ೧೯೩೦ರವರೆಗೆ ನಿಜಾಮನ ಗ್ಯಾರಂಟೇಡ್ ಸ್ಟೇಟ್ ರೈಲ್ವೆ ನೋಡಿಕೊಂಡವು. ೧೯೩೦ರಲ್ಲಿ ಈ ಮಾರ್ಗವನ್ನು ಹೈದರಾಬಾದಿನ ನಿಜಾಮ ಖರೀದಿಸಿದನೆಂದು" ಮೋಹನ್‌ಕೃಷ್ಣ ರೈ ಅವರು ತಿಳಿಸುತ್ತಾರೆ(ರೈ ೨೦೦೭: ೮೫).

ರಾಯಚೂರು ದೋ-ಅಬ್ ಪ್ರದೇಶ ಹೆಚ್ಚು ಆದಾಯವನ್ನು ತರುವ ಪ್ರದೇಶವಾಗಿ ಗುರುತಿಸಿಕೊಂಡಿದೆ. ಗ್ರಾಮೀಣ ಪ್ರದೇಶಗಳಿಂದ ಅಧಿಕ ಆದಾಯ ಸಂಗ್ರಹವಾಗುತ್ತಿತ್ತು. ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು. ಈ ಕಾಲಾವಧಿಯಲ್ಲಿ ಹೊಳೆದಂಡೆಗಳಲ್ಲಿ ನಾವಿಕರ ಸಂಖ್ಯೆ ಹೆಚ್ಚಾಗಿತ್ತು. ಬೀರಾರ್ ಮತ್ತು ಉಸ್ಮಾನಾಬಾದ್ ಜಿಲ್ಲೆಗಳಿಗಿಂತ ಅಧಿಕ ಆದಾಯವನ್ನು ನೀಡುವಂತದ್ದಾಗಿತ್ತು. ೧೮೫೮-೫೯ರ ವೇಳೆಗೆ ವಿದ್ಯುತ್ ತಂತಿಯ ಒಂದು ಕೇಂದ್ರ ರಾಯಚೂರಿನಲ್ಲಿತ್ತು. ರಾಯಚೂರು ಮತ್ತು ಲಿಂಗಸೂಗೂರುಗಳು ಪಟ್ಟಣಗಳಾಗಿ ನಿರ್ಮಾಣಗೊಂಡವು(ವಾರ್ಷಿಕವರದಿ ೧೮೫೮-೫೯:೧೨೫-೧೩೫).

೧೮೫೩ರ ಬೀರಾರ್ ಒಪ್ಪಂದವಾದ ನಂತರ ಅನೇಕ ಆರ್ಥಿಕ ಬದಲಾವಣೆಗಳಾದವು. ಹಾಗೆಯೇ ಬ್ರಿಟನ್ ಸರ್ಕಾರ ಜಿಲ್ಲೆಗಳನ್ನು ರಚಿಸುವ ಅಪೇಕ್ಷೆ ಹೊಂದಿತ್ತು. ಈ ಹಿನ್ನೆಲೆಯಲ್ಲಿ ನಿಜಾಮ ಸರ್ಕಾರಕ್ಕೆ ಸಲಹೆ ನೀಡಿತು. ಇವರ ಸಲಹೆ ಮೇರೆಗೆ ಹೈದರಾಬಾದ್ ಕರ್ನಾಟಕದ ಪ್ರದೇಶಗಳಾದ ಗುಲ್ಬರ್ಗಾ, ಬೀದರ್ ಮತ್ತು ರಾಯಚೂರುಗಳಲ್ಲಿ ನಿಜಾಮರು ಬ್ರಿಟಿಶರ ಸಲಹೆಯ ಪ್ರಕಾರ ಆಡಳಿತ ನಡೆಸುತ್ತಿದ್ದರು. "೧೮೬೭ರಲ್ಲಿ ಹೈದರಾಬಾದ್ ರಾಜ್ಯವನ್ನು ಐದು ವಿಭಾಗಗಳನ್ನಾಗಿ ಮತ್ತು ಹದಿನೇಳು ಜಿಲ್ಲೆಗಳನ್ನಾಗಿ ವಿಂಗಡಿಸಲಾಯಿತು. ಈ ಸಂದರ್ಭದಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಲಿಂಗಸೂಗೂರು ಮತ್ತು ರಾಯಚೂರು ಪಟ್ಟಣಗಳು ಜಿಲ್ಲೆಗಳಾದವು. ರಾಯಚೂರು ಮೊದಲೇ ಜಿಲ್ಲೆಯಾಗಿತ್ತು. ನಂತರ ಲಿಂಗಸೂಗೂರು ಜಿಲ್ಲೆಯ ಸ್ಥಾನವನ್ನು ಪಡೆಯಿತು. ಈ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆಗೆ ಮಾನವಿ, ದೇವದುರ್ಗ, ಯರಗೇರಾ, ರಾಯಚೂರು, ಆಲಂಪೂರ ಮತ್ತು ಯಾದಗಿರಿ ತಾಲೂಕುಗಳು ಸೇರಿದವು. ಲಿಂಗಸೂಗೂರು ಜಿಲ್ಲೆಗೆ-ಗಂಗಾವತಿ, ಕುಷ್ಟಗಿ, ಲಿಂಗಸೂಗೂರು, ಸಿಂಧನೂರು, ಕವಿತಾಳ, ಸುರಪುರ ಮತ್ತು ಶಹಾಪುರ ತಾಲೂಕು ಒಳಗೊಂಡಿತ್ತು. ಪ್ರತಿಯೊಂದು ವಿಭಾಗಕ್ಕೂ ರೆವಿನ್ಯೂ ಕಮಿಷನರ್‌ಗಳನ್ನು ನೇಮಿಸಲಾಗಿತ್ತು. ಪ್ರತಿ ಜಿಲ್ಲೆಗೂ ಒಬ್ಬ ಮ್ಯಾಜಿಸ್ಟ್ರೇಟ್ ಅಥವಾ ಕಲೆಕ್ಟರ್‌ನನ್ನು ನೇಮಿಸಲಾಯಿತು. ಹೈದರಾಬಾದ್ ರಾಜ್ಯದಲ್ಲಿ ೧೮೮೭-೮೮ರಲ್ಲಿ ಸ್ಥಳೀಯ ಸ್ವಯಮಾಡಳಿತ ಸಂಸ್ಥೆಗಳ ಉಗಮವಾಯಿತು. ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳು ಅದರ ಭಾಗಗಳಾಗಿದ್ದವು. ಪುರಸಭೆಗಳಿಗೆ ಸಂಬಂಧಿಸಿದಂತೆ ೧೯೦೦ರಲ್ಲಿ ಅಧಿನಿಯಮವೊಂದನ್ನು ಜಾರಿಗೊಳಿಸಲಾಯಿತು. ಈ ಅಧಿನಿಯಮ ಪುರಸಭೆಯ ತೆರಿಗೆ ಹಾಗೂ ವಿಶೇಷ ತೆರಿಗೆಗಳನ್ನು ವಿಧಿಸಲು ಅವಕಾಶವಿತ್ತಿತು. ಜಿಲ್ಲಾ ಕೇಂದ್ರ ಸ್ಥಳಗಳೂ ಸೇರಿದಂತೆ ೫೦೦ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಪ್ರದೇಶಗಳಲ್ಲಿ ನೈರ್ಮಲ್ಯೀಕರಣ ಸಮಿತಿಯನ್ನು ರಚಿಸುವ ಅಧಿಕಾರ ಸರಕಾರಕ್ಕೆ ಸಿಕ್ಕಿತು. ಬೆಳೆಯುತ್ತಿದ್ದ ಪಟ್ಟಣಗಳಲ್ಲಿ ಬದಲಾಗುತ್ತಿದ್ದ ಪರಿಸ್ಥಿತಿಗನುಗುಣವಾಗಿ ೧೯೦೮, ೧೯೧೦ ಮತ್ತು ೧೯೩೩-೩೪ರಲ್ಲಿ ಈ ಅಧಿನಿಯಮದಲ್ಲಿ ತಿದ್ದುಪಡಿಗಳನ್ನು ಮಾಡಲಾಯಿತು" ಎಂದು ತಿಳಿದು ಬರುತ್ತದೆ (ರೈ ೨೦೦೭: ೧೦೧-೧೦೨).

೧೮೫೩ರ ಒಪ್ಪಂದದ ನಂತರ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಮಹತ್ವದ ಬೆಳವಣಿಗೆಗಳು ಕಂಡು ಬಂದವು. ಪಾಳೆಯಗಾರಿಕೆ ಮತ್ತು ಜಮೀನ್ದಾರರ ಪ್ರಭಾವದಲ್ಲಿ ಭೂಮಿಯ ಸರ್ವೇಕಾರ್ಯವೇ ನಡೆದಿರಲಿಲ್ಲ. ಆದರೆ ಬ್ರಿಟಿಶ್ ಸರ್ಕಾರ ಈ ನಿಟ್ಟಿನಲ್ಲಿ ಬಾಂಬೆ ಮಾದರಿಯಲ್ಲಿ ಭೂ ಸರ್ವೇಯನ್ನು ಮಾಡಿಸಿತು. ಸರ್ವೇಯ ಜೊತೆಗೆ ಬ್ರಿಟನ್ನಿಗೆ ಅಗತ್ಯವಾಗಿದ್ದ ಈಜಿಪ್ಟ್ ಮತ್ತು ಬ್ರೆಜಿಲ್ ಹತ್ತಿ ಬೀಜಗಳ ಪ್ರಯೋಗವನ್ನು ಈ ಪ್ರದೇಶದಲ್ಲಿ ಮಾಡಿತು. ಈ ಪ್ರಯೋಗ ಯಶಸ್ವಿ ಫಲಿತಾಂಶ ನೀಡಿತು. ಬ್ರಿಟನ್‌ಗೆ ಅಗತ್ಯವಾಗಿದ್ದ ಬೆಳೆಯನ್ನು ಬೆಳೆಯಲು ಯೋಗ್ಯ ಭೂಮಿಯನ್ನು ಈ ಪ್ರದೇಶ ಹೊಂದಿರುವುದು ಸ್ಪಷ್ಟವಾಯಿತು. ತದನಂತರ ಹತ್ತಿ ಬೆಳೆ ಅಧಿಕ ಪ್ರಮಾಣದಲ್ಲಿ ಬೆಳೆಯಲಾಯಿತು. ಆ ಮೂಲಕ ಈ ಪ್ರದೇಶ ಅಂತಾರಾಷ್ಟ್ರೀಯ ಮಟ್ಟದಲ್ಲಿ ಚರ್ಚಿತ ಪ್ರದೇಶವಾಗಿ ಗುರುತಿಸಿಕೊಂಡಿತು. ಬೆಳೆದ ಬೆಳೆಯನ್ನು ಬ್ರಿಟನ್ನಿಗೆ ಸಾಗಿಸಲು ರಸ್ತೆಗಳ ನಿರ್ಮಾಣವಾಯಿತು. ಮುದಗಲ್‌ನಿಂದ ಬಾಂಬೆಗೆ, ಮದ್ರಾಸ್‌ಗೆ ರಸ್ತೆ ಸಾರಿಗೆ ವ್ಯವಸ್ಥೆ ಕಲ್ಪಿಸಲಾಗಿತ್ತು. ಹಾಗೆಯೇ ಲಿಂಗಸೂಗೂರು-ರಾಯಚೂರು ಮಧ್ಯೆ ದೊಡ್ಡ ರಸ್ತೆಯನ್ನು ನಿರ್ಮಿಸಲಾಯಿತು. ನಂತರದಲ್ಲಿ ರೈಲ್ವೆ ಮಾರ್ಗದ ಸಂಪರ್ಕವನ್ನು ಪಡೆಯಲಾಯಿತು. ರಾಯಚೂರು ಮೂಲಕ ಬಾಂಬೆ-ಮದ್ರಾಸ್‌ಗೆ ರೈಲು ಮಾರ್ಗ ಕಲ್ಪಿಸಲಾಯಿತು. ಅಲ್ಲದೆ ರಾಯಚೂರಿನಲ್ಲಿ ೧೯೩೫ರ ಸುಮಾರಿಗೆ ರಾಜೇಂದ್ರ ಗಂಜ್ ಎಂಬ ದೊಡ್ಡ ಪ್ರಮಾಣದ ಮಾರುಕಟ್ಟೆಯನ್ನು ನಿರ್ಮಿಸಲಾಯಿತು. ಹತ್ತಿಯನ್ನು ಸಾಗಿಸಲು ಎತ್ತು, ಕತ್ತೆ, ಕುದುರೆ, ಬಂಡಿಗಳ ಮೂಲಕ ಸಾಗಿಸಲಾಗುತ್ತಿತ್ತು. ಕ್ರಿ.ಶ.೧೮೫೮-೫೯ರ ಹೈದರಾಬಾದ್ ರಾಜ್ಯದ ವಾರ್ಷಿಕ ವರದಿಯಲ್ಲಿ ೩೬ ಕನ್ನಡ ಮಾಧ್ಯಮ ಶಾಲೆಗಳಿದ್ದವೆಂದು ತಿಳಿದುಬರುತ್ತದೆ. ಇಲ್ಲದೆ ೧೮೫೭ರಲ್ಲಿ ದಂಗೆಯೂ ಏಳುತ್ತದೆ. ಇದು ಈ ಕಾಯ್ದೆಯ ಒಪ್ಪಂದದಿಂದ ಆದ ಬೆಳವಣಿಗೆಗಳಾಗಿವೆ.

### ೪.೪.೩. ೧೮೫೭ರ ಬಂಡಾಯದಲ್ಲಿ ರಾಯಚೂರು ದೋ-ಅಬ್‌ನ ಪಾತ್ರ

ಭಾರತದಾದ್ಯಂತ ಬ್ರಿಟಿಶರ ವಿರುದ್ಧ ಬಹುದೊಡ್ಡ ಪ್ರಮಾಣದಲ್ಲಿ ನಡೆದ ೧೮೫೭ರ ಬಂಡಾಯದಲ್ಲಿ ರಾಯಚೂರು ದೋ-ಅಬ್ ಪಾತ್ರವೂ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ. ೧೮೫೭ರ ಸಂದರ್ಭದಲ್ಲಿ ರಾಯಚೂರು ದೋ-ಅಬ್ ಬ್ರಿಟಿಶರ ಅಧೀನದಲ್ಲಿರುತ್ತದೆ. ಬ್ರಿಟಿಶರ ಚಟುವಟಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹವಿದ್ದಿತು. ಇಷ್ಟಿದ್ದರೂ ರಾಯಚೂರಿನಲ್ಲಿ ಬ್ರಿಟಿಶರ ವಿರುದ್ಧ ಬಂಡಾಯ ಎದ್ದಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಸಂದರ್ಭದಲ್ಲಿ ಕಪಟರಾಳ ಕೃಷ್ಣರಾಯ. ತಿ.ತಾ.ಶರ್ಮ, ಬಿಪನ್‌ಚಂದ್ರ, ಮೃತ್ಯುಂಜಯ ಹೊರಕೇರಿ ಹಾಗೂ ಡೆನ್ನಿಸ್ ಫರ್ನಾಂಡಿಸ್ ಮುಂತಾದವರ ಬರಹಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ

ಬಿಪನ್‌ಚಂದ್ರ ಅವರು ೧೮೫೭ರ ಬಂಡಾಯವನ್ನು ಕುರಿತು "೧೮೫೭ರಲ್ಲಿ ಉತ್ತರ ಮತ್ತು ಮಧ್ಯ ಭಾರತದಲ್ಲಿ ಒಂದು ಮಹತ್ವದ ಜನಪ್ರಿಯ ಬಂಡಾಯ ಸಂಭವಿಸಿತು ಮತ್ತು ಅದು ಬ್ರಿಟಿಶ್ ಆಡಳಿತವನ್ನು ಒಂದು ಹಂತಕ್ಕೆ ಇಲ್ಲವಾಗಿಸಿತು. ಅದು ಸಿಪಾಯಿಗಳ ಅಥವಾ ಕಂಪೆನಿಯ ಸೈನ್ಯದಲ್ಲಿದ್ದ ಭಾರತೀಯ ಸೈನಿಕರ ದಂಗೆಯಿಂದ ಆರಂಭವಾದರೂ ಬಹಳ ಬೇಗ ದೇಶದಾದ್ಯಂತ ವ್ಯಾಪಕವಾಗಿ ಹರಡಿತು ಮತ್ತು ಜನಸಮೂಹವನ್ನು ಆಕರ್ಷಿಸಿತು. ಲಕ್ಷಾಂತರ ಕೃಷಿಕರು, ಕುಶಲಕರ್ಮಿಗಳು ಮತ್ತು ಸೈನಿಕರು ಒಂದು ವರ್ಷಕ್ಕೂ ಹೆಚ್ಚು ಕಾಲ ತಮ್ಮ ಆದರ್ಶಪ್ರಾಯ ಧೈರ್ಯ ಮತ್ತು ತ್ಯಾಗದಿಂದ, ವೀರಾವೇಶದಿಂದ ಹೋರಾಡಿ ಭಾರತೀಯ ಜನತೆಯ ಇತಿಹಾಸದಲ್ಲಿ ಮಹತ್ವದ ಅಧ್ಯಾಯವನ್ನು ಬರೆದರು. ೧೮೫೭ರ ಬಂಡಾಯವು ಕೇವಲ ಸಿಪಾಯಿಗಳ ಅತೃಪ್ತಿಯ ಫಲವಲ್ಲ. ವಾಸ್ತವವಾಗಿ

ಅದು ವಸಾಹತುಶಾಹಿ ಆಡಳಿತದ ನೀತಿ ಮತ್ತು ಸ್ವಭಾವದ ಪರಿಣಾಮ. ಕಂಪನಿ ಆಡಳಿತದ ವಿರುದ್ಧ ಸಂಗ್ರಹಗೊಂಡಿದ್ದ ಎಲ್ಲ ದೂರುಗಳು ಮತ್ತು ವಿದೇಶಿ ಆಡಳಿತದ ಬಗ್ಗೆ ಅವರಿಗಿದ್ದ ಅಸಮಾಧಾನದ ಫಲವಾಗಿ ಈ ಬಂಡಾಯ ಸುಮಾರು ಒಂದು ಶತಮಾನದಿಂದ ಬ್ರಿಟಿಶರು ದೇಶವನ್ನು ಸ್ವಲ್ಪ ಸ್ವಲ್ಪವಾಗಿ ಗೆಲ್ಲುತ್ತಿದ್ದರು. ವಿದೇಶೀ ಆಡಳಿತದ ವಿರುದ್ಧ ಭಾರತೀಯ ಸಮಾಜದ ವಿವಿಧ ವರ್ಗಗಳ ಜನರಲ್ಲಿ ಅತೃಪ್ತಿ ಮತ್ತು ದ್ವೇಷ ಬಲವನ್ನೂ ಹೆಚ್ಚಿಸಿಕೊಳ್ಳುತ್ತಿತ್ತು. ಇದೇ ಆತೃಪ್ತಿಯು ದೊಡ್ಡ ಪ್ರಮಾಣದ ಜನರ ಬಂಡಾಯವಾಗಿ ಸ್ಫೋಟಿಸಿತು. ಇದಕ್ಕೆ ಬ್ರಿಟಿಶರಿಂದ ದೇಶದ ಆರ್ಥಿಕ ಶೋಷಣೆ ಮತ್ತು ಸಾಂಪ್ರಾದಾಯಿಕ ಆರ್ಥಿಕ ವ್ಯವಸ್ಥೆಯ ಸಂಪೂರ್ಣ ವಿನಾಶವೇ ಆಗಿದೆ ಎನ್ನುವ ಮಾತುಗಳನ್ನು ಹೇಳುತ್ತಾ ಈ ಬಂಡಾಯವು ಯಾವ ರೀತಿಯ ಪರ್ಯಾಯ ಸಮಾಜವನ್ನು ಸಜ್ಜುಗೊಳಿಸಬೇಕು ಎಂದು ಪ್ರತಿನಿಧಿಸಲಿಲ್ಲ. ಬಂಡಾಯದಲ್ಲಿ ಪಾಲ್ಗೊಂಡ ವಿವಿಧ ಶಕ್ತಿಗಳು, ತಮ್ಮ ಬ್ರಿಟಿಶ್ ಆಡಳಿತ ವಿರೋಧದ ಒಂದೇ ಕಾರಣದಿಂದ ಒಂದುಗೂಡಿದ್ದವಾದರೂ, ಅವುಗಳಿಗೆ ಬೇರೆ ಬೇರೆ ಅಸಮಾಧಾನಗಳಿದ್ದವು ಮತ್ತು ಸ್ವತಂತ್ರ ಭಾರತದ ರಾಜಕೀಯದ ಬಗ್ಗೆ ವಿಭಿನ್ನ ಕಲ್ಪನೆಗಳಿದ್ದವು ಎಂಬ ಮಹತ್ವ ಸಂಗತಿಯನ್ನು ತಿಳಿಪಡಿಸಿರುವುದು ಮುಖ್ಯವಾಗುತ್ತದೆ"(ಬಿಪನ್‌ಚಂದ್ರ ೨೦೧೨: ೧೫೭–೧೭೩).

ಡೆನ್ನಿಸ್ ಫರ್ನಾಂಡಿಸ್ ಅವರು ಈ ಕುರಿತು "ಬ್ರಿಟಿಶರು ಆರ್ಥಿಕ, ಆಡಳಿತ ಹಾಗೂ ಭೂಕಂದಾಯ ಪದ್ಧತಿಗಳಲ್ಲಿ ಜಾರಿಗೊಳಿಸಿದ ಬದಲಾವಣೆಗಳು ಕೃಷಿ ಪ್ರಧಾನ ಸಮಾಜವನ್ನು ಅಸ್ತವ್ಯಸ್ಥೆಗೊಳಿಸಿದವು. ಬ್ರಿಟಿಶರು ರೈತನಿಂದ ಭೂಕಂದಾಯ ರೂಪದಲ್ಲಿ ಅಧಿಕ ಮೊತ್ತವನ್ನು ವಸೂಲು ಮಾಡಿದದು, ಆಳುವವರು ತಮ್ಮ ಹಕ್ಕುಗಳನ್ನು ಕಸಿದುಕೊಂಡಿದ್ದರಿಂದ ಅಥವಾ ಮಿತಿ ಮೀರಿದ ಭೂಕಂದಾಯ ಕೋರಿದುದನ್ನು ಸಲ್ಲಿಸಲು ಸಾಧ್ಯವಾಗದಿದ್ದರಿಂದ ತಮ್ಮ ಭೂ ಒಡೆತನದ ಹಕ್ಕುಗಳನ್ನು ಒತ್ತಾಯಕ್ಕೆ ಮಣಿದು ಮಾರಾಟ ಮಾಡಿದ್ದರಿಂದ ಅನೇಕ ಜಮೀನ್ದಾರರು ಹಾಗೂ ಪಾಳೆಯಗಾರರು ತಮ್ಮ ಭೂಮಿಗಳ ಒಡೆತನ ಹಾಗೂ ಅದರ ಬಗ್ಗೆ ಪೂಜ್ಯತೆಯನ್ನು ಕಳೆದುಕೊಂಡರು. ವಸಾಹತು ಪದ್ಧತಿಯಿಂದ ಹೊಸದೊಂದು ಜನವರ್ಗ ಎಂದರೆ ಲೇವಾದೇವಿಗಾರ ರಿಂದ ಪಡೆದ ಸಾಲಗಳನ್ನು ಮರುವಾಪತಿ ಮಾಡಲಾಗದೆ ತಮ್ಮ ಜಮೀನುಗಳನ್ನು ಕಳೆದುಕೊಂಡರು. ಹೊಸದಾಗಿ ಸ್ಥಾಪನೆಯಾದ ನ್ಯಾಯಾಲಯಗಳೂ ಕೂಡಾ ಬಡರೈತರಿಗೆ ನ್ಯಾಯ ದೊರಕಿಸಲಾರದೆ ಹೋದವು. ಪೊಲೀಸು, ನ್ಯಾಯಾಂಗ ಮತ್ತು ಸಾಮಾನ್ಯ ಆಡಳಿತ ಕೆಳವರ್ಗಗಳಲ್ಲಿ ಭ್ರಷ್ಟಾಚಾರ ತಾಂಡವವಾಡತೊಡಗಿದ್ದರಿಂದ ಸಾಮಾನ್ಯ ಜನತೆಗೆ ಬಲವಾದ ಪೆಟ್ಟು ಬಿದ್ದಿತು. ವಸಾಹತುಶಾಹಿ ಪದ್ಧತಿಯ ಮತ್ತೊಂದು ಪ್ರಮುಖ ಅಂಶವೆಂದರೆ ಬಲವಂತವಾಗಿ ಕೃಷಿಯನ್ನು ವಾಣಿಜ್ಯೀಕರಣಗೊಳಿಸಿದ್ದು. ಇದರಿಂದ ಅಭಾವ ಕಾಲದಲ್ಲಿ ಕೂಡ ಆಹಾರ ಧಾನ್ಯಗಳಿಗೆ ಬದಲಾಗಿ ಇಂಡಿಗೊ ಮತ್ತು ಹತ್ತಿಯಂತಹ ವ್ಯಾಪಾರಿ ಬೆಳೆಗಳನ್ನು ಬೆಳೆಯಲು ಒತ್ತಾಯ ಹೇರಿದ್ದು, ರೈತಾಪಿ ಜನರಿಗೆ ಅಪಾಯಕಾರಿಯಾಗಿ ಪರಿಣಮಿಸಿತು. ಇನ್ನು ಕುಶಲಕರ್ಮಿಗಳ ಪಾಲಿಗಂತೂ ವಸಾಹತುಶಾಹಿ ವಿನಾಶವನ್ನುಂಟು ಮಾಡಿತು. ಭಾರತದಲ್ಲಿದ್ದ ಏಕಮುಖ ಮುಕ್ತ ಮಾರಾಟದಿಂದಾಗಿ, ವಿದೇಶಿ ಸರಕುಗಳು ಭಾರತದ ಮಾರುಕಟ್ಟೆಯನ್ನು ಆಕ್ರಮಣ ಮಾಡಲು ಸಾಧ್ಯವಾಯಿತು. ಭಾರತೀಯ ಕುಶಲಕರ್ಮಿಗಳು ಉತ್ಪಾದಿಸಿದುದಕ್ಕಿಂತಲೂ ಕಾರ್ಖಾನೆಯಲ್ಲಿ ತಯಾರಿಸಲಾದ ವಸ್ತುಗಳು ಅಗ್ಗವೂ, ಉತ್ತಮವೂ ಆಗಿರುತ್ತಿತ್ತು. ಇದರಿಂದ ಸಾಂಪ್ರದಾಯಿಕ ಭಾರತೀಯ ಕೈಗಾರಿಕೆಗಳು ಮರೆಯಾಗುವಂತಾಯಿತು. ಜೊತೆಗೆ ಹೆಚ್ಚು ಪ್ರಮಾಣದಲ್ಲಿ ಕುಶಲಕರ್ಮಿಗಳು ಕೃಷಿ

ರಂಗದತ್ತ ಧಾವಿಸಿದ್ಧರಿಂದಾಗಿ ಜಮೀನಿನ ಮೇಲೂ ಒತ್ತಡ ಹೆಚ್ಚಲಾರಂಭವಾಯಿತು"(ಫರ್ನಾಂಡೀಸ್ ೨೦೧೦: ೪೬೫-೪೬೮) ಎಂದು ತಿಳಿಸುತ್ತಾರೆ.

೧೮೫೭ರ ಬಂಡಾಯ ದಕ್ಷಿಣ ಭಾರತ ಮತ್ತು ಪೂರ್ವ ಮತ್ತು ಪಶ್ಚಿಮ ಭಾರತದ ಬಹುಭಾಗಗಳಲ್ಲಿ ಈ ಮೊದಲೇ ಮತ್ತೆ ಮತ್ತೆ ಬಂಡಾಯಗಳು ನಡೆದಿದ್ದವು. ಭಾರತೀಯ ಸಂಸ್ಥಾನಗಳ ಅನೇಕ ರಾಜರು ಮತ್ತು ಜಮೀನ್ದಾರರು ಅಧಿಕ ಸ್ವಾರ್ಥಿಗಳಾಗಿದ್ದು, ಬ್ರಿಟಿಶ್ ಅಧಿಕಾರಕ್ಕೆ ಹೆದರಿ ಬಂಡಾಯದಲ್ಲಿ ಸೇರಲು ನಿರಾಕರಿಸಿದರೆಂದು ಬಿಪನ್‌ಚಂದ್ರ ಅವರು ತಿಳಿಸುತ್ತಾರೆ(ಬಿಪನ್‌ಚಂದ್ರ ೨೦೧೨: ೧೭೧). ಆದರೆ ತಿ.ತಾ. ಶರ್ಮ ಅವರು ೧೮೫೭ರಲ್ಲಿ ಉತ್ತರ ಭಾರತದಲ್ಲಿ ಮಹಾಕೋಲಾಹಲವುಂಟಾಯಿತು. ನರ್ಮದಾ ನದಿಯಿಂದ ಕೆಳಗೆ ದಕ್ಷಿಣ ಭಾರತದಲ್ಲಿ ಪರಿಸ್ಥಿತಿ ಪ್ರಶಾಂತವಾಗಿತ್ತೆಂದೇ ಸಾಮಾನ್ಯವಾಗಿ ಎಲ್ಲರ ಕಲ್ಪನೆ. ಈ ಭಾವನೆ ಸರಿಯಲ್ಲ. ೧೮೫೭ರಲ್ಲಾದ ಸ್ವಾತಂತ್ರ್ಯ ಸಂಗ್ರಾಮ ಕೇವಲ ಮಧ್ಯಭಾರತ ಪಶ್ಚಿಮಭಾರತದ ಎಲ್ಲೆಗಳಿಗೆ ಮಿತಿಗೊಂಡಿರಲಿಲ್ಲ. ಈ ಸಂಗ್ರಾಮಾವಸರದಲ್ಲಿ ಕರ್ನಾಟಕದ ಪಾತ್ರವೂ ಇದೆ. ಹಾಗೆಯೇ ಈ ಕ್ರಾಂತಿ ಇದ್ದಕ್ಕಿದ್ದ ಹಾಗೆಯೇ ಧಗ್ಗನೆ ವಿಪ್ಲವಾಗ್ನಿಯಂತೆ ಹತ್ತಿಕೊಂಡಿಲ್ಲ. ಅದಕ್ಕೆ ಕಾರಣವೇನೆಂಬುದಿನ್ನೂ ರಹಸ್ಯವಾಗಿಯೇ ಉಳಿದಿದೆ. "ಕೊಬ್ಬುಸವರಿದ ತೋಟಾಗಳು ಇದಕ್ಕೆ ಮೂಲ" ಎಂಬುದರ ವಿಚಾರವಾಗಿ ಅಪಾರ ಚರ್ಚೆಯಾಗಿದೆ. ಅಲ್ಪ ಕೊಬ್ಬು ಅಸಾಧ್ಯ ಕ್ರಾಂತಿಗೆ ಕಾರಣವಲ್ಲವೆಂದನೇಕರ ಅಭಿಪ್ರಾಯ. ಬ್ರಿಟಿಶ್ ಹೌಸ್ ಕಾಮನ್ಸ್ ಸಭೆಯಲ್ಲಿ ಸಾರ್ಡ್ ಸ್ಯಾಲಿಸ್ ಬರಿಯವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದರು(ಶರ್ಮ ೧೯೭೦: ೯೦-೯೧). ಈ ಕ್ರಾಂತಿಯ ಗರ್ಭದಲ್ಲಿ ಘನವಾದ ಕಾರಣಗಳಿದ್ದವೆಂಬುದು ತಮ್ಮ ನಂಬಿಕೆಯೆಂದು ಹೇಳಿರುವ ಬಿಪನ್‌ಚಂದ್ರ ಅವರಂತೆ ತಿ.ತಾ. ಶರ್ಮಾ ಅವರು ಕೂಡ ಇಲ್ಲಿ ಮುಖ್ಯರಾಗುತ್ತಾರೆ.

ಈ ಹಿನ್ನೆಲೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ೧೮೫೭ರ ಬಂಡಾಯದ ಸ್ವರೂಪ ಬಿಪನ್‌ಚಂದ್ರ, ಡೆನ್ನಿಸ್ ಫರ್ನಾಂಡಿಸ್ ಮತ್ತು ತಿ.ತಾ. ಶರ್ಮ ಈ ಮೂರು ಜನರ ಚಿಂತನೆಯ ಸಂಗತಿಗಳು ಕಂಡುಬರುತ್ತವೆ. ಈ ಪ್ರದೇಶದಲ್ಲಿ ೧೮೪೧ರಲ್ಲಿ ಬ್ರಿಟಿಶರು ಕಂಟೋನ್ಮೆಂಟನ್ನು ಸ್ಥಾಪನೆ ಮಾಡಿದಂದಿನಿಂದ ಒಂದಿಲ್ಲೊಂದು ಕಾರಣದಿಂದಾಗಿ ಇಲ್ಲಿನ ಜನ ಜೀವನದ ಮೇಲೆ ಪರಿಣಾಮ ಬೀರಿರುವುದಂತೂ ಸತ್ಯ. ೧೮೫೩ರಲ್ಲಿ ನಿಜಾಮನು ವಾರ್ಷಿಕ ಕಪ್ಪ ನೀಡಲಿಲ್ಲವೆಂದು ಹಾಗೂ ಜಾಗತಿಕ ಹತ್ತಿ ವ್ಯಾಪಾರದ ಮೇಲೆ ಏಕಸ್ವಾಮ್ಯ ಸಾಧಿಸುವುದಕ್ಕಾಗಿ ಬೀರಾರ್ ಒಪ್ಪಂದದ ಮೂಲಕ ಉಸ್ಮಾನಾಬಾದ್‌ನ ಜೊತೆಗೆ ಈ ಪ್ರದೇಶವನ್ನು ವಶಪಡಿಸಿಕೊಳ್ಳಬೇಕಾಯಿತು. ಈ ಸಂದರ್ಭ ಬ್ರಿಟಿಶರು ಅಮೆರಿಕಾದ ಅಂತಃಕಲಹದಿಂದ ಉಂಟಾದ ಹತ್ತಿ ಸರಬರಾಜು ಸ್ಥಗಿತಗೊಂಡಿತು. ಅಲ್ಲದೆ ಇದಕ್ಕೂ ಮುಂಚೆಯೇ ಯಾವುದೇ ಸಂದರ್ಭದಲ್ಲಿ ಬ್ರಿಟನ್ನಿನ ಹತ್ತಿ ಕಂಪೆನಿಗಳು ಸ್ಥಗಿತಗೊಳ್ಳಬಾರದು ಮತ್ತು ವ್ಯಾಪಾರದ ಮೇಲಿನ ಹಿಡಿತವನ್ನು ಯಾವಾಗಲೂ ಹೊಂದಿರಬೇಕು ಎಂಬ ಉದ್ದೇಶದಿಂದ ೧೮೫೩ರ ವೇಳೆಗೆ ಬ್ರಿಟನ್ನಿನ ಕಂಪೆನಿಗಳು ಬೀಜಗಳ ಪ್ರಯೋಗವನ್ನು ಈ ಪ್ರದೇಶದಲ್ಲಿ ನಡೆಸಿದ್ದು ಕಂಡುಬರುತ್ತದೆ. ೧೮೫೭ರ ವೇಳೆಗೆ ಹಲವು ಬಗೆಯ ಅಮೆರಿಕನ್, ಈಜಿಪ್ಟ್ ಮತ್ತು ಬ್ರೆಜಿಲ್ ಹತ್ತಿ ಬೀಜಗಳನ್ನು ಬೆಳೆಯಲು ಹಲವಾರು ತಂತ್ರಗಳನ್ನು ಬಳಸಿ, ಆಹಾರ ಪದಾರ್ಥಗಳನ್ನು ಬೆಳೆಯಲು ಅವಕಾಶ ಸಿಗದಿರುವುದು ಕಂಡುಬರುತ್ತದೆ. ಹೀಗೆ ಹಂತ ಹಂತವಾಗಿ ಹತ್ತಿ ಬೆಳೆಗೆ ಆದ್ಯತೆ ನೀಡಿ ಆ ಮೂಲಕ ಆರ್ಥಿಕ ಮತ್ತು ರಾಜಕೀಯ ಶೋಷಣೆಗೆ ಒಳಗಾಗಬೇಕಾಯಿತು. ಬಲವಂತವಾಗಿ ಕೃಷಿಯನ್ನು ವಾಣಿಜ್ಯೀಕರಣಗೊಳಿಸಲಾಗಿತ್ತು. ಈ ಸಂದರ್ಭದಲ್ಲಿ ಸ್ಥಳೀಯ ಕುಶಲಕರ್ಮಿಗಳು ಉತ್ಪಾದಿಸಿದ

ಉತ್ಪಾದನೆಗಳು ಬ್ರಿಟಿಶರ ಉತ್ಪಾದನೆಗಳ ಮುಂದೆ ಸೊರಗಿ ಹೋದವು. ಈ ಕಾಲಾವಧಿಯಲ್ಲಿ ಲೇವಾದೇವಿಗಾರರು ನೀಡಿದ ಸಾಲಕ್ಕೆ ಜನರಿಂದ ಭೂಮಿಗಳನ್ನು ಒತ್ತೆ ಹಾಕಿಕೊಂಡರು. ಅಲ್ಲದೆ ತಮ್ಮ ಸುಪರ್ದಿಗೆ ತೆಗೆದುಕೊಂಡದ್ದುಂಟು. ಇಲ್ಲಿನ ಸಂಸ್ಥಾನಿಕರು ಮತ್ತು ದೊಡ್ಡ ಜಮೀನ್ದಾರರು ಬ್ರಿಟಿಶರಿಗೆ ಹೆದರಿದ್ದರು. ಅವರ ಅಧೀನತೆಯನ್ನು ಒಪ್ಪಿಕೊಂಡು ತಮ್ಮ ಹತೋಟಿಯಲ್ಲಿದ್ದ ಭೂಮಿಯನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ಬ್ರಿಟಿಶರ ವಿರೋಧವನ್ನು ಕಟ್ಟಿಕೊಳ್ಳಲಿಲ್ಲ. ೧೮೫೭ರ ಬಂಡಾಯದಲ್ಲಿ ಈ ಪ್ರದೇಶದ ಭೂಮಾಲಿಕರು, ಜಹಗೀರದಾರರು ಮತ್ತು ಕೆಲವು ಸಂಸ್ಥಾನಿಕರು ಭಾಗವಹಿಸಲಿಲ್ಲ. ಆದರೂ ಕೆಲವರು ಪ್ರತಿಭಟನೆಯನ್ನು ತೋರಿರುವುದು ಕಂಡುಬರುತ್ತದೆ.

ದಸ್ತಗೀರ್ ಅವರು ರಾಯಚೂರಿನ ಸಣ್ಣ ಪುಟ್ಟ ಸಂಸ್ಥಾನಗಳ ಅರಸರು ಆಂಗ್ಲರನ್ನು ಎದುರಿಸುವ ಸಾಮರ್ಥ್ಯವಿಲ್ಲದಿದ್ದರೂ ಕಾದಿ, ಸೋತು ಸತ್ತರೆಂದು ತಿಳಿಸುತ್ತಾರೆ(ದಸ್ತಗೀರ್ ೧೯೯೭: ೫೭). ಇದು ಈ ಪ್ರದೇಶದಲ್ಲಿ ಬಂಡಾಯ ನಡೆದಿರುವುದಕ್ಕೆ ಸಾಕ್ಷಿಯಾಗಿದೆ. ಈ ಹಿನ್ನೆಲೆಯಲ್ಲಿ ಬಂಡಾಯವನ್ನೆಬ್ಬಿಸಿದ ಬಂಡಾಯಗಾರರು ಯಾರೆಂಬುದು ತಿಳಿದುಬರುವುದಿಲ್ಲ. ಈ ಪ್ರದೇಶದಲ್ಲಿನ ದೊಡ್ಡ ದೊಡ್ಡ ಜಹಗೀರ್‌ದಾರರು ಮತ್ತು ಜಮೀನ್ದಾರರು, ನಾಡಗೌಡರು, ದೇಶಮುಖ, ದೇಶಪಾಂಡೆ, ದೇಸಾಯಿ, ಗೌಡ, ಮಾಲಿಗೌಡ, ಪೊಲೀಸ್‌ಗೌಡ, ಕುಲಕರ್ಣಿ, ತಳವಾರ, ಶೇಕ್‌ಸಿಂಧಿ ಮುಂತಾದವರು ನಿಜಾಮ ಮತ್ತು ಬ್ರಿಟಿಶರ ಪರವಾಗಿದ್ದರು. ಈ ಪ್ರದೇಶದಲ್ಲಿ ೧೮೫೭ರ ಬಂಡಾಯ ನಡೆದಿರುವುದು ಗಮನಾರ್ಹ.

ದೇವದುರ್ಗದ ಪರಗಣೆಯವರು ಬ್ರಿಟಿಶರನ್ನು ವಿರೋಧಿಸಿರಬಹುದೆಂದು ಊಹಿಸಲು ಹಲವು ಕಾರಣಗಳನ್ನು ಮುಂದಿಡಲು ಪ್ರಯತ್ನಿಸಲಾಗಿದೆ.

೧೮೪೧ರಲ್ಲಿ ನಡೆದ ಬಾದಾಮಿ ಬಂಡಾಯದ ಸಂದರ್ಭದಲ್ಲಿ ನರಸಪ್ಪ ಪೇಟ್ಕರ್ ಎಂಬ ಸತಾರೆಯ ಬಂಡಾಯಗಾರ ಬಾದಾಮಿಯ ಕೋಟೆಯನ್ನು ವಶಪಡಿಸಿಕೊಳ್ಳಲು ಸೈನಿಕರ ಜಮಾವಣೆ ಕೇಂದ್ರವನ್ನಾಗಿ ದೇವದುರ್ಗವನ್ನು ಮಾಡಿಕೊಂಡಿದ್ದನು. "ನೂರಾರು ಸೈನಿಕರನ್ನು ಸಂಘಟಿಸಿದ್ದ ನರಸಪ್ಪನು ಅರಬ ಜನಾಂಗದ ಮುಖಂಡ ಜಮೇದಾರ್ ಸಲೀಮ್ ಬಿನ್ ಅಬೂದ್ ಉರುಫ್ ಕೊಹೆರೆನ್ ಎಂಬಾತ ಸುರಪುರದ ನಾಯಕರಲ್ಲಿದ್ದುದನ್ನರಿತು ಸುರಪುರಕ್ಕೆ ಹೋಗಿ ಕೊಹೆರೆನ್‌ನನ್ನು ಕಂಡನು. ಕೊಹೆರೆನ್‌ನೊಂದಿಗೆ ತಾಲೂಬ್ ಬಿನ್ ಅಲಿಯನ್ನು ಕಂಡು ತನ್ನೊಂದಿಗೆ ಹೋರಾಟದ ಒಪ್ಪಂದ ಮಾಡಿಕೊಂಡು ಅವರಿಗೆ ವೇತನವನ್ನು ಗೊತ್ತು ಪಡಿಸಿದ ಆತನ ಪ್ರಯತ್ನ ಹುಸಿ ಹೋಗಲಿಲ್ಲ. ಸೈನ್ಯದ ತುಕಡಿಯೊಂದನ್ನು ಸಿದ್ಧಪಡಿಸಿ ನೇರವಾಗಿ ಸತಾರೆಗೆ ಮುತ್ತಿಗೆ ಹಾಕುವಂತಿರಲಿಲ್ಲ. ನರಸಿಂಹನು ಯೋಚಿಸಿ ಆಗ ಸತಾರಾ ಸಂಸ್ಥಾನದ ವಶದಲ್ಲಿದ್ದ ಬಾದಾಮಿ ಕೋಟೆಗೆ ಮೊದಲಿಗೆ ಲಗ್ಗೆ ಹಾಕಬೇಕೆಂದು ನಿರ್ಧರಿಸಿದ. ಅದರಂತೆ ಅವನ ಸೈನಿಕ ತುಕಡಿ ದೇವದುರ್ಗದಿಂದ ಲಿಂಗಸೂಗೂರು, ಹನುಮಸಾಗರ, ಹನಮನಹಾಳ, ಜಾಲಿಹಾಳ ಮಾರ್ಗವಾಗಿ ಬಾದಾಮಿಗೆ ಬಂದಿತೆಂದು ಹೊರಕೇರಿಯವರು ತಿಳಿಸುತ್ತಾರೆ(ಹೊರಕೇರಿ ೨೦೦೯: ೪೫೩). ಇವರು ತಮ್ಮ ಸೈನ್ಯವನ್ನು ದೇವದುರ್ಗದಿಂದ ಸಾಗಿಸಿರುವುದು ದೇವದುರ್ಗ ಅಂದು ಅವರ ಸೈನಿಕ ನೆಲೆಯಾಗಿ ತನ್ನ ಅಸ್ತಿತ್ವ ಹೊಂದಿತ್ತೆಂದು ಊಹಿಸುವ ಸಾಧ್ಯತೆಯಿದೆ.

ಸುರಪುರ ಸಂಸ್ಥಾನದಲ್ಲಿ ೧೮೫೩ರಲ್ಲಿ ಅಧಿಕಾರಕ್ಕೆ ಬಂದ ನಾಲ್ವಡಿ ವೆಂಕಟಪ್ಪನಾಯಕನ ವಿರುದ್ಧ ಅವನ ಚಿಕ್ಕಪ್ಪ ಪಿಡ್ಡನಾಯಕನ ಮಕ್ಕಳು, ಜಲ್ಲಿ ಪಾಳೆಯಗಾರ ಅಂಕಪ್ಪನಾಯಕ ಮುಂತಾದವರು ದೇವದುರ್ಗದಲ್ಲಿದ್ದು, ಸುರಪುರದ ವಿರುದ್ಧ ನಿಜಾಮ ಮತ್ತು ಬ್ರಿಟಿಶರಿಗೆ ದೂರುಗಳನ್ನು ಸಲ್ಲಿಸುತ್ತಿದ್ದರು.

ಕಡಿಮೆ ಈ ಪ್ರದೇಶ ಸಾರ್ವಭೌಮರಿಗಿಂತ ಸಾಮಂತರ ಆಳ್ವಿಕೆಗೆ ಒಳಪಟ್ಟದ್ದೇ ಹೆಚ್ಚು. ಬರ್ಟನ್ ಸ್ಟೈನ್ ಅವರು ಪ್ರತಿಪಾದಿಸಿದ "ಕುಟುಂಬ ಕೇಂದ್ರಿತ ಪ್ರಭುತ್ವ" ವ್ಯವಸ್ಥೆ ಹಾಗೂ ಸೆಗ್ಮೆಂಟರಿ ಸ್ಟೇಟ್ (ತುಂಡು ರಾಜ್ಯಗಳು) ವ್ಯವಸ್ಥೆ ಈ ಪ್ರದೇಶದಲ್ಲಿ ನೆಲೆಗೊಂಡಿತ್ತೆಂದು ತಿಳಿದುಬರುತ್ತದೆ. ಸಾಮಂತರ ಕಾಲಾವಧಿಯಲ್ಲಿ ಅತಿಯಾದ ದಾನ ನೀಡುವ ಪ್ರಕ್ರಿಯೆಯಿಂದ ಹೊಸ ಭೂಮಾಲಿಕ ವರ್ಗ ರಚನೆಗೊಂಡಿತು. ಆ ಮೂಲಕ ಕೃಷಿ ವಿಸ್ತರಣೆಯನ್ನು ಮಾಡಿದಂತಾಯಿತು. ಈ ವಿಸ್ತರಣಾ ಕಾರ್ಯ ಹೆಚ್ಚುವರಿ ಉತ್ಪಾದನೆಗೆ ಕಾರಣವಾಯಿತು. ಇದರಿಂದ ವ್ಯಾಪಾರ ವಾಣಿಜ್ಯ ಸಂಬಂಧಗಳಿಂದಾಗಿ ಈ ಪ್ರದೇಶ ನಗರೀಕರಣದ ಪ್ರಭಾವಕ್ಕೆ ಒಳಗಾಯಿತು. ಇಲ್ಲಿ ಕೃಷಿ ಮತ್ತು ವ್ಯಾಪಾರ ಪ್ರಮುಖ ಆರ್ಥಿಕ ಮೂಲಗಳಾಗಿ ಗುರುತಿಸಿಕೊಂಡವು. ಹಾಗಾಗಿ ಕೃಷಿ ಮತ್ತು ವ್ಯಾಪಾರದ ಮೇಲೆ ತೆರಿಗೆಗಳನ್ನು ವಿಧಿಸಲಾಯಿತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕುಟುಂಬ ಪ್ರಭುತ್ವ ವ್ಯವಸ್ಥೆ ಮತ್ತು ತುಂಡು ರಾಜ್ಯಗಳ ವ್ಯವಸ್ಥೆಯನ್ನು ಜಾರಿಗೆ ತರಲಾಯಿತೆನ್ನಬಹುದು. ಕರಡಿಕಲ್ಲು ಕದಂಬರು, ಸಾಲಗುಂದೆಯ ಸಿಂದರು ಹಾಗೂ ಮೊರಟದ ಹೈಹಯರು ವಂಶಪಾರಂಪರ್ಯವಾಗಿ ಇಲ್ಲಿ ಆಳ್ವಿಕೆ ನಡೆಸಿದರೆ, ಇವರ ಸಮಕಾಲೀನರಾಗಿದ್ದ ಸಾಮಂತರು ಕೇಂದ್ರದಲ್ಲಿ ಸಾರ್ವಭೌಮರಿಗೆ ಹತ್ತಿರವಾಗಿದ್ದು, ಮಂತ್ರಿಯಾಗಿದ್ದು ಈ ಪ್ರದೇಶದಲ್ಲಿ ತಮಗೆ ನೀಡಿದ ಪ್ರದೇಶದಲ್ಲಿ ಜೀವಿತಾವಧಿಯವರೆಗೆ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಇಷ್ಟಲ್ಲದೆ ಕುಟುಂಬ ಪ್ರಭುತ್ವ ಆಡಳಿತ ವ್ಯವಸ್ಥೆಯನ್ನು ಇಲ್ಲಿ ನೆಲೆಗೊಳಿಸಿರುವುದು ಗಮನಾರ್ಹ. ಸೆಗ್ಮೆಂಟರಿ ಸ್ಟೇಟ್‌ಗಳನ್ನು ನಿಯಂತ್ರಿಸುವುದಕ್ಕಾಗಿ ಕುಟುಂಬಕೇಂದ್ರಿತ ಪ್ರಭುತ್ವವನ್ನು ಸ್ಥಾಪಿಸಲು ಮಸ್ಕಿಯನ್ನು ರಾಜಧಾನಿ ಕೇಂದ್ರವನ್ನಾಗಿ ಮಾಡಿಕೊಳ್ಳಲಾಯಿತು.

ಸಾಮಂತ ಮನೆತನಗಳು ಪರಸ್ಪರ ವಿರೋಧಿ ಭಾವನೆ ಹೊಂದಿರುವುದು ಕಂಡುಬರುವುದಿಲ್ಲ, ಹಾಗೆಂದು ಇಲ್ಲದೆಯೂ ಇರಲಿಲ್ಲ. ಡಿ.ಡಿ. ಕೊಸಾಂಬಿ ಅವರು ಗುರುತಿಸಿದ ಊಳಿಗಮಾನ್ಯ ಪದ್ಧತಿಯ ಮೇಲಿನ ಹಂತ ಮತ್ತು ಕೆಳಗಿನ ಹಂತಗಳು ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿವು. ಇಲ್ಲಿ ರಾಜ-ಮಹಾಸಾಮಂತ-ಸಾಮಂತ-ಉಪಸಾಮಂತ ಪದ್ಧತಿ ಅಸ್ತಿತ್ವದಲ್ಲಿದ್ದಿತ್ತು. ಹಾಗೆಯೇ ಜಮೀನ್ದಾರ-ಗೇಣೀದಾರ ಹಾಗೂ ಜೀತಗಾರ ಎಂಬ ರೀತಿಯ ಶ್ರೇಣಿ ಕಂಡುಬರುತ್ತದೆ. ಇವನ್ನು ಸಾಮಂತ ಮಾಲಿಕತ್ವ ಮತ್ತು ಗ್ರಾಮೀಣ ಭೂಮಾಲಿಕತ್ವ ಎಂದು ಗುರುತಿಸಲಾಗಿದೆ. ಭೂಮಿಯನ್ನು ಉಳುಮೆ ಮಾಡುವ ರೈತಾಪಿ ವರ್ಗವನ್ನು, ಕೃಷಿ ಕೂಲಿ ಕಾರ್ಮಿಕರನ್ನು ಕಡೆಗಣಿಸಲಾಗಿತ್ತು. ಈ ಸಂದರ್ಭದಲ್ಲಿ ತೆರಿಗೆಗಳು, ಭೂಮಾಪನ ಮಾಡುವ ಅಳತೆ ಕೋಲುಗಳು, ನಾಣ್ಯಗಳ ಚಲಾವಣೆ ಶ್ರಮ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ.

ವಿಜಯನಗರ-ಬಹಮನಿ-ಆದಿಲ್‌ಶಾಹಿಗಳ ಕಾಲದಲ್ಲಿ ಎರಡು ಬಗೆಯ ಆಡಳಿತ ವ್ಯವಸ್ಥೆ ಕಂಡುಬರುತ್ತದೆ. ಬರ್ಟನ್‌ಸ್ಟೈನ್ ಅವರ ಸೆಗ್ಮೆಂಟರಿ ಸ್ಟೇಟ್(ತುಂಡು ರಾಜ್ಯಗಳು) ವ್ಯವಸ್ಥೆ ವಿಜಯನಗರದ ಕೃಷ್ಣದೇವರಾಯನ ಕಾಲದವರೆಗೆ ಕಂಡುಬರುತ್ತದೆ. ಈ ಪ್ರದೇಶದಲ್ಲಿ ಅಮರನಾಯಕ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಸಾಲಗುಂದೆಯನ್ನು ಅಬ್ಬಾರಾವ್ ಎಂಬುವವನಿಗೆ ಕುದುರೆ ನಾಯಕತನಕ್ಕೆ ಬಿಡಲಾಯಿತು ಎಂದು ತಿಳಿದುಬರುತ್ತದೆ. ಈ ಪದ್ಧತಿ ಕೃಷ್ಣದೇವರಾಯನ ನಂತರ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಅದರ ಬದಲಾಗಿ ರಾಮರಾಯನು "ಕುಟುಂಬ ಕೇಂದ್ರಿತ ಪ್ರಭುತ್ವ" ವ್ಯವಸ್ಥೆಯನ್ನು ಜಾರಿಗೆ ತಂದನು. ಕೃಷ್ಣದೇವರಾಯ ದೊಡ್ಡ ಪ್ರಮಾಣದ ಸೈನ್ಯವನ್ನು ಕಟ್ಟಿ ವಿಸ್ತರಿಸಲು ಪ್ರಯತ್ನ ನಡೆಸಿದಾಗ ಸೆಗ್ಮೆಂಟರಿ ಸ್ಟೇಟ್(ಘಟಕ ಪ್ರಭುತ್ವ)ಗಳು ಅಡ್ಡಿಯಾದವು, ಆ ಕಾರಣಕ್ಕಾಗಿ ಕೃಷ್ಣದೇವರಾಯ

ನಾಯಕರ ಪದ್ಧತಿಯನ್ನು ಅವಲಂಬಿಸಿದನು. ಆದರೆ ಈ ನಾಯಕರ ಪದ್ಧತಿ ಕೃಷ್ಣದೇವರಾಯನ ಕಾಲದಲ್ಲಾಗಲೇ ಪ್ರಬಲವಾಗಿ ಬೆಳೆದಿತ್ತು. ಇದು ಅವರನ್ನು ಸ್ವತಂತ್ರರನ್ನಾಗಿಸುವತ್ತಾ ಸಾಗಿಸಿತು. ಇದು ವಿಜಯನಗರದ ಆಡಳಿತ ವ್ಯವಸ್ಥೆಗೆ ಧಕ್ಕೆಯನ್ನುಂಟು ಮಾಡಿತು. ಇದರಿಂದ ಎಚ್ಚೆತ್ತುಕೊಂಡ ಅಳಿಯ ರಾಮರಾಯ ನಾಯಕರ ಪದ್ಧತಿಯನ್ನು ರದ್ದು ಪಡಿಸಿದ. ಸೆಗ್ಮೆಂಟರಿ ಸ್ಟೇಟ್‌ನ ಬದಲಾಗಿ ಕುಟುಂಬ ಕೇಂದ್ರಿತ ಪ್ರಭುತ್ವ ವ್ಯವಸ್ಥೆಯನ್ನು ಜಾರಿಗೆ ತಂದನು. ಇದರನ್ವಯ ಈ ಪ್ರದೇಶದಲ್ಲಿ ಸ್ವತಃ ರಾಮರಾಯನೇ ಆಡಳಿತದ ಜವಾಬ್ದಾರಿಯನ್ನು ವಹಿಸಿಕೊಂಡನು. ಅಲ್ಲದೆ ಮುದಗಲ್‌ನ ಅಧಿಕಾರಿಯನ್ನಾಗಿ ತನ್ನ ಮಗ ಕೃಷ್ಣರಾಜ ದೇವನನ್ನು ನೇಮಕ ಮಾಡಿರುವುದು ಗಮನಾರ್ಹ. ವಿಜಯನಗರ ಕಾಲದಲ್ಲಿ ರಾಯಚೂರು, ಮುದಗಲ್, ಸಾಲಗುಂದೆ ಹಾಗೂ ಮಸ್ಕಿ ಮುಂತಾದವು ಈ ಪ್ರದೇಶದಲ್ಲಿನ ಅಮರನಾಯಕ ಕೇಂದ್ರಗಳಾಗಿದ್ದವು. ಹಾಗೆಯೇ ಬಹಮನಿ ಮತ್ತು ಬಿಜಾಪುರದ ಆದಿಲ್‌ಶಾಹಿಗಳು ರಾಯಚೂರು ಮತ್ತು ಮುದಗಲ್‌ಗಳನ್ನು ತಮ್ಮ ಆಡಳಿತದ ಪ್ರಮುಖ ಕೇಂದ್ರಗಳನ್ನಾಗಿಸಿಕೊಂಡಿದ್ದರು. ಈ ಎರಡು ಕೇಂದ್ರಗಳಿಗೆ ತಮ್ಮ ಪ್ರಾಂತಾಧಿಕಾರಿಗಳನ್ನು ನೇಮಿಸಿದ್ದರು. ಇವರ ಆಡಳಿತದಲ್ಲೇನು ಬದಲಾವಣೆ ಇರಲಿಲ್ಲ. ಪ್ರಾಂತಾಧಿಕಾರಿಗಳು ಈ ಎರಡು ಅರಸು ಮನೆತನಗಳಿಗೆ ನಿಷ್ಠರಾಗಿದ್ದರು. ಸ್ವತಂತ್ರ ಆಡಳಿತ ವ್ಯವಸ್ಥೆಯನ್ನು ಸಾಮಂತರ ರೀತಿಯಲ್ಲಿಯೇ ನಡೆಸಲಾಗುತ್ತಿತ್ತು. ವಿಜಯನಗರ ಮತ್ತು ಬಹಮನಿ–ಆದಿಲ್‌ಶಾಹಿಗಳ ಪ್ರಭಾವಕ್ಕೆ ಸಿಲುಕಿದ ಈ ಪ್ರದೇಶದ ಜನಜೀವನ ಕಷ್ಟಕರವಾಗಿತ್ತೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಯಾವ ಸಂದರ್ಭದಲ್ಲಿ ಈ ಮನೆತನಗಳ ಮಧ್ಯೆ ಕಲಹಗಳು ನಡೆಯುತ್ತಿದ್ದವು ಎಂಬುದು ತಿಳಿಯುತ್ತಿರಲಿಲ್ಲ. ಹಾಗಾಗಿ ಜನರು ಭಯದ ವಾತಾವರಣದಲ್ಲಿ ಆತಂಕದಿಂದ ಬದುಕುವ ಸ್ಥಿತಿ ನಿರ್ಮಾಣವಾಗಿತ್ತೆಂದರೆ ತಪ್ಪಾಗಲಿಕ್ಕಿಲ್ಲ. ವಿಜಯನಗರಕ್ಕಿಂತ ಬಹಮನಿ ಮತ್ತು ಆದಿಲ್‌ಶಾಹಿಗಳ ಆಡಳಿತ ವ್ಯವಸ್ಥೆ ಉತ್ತಮವಾಗಿತ್ತೆಂದೇ ಹೇಳಬೇಕಾಗುತ್ತದೆ. ಸಾಮಂತ ಮತ್ತು ಸಾರ್ವಭೌಮರ ನಡುವೆ ವೈವಾಹಿಕ ಸಂಬಂಧಗಳು ನಡೆದಿರುವುದು ಕಂಡು ಬರುವುದಿಲ್ಲ. ಹಾಗೆಯೇ ಸಾಮಂತ ಸಾಮಂತರ ನಡುವೆಯೂ ವೈವಾಹಿಕ ಸಂಬಂಧಗಳು ನಡೆದಿರುವ ಬಗ್ಗೆ ಅಷ್ಟಾಗಿ ತಿಳಿದುಬರುವುದಿಲ್ಲ.

ಸಾಮಂತರಂತೆ ವಿಜಯನಗರೋತ್ತರ ಕಾಲಘಟ್ಟದಲ್ಲಿ ಈ ಪ್ರದೇಶದಲ್ಲಿ ಹಲವು ಸಂಸ್ಥಾನಿಕರು ಅಸ್ತಿತ್ವಕ್ಕೆ ಬರುತ್ತಾರೆ. ಅವರಲ್ಲಿ ಗುಂತಗೋಳ, ಗುಡಗುಂಟಿ, ದೇವದುರ್ಗ, ಕರಿಗುಡ್ಡ, ಜಾಲಹಳ್ಳಿ, ಅರಕೇರಿ, ಕ್ಯಾದಿಗ್ಗೇರಿ, ಗಲಗ, ಮುಂಡರಗಿ ಹಾಗೂ ರಾಮದುರ್ಗ ಮುಂತಾದ ಸಂಸ್ಥಾನಗಳ ಸಂಸ್ಥಾನಿಕರು ಪ್ರಮುಖರಾಗಿದ್ದಾರೆ. ಇಲ್ಲಿನ ಸಂಸ್ಥಾನಗಳ ಹುಟ್ಟು ಬೆಳವಣಿಗೆಯನ್ನು ವಿಜಯನಗರದೊಂದಿಗೆ ಸಮೀಕರಿಸಲು ಅಥವಾ ತಳಕು ಹಾಕಲು ಪ್ರಯತ್ನಿಸಿರುವುದೇ ಹೆಚ್ಚು. ಸಂಸ್ಥಾನಿಕರ ಚರಿತ್ರೆಯನ್ನು ಇನ್ನಷ್ಟು ಹಿಂದಕ್ಕೆ ಹಿಗ್ಗಿಸಬಹುದಾದ ಪ್ರಯತ್ನವೆ ಹೊರತು ಮತ್ತೇನಲ್ಲ ಎನ್ನಬಹುದು. ವಾಸ್ತವವಾಗಿ ಈ ಪ್ರದೇಶದಲ್ಲಿನ ಸಂಸ್ಥಾನಗಳು ವಿಜಯನಗರ ಪತನದ ನಂತರ ಸುಮಾರು ೭೦–೮೦ ವರ್ಷಗಳ ನಂತರದಲ್ಲಿ ಹುಟ್ಟಿಕೊಳ್ಳುತ್ತವೆ. ಹೀಗಿರುವಾಗ ವಿಜಯನಗರದೊಂದಿಗೆ ಸಮೀಕರಿಸುವುದು ಸರಿಯಾದ ಕ್ರಮವಲ್ಲ. ಈ ಸಂಸ್ಥಾನಗಳು ಹೆಚ್ಚು ಕಡಿಮೆ ಕ್ರಿ.ಶ. ೧೬೬೫ರ ನಂತರ ಅಸ್ತಿತ್ವಕ್ಕೆ ಬರುತ್ತವೆ.

ಇಲ್ಲಿನ ಸಂಸ್ಥಾನಿಕರು ಸ್ವತಂತ್ರರೂ ಪ್ರಬಲರೂ ಆಗಿದ್ದರು. ಆದರೆ ದೊಡ್ಡ ದೊಡ್ಡ ರಾಜ್ಯಗಳ ಭರಾಟೆಯಲ್ಲಿ ಮುಖ್ಯವಾಹಿನಿಯತ್ತ ಬರಲಿಲ್ಲ. ಏಕೆಂದರೆ ಇವರದು ಹೆಚ್ಚಾಗಿ ಹೊಂದಾಣಿಕೆಯ

ಸ್ವಭಾವವನ್ನು ಹೊಂದಿದ್ದರು, ಸಂದರ್ಭಕ್ಕೆ ತಕ್ಕಂತೆ ವರ್ತಿಸುತ್ತಿದ್ದರು. ಇವರು ಬಹುತೇಕವಾಗಿ ಸುರಪುರ ಸಂಸ್ಥಾನದ ಅಧೀನತೆಯನ್ನು ಒಪ್ಪಿಕೊಂಡಿದ್ದರು. ಒಂದು ಮುಖ್ಯವಾದ ವಿಚಾರವೆಂದರೆ ಈ ಪ್ರದೇಶದಲ್ಲಿ ಸಂಸ್ಥಾನಿಕರ ನಡುವೆ ಅಂತಃ ಕಲಹಗಳು ಇರಲಿಲ್ಲವೆಂದು ತೋರುತ್ತದೆ. ಹಾಗೆಂದು ವೈರತ್ವವಿರಲಿಲ್ಲವೆಂದೂ ಭಾವಿಸುವಂತಿರಲಿಲ್ಲ. ಅಲ್ಲದೆ ವೈವಾಹಿಕ ಸಂಬಂಧಗಳನ್ನು ಸುರಪುರ ಸಂಸ್ಥಾನಿಕರ ಜೊತೆಗೆ ಹೆಚ್ಚು ಕಡಿಮೆ ಇಲ್ಲಿನ ಎಲ್ಲ ಸಂಸ್ಥಾನಿಕರು ಹೊಂದಿದ್ದರು. ಈ ಸಂಸ್ಥಾನಿಕರು ರಾಜ್ಯ ವಿಸ್ತರಣೆಯನ್ನು ಬಯಸಲಿಲ್ಲ. ಬದಲಾಗಿ ತಮ್ಮ ಅಧೀನದಲ್ಲಿರುವ ಪ್ರದೇಶವನ್ನು ರಕ್ಷಿಸಿಕೊಂಡಿದ್ದರೆ ಸಾಕಿತ್ತು ಎಂಬ ನಿರ್ಣಯಕ್ಕೆ ಬರಲಾಗಿತ್ತು. ಏಕೆಂದರೆ ಸೈನಿಕ ವ್ಯವಸ್ಥೆ ಬಲಿಷ್ಠ ವಾಗಿರಲಿಲ್ಲ. ತಂತ್ರಗಾರಿಕೆ ಯಿಂದ ಕೂಡಿರಲಿಲ್ಲ. ಮೇಲಾಗಿ ಸಣ್ಣ ಸಣ್ಣ ಸಂಸ್ಥಾನಗಳಾಗಿದ್ದರಿಂದ ಹೆಚ್ಚಿನ ಗೊಡವೆಗೆ ಹೋಗುತ್ತಿರಲಿಲ್ಲ. ಈ ಪ್ರದೇಶದಲ್ಲಿ ಕಂಡುಬರುವ ಸಂಸ್ಥಾನಗಳಲ್ಲಿ ದೇವದುರ್ಗ ಸಂಸ್ಥಾನ ಬಲಿಷ್ಠವಾಗಿತ್ತೆಂದು ತಿಳಿದುಬರುತ್ತದೆ. ಪ್ರಬಲವಾಗಿರುವ ಸುರಪುರ ಸಂಸ್ಥಾನಕ್ಕೆ ಪೈಪೋಟಿ ನೀಡುವ ಶಕ್ತಿ ದೇವದುರ್ಗ ಸಂಸ್ಥಾನಕ್ಕಿತ್ತೆಂದು ಹೇಳಬಹುದಾಗಿದೆ.

ಈ ಪ್ರದೇಶದಲ್ಲಿನ ಸಂಸ್ಥಾನಗಳು ಅಸ್ತಿತ್ವಕ್ಕೆ ಬಂದಾಗ ಈ ಪ್ರದೇಶ ಬಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಗಾಗಿತ್ತು. ಇವರ ನಂತರ ಮೊಗಲರ ವ್ಯಾಪ್ತಿಗೆ ಸೇರಿತು. ಕೊನೆಗೆ ಹೈದರಾಬಾದ್ ನಿಜಾಮರ ಆಳ್ವಿಕೆಗೆ ಸಿಲುಕಿತು. ಪ್ರಭಾವ ಶಾಲಿಗಳಾಗಿದ್ದ ಈ ಮೂರು ರಾಜ್ಯಗಳ ಅಧೀನತೆಯನ್ನು ಒಪ್ಪಿಕೊಳ್ಳುವುದು ಅನಿವಾರ್ಯವಾಗಿತ್ತು. ಈ ಕಾಲಾವಧಿಯಲ್ಲಿ ಸುರಪುರ ಸಂಸ್ಥಾನ ತನ್ನ ಶಕ್ತಿ ಸಾಮರ್ಥ್ಯಗಳಿಂದ ಪ್ರಭಾವಿಯಾಗಿ ಗುರುತಿಸಿಕೊಂಡಿತ್ತು. ಇದು ಬಿಜಾಪುರ ಆದಿಲ್‌ಶಾಹಿಗಳ ಕಾಲದಲ್ಲಿ ತನ್ನ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು. ಆದರೆ ಮೊಗಲರ ಕಾಲದಲ್ಲಿ ಅದು ತಲೆಕಳಗಾಯಿತು. ಇದೇ ಸಂದರ್ಭದಲ್ಲಿ ನಿಜಾಮರು ಬ್ರಿಟಿಶರ ಜೊತೆಗೆ ಕೈಜೋಡಿಸಿ ಸಹಾಯಕ ಸೈನ್ಯ ಪದ್ಧತಿಯನ್ನು ಅಳವಡಿಸಿಕೊಂಡರು. ಆ ಮೂಲಕ ನಿಜಾಮರು ಸುರಪುರವನ್ನು ನಿಯಂತ್ರಿಸಲು ಪ್ರಯತ್ನಿಸಿದರು. ಈ ಪ್ರಯತ್ನಕ್ಕೆ ಪ್ರತಿಯಾಗಿ ೧೮೫೭ರಲ್ಲಿ ಸುರಪುರ ಸಂಸ್ಥಾನ ದಂಗೆ ಎದ್ದದ್ದು ಗಮನಾರ್ಹ. ಇವೆಲ್ಲವುದರ ನಡುವೆಯೂ ಸುರಪುರ ಸಂಸ್ಥಾನ ರಾಯಚೂರು ದೋ–ಅಬ್ ಪ್ರದೇಶದಲ್ಲಿನ ಸಂಸ್ಥಾನಗಳ ಮೇಲೆ ಹಿಡಿತ ಸಾಧಿಸಿತ್ತು. ಇದಕ್ಕೆ ಕಾರಣ ಅವರ ನಡುವೆ ಬೆಳೆದ ವೈವಾಹಿಕ ಸಂಬಂಧಗಳು.

ಈ ಪ್ರದೇಶದ ಸಂಸ್ಥಾನಿಕರು ಬಿಜಾಪುರದ ಆದಿಲ್‌ಶಾಹಿಗಳು, ಮೊಗಲರು ಹಾಗೂ ಹೈದರಾಬಾದ್ ನಿಜಾಮರ ಕಾಲಘಟ್ಟದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿರುವುದು ಕಂಡುಬರುತ್ತದೆ. ಆದಿಲ್‌ಶಾಹಿಗಳ ಪ್ರಭಾವದಲ್ಲಿ ಸುರಪುರದ ಆಧೀನದಲ್ಲಿ ಇಲ್ಲಿನ ಸಂಸ್ಥಾನಗಳು ಕಾಲ ನೂಕಿದವು. ಆದಿಲ್‌ಶಾಹಿಗಳ ಪತನಾನಂತರದಲ್ಲಿ ಮೊಗಲರ ಆಳ್ವಿಕೆ ಆರಂಭವಾಯಿತು. ಈ ಸಂದರ್ಭದಲ್ಲಿ ಸಂದರ್ಭದಲ್ಲಿ ಸುರಪುರವನ್ನು ಮೊಗಲರು ವಶಪಡಿಸಿಕೊಂಡರು. ಯಾವಾಗ ಸುರಪುರದ ಮೇಲೆ ಮೊಗಲರ ಕಣ್ಣು ಬಿತ್ತೋ ಆಂದಿನಿಂದ ದೇವದುರ್ಗದ ಸಂಸ್ಥಾನ ತನ್ನ ಅಸ್ತಿತ್ವವನ್ನು ಹೆಚ್ಚಿಸಿಕೊಳ್ಳಲು ಮೊಗಲರ ಪರವಾಗಿ ಕಾರ್ಯನಿರ್ವಹಿಸಿತು. ಈ ಸಂದರ್ಭದಲ್ಲಿ ರಾಜಾ ವಾಸುದೇವನಾಯಕ ಸಂಸ್ಥಾನಿಕನಾಗಿದ್ದನು. ಈತನು ಮೊಗಲರ ಪರವಾಗಿ ಹೋರಾಟ ಮಾಡಿದ್ದಕ್ಕಾಗಿ ರಾಯಚೂರನ್ನು ಜಹಗೀರಾಗಿ ನೀಡಿರುವುದು ಕಂಡುಬರುತ್ತದೆ. ಇದು ದೇವದುರ್ಗ ಸಂಸ್ಥಾನವನ್ನು ಉಚ್ಛ್ರಾಯ ಸ್ಥಿತಿಗೆ ಕೊಂಡೊಯ್ದಿತು. ಮೊಗಲರ ನಂತರ ಹೈದರಾಬಾದ್ ನಿಜಾಮರು ಈ ಪ್ರದೇಶಕ್ಕೆ ಅಧಿಪತಿ

ಗಳಾದರು. ಈ ಕಾಲದಲ್ಲಿ ನಿಜಾಮರಿಗೆ ಇಲ್ಲಿನ ಸಂಸ್ಥಾನಿಕರು ವಾರ್ಷಿಕ ಪೊಗದಿಯನ್ನು ಸಲ್ಲಿಸುತ್ತಿದ್ದರು. ಈ ಸಂದರ್ಭದಲ್ಲಿ ಹಂತ ಹಂತವಾಗಿ ಸಂಸ್ಥಾನಿಕರ ಪ್ರಭಾವ ಕಡಿಮೆಯಾಯಿತೆಂದೇ ಹೇಳಬೇಕಾಗುತ್ತದೆ. ಏಕೆಂದರೆ ನಿಜಾಮರು ತಮ್ಮ ಆಡಳಿತ ವ್ಯವಸ್ಥೆಯನ್ನು ಭದ್ರಪಡಿಸಿಕೊಳ್ಳಲು ಸ್ಥಳೀಯವಾಗಿ ಬ್ರಾಹ್ಮಣ ಮತ್ತು ಲಿಂಗಾಯತರನ್ನು ಅಧಿಕಾರಿಗಳನ್ನಾಗಿ ನೇಮಕ ಮಾಡಿದರು. ಅಲ್ಲದೆ ಇತರೆ ಹಿಂದುಳಿದ ವರ್ಗದ ಜನರನ್ನು ಗ್ರಾಮಾಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡಲಾಯಿತು. ದೊರೆತ ಅವಕಾಶವನ್ನು ಉಪಯೋಗಿಸಿಕೊಂಡ ಈ ಪ್ರದೇಶದ ಬ್ರಾಹ್ಮಣ ಮತ್ತು ಲಿಂಗಾಯತರು, ಅಲ್ಲಲ್ಲಿ ಇತರೆ ಹಿಂದುಳಿದ ವರ್ಗದ ಜನರು ಹಂತ ಹಂತವಾಗಿ ಭೂಮಾಲಿಕರಾಗಿ ರೂಪುಗೊಂಡರು. ಹೊಂದಾಣಿಕೆಯ ಸ್ವಭಾವವನ್ನು ಹೊಂದಿರುವ ಬ್ರಾಹ್ಮಣ ಮತ್ತು ಲಿಂಗಾಯತರು ಪರ್ಯಾಯ ಶಕ್ತಿಯಾಗಿ ಬೆಳೆದರು. ಇದು ಈ ಪ್ರದೇಶದಲ್ಲಿನ ಸಂಸ್ಥಾನಿಕರನ್ನು ಹಿಂದಕ್ಕೆ ಸರಿಯುವಂತೆ ಮಾಡಿತು. ಬ್ರಾಹ್ಮಣ ಮತ್ತು ಲಿಂಗಾಯತರು  ಬಹುದೊಡ್ಡ ಪ್ರಮಾಣದ ಜಹಗೀರುಗಳ ಒಡೆಯರಾದರು. ಅವರು ಪ್ರತ್ಯೇಕತೆಯನ್ನು ಸಾಧಿಸಿ ಮರಿಪಾಳೆಯಗಾರರಂತೆ ವರ್ತಿಸುತ್ತಿದ್ದರು. ಇವರು ಗ್ರಾಮೀಣ ಪ್ರದೇಶದ ಬದಲಾಗಿ ನಗರವಾಸಿಗಳಾಗಿ ಪರಿವರ್ತಿತರಾದರು. ಬಹುತೇಕವಾಗಿ ಹಿಂದೂಗಳಾದ ಜಹಗೀರದಾರ, ಇನಾಮದಾರ, ವತನದಾರರು ಮುಂತಾದವರು ಈ ಪ್ರದೇಶದ ಬಹುದೊಡ್ಡ ಭೂ ಒಡೆಯರಾಗಿದ್ದರು. ಆಡಳಿತದ ದೃಷ್ಟಿಯಿಂದ ನಿಜಾಮರ ಅಧಿಕಾರಿಗಳ ಜೊತೆಗೆ ವ್ಯವಹರಿಸುತ್ತಿದ್ದರೇ ಹೊರತು, ಮನಃಪೂರ್ವಕವಾಗಿ ನಡೆದುಕೊಳ್ಳುತ್ತಿರಲಿಲ್ಲ. ಅಧಿಕಾರದ ಪ್ರಭಾವದಿಂದ ನಿಜಾಮರಿಂದ ದೊರೆತ ಭೂಮಿಯನ್ನು ಕಳೆದು ಕೊಳ್ಳಲು ಇವರಿಗೆ ಇಷ್ಟವಿರಲಿಲ್ಲ. ಆದರೂ ಭವಿಷ್ಯದ ದೃಷ್ಟಿಯಿಂದ ಇವರು ನಿಜಾಮರ ವಿರುದ್ಧ ತಿರುಗಿ ಬೀಳುವ ಪ್ರಯತ್ನ ಮಾತ್ರ ಮಾಡಲಿಲ್ಲ. ಎಲ್ಲವೂ ಇವರ ಇಚ್ಚೆಯಂತೆ ನಡೆಯುತ್ತಿರುವಾಗ ನಿಜಾಮರ ಪರವಾಗಿದ್ದಂತೆ ಕಾಣಿಸಿಕೊಂಡರು.

ಹೈದರಾಬಾದ್ ನಿಜಾಮರ ಕಾಲದಲ್ಲಿ ಈ ಪ್ರದೇಶ ಅನೇಕ ಸುಧಾರಣೆಗಳನ್ನು ಕಂಡಿತೆಂಬುದು ತಿಳಿದುಬರುತ್ತದೆ. ನಿಜಾಮರು ದೇವದುರ್ಗವನ್ನು ಒಂದು ಸೈನಿಕ ನೆಲೆಯಾಗಿಸಿಕೊಂಡಿದ್ದರು. ಸುರಪುರದ ಮೇಲೆ ದಾಳಿ ಮಾಡಬೇಕಾದರೆ ದೇವದುರ್ಗದಲ್ಲಿ ಸೈನಿಕ ತರಬೇತಿ ನಡೆಯುತ್ತಿತ್ತು. ನಿಜಾಮರು ರಾಯಚೂರು ದೋ-ಅಬ್ ಪ್ರದೇಶದಲ್ಲಿ ಮಾಡಿದ ಸುಧಾರಣೆಗಳು ಕಣ್ಣಿಗೆ ಕಾಣದೆ ಹೋದವು. ಚರಿತ್ರೆ ಬರವಣಿಗೆಯಲ್ಲಿ ನಿಜಾಮರನ್ನು ಬಹುತೇಕವಾಗಿ ವಿರೋಧಿ ನೆಲೆಯಿಂದಲೇ ನೋಡಿರುವುದೇ ಹೆಚ್ಚು. ನಿಜಾಮರ ಸುಧಾರಣೆಗಳನ್ನು ಮತ್ತು ನಿಜಾಮರನ್ನು ಅರ್ಥಮಾಡಿಕೊಳ್ಳುವ ಪ್ರಯತ್ನಗಳು ನಡೆಯಲಿಲ್ಲ. ಭಾಷಿಕವಾಗಿ ಅವಲೋಕಿಸಿದಾಗ ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡದ ಬಳಕೆ ಹೆಚ್ಚಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕಂಡುಬರುತ್ತದೆ.ಆಡಳಿತದಲ್ಲಿ, ಶಿಕ್ಷಣದಲ್ಲಿ, ಪ್ರಸಾರ ಮಾಧ್ಯಮದಲ್ಲಿ ವ್ಯವಹಾರ ಮಾಡಲು ಕನ್ನಡವನ್ನೇ ಬಳಸಲಾಗುತ್ತಿತ್ತು. ಕನ್ನಡ ಮಾಧ್ಯಮ ಶಿಕ್ಷಣದಲ್ಲಿ ಕಡಿಮೆ ಉದ್ಯೋಗಾವಕಾಶಗಳಿದ್ದವು. ಆದರೆ ಆದ್ಯತೆ ನೀಡಿದ್ದು ಮಾತ್ರ ಉರ್ದುವಿಗೆ. ಹಾಗಾಗಿ ಪ್ರಸ್ತುತದಲ್ಲಿ ಇಂಗ್ಲಿಷನ್ನು ಸ್ವೀಕರಿಸಿದಂತೆ ಉರ್ದುವನ್ನು ಸ್ವೀಕರಿಸಿದರು. ಈ ಪ್ರದೇಶದಲ್ಲಿ ಬಹುತೇಕವಾಗಿ ಲಿಂಗಾಯತರು, ಬ್ರಾಹ್ಮಣರು, ವೈಶ್ಯರು ಶಿಕ್ಷಣವಂತರಾಗಿದ್ದರು. ರಾಯಚೂರು ದೋ-ಅಬ್ ಪ್ರದೇಶದಲ್ಲಿ ಜನಸಾಮಾನ್ಯರು ಮಾತನಾಡುವ ಭಾಷೆಯಲ್ಲಿಯೇ ಅಂದರೆ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣ ನೀಡಲಾಗುತ್ತಿತ್ತು. ಇದಕ್ಕೆ ನಿಜಾಮ ಸರ್ಕಾರದ ಸಹಕಾರವಿತ್ತು. ಕನ್ನಡದ ಪ್ರಜ್ಞೆಯನ್ನು ಬೆಳೆಸುವುದಕ್ಕಾಗಿ ನಿಜಾಮರು ವಿರೋಧಿಸಲಿಲ್ಲ. ಮೇಲಾಗಿ ಸರ್ಕಾರದ ವತಿಯಿಂದ ರಾಯಚೂರು ಜಿಲ್ಲೆಯಲ್ಲಿ ೨೯೯

ಶಾಲೆಗಳನ್ನು ತೆರೆಯಲಾಗಿತ್ತು. ಸರ್ಕಾರಿ ಕಚೇರಿಗಳಲ್ಲಿ ಪತ್ರ ವ್ಯವಹಾರವೂ ಕನ್ನಡದಲ್ಲಿತ್ತು. ನಿಜಾಮ ಸರ್ಕಾರದ ವತಿಯಿಂದ ಕನ್ನಡದ ಜಾಗೃತಿಗಾಗಿ ಹೈದರಾಬಾದ್ ಸಮಾಚಾರ, ಹೈದರಾಬಾದು, ಗ್ರಾಮಸುಧಾರಕ ಎಂಬ ಪತ್ರಿಕೆಗಳನ್ನು ಹೊರಡಿಸಲಾಗಿತ್ತು. ಅಲ್ಲದೆ ರಾಯಚೂರಿನಿಂದ 'ಡೆಕ್ಕನ್ ಪ್ರಭಾತ್' ಪತ್ರಿಕೆ ಕನ್ನಡಕ್ಕಾಗಿ ಮೀಸಲಾದ ಪತ್ರಿಕೆಯಾಗಿತ್ತು. ಅಲ್ಲದೆ ಕರ್ನಾಟಕ ಸಂಘವು ಕನ್ನಡದ ಏಳಿಗೆಗಾಗಿ ಶ್ರಮಿಸಿದ ಪ್ರಮುಖ ಸಂಘವಾಗಿದೆ. ಈ ಸಂಘವು ೧೯೩೪ ಮತ್ತು ೧೯೪೫ರಲ್ಲಿ ಎರಡು ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿತು. ಈ ಮೂಲಕ ಕನ್ನಡಪರ ಸಾರ್ವಜನಿಕ ಸಂಸ್ಥೆಗಳು ಕನ್ನಡದ ಪ್ರಚಾರದ ಕಾರ್ಯದಲ್ಲಿ ತೊಡಗಿದವು. ರಾಯಚೂರಿನ ಕರ್ನಾಟಕ ಸಂಘಕ್ಕೆ ನಿಜಾಮ ಸರ್ಕಾರದಿಂದ ಸ್ವಂತ ನಿವೇಶನ ನೀಡಿದ್ದು ಮತ್ತು ಕಟ್ಟಡದ ಶಂಕುಸ್ಥಾಪನೆ ಮಾಡಿದ್ದು ಸ್ಪಷ್ಟವಾಗಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ನಿಜಾಮರು ಕನ್ನಡದ ವಿರೋಧಿಗಳಾಗಿರದೆ ಕನ್ನಡದ ಬೆಳವಣಿಗೆಗೆ ಸಹಕರಿಸಿದವರಾಗಿದ್ದಾರೆಂದು ಈ ಮೂಲಕ ತಿಳಿದುಬರುತ್ತದೆ. ಹಾಗಾಗಿ ರಾಯಚೂರು ಜಿಲ್ಲೆಯಲ್ಲಿ ಕನ್ನಡವನ್ನೇ ಬಳಸಲಾಗುತ್ತಿತ್ತು ಎಂದು ಗುರುತಿಸಬಹುದಾಗಿದೆ. ಅಲ್ಲದೆ ನಿಜಾಮರು ಎಲ್ಲ ಕ್ಷೇತ್ರಗಳ ಅಭಿವೃದ್ಧಿಗೆ ಆದ್ಯತೆ ನೀಡಿರುವುದನ್ನು ಗಮನಿಸಬಹುದಾಗಿದೆ.

ನಿಜಾಮರು ಈ ಪ್ರದೇಶದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಭಾರತ ಸರ್ಕಾರ ಜಾರಿಗೆ ತಂದಿರುವ ಸಂವಿಧಾನದ ವಿಶೇಷ ಸ್ಥಾನಮಾನ ಕಲ್ಪಿಸುವ ಕಲಂ ೩೭೧ ಜೆ.ಕಲಂನಂತೆ ನಿಜಾಮನು ೧೯೧೯ರಲ್ಲಿ ಈ ಪ್ರದೇಶದ ಅಭಿವೃದ್ಧಿ ಹೊಂದಲೆಂದು 'ಮುಲ್ಕಿ' ಕಾನೂನನ್ನು ಜಾರಿಗೆ ತಂದನು. ಕನ್ನಡದಲ್ಲಿ ಶಿಕ್ಷಣ ಪಡೆಯುವವರಿಗೆ ಶಿಷ್ಯವೇತನವನ್ನು ನೀಡಿದನು. ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯ ದಲ್ಲಿ ಕನ್ನಡ ವಿಭಾಗವನ್ನು ತೆರೆಯಲಾಯಿತು. ರಾಯಚೂರು ಜಿಲ್ಲೆಯಲ್ಲಿ ಕುಡಿಯುವ ನೀರಿಗಾಗಿ ೧೨೦೦ ಗಿರಿಕಿ ಬಾವಿಗಳನ್ನು ತೋಡಿಸಿದನು. ಅಲ್ಲದೆ ಈ ಪ್ರದೇಶದಲ್ಲಿನ ಮಠಮಾನ್ಯಗಳಿಗೆ ಭೂದಾನ ಮಾಡಿ ಪ್ರೋತ್ಸಾಹಿಸಿದನು. ಈ ರೀತಿಯಾಗಿ ಅನೇಕ ಮೂಲಭೂತ ಸವಲತ್ತುಗಳನ್ನು ನೀಡಿದ್ದನೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಇಷ್ಟಲ್ಲದೆ ಈ ಪ್ರದೇಶದ ಆಡಳಿತವನ್ನು ಕನ್ನಡದಲ್ಲಿ ನಡೆಸಲು, ಪತ್ರ ವ್ಯವಹಾರಗಳನ್ನು ಕನ್ನಡದಲ್ಲಿಯೇ ನಡೆಯಬೇಕೆಂದು ಆದೇಶಿಸಿದನು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಹೈದರಾಬಾದ್ ನಿಜಾಮರು ಸುಧಾರಕರಾಗಿದ್ದರು. ಕನ್ನಡಾಭಿಮಾನವನ್ನು ಹೊಂದಿದ್ದರು. ನಿಜಾಮರು ಕಲ್ಪಿಸಿದ ಸವಲತ್ತುಗಳನ್ನು ಹೆಚ್ಚಾಗಿ ಬಳಸಿಕೊಂಡವರು ಬ್ರಾಹ್ಮಣರು ಮತ್ತು ಲಿಂಗಾಯತರು. ಈ ಪ್ರದೇಶದಲ್ಲಿ ಇವರ ಅಧಿಕಾರ ಅಧಿಕವಾಗಿತ್ತು. ಪ್ರತಿ ಹಳ್ಳಿಗಳಲ್ಲೂ ಇವರ ಹೇಳಿಕೆಯೇ ಅಂತಿಮವಾಗಿತ್ತು. ಹೀಗಿರುವಾಗ ನಿಜಾಮರು ಕುಡಿಯುವ ನೀರಿಗಾಗಿ ಬಾವಿಗಳನ್ನು ತೋಡಿಸಿದಾಗ ಅದನ್ನು ಜಾತಿವಾರು ಇರುವಂತೆ ಮೇಲ್ವರ್ಗದವರು ನೋಡಿಕೊಂಡರು. ಬಹುತೇಕ ಹಳ್ಳಿಗಳಲ್ಲಿ ಹೊಲೆಯರಿಗೆ, ಮಾದಿಗರಿಗೆ ಪ್ರತ್ಯೇಕವಾಗಿ ಒಂದೊಂದು ಬಾವಿ, ಇಡೀ ಊರಿನ ಜನತೆಗೆ ಒಂದು ಬಾವಿ ತೋಡಿಸಲಾಗಿದೆ. ಇದು ಜಾತಿ ವ್ಯವಸ್ಥೆಯನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಆದರೂ ನಿಜಾಮರಿಗೆ ಅನಿವಾರ್ಯವಾಗಿತ್ತು. ಸ್ಥಳೀಯ ಅಧಿಕಾರವನ್ನು ಹೊಂದಿದವರ ಅಣತಿಯಂತೆ ಆಡಳಿತ ನಡೆಯುತ್ತಿದ್ದಿತು. ೧೯೪೬-೧೯೪೮ರವರೆಗಿನ ಮೂರು ವರ್ಷಗಳ ರಜಾಕಾರರ ಹಾವಳಿಯಿಂದಾಗಿ ನಿಜಾಮರ ಚಾರಿತ್ರ್ಯವನ್ನು ಅಳೆಯಲು ಬರುವುದಿಲ್ಲ. ನಿಜಾಮರು ನಿಜವಾಗಲೂ ಅಭಿವೃದ್ಧಿ ಪರವಾಗಿದ್ದರು. ಅನೇಕ ಅಧ್ಯಯನಗಳು ನಿಜಾಮರನ್ನು ಹಿಂದೂ ವಿರೋಧಿ ನೆಲೆಯಲ್ಲಿ ನೋಡಿರುವುದೇ ಹೆಚ್ಚು.

ಈ ಪ್ರದೇಶ ವಿವಿಧ ಅರಸುಮನೆತನಗಳ ಕಾಲಘಟ್ಟದಲ್ಲಿ ಪ್ರಮುಖ ಆಡಳಿತಕೇಂದ್ರವಾಗಿ ಗುರುತಿಸಿ ಕೊಂಡಿತ್ತು. ಮೌರ್ಯರ ಕಾಲದಲ್ಲಿ ಮಸ್ಕಿ ಸುವರ್ಣಗಿರಿಯ ರಾಜಧಾನಿ ಕೇಂದ್ರವಾಗಿತ್ತು. ರಾಷ್ಟ್ರಕೂಟರ

ಕಾಲದಿಂದ ಸೇವುಣ-ಕಾಕತೀಯ ಕಾಲದವರೆಗೆ ಎಡೆದೊರೆ-೨೦೦೦ ಎಂಬ ಹೆಸರಿನಿಂದ ಗುರುತಿಸಿ ಕೊಂಡಿತು. ನಂತರ ವಿಜಯನಗರ ಬಹಮನಿ ಹಾಗೂ ಆದಿಲ್‌ಶಾಹಿಗಳ ಕಾಲದಲ್ಲಿ ದೋ-ಅಬ್ ಪ್ರದೇಶವೆಂದು ಪ್ರಸಿದ್ಧಿಯನ್ನು ಪಡೆಯಿತು. ಮಸ್ಕಿ ಕ್ರಿ.ಪೂ.೩ನೆಯ ಶತಮಾನದಲ್ಲಿ ಮೌರ್ಯರ ರಾಜಧಾನಿ ಯಾಗಿತ್ತು. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿಯೂ ರಾಜಧಾನಿ ಕೇಂದ್ರವಾಗಿತ್ತು. ಅಲ್ಲದೆ ಮಸ್ಕಿ ಅಮರನಾಯಕ ಮೇದಿನಿರಾಯನ ರಾಜಧಾನಿಯಾಗಿತ್ತು. ಹೀಗೆ ಮಸ್ಕಿ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಇದಲ್ಲದೆ ಮುದಗುಂದೂರು-೩೦೦, ಅಯ್ಯಣವಾಡಿ-೩೦೦, ಕರಡಿಕಲ್-೩೦೦, ಮೊಸಳಿಕಲ್-೩೦೦ ಹಾಗೂ ಮೊರಟ-೩೦೦ ಎಂಬ ಕಂಪಣಗಳಿದ್ದವು. ಇವು ಸಾಮಂತರ ರಾಜಧಾನಿ ಕೇಂದ್ರ ಗಳಾಗಿದ್ದವು. ಈ ಕಂಪಣಗಳ ಉಪಆಡಳಿತ ಕೇಂದ್ರಗಳನ್ನು ಹೊಂದಿದ್ದವು. ರಾಯಚೂರು, ಮಸ್ಕಿ, ಮುದಗಲ್, ಮುಕ್ಕುಂದಿ, ರೌಡಕುಂದೆ, ಕೂಡಲೂರು, ಗುಂಜಹಳ್ಳಿ ಹಾಗೂ ಗಲಗ ಮತ್ತು ರಾಯದುರ್ಗ ಸೀಮೆಗಳು ಕ್ರಿ.ಶ. ೧೬ರಿಂದ ೧೮ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದವು. ಬೆಳಡೋಣಿ, ಸಿರವಾರ, ಗುಡಗುಂಟಿ, ಮಾದರಾಯನಕೋಟೆ, ವೀರಗೋಟ ಮುದಗಲ್, ದೇವದುರ್ಗ, ಅರಕೇರಿ, ಕ್ಯಾದಿಗ್ಗೇರಿ, ಗೋನವಾಟ್ಲ ಮತ್ತು ಐದಬಾವಿ ಮುಂತಾದವುಗಳು ಪರಗಣೆಗಳಾಗಿದ್ದವು. ರಾಯಚೂರು, ಮುದಗಲ್ ಮತ್ತು ದೇವದುರ್ಗಗಳು ಮಾಮಲೆಗಳಾಗಿದ್ದವು. ಲಿಂಗಸೂಗೂರು ಮತ್ತು ಗೋನವಾಟ್ಲ ಸಮತು ಗಳಾಗಿದ್ದವು. ರಾಯಚೂರು, ದೇವದುರ್ಗ, ಮುದಗಲ್ ಮತ್ತು ಜಲದುರ್ಗ ಕಿಲ್ಲೆಗಳು ಚಾಲ್ತಿಯಲ್ಲಿದ್ದವು. ರಾಯಚೂರು ದೋ-ಅಬ್ ಗೋಗಿ ಮಹಲಿಗೆ ಸೇರಿತ್ತು. ಮಾಡಸಿರವಾರ ಮತ್ತು ಖಾನಪುರಗಳು ಮೌಜೆಗಳಾಗಿದ್ದವು. ರಾಯಚೂರು ಒಂದು ಸರದೇಸಗತಿಯಾಗಿತ್ತು. ನಾಡಗೌಡಿಕೆ ಪದ್ಧತಿ ಇಲ್ಲಿತ್ತು. ಗ್ರಾಮಾಡಳಿತದಲ್ಲಿ ಗಾವುಂಡ, ಪ್ರಭುಗಾವುಂಡ, ಪೆರ್ಗಡೆಗಳು ಆದಿಲ್‌ಶಾಹಿಗಳ ಕಾಲಕ್ಕೆ ಪಟೇಲ, ಕುಲಕರ್ಣಿ ಮತ್ತು ಚೌಕಿದಾರರಾದರು, ನಿಜಾಮರಕಾಲಕ್ಕೆ ಮಾಲಿಗೌಡ, ಪೊಲೀಸಗೌಡ, ಕುಲಕರ್ಣಿ ತಳವಾರ, ಶೇಕಸಿಂಧಿ, ಓಲೇಕಾರ ಮುಂತಾದವರು ಗ್ರಾಮಾಧಿಕಾರಿಗಳಾಗಿದ್ದರು. ಬಹುತೇಕ ವಾಗಿ ಇವರೆಲ್ಲರೂ ಹಿಂದೂಗಳಾಗಿದ್ದು, ಮೇಲ್ವರ್ಗಕ್ಕೆ ಸೇರಿದವರಾಗಿದ್ದರು.

ಬ್ರಿಟಿಶರು ನಿಜಾಮರೊಂದಿಗೆ ಸಹಾಯಕ ಸೈನಿಕ ಪದ್ಧತಿಯ ಒಪ್ಪಂದಕ್ಕೆ ಬಂದರೋ ಅಂದಿನಿಂದ ನಿಜಾಮ ರಾಜ್ಯದಲ್ಲಿ ಒಂದಲ್ಲೊಂದು ಕಾರಣಕ್ಕೆ ಕಣ್ಣಿಟ್ಟಿದ್ದರು. ಜೊತೆಗೆ ನಿಜಾಮ ರಾಜ್ಯವನ್ನು ಏಕಾಂಗಿಯನ್ನಾಗಿ ಮಾಡುವ ಹಲವು ಪ್ರಯತ್ನಗಳು ನಡೆದವು. ಇದಕ್ಕೆ ಬ್ರಿಟಿಶ್ ಭಾರತದಲ್ಲಿ ಈ ಸಂಸ್ಥಾನದ ಸುತ್ತಲೂ ಕಂಟೋನ್ಮೆಂಟ್‌ಗಳನ್ನು ಸ್ಥಾಪಿಸಲಾಯಿತು. ಇದಕ್ಕೆ ಕರ್ನೂಲ, ಬಳ್ಳಾರಿ, ಗದಗ, ಕಲಾದಗಿ, ಸೊಲ್ಲಾಪುರ, ಸಿಕಂದರಾಬಾದ್ ಮುಂತಾದ ಕಡೆಗಳಲ್ಲಿ ಕಂಟೋನ್ಮೆಂಟ್‌ಗಳು ನೆಲೆಗೊಂಡವು. ಇಷ್ಟಲ್ಲದೆ ನಿಜಾಮ ಸಂಸ್ಥಾನದಲ್ಲಿ ತಮ್ಮ ಪರವಾಗಿ ಕಾರ್ಯನಿರ್ವಹಿಸುವ ಯಾವ ಸಂಸ್ಥೆಗಳೂ ಇರಲಿಲ್ಲ. ಮುಂದಾಲೋಚನೆ ಮತ್ತು ರಕ್ಷಣೆಯ ದೃಷ್ಟಿಯಿಂದ ಬ್ರಿಟಿಶರು ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ವಿಶೇಷವಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಲಿಂಗಸೂಗೂರಿನಲ್ಲಿ ೧೮೪೨ರ ವೇಳೆಗೆ ಸಣ್ಣ ಪ್ರಮಾಣದ ಕಂಟೋನ್ಮೆಂಟ್‌ನ್ನು ಸ್ಥಾಪಿಸಿದರು. ಇದಕ್ಕೆ ಇಲ್ಲಿನ ಫಲವತ್ತಾದ ಭೂಮಿ ಬಲವಾದ ಕಾರಣವಾಗಿತ್ತು. ಜಾಗತಿಕ ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸಲು ಹಲವು ಹತ್ತಿ ತಳಿಗಳ ಪ್ರಯೋಗ ಯಶಸ್ವಿಯಾಯಿತು. ಈ ಪ್ರದೇಶದ ಮುದಗಲ್ ಮೂಲಕ ಬಾಂಬೆ

ಮತ್ತು ಮದ್ರಾಸ್ ಮಾರುಕಟ್ಟೆಗಳಿಗೆ ಹತ್ತಿ ಸಾಗಿಸಲು ಉತ್ತಮ ಸಾರಿಗೆ ವ್ಯವಸ್ಥೆಯಿದ್ದಿತ್ತು. ಈ ಎಲ್ಲ ಅಂಶಗಳು ತಲೆಯಲ್ಲಿ ತುಂಬಿಕೊಂಡಿದ್ದ ಬ್ರಿಟಿಶರು, ಸಹಾಯಕ ಸೈನಿಕ ಪದ್ಧತಿ ಒಪ್ಪಂದದ ಪ್ರಕಾರ ಸಲ್ಲಿಸಬೇಕಾದ ಬಾಕಿ ಹಣವನ್ನು ಪಾವತಿಸಲಿಲ್ಲವೆಂಬ ಕಾರಣವೊಡ್ಡಿ ಹೈದರಾಬಾದ್ ನಿಜಾಮರಿಂದ ಬೀರಾರ್ ಒಪ್ಪಂದವನ್ನು ೧೮೫೩ರಲ್ಲಿ ಮಾಡಿಕೊಂಡರು. ಇದರನ್ವಯ ಉಸ್ಮಾನಾಬಾದ್ ಮತ್ತು ರಾಯಚೂರು ಜಿಲ್ಲೆಗಳನ್ನು ಬ್ರಿಟಿಶರು ತಮ್ಮ ವಶಕ್ಕೆ ಪಡೆದರು. ಈ ಒಪ್ಪಂದದ ನಂತರ ಈ ಪ್ರದೇಶದಲ್ಲಿ ಅನೇಕ ಬೆಳವಣಿಗೆಗಳು ನಡೆದವು. ಅವೆಂದರೆ ಭೂಕಂದಾಯ ನಿಗದಿಪಡಿಸಲು ೧೮೬೯ರಲ್ಲಿ ಬಾಂಬೆ ಮಾದರಿಯಲ್ಲಿ ಭೂ ಸರ್ವೇಕಾರ್ಯ ಮಾಡಲಾಯಿತು. ಆ ಮೂಲಕ ಈಜಿಪ್ಟ್, ಬ್ರೆಜಿಲ್ ನಂತಹ ವಿದೇಶಿ ಹತ್ತಿ ತಳಿಗಳನ್ನು ಒತ್ತಾಯಪೂರ್ವಕವಾಗಿ ಬೆಳೆಸಲಾಯಿತು. ಇದರಿಂದ ಆಹಾರ ಪದಾರ್ಥಗಳನ್ನು ಬೆಳೆಯಲು ಅವಕಾಶ ಸಿಗದಂತಾಯಿತು. ಜನರು ಬಡತನದಿಂದ ಬಳಲುವಂತಾಯಿತು. ರಾಯಚೂರಿಗೆ ರೈಲ್ವೆ ಸಂಪರ್ಕ ಕಲ್ಪಿಸಲಾಯಿತು. ಇದು ಮದರಾಸು ಮತ್ತು ಮುಂಬಯಿಗೆ ಸಂಪರ್ಕ ಕಲ್ಪಿಸುವ ಕೇಂದ್ರವಾಯಿತು. ನೀರಾವರಿ ವ್ಯವಸ್ಥೆಯನ್ನು ಮಾಡಲಾಯಿತು. ರಾಯಚೂರಿನಲ್ಲಿ ವಿದ್ಯುತ್ ಸರಬರಾಜು ಕೇಂದ್ರವನ್ನು ಸ್ಥಾಪಿಸಲಾಯಿತು. ರಾಯಚೂರು ಮತ್ತು ಲಿಂಗಸೂಗೂರು ಪಟ್ಟಣಗಳು ಜಿಲ್ಲೆಗಳಾದವು. ಮುದಗಲ್‌ನಿಂದ ಬಾಂಬೆ ಮತ್ತು ಮದ್ರಾಸ್‌ಗೆ ರಸ್ತೆ ಸಾರಿಗೆ ವ್ಯವಸ್ಥೆ ಕಲ್ಪಿಸಲಾಯಿತು. ಲಿಂಗಸೂಗೂರು-ಕವಿತಾಳ-ರಾಯಚೂರು ಮಧ್ಯ ದೊಡ್ಡ ಆಂತರಿಕ ಸಂಪರ್ಕ ಕಲ್ಪಿಸುವ ರಸ್ತೆಯನ್ನು ನಿರ್ಮಾಣ ಮಾಡಲಾಯಿತು. ಇದಲ್ಲದೆ ಲಿಂಗಸೂಗೂರು ಮತ್ತು ರಾಯಚೂರುಗಳಲ್ಲಿ ಜೈಲುಗಳನ್ನು ಸ್ಥಾಪಿಸಲಾಯಿತು. ಇವು ಬ್ರಿಟಿಶರು ರಾಯಚೂರು ದೋ-ಅಬ್ ಪ್ರದೇಶವನ್ನು ೧೮೫೩ರಲ್ಲಿ ಬೀರಾರ್ ಒಪ್ಪಂದದ ಪ್ರಕಾರ ಅಧೀನಕ್ಕೊಳಪಡಿಸಿಕೊಂಡ ನಂತರ ಆದ ಬೆಳವಣಿಗೆಗಳಾಗಿವೆ.

ಬ್ರಿಟಿಶರ ರಾಜಕಾರಣದ ಹಿನ್ನೆಲೆಯಲ್ಲಿ ನಡೆದ ಅವ್ಯಾಹತ ಸುಲಿಗೆ ಮತ್ತು ದಬ್ಬಾಳಿಕೆಯನ್ನು ಗಮನಿಸಿದ ಈ ಪ್ರದೇಶದ ಜನರು ಬ್ರಿಟಿಶರ ವಿರುದ್ಧ ೧೮೫೮ರಲ್ಲಿ ದಂಗೆ ಎದ್ದರು. ಈ ವೇಳೆಗಾಗಲೇ ಭಾರತದಾದ್ಯಂತ ಅನೇಕ ರೈತ, ಬುಡಕಟ್ಟು ಮುಂತಾದ ಜನರ ದಂಗೆಗಳು ಕಾಣಿಸಿಕೊಂಡಿದ್ದವು. ಈ ಪ್ರದೇಶದಲ್ಲಿನ ಆರ್ಥಿಕ ದಿವಾಳಿತನವನ್ನು ಸಹಿಸದ ಸಂಸ್ಥಾನಿಕರು ಹೋರಾಟ ಮಾಡಿದರೆ ಹೊರತು, ದೊಡ್ಡ ದೊಡ್ಡ ಜಹಗೀರುದಾರರು, ಜಮೀನ್ದಾರರು ಮತ್ತು ನಾಡಗೌಡರು ಮುಂತಾದವರು ಬ್ರಿಟಿಶರ ವಿರುದ್ಧ ನಡೆದ ಬಂಡಾಯದಲ್ಲಿ ಪಾಲ್ಗೊಳ್ಳಲಿಲ್ಲ. ಇದು ಒಂದು ಬಗೆಯಲ್ಲಿ ರೈತ ಬಂಡಾಯವೇ ಆಗಿರಬೇಕು. ಇಂತಹ ಸಂದಿಗ್ಧ ಸ್ಥಿತಿಗಳಲ್ಲಿ ರೈತಾಪಿ ವರ್ಗ, ಕೃಷಿ ಕೂಲಿಕಾರ್ಮಿಕರು, ಕುಶಲಕರ್ಮಿಗಳು ಮತ್ತು ಕೆಳವರ್ಗಗಳು ಅತ್ಯಂತ ಕಷ್ಟವನ್ನು ಎದುರಿಸಬೇಕಾಯಿತು.

## ಟಿಪ್ಪಣಿಗಳು

೧. ದೇವರಕೊಂಡರೆಡ್ಡಿ(ಸಂ), ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಲಿಂಗಸೂಗೂರು-೩೨, ಮಸ್ಕಿ-ಕ್ರಿ.ಶ. ೧೦೧೦, ಪುಟ ೧೬೫.

೨. ಅದೇ, ಲಿಂಗಸೂಗೂರು-೪೪, ಮಸ್ಕಿ-ಕ್ರಿ.ಶ. ೧೦೭೧, ಪುಟ ೧೭೭.

೩. ಅದೇ, ಲಿಂಗಸೂಗೂರು-೨೯, ಮಸ್ಕಿ-ಕ್ರಿ.ಪೂ.ಮೂರನೆಯ ಶತಮಾನ, ಪುಟ ೧೬೨.

೪. ಅದೇ, ಸಿಂಧನೂರು-೧, ರೌಡಕುಂದೆ-ಕ್ರಿ.ಶ. ೧೦೫೩, ಪುಟ ೩೪೪.

೫. ಅದೇ, ಸಿಂಧನೂರು-೨, ಸಾಲಗುಂದೆ-ಕ್ರಿ.ಶ. ೧೧೫೩, ಪುಟ ೩೪೬.
೬. ಅದೇ, ಸಿಂಧನೂರು-೪, ಸಾಲಗುಂದೆ-ಕ್ರಿ.ಶ. ೧೦೬೩, ಪುಟ ೩೪೯-೫೦.
೭. ಅದೇ, ಸಿಂಧನೂರು-೫, ಮುಕ್ಕುಂದಿ-ಕ್ರಿ.ಶ. ೧೧೩೪, ಪುಟ ೩೫೪.
೮. ಅದೇ, ಸಿಂಧನೂರು-೬, ಮುಕ್ಕುಂದಿ-ಕ್ರಿ.ಶ. ೧೧೩೪, ಪುಟ ೩೫೬
೯. ಅದೇ, ಸಿಂಧನೂರು-೮, ಮುಕ್ಕುಂದಿ-ಕ್ರಿ.ಶ. ೧೦೮೮, ಪುಟ ೩೬೨.
೧೦. ಅದೇ, ಸಿಂಧನೂರು-೯, ಮುಕ್ಕುಂದಿ-ಕ್ರಿ.ಶ. ೧೦೪೯, ಪುಟ ೩೬೫.
೧೧. ಅದೇ, ಸಿಂಧನೂರು-೭, ಮುಕ್ಕುಂದಿ-ಕ್ರಿ.ಶ. ೧೦೯೭, ಪುಟ ೩೫೮.
೧೨. ಅದೇ, ಸಿಂಧನೂರು-೨೩, ಜಾಲಿಹಾಳು-ಕ್ರಿ.ಶ. ೧೧೦೫, ಪುಟ ೩೮೦.
೧೩. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿ.ಶ. ೧೧೦೧, ಪುಟ ೩೪೯.
೧೪. ಅದೇ, ಸಿಂಧನೂರು-೯, ಮುಕ್ಕುಂದಿ-ಕ್ರಿ.ಶ. ೧೦೪೯, ಪುಟ ೩೬೫.
೧೫. ಅದೇ, ದೇವದುರ್ಗ-೨೬, ಗಬ್ಬೂರು-ಕ್ರಿ.ಶ. ೧೦೮೪, ಪುಟ ೮೮-೯೦.
೧೬. ಅದೇ, ಸಿಂಧನೂರು-೨, ಸಾಲಗುಂದೆ-ಕ್ರಿ.ಶ. ೧೧೫೩, ಪುಟ ೩೪೬
೧೭. ಅದೇ, ಮಾನ್ವಿ-೧೧, ಮಾನ್ವಿ-ಕ್ರಿ.ಶ. ಕಾಲವಿಲ್ಲ, ಪುಟ ೨೫೪.
೧೮. ಅದೇ, ಮಾನ್ವಿ-೧೩, ಮಾನ್ವಿ-ಕ್ರಿ.ಶ. ೧೦೫೨, ಪುಟ ೨೩೬
೧೯. ಅದೇ, ಮಾನ್ವಿ-೧೫, ಮಾನ್ವಿ-ಕ್ರಿ.ಶ. ೧೦೫೨, ಪುಟ ೨೩೭
೨೦. ಅದೇ, ಮಾನ್ವಿ-೧೭, ಹಿರೆಕೊಟ್ನೆಕಲ್-ಕ್ರಿ.ಶ. ೧೧೯೧, ಪುಟ ೨೪೦.
೨೧. ಅದೇ, ಮಾನ್ವಿ-೨೨, ದದ್ದಲ-ಕ್ರಿ.ಶ. ೧೦೬೯, ಪುಟ ೨೪೫.
೨೨. ಅದೇ, ಮಾನ್ವಿ-೨೯, ಸುಂಕೇಶ್ವರ-ಕ್ರಿ.ಶ. ೧೧೯೭, ಪುಟ ೨೫೦.
೨೩. ಅದೇ, ಮಾನ್ವಿ-೬೬, ಕಲ್ಲೂರು-ಕ್ರಿ.ಶ. ೧೧೪೨, ಪುಟ ೨೮೬
೨೪. ಅದೇ, ಮಾನ್ವಿ-೬೭, ಕಲ್ಲೂರು-ಕ್ರಿ.ಶ. ೧೧೩೪, ಪುಟ ೨೮೭
೨೫. ಅದೇ, ಮಾನ್ವಿ-೬೮, ಕಲ್ಲೂರು-ಕ್ರಿ.ಶ. ೧೧೫೧, ಪುಟ ೨೮೯.
೨೬. ಅದೇ, ಮಾನ್ವಿ-೬೯, ಕಲ್ಲೂರು-ಕ್ರಿ.ಶ. ೧೧೪೨, ಪುಟ ೨೯೦.
೨೭. ಅದೇ, ಮಾನ್ವಿ-೭೨, ಅತ್ತನೂರು-ಕ್ರಿ.ಶ. ಕಾಲವಿಲ್ಲ, ಪುಟ ೨೯೩.
೨೮. ಅದೇ, ಮಾನ್ವಿ-೯೩, ಬಲ್ಲಟಗಿ-ಕ್ರಿ.ಶ. ೧೧ನೆಯ ಶತಮಾನ, ಪುಟ ೩೧೦.
೨೯. ಅದೇ, ಮಾನ್ವಿ-೯೬, ಬಲ್ಲಟಗಿ-ಕ್ರಿ.ಶ. ೧೧೯೧, ಪುಟ ೩೧೩.
೩೦. ಅದೇ, ಮಾನ್ವಿ-೧೦೨, ಮಲ್ಲಟ-ಕ್ರಿ.ಶ. ೧೧೯೬, ಪುಟ ೩೧೮.
೩೧. ಅದೇ, ಮಾನ್ವಿ-೧೦೩, ಮಲ್ಲಟ-ಕ್ರಿ.ಶ. ೧೧೪೮, ಪುಟ ೩೨೨.
೩೨. ಅದೇ, ಮಾನ್ವಿ-೧೦೪, ಬಾಗಲವಾಡ-ಕ್ರಿ.ಶ. ೧೧೯೬, ಪುಟ ೩೨೩.
೩೩. ಅದೇ, ದೇವದುರ್ಗ-೨೫, ಗಬ್ಬೂರು-ಕ್ರಿ.ಶ. ೧೦೮೪, ಪುಟ ೮೬.
೩೪. ಅದೇ, ದೇವದುರ್ಗ-೨೭, ಹಿರೇರಾಯಕುಂಪಿ-ಕ್ರಿ.ಶ. ೧೧೩೦, ಪುಟ ೯೦.
೩೫. ಅದೇ, ದೇವದುರ್ಗ-೨೯, ನಿಲವಂಜಿ-ಕ್ರಿ.ಶ. ೧೧೭೭, ಪುಟ ೯೪.
೩೬. ಅದೇ, ಸಿಂಧನೂರು-೩೯, ಬಳಗಾನೂರು-ಕ್ರಿ.ಶ. ೧೧೯೧, ಪುಟ ೪೦೬

೩೭. ಅದೇ, ಮಾನ್ವಿ–೧೧೫ ಮತ್ತು ೧೧೬, ಕವಿತಾಳ–ಕ್ರಿ.ಶ. ೧೨೧೭, ಪುಟ ೩೩೧–೩೪.

೩೮. ಅದೇ, ಮಾನ್ವಿ–೩೦, ಸುಂಕೇಶ್ವರ–ಕ್ರಿ.ಶ. ೧೨೩೧, ಪುಟ ೨೫೧.

೩೯. ಅದೇ, ಸಿಂಧನೂರು–೪೦, ಬಳಗಾನೂರು–ಕ್ರಿ.ಶ. ೧೧೮೬, ಪುಟ ೪೦೯.

೪೦. ಅದೇ, ಮಾನ್ವಿ–೧೫, ಮಾನ್ವಿ–ಕ್ರಿ.ಶ. ೧೦೫೨, ಪುಟ ೨೩೭.

೪೧. ಅದೇ, ಲಿಂಗಸೂಗೂರು–೨, ಲಿಂಗಸೂಗೂರು–ಕ್ರಿ.ಶ. ೧೦೭೭, ಪುಟ ೧೨೫.

೪೨. ಅದೇ, ಲಿಂಗಸೂಗೂರು–೫, ಕರಡಿಕಲ್–ಕ್ರಿ.ಶ. ೧೧೯೧, ಪುಟ ೧೩೦.

೪೩. ಅದೇ, ಲಿಂಗಸೂಗೂರು–೨, ಲಿಂಗಸೂಗೂರು–ಕ್ರಿ.ಶ. ೧೦೭೭, ಪುಟ ೧೨೫.

೪೪. ಅದೇ, ಲಿಂಗಸೂಗೂರು–೯, ನವಿಲೆ–ಕ್ರಿ.ಶ. ೧೦೬೬, ಪುಟ ೧೪೨.

೪೫. ಅದೇ, ಲಿಂಗಸೂಗೂರು–೨, ಲಿಂಗಸೂಗೂರು–ಕ್ರಿ.ಶ. ೧೦೭೭, ಪುಟ ೧೨೫.

೪೬. ಅದೇ, ಸಿಂಧನೂರು–೨೪, ಹಿರೇಭೇರಿಗೆ–ಕ್ರಿ.ಶ. ೧೧೦೦, ಪುಟ ೩೮೩.

೪೭. ಅದೇ, ಲಿಂಗಸೂಗೂರು–೮, ನವಿಲೆ–ಕ್ರಿ.ಶ. ೧೧೧೯, ಪುಟ ೧೪೦.

೪೮. ಅದೇ, ಲಿಂಗಸೂಗೂರು–೧, ಲಿಂಗಸೂಗೂರು–ಕ್ರಿ.ಶ. ೧೧೨೪, ಪುಟ ೧೨೩.

೪೯. ಅದೇ, ಲಿಂಗಸೂಗೂರು–೫, ಕರಡಿಕಲ್–ಕ್ರಿ.ಶ. ೧೧೯೧, ಪುಟ ೧೩೧.

೫೦. ಅದೇ, ಸಿಂಧನೂರು–೨೯, ದೇವರಗುಡಿ–ಕ್ರಿ.ಶ. ೧೨೦೨, ಪುಟ ೩೯೩.

೫೧. ಅದೇ, ಲಿಂಗಸೂಗೂರು–೪೯, ಮುದಗಲ್–ಕ್ರಿ.ಶ. ೧೨೧೫, ಪುಟ ೧೮೩.

೫೨. ಅದೇ, ರಾಯಚೂರು–೫೮, ದೇವಸೂಗೂರು–ಕ್ರಿ.ಶ. ೧೦೨೨, ಪುಟ ೪೧.

೫೩. ಅದೇ, ಲಿಂಗಸೂಗೂರು–೩೦, ಮಸ್ಕಿ–ಕ್ರಿ.ಶ. ೧೦೩೭, ಪುಟ ೧೬೩.

೫೪. ಅದೇ, ರಾಯಚೂರು–೪೯, ಕಲಮಲ–ಕ್ರಿ.ಶ. ೯೪೦, ಪುಟ ೩೩.

೫೫. ಅದೇ, ದೇವದುರ್ಗ–೨೬, ಗಬ್ಬೂರು–ಕ್ರಿ.ಶ. ೧೦೮೪, ಪುಟ ೮೮

೫೬. ಅದೇ, ಲಿಂಗಸೂಗೂರು–೪೯, ಮುದಗಲ್–ಕ್ರಿ.ಶ. ೧೨೧೫, ಪುಟ ೧೮೩.

೫೭. ಅದೇ, ಮಾನ್ವಿ–೬೯, ಕಲ್ಲೂರು–ಕ್ರಿ.ಶ. ೧೧೪೨, ಪುಟ ೨೯೦–೨೯೧.

೫೮. ಅದೇ, ಮಾನ್ವಿ–೭೨, ಅತ್ತನೂರು–ಕ್ರಿ.ಶ. ೧೧ನೆಯ ಶತಮಾನ, ಪುಟ ೨೯೩.

೫೯. ಅದೇ, ಸಿಂಧನೂರು–೨, ಸಾಲಗುಂದೆ–ಕ್ರಿ.ಶ. ೧೧೫೩, ಪುಟ ೩೪೬

೬೦. ಅದೇ, ಸಿಂಧನೂರು–೨೮, ದೇವರಗುಡಿ–ಕ್ರಿ.ಶ. ೧೧೦೧, ಪುಟ ೩೪೯.

೬೧. ಅದೇ, ಸಿಂಧನೂರು–೪೬, ಮಾಡಸಿರವಾರ–ಕ್ರಿ.ಶ. ೧೦೩೩, ಪುಟ ೪೧೮.

೬೨. ಅದೇ, ಮಾನ್ವಿ–೧೮, ಭೋಗಾವತಿ–ಕ್ರಿ.ಶ. ೧೦ನೆಯ ಶತಮಾನ, ಪುಟ ೨೪೨.

೬೩. ಅದೇ, ರಾಯಚೂರು–೪೮, ಕಲಮಲ–ಕ್ರಿ.ಶ. ೯೧೪–೯೨೯, ಪುಟ ೩೨.

೬೪. ಅದೇ, ರಾಯಚೂರು–೪೯, ಕಲಮಲ–ಕ್ರಿ.ಶ. ೯೪೦, ಪುಟ ೩೩.

೬೫. ಅದೇ, ರಾಯಚೂರು–೫೮, ದೇವಸೂಗೂರು–ಕ್ರಿ.ಶ. ೧೦೨೨, ಪುಟ ೪೧.

೬೬. ಅದೇ, ಲಿಂಗಸೂಗೂರು–೩೦, ಮಸ್ಕಿ–ಕ್ರಿ.ಶ. ೧೦೩೭, ಪುಟ ೧೬೩.

೬೭. ಅದೇ, ಮಾನ್ವಿ–೧೧೯, ಗುಡಿಹಾಳ–ಕ್ರಿ.ಶ. ೧೩ನೆಯ ಶತಮಾನ, ಪುಟ ೩೩೯.

೬೮. ಅದೇ, ಲಿಂಗಸೂಗೂರು–೨, ಲಿಂಗಸೂಗೂರು–ಕ್ರಿ.ಶ. ೧೦೭೭, ಪುಟ ೧೨೫.

೬೯. ಅದೇ, ಮಾನ್ವಿ-೪೩, ಕುರುಡಿ-ಕ್ರಿ.ಶ. ೧೧೨೩, ಪುಟ ೨೬೦-೬೧.

೭೦. ಅದೇ, ಸಿಂಧನೂರು-೫೩, ಒಳಬಳ್ಳಾರಿ-ಕ್ರಿ.ಶ. ೧೧೧೭, ಪುಟ ೪೨೨.

೭೧. ಅದೇ. ದೇವದುರ್ಗ-೨೭, ಹಿರೇರಾಯಕುಂಪಿ-ಕ್ರಿ.ಶ. ೧೧೩೦, ಪುಟ ೯೦.

೭೨. ಅದೇ, ಸಿಂಧನೂರು-೩೯, ಬಳಗಾನೂರು-ಕ್ರಿ.ಶ. ೧೧೯೧, ಪುಟ ೪೦೬.

೭೩. ಅದೇ, ಮಾನ್ವಿ-೨೨, ದದ್ದಲ-ಕ್ರಿ.ಶ. ೧೦೬೯, ಪುಟ ೨೪೫.

೭೪. ಅದೇ, ದೇವದುರ್ಗ-೨೬, ಗಬ್ಬೂರು-ಕ್ರಿ.ಶ. ೧೦೮೪, ಪುಟ ೮೮-೯೦.

೭೫. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿ.ಶ. ೧೧೦೧, ಪುಟ ೩೮೯.

೭೬. ಅದೇ, ಸಿಂಧನೂರು-೨೩, ಜಾಲಿಹಾಳು-ಕ್ರಿ.ಶ. ೧೧೦೫, ಪುಟ ೩೮೦.

೭೭. ಅದೇ, ರಾಯಚೂರು-೧, ಇಡಪನೂರು-ಕ್ರಿ.ಶ. ೧೧೨೨, ಪುಟ ೧-೪.

೭೮. ಅದೇ, ಮಾನ್ವಿ-೭೨, ಕಲ್ಲೂರು-ಕ್ರಿ.ಶ. ೧೧೩೪, ಪುಟ ೨೮೭.

೭೯. ಅದೇ, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೮೬, ಪುಟ ೪೦೯.

೮೦. ಅದೇ, ರಾಯಚೂರು-೫೨, ಚಿಕ್ಕಸೂಗೂರು-ಕ್ರಿ.ಶ. ೧೧೯೪, ಪುಟ ೩೬.

೮೧. ಅದೇ, ದೇವದುರ್ಗ-೩೧, ವೀರಗೋಟ-ಕ್ರಿ.ಶ. ೧೨೨೩, ಪುಟ ೯೭-೯೮.

೮೨. ಅದೇ, ರಾಯಚೂರು-೪೫, ರಾಯಚೂರು-ಕ್ರಿ.ಶ. ೧೨೯೪, ಪುಟ ೨೯.

೮೩. ಅದೇ, ಸಿಂಧನೂರು-೧, ರೌಡಕುಂದೆ-ಕ್ರಿ.ಶ. ೧೦೫೩, ಪುಟ ೩೪೪.

೮೪. ಅದೇ, ಸಿಂಧನೂರು-೪, ಸಾಲಗುಂದೆ-ಕ್ರಿ.ಶ. ೧೦೬೩, ಪುಟ ೩೪೯-೫೦.

೮೫. ಅದೇ, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೬.

೮೬. ಅದೇ, ಮಾನ್ವಿ-೬೯, ಕಲ್ಲೂರು-ಕ್ರಿ.ಶ. ೧೧೪೨, ಪುಟ ೨೯೦-೯೧.

೮೭. ಅದೇ, ಮಾನ್ವಿ-೭೬, ಕಲ್ಲೂರು-ಕ್ರಿ.ಶ. ೧೦೭೬, ಪುಟ ೨೯೬

೮೮. ಅದೇ, ಮಾನ್ವಿ-೨೯, ಸುಂಕೇಶ್ವರ-ಕ್ರಿ.ಶ. ೧೦೯೭, ಪುಟ ೨೫೦.

೮೯. ಅದೇ, ಮಾನ್ವಿ-೪೨, ಕುರುಡಿ-ಕ್ರಿ.ಶ. ೧೧೨೩, ಪುಟ ೨೫೯-೬೧.

೯೦. ಅದೇ, ಮಾನ್ವಿ-೪೪, ಕುರುಡಿ-ಕ್ರಿ.ಶ. ೧೧೩೭, ಪುಟ ೨೬೨.

೯೧. ಅದೇ, ಮಾನ್ವಿ-೫೧, ಕುರುಡಿ-ಕ್ರಿ.ಶ. ೧೧೧೯, ಪುಟ ೨೭೧.

೯೨. ಅದೇ, ಮಾನ್ವಿ-೫೬, ಬೇವಿನೂರು-ಕ್ರಿ.ಶ. ೧೨ನೆಯ ಶತಮಾನ, ಪುಟ ೨೭೬

೯೩. ಅದೇ, ಸಿಂಧನೂರು-೩೧, ಕೋಳಬಾಳು-ಕ್ರಿ.ಶ. ೧೦೩೦, ಪುಟ ೩೯೫.

೯೪. ಅದೇ, ಲಿಂಗಸೂಗೂರು-೪೪, ಮಸ್ಕಿ-ಕ್ರಿ.ಶ. ೧೦೭೧, ಪುಟ ೧೬೭.

೯೫. ಅದೇ, ರಾಯಚೂರು-೪೫, ರಾಯಚೂರು-ಕ್ರಿ.ಶ. ೧೨೯೪, ಪುಟ ೨೯.

೯೬. ಅದೇ, ಲಿಂಗಸೂಗೂರು-೫೧, ಮುದಗಲ್-ಕ್ರಿ.ಶ. ೧೫೬೦, ಪುಟ ೧೮೮.

೯೭. ಅದೇ, ಸಿಂಧನೂರು-೩, ಸಾಲಗುಂದೆ-ಕ್ರಿ.ಶ. ೧೫೨೬, ಪುಟ ೩೪೮.

೯೮. ಅದೇ, ರಾಯಚೂರು-೫೭, ದೇವಸೂಗೂರು-ಕ್ರಿ.ಶ. ೧೪೩೬, ಪುಟ ೪೦.

೯೯. ಅದೇ, ಲಿಂಗಸೂಗೂರು-೫೦, ಮುದಗಲ್-ಕ್ರಿ.ಶ. ೧೪೩೬, ಪುಟ ೧೮೬.

೧೦೦. ಅದೇ, ಲಿಂಗಸೂಗೂರು-೩೭-ಮಸ್ಕಿ-ಕ್ರಿ.ಶ. ೧೫೩೦, ಪುಟ ೩೪೮.

೧೦೧. ಅದೇ, ಸಿಂಧನೂರು-೩, ಸಾಲಗುಂದೆ-ಕ್ರಿ.ಶ. ೧೫೨೮, ಪುಟ ೩೪೮.

೧೦೨. ಅದೇ, ಲಿಂಗಸೂಗೂರು-೩೭, ಮಸ್ಕಿ-ಕ್ರಿ.ಶ. ೧೫೩೦, ಪುಟ ೧೭೧.

೧೦೩. ಅದೇ, ಲಿಂಗಸೂಗೂರು-೩೬, ಮಸ್ಕಿ-ಕ್ರಿ.ಶ. ೧೫೩೭, ಪುಟ ೧೭೦.

೧೦೪. ಅದೇ, ಲಿಂಗಸೂಗೂರು-೩೯, ಮಸ್ಕಿ-ಕ್ರಿ.ಶ. ೧೫೩೦, ಪುಟ ೧೭೩.

೧೦೫. ಅದೇ, ಲಿಂಗಸೂಗೂರು-೫೧, ಮುದಗಲ್-ಕ್ರಿ.ಶ. ೧೫೬೦, ಪುಟ ೧೮೮.

೧೦೬. ಅದೇ, ರಾಯಚೂರು-೧೨, ರಾಮಪುರ-ಕ್ರಿ.ಶ. ೧೫೫೩, ಪುಟ ೧೨.

೧೦೭. ಅದೇ, ಮಾನ್ವಿ-೧೧೭, ಕವಿತಾಳ-ಕ್ರಿ.ಶ. ೧೫೫೧, ಪುಟ ೩೩೮.

೧೦೮. ಅದೇ, ಲಿಂಗಸೂಗೂರು-೩೮, ಮಸ್ಕಿ-ಕ್ರಿ.ಶ. ೧೫೪೭, ಪುಟ ೧೭೨.

೧೦೯. ಅದೇ, ರಾಯಚೂರು-೨೦, ರಾಯಚೂರು-ಕ್ರಿ.ಶ. ೧೫೪೮-೪೯ ಪುಟ ೧೭.

೧೧೦. ಅದೇ, ರಾಯಚೂರು-೧೬, ರಾಯಚೂರು-ಕ್ರಿ.ಶ. ೧೪೯೮-೯೯ ಪುಟ ೧೫.

೧೧೧. ಅದೇ, ರಾಯಚೂರು-೯, ಮಲಿಯಾಬಾದ್-ಕ್ರಿ.ಶ. ೧೫೧೩-೪೯ ಪುಟ ೧೧.

೧೧೨. ಅದೇ, ದೇವದುರ್ಗ-೩೫, ಗಲಗ-ಕ್ರಿ.ಶ. ೧೭೨೬, ಪುಟ ೧೦೩.

೧೧೩. ಅದೇ, ರಾಯಚೂರು-೧೩, ರಾಯಚೂರು-ಕ್ರಿ.ಶ. ೧೪೬೮-೬೯, ಪುಟ ೧೪.

೧೧೪. ಅದೇ, ರಾಯಚೂರು-೧೬, ರಾಯಚೂರು-ಕ್ರಿ.ಶ. ೧೪೯೮-೯೯, ಪುಟ ೧೫.

೧೧೫. ಅದೇ, ರಾಯಚೂರು-೯, ಮಲಿಯಾಬಾದ್-ಕ್ರಿ.ಶ. ೧೫೧೩ ಪುಟ ೧೧.

೧೧೬. ಅದೇ, ರಾಯಚೂರು-೧೮, ರಾಯಚೂರು-ಕ್ರಿ.ಶ. ೧೫೧೮-೪೯ ಪುಟ ೧೬.

೧೧೭. ಅದೇ, ರಾಯಚೂರು-೩೯, ರಾಯಚೂರು-ಕ್ರಿ.ಶ. ೧೫೩೨ ಪುಟ ೨೬.

೧೧೮. ಅದೇ, ರಾಯಚೂರು-೧೯, ರಾಯಚೂರು-ಕ್ರಿ.ಶ. ೧೫೪೬-೪೭, ಪುಟ ೧೭.

೧೧೯. ಅದೇ, ರಾಯಚೂರು-೨೧, ರಾಯಚೂರು-ಕ್ರಿ.ಶ. ೧೫೫೦, ಪುಟ ೧೮.

೧೨೦. ಅದೇ, ರಾಯಚೂರು-೪೦, ರಾಯಚೂರು-ಕ್ರಿ.ಶ. ೧೫೬೬, ಪುಟ ೨೭.

೧೨೧. ಅದೇ, ರಾಯಚೂರು-೨೫, ರಾಯಚೂರು-ಕ್ರಿ.ಶ. ೧೫೮೨, ಪುಟ ೨೦.

೧೨೨. ಅದೇ, ರಾಯಚೂರು-೪೧, ರಾಯಚೂರು-ಕ್ರಿ.ಶ. ೧೫೯೩, ಪುಟ ೨೭.

೧೨೩. ಅದೇ, ರಾಯಚೂರು-೪೨, ರಾಯಚೂರು-ಕ್ರಿ.ಶ. ೧೬೧೧, ಪುಟ ೨೮.

೧೨೪. ಅದೇ, ರಾಯಚೂರು-೨೮, ರಾಯಚೂರು-ಕ್ರಿ.ಶ. ೧೬೨೨-೨೩, ಪುಟ ೨೧.

೧೨೫. ಅದೇ, ಮಾನ್ವಿ-೩೪, ಗೋರ್ಕಲ್ಲು-ಕ್ರಿ.ಶ. ೧೬೧೬, ಪುಟ ೨೫೩.

೧೨೬. ಅದೇ, ರಾಯಚೂರು-೭, ಗುಂಜಹಳ್ಳಿ-ಕ್ರಿ.ಶ. ೧೬೪೭, ಪುಟ ೮.

೧೨೭. ಅದೇ, ಮಾನ್ವಿ-೬೧, ಕಲ್ಲೂರು-ಕ್ರಿ.ಶ. ೧೬೮೩, ಪುಟ ೨೮೦.

೧೨೮. ಅದೇ, ಮಾನ್ವಿ-೩೩, ಗೋರ್ಕಲ್ಲು-ಕ್ರಿ.ಶ. ೧೬-೧೭ನೆಯ ಶತಮಾನ, ಪುಟ ೨೫೩.

೧೨೯. ಅದೇ, ಲಿಂಗಸೂಗೂರು-೫೦, ಮುದಗಲ್-ಕ್ರಿ.ಶ. ೧೪೩೬, ಪುಟ ೧೮೨.

೧೩೦. ಅದೇ, ಲಿಂಗಸೂಗೂರು-೫೪, ಮುದಗಲ್-ಕ್ರಿ.ಶ. ೧೫ನೆಯ ಶತಮಾನ, ಪುಟ ೧೮೯.

೧೩೧. ಅದೇ, ಲಿಂಗಸೂಗೂರು-೧೧೫, ಮುದಗಲ್-ಕ್ರಿ.ಶ. ೧೫೦೩, ಪುಟ ೨೧೬.

೧೩೨. ಅದೇ, ಲಿಂಗಸೂಗೂರು-೮೩, ಮುದಗಲ್-ಕ್ರಿ.ಶ. ೧೫೫೯, ಪುಟ ೨೦೨.

೧೩೩. ಅದೇ, ಲಿಂಗಸೂಗೂರು-೫೨, ಮುದಗಲ್-ಕ್ರಿಶ. ೧೫೬೦, ಪುಟ ೧೮೮.

೧೩೪. ಅದೇ, ಲಿಂಗಸೂಗೂರು-೧೫, ಗೋಣವಾಟ್ಲ-ಕ್ರಿಶ. ೧೫೮೫, ಪುಟ ೧೪೯.

೧೩೫. ಅದೇ, ಲಿಂಗಸೂಗೂರು-೬೭, ಮುದಗಲ್-ಕ್ರಿಶ. ೧೬೧೦, ಪುಟ ೧೯೫.

೧೩೬. ಅದೇ, ಲಿಂಗಸೂಗೂರು-೫೩, ಮುದಗಲ್-ಕ್ರಿಶ. ೧೬ನೆಯ ಶತಮಾನ, ಪುಟ ೧೪೯.

೧೩೭. ಅದೇ, ಲಿಂಗಸೂಗೂರು-೬೨, ಮುದಗಲ್-ಕ್ರಿಶ. ೧೬ನೆಯ ಶತಮಾನ, ಪುಟ ೧೯೩.

೧೩೮. ಅದೇ, ಲಿಂಗಸೂಗೂರು-೧೧೬, ಮುದಗಲ್-ಕ್ರಿಶ. ೧೬೪೩, ಪುಟ ೨೧೭.

೧೩೯. ಅದೇ, ಲಿಂಗಸೂಗೂರು-೫೮, ಮುದಗಲ್-ಕ್ರಿಶ. ೧೬ಮತ್ತು೧೭ನೆಯ ಶತಮಾನ, ಪುಟ ೧೯೧.

೧೪೦. ಅದೇ, ಲಿಂಗಸೂಗೂರು-೬೧, ಮುದಗಲ್-ಕ್ರಿಶ. ೧೫ನೆಯ ಶತಮಾನ, ಪುಟ ೧೯೩.

೧೪೧. ಅದೇ, ಲಿಂಗಸೂಗೂರು-೬೩, ಮುದಗಲ್-ಕ್ರಿಶ. ೧೬ನೆಯ ಶತಮಾನ, ಪುಟ ೧೯೪.

೧೪೨. ಅದೇ, ಲಿಂಗಸೂಗೂರು-೬೪, ಮುದಗಲ್-ಕ್ರಿಶ. ಕಾಲವಿಲ್ಲ, ಪುಟ ೧೯೪.

೧೪೩. ಅದೇ, ಲಿಂಗಸೂಗೂರು-೯೫, ಮುದಗಲ್-ಕ್ರಿಶ. ಕಾಲವಿಲ್ಲ, ಪುಟ ೨೦೭.

೧೪೪. ಅದೇ, ಲಿಂಗಸೂಗೂರು-೯೮, ಮುದಗಲ್-ಕ್ರಿಶ. ಕಾಲವಿಲ್ಲ, ಪುಟ ೨೦೯.

೧೪೫. ಅದೇ, ಲಿಂಗಸೂಗೂರು-೧೩, ಜಲದುರ್ಗ-ಕ್ರಿಶ. ೧೦೮೭, ಪುಟ ೧೪೬.

೧೪೬. ಅದೇ, ಸಿಂಧನೂರು-೫೨, ಒಳಬಳ್ಳಾರಿ-ಕ್ರಿಶ. ೧೧೯೫, ಪುಟ ೪೨೨.

೧೪೭. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿಶ. ೧೧೦೧, ಪುಟ ೩೪೯.

೧೪೮. ಅದೇ, ಮಾನ್ವಿ-೪೪, ಕುರುಡಿ-ಕ್ರಿಶ.೧೧೩೭, ಪುಟ ೨೬೨.

೧೪೯. ಅದೇ, ಮಾನ್ವಿ-೮, ಮಾನ್ವಿ-ಕ್ರಿಶ.೧೫೫೩, ಪುಟ ೨೩೨.

೧೫೦. ಅದೇ, ಲಿಂಗಸೂಗೂರು-೫೧, ಮುದಗಲ್-ಕ್ರಿಶ. ೧೫೬೦, ಪುಟ ೧೮೮.

೧೫೧. ಅದೇ, ಮಾನ್ವಿ-೧೮, ಭೋಗಾವತಿ-ಕ್ರಿಶ. ೧೦ನೆಯ ಶತಮಾನ, ಪುಟ ೨೪೨.

೧೫೨. ಅದೇ, ರಾಯಚೂರು-೪೮, ಕಲಮಲ-ಕ್ರಿಶ. ೯೧೪-೯೨೯, ಪುಟ ೩೨.

೧೫೩. ಅದೇ, ದೇವದುರ್ಗ-೨೬, ಗಬ್ಬೂರ-ಕ್ರಿಶ. ೧೦೮೪, ಪುಟ ೮೮-೯೦.

೧೫೪. ಅದೇ, ಲಿಂಗಸೂಗೂರು ೪೯, ಮುದಗಲ್-ಕ್ರಿಶ.೧೨೧೫, ಪುಟ ೧೮೩.

೧೫೫. ಅದೇ, ಲಿಂಗಸೂಗೂರು-೧೧, ನವಿಲೆ-ಕ್ರಿಶ. ೧೦೧೪, ಪುಟ ೧೪೪.

೧೫೬. ಅದೇ, ಲಿಂಗಸೂಗೂರು-೧೭, ಯರಡೋಣಿ-ಕ್ರಿಶ. ೯೨೮, ಪುಟ ೧೫.

೧೫೭. ಅದೇ, ಮಾನ್ವಿ-೧೩, ಮಾನ್ವಿ-ಕ್ರಿಶ. ೧೦೫೨, ಪುಟ ೨೩೭.

೧೫೮. ಅದೇ, ಮಾನ್ವಿ-೧೫, ಮಾನ್ವಿ-ಕ್ರಿಶ. ೧೦೫೨, ಪುಟ ೨೩೭-೩೮.

೧೫೯. ಅದೇ, ಮಾನ್ವಿ-೬೯, ಕಲ್ಲೂರು-ಕ್ರಿಶ. ೧೧೪೨, ಪುಟ ೨೯೦-೯೨.

೧೬೦. ಅದೇ, ಮಾನ್ವಿ-೭೨, ಅತ್ತನೂರು-ಕ್ರಿಶ. ೧೧ನೆಯ ಶತಮಾನ, ಪುಟ ೨೯೩-೯೪.

೧೬೧. ಅದೇ, ಸಿಂಧನೂರು-೨, ಸಾಲಗುಂದೆ-ಕ್ರಿಶ. ೧೧೫೩, ಪುಟ ೩೪೬-೪೭.

೧೬೨. ಅದೇ, ಸಿಂಧನೂರು-೪, ಸಾಲಗುಂದೆ-ಕ್ರಿಶ. ೧೦೬೩, ಪುಟ ೩೪೯-೫೨.

೧೬೩. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿಶ. ೧೧೦೧, ಪುಟ ೩೪೯.

೧೬೪. ಅದೇ, ಸಿಂಧನೂರು-೪೬, ಮಾಡಸಿರವಾರ-ಕ್ರಿಶ. ೧೦೩೩, ಪುಟ ೪೧೮.

೧೬೫. ಅದೇ, ಲಿಂಗಸೂಗೂರು-೫, ಕರಡಿಕಲ್-ಕ್ರಿ.ಶ. ೧೧೯೧, ಪುಟ ೧೩೦-೩೪.

೧೬೬. ಅದೇ, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೬.

೧೬೭. ಅದೇ, ರಾಯಚೂರು-೫೩, ಕೂಡ್ಲೂರು-ಕ್ರಿ.ಶ. ೧೨ನೆಯ ಶತಮಾನ, ಪುಟ ೩೭.

೧೬೮. ಅದೇ, ದೇವದುರ್ಗ-೨೫, ಗಬ್ಬೂರು-ಕ್ರಿ.ಶ. ೧೦೮೪, ಪುಟ ೮೫-೮೬

೧೬೯. ಅದೇ, ದೇವದುರ್ಗ-೨೭, ಹಿರೇರಾಯಕುಂಪಿ-ಕ್ರಿ.ಶ. ೧೧೩೦, ಪುಟ ೯೦.

೧೭೦. ಅದೇ, ದೇವದುರ್ಗ-೨೯, ನಿಲುವಂಜಿ-ಕ್ರಿ.ಶ. ೧೧೭೭, ಪುಟ ೯೪.

೧೭೧. ಅದೇ, ದೇವದುರ್ಗ-೩೦, ಬಾಗೂರು-ಕ್ರಿ.ಶ. ೧೦೬೩, ಪುಟ ೯೬.

೧೭೨. ಅದೇ, ಲಿಂಗಸೂಗೂರು-೨, ಲಿಂಗಸೂಗೂರು-ಕ್ರಿ.ಶ. ೧೦೭೭, ಪುಟ ೧೨೫.

೧೭೩. ಅದೇ, ಮಾನ್ವಿ-೧೩, ಮಾನ್ವಿ-ಕ್ರಿ.ಶ. ೧೦೫೨, ಪುಟ ೨೩೭.

೧೭೪. ಅದೇ, ಮಾನ್ವಿ-೨೯, ಸುಂಕೇಶ್ವರ-೧೯೭, ಪುಟ ೨೫೦.

೧೭೫. ಅದೇ, ಮಾನ್ವಿ-೪೨, ಕುರುಡಿ-ಕ್ರಿ.ಶ. ೧೧೨೩, ಪುಟ ೨೫೯-೬೧.

೧೭೬. ಅದೇ, ಮಾನ್ವಿ-೫೧, ಕುರುಡಿ-ಕ್ರಿ.ಶ. ೧೧೧೯, ಪುಟ ೨೭೧.

೧೭೭. ಅದೇ, ಮಾನ್ವಿ-೬೪, ಕಲ್ಲೂರು-ಕ್ರಿ.ಶ. ೧೦೮೦, ಪುಟ ೨೮೩.

೧೭೮. ಅದೇ, ಮಾನ್ವಿ-೬೭, ಕಲ್ಲೂರು-ಕ್ರಿ.ಶ. ೧೧೩೪, ಪುಟ ೨೮೭.

೧೭೯. ಅದೇ, ಮಾನ್ವಿ-೬೮, ಕಲ್ಲೂರು-ಕ್ರಿ.ಶ. ೧೧೫೧, ಪುಟ ೨೮೯.

೧೮೦. ಅದೇ, ಮಾನ್ವಿ-೬೯, ಕಲ್ಲೂರು-ಕ್ರಿ.ಶ. ೧೧೪೨, ಪುಟ ೨೯೦.

೧೮೧. ಅದೇ, ಮಾನ್ವಿ-೯೩, ಬಲ್ಲಟಗಿ-ಕ್ರಿ.ಶ. ೧೧ನೆಯ ಶತಮಾನ, ಪುಟ ೧೩೧೦-೩೧೧.

೧೮೨. ಅದೇ, ಮಾನ್ವಿ-೧೦೩, ಮಲ್ಲಟ-ಕ್ರಿ.ಶ. ೧೧೪೮, ಪುಟ ೩೨೨.

೧೮೩. ಅದೇ, ಮಾನ್ವಿ-೧೧೭, ಕವಿತಾಳ-ಕ್ರಿ.ಶ.೧೨೧೭, ಪುಟ ೩೩೮.

೧೮೪. ಅದೇ, ಸಿಂಧನೂರು-೧, ರೌಡಕುಂದೆ-ಕ್ರಿ.ಶ.೧೦೫೩, ಪುಟ ೩೪೪.

೧೮೫. ಅದೇ, ಸಿಂಧನೂರು-೪, ಸಾಲಗುಂದೆ-ಕ್ರಿ.ಶ.೧೦೬೩, ಪುಟ ೩೪೯-೫೨.

೧೮೬. ಅದೇ, ಸಿಂಧನೂರು-೬, ಮುಕ್ಕುಂದಿ-ಕ್ರಿ.ಶ. ೧೧೩೪, ಪುಟ ೩೫೬-೫೭.

೧೮೭. ಅದೇ, ಸಿಂಧನೂರು-೭, ಮುಕ್ಕುಂದಿ-ಕ್ರಿ.ಶ. ೧೯೭, ಪುಟ ೩೫೮-೫೯.

೧೮೮. ಅದೇ, ಸಿಂಧನೂರು-೩೯, ಬಳಗಾನೂರು-ಕ್ರಿ.ಶ. ೧೧೯೧, ಪುಟ ೪೦೬-೦೮.

೧೮೯. ಅದೇ, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೮೬, ಪುಟ ೪೦೯-೧೨.

೧೯೦. ಅದೇ, ಸಿಂಧನೂರು-೪೯, ಬೆಳಗುರ್ಕಿ-ಕ್ರಿ.ಶ. ೯೯೨, ಪುಟ ೪೨೦.

೧೯೧. ಅದೇ, ಸಿಂಧನೂರು-೫೪, ಬೇವಿಹಳ್ಳಿ-ಕ್ರಿ.ಶ.೧೫೫೧, ಪುಟ ೪೨೫.

೧೯೨. ಅದೇ, ಲಿಂಗಸೂಗೂರು-೩೪, ಮಸ್ಕಿ-ಕ್ರಿ.ಶ.೧೦೧೮, ಪುಟ ೧೬೭.

೧೯೩. ಅದೇ, ಸಿಂಧನೂರು-೩೭, ಬಳಗಾನೂರು-ಕ್ರಿ.ಶ.೧೧೭೫, ಪುಟ ೩೯೮-೯೯.

೧೯೪. ಅದೇ, ಸಿಂಧನೂರು-೪೦, ಬಳಗಾನೂರು-ಕ್ರಿ.ಶ.೧೧೭೫, ಪುಟ ೪೦೯-೧೨.

೧೯೫. ಅದೇ, ಲಿಂಗಸೂಗೂರು-೫, ಕರಡಿಕಲ್-ಕ್ರಿ.ಶ. ೧೧೯೧, ಪುಟ ೧೩೦-೩೪.

೧೯೬. ಅದೇ, ಮಾನ್ವಿ-೧೭, ಹಿರೇಕೊಟ್ನೆಕಲ್-ಕ್ರಿ.ಶ. ೧೧೯೧, ಪುಟ ೨೪೦.

೧೯೭. ಅದೇ, ಮಾನ್ವಿ-೪೨, ಕುರುಡಿ-ಕ್ರಿ.ಶ. ೧೧೨೩, ಪುಟ ೨೫೯-೬೦.

೧೯೮. ಅದೇ, ಮಾನ್ವಿ-೪೩, ಕುರುಡಿ-ಕ್ರಿ.ಶ.೧೧೨೩, ಪುಟ ೨೬೦.

೧೯೯. ಅದೇ, ಮಾನ್ವಿ-೫೧, ಕುರುಡಿ-ಕ್ರಿ.ಶ.೧೧೧೯, ಪುಟ ೨೭೧.

೨೦೦. ಅದೇ, ಮಾನ್ವಿ-೯೦, ಬಲ್ಲಟಗಿ-ಕ್ರಿ.ಶ. ೧೦೨೨, ಪುಟ ೩೦೭.

೨೦೧. ಅದೇ, ಮಾನ್ವಿ-೭೪, ಸಿರವಾರ-ಕ್ರಿ.ಶ. ಒಂಬತ್ತನೆಯ ಶತಮಾನ, ಪುಟ ೨೯೫.

೨೦೨. ಅದೇ, ಮಾನ್ವಿ-೯೦, ಬಲ್ಲಟಗಿ-ಕ್ರಿ.ಶ.೧೦೨೨, ಪುಟ ೩೦೭.

೨೦೩. ಅದೇ, ರಾಯಚೂರು-೯, ಮಲಿಯಾಬಾದ್-ಕ್ರಿ.ಶ.೧೫೧೩, ಪುಟ ೧೧.

೨೦೪. ಅದೇ, ದೇವದುರ್ಗ-೨, ಗಬ್ಬೂರು-ಕ್ರಿ.ಶ. ೧೧೦೩, ಪುಟ ೪೬-೪೭

೨೦೫. ಅದೇ, ದೇವದುರ್ಗ-೧೮, ಗಬ್ಬೂರು-ಕ್ರಿ.ಶ. ೧೧೨೬, ಪುಟ ೭೬-೭೭.

೨೦೬. ಅದೇ, ದೇವದುರ್ಗ-೧೯, ಗಬ್ಬೂರು-ಕ್ರಿ.ಶ. ೧೧೪೮, ಪುಟ ೮೧.

೨೦೭. ಅದೇ, ಲಿಂಗಸೂಗೂರು-೬, ಕರಡಿಕಲ್-ಕ್ರಿ.ಶ.೧೦೭೬, ಪುಟ ೧೩೫.

೨೦೮. ಅದೇ, ಲಿಂಗಸೂಗೂರು-೨೫, ಹಿರೇಹೆಸರೂರು-ಕ್ರಿ.ಶ. ೧೩ನೆಯ ಶತಮಾನ, ಪುಟ ೧೫೮.

೨೦೯. ಅದೇ, ಲಿಂಗಸೂಗೂರು-೪೯, ಮುದಗಲ್-ಕ್ರಿ.ಶ. ೧೨೧೫, ಪುಟ ೧೮೨-೮೩.

೨೧೦. ಅದೇ, ಮಾನ್ವಿ-೪೫, ಕುರುಡಿ-ಕ್ರಿ.ಶ.೧೧೩೪, ಪುಟ ೨೬೪.

೨೧೧. ಅದೇ, ಲಿಂಗಸೂಗೂರು-೬೮, ಕಲ್ಲೂರು-ಕ್ರಿ.ಶ. ೧೧೫೧, ಪುಟ ೨೪೯

೨೧೨. ಅದೇ, ಸಿಂಧನೂರು-೮, ಮುಕ್ಕುಂದಿ-ಕ್ರಿ.ಶ. ೧೦೮೮, ಪುಟ ೩೬೨

೨೧೩. ಅದೇ, ಸಿಂಧನೂರು-೩೮, ಬಳಗಾನೂರು-ಕ್ರಿ.ಶ. ೧೧೮೨, ಪುಟ ೪೦೧.

೨೧೪. ಅದೇ, ಮಾನ್ವಿ-೯೪, ಬಲ್ಲಟಗಿ-ಕ್ರಿ.ಶ.೧೧ನೇಯ ಶತಮಾನ, ಪುಟ ೩೧೧.

೨೧೫. ಅದೇ, ಸಿಂಧನೂರು-೨೩, ಜಾಲಿಹಾಳು-ಕ್ರಿ.ಶ. ೧೧೦೫, ಪುಟ ೩೮೦.

೨೧೬. ಅದೇ, ಮಾನ್ವಿ-೧೧೮, ಜೋಳದರಾಶಿ-ಕ್ರಿ.ಶ. ೧೨ನೆಯ ಶತಮಾನ ಪುಟ ೩೩೯.

೨೧೭. ಅದೇ, ಲಿಂಗಸೂಗೂರು-೫೦, ಮುದಗಲ್-ಕ್ರಿ.ಶ. ೧೪೩೬, ಪುಟ ೧೮೩.

೨೧೮. ಅದೇ, ಸಿಂಧನೂರು-೪೦, ಬಳಗಾನೂರು-ಕ್ರಿ.ಶ. ೧೧೮೬, ಪುಟ ೪೦೯.

೨೧೯. ಅದೇ, ಸಿಂಧನೂರು-೧೪, ಮುಕ್ಕುಂದಿ-ಕ್ರಿ.ಶ. ೧೫೫೬, ಪುಟ ೩೭೦.

೨೨೦. ಅದೇ, ಮಾನ್ವಿ-೧೧, ವಡವಾಟಿ-ಕ್ರಿ.ಶ.೧೬ನೆಯ ಶತಮಾನ, ಪುಟ ೨೩೮.

೨೨೧. ಅದೇ, ಮಾನ್ವಿ-೬೩, ಕಲ್ಲೂರು ಕ್ರಿ.ಶ. ೧೬೫೨, ಪುಟ ೨೮೨.

೨೨೨. ಅದೇ, ಮಾನ್ವಿ-೩೩, ಗೋರ್ಕಲ್ಲು-ಕ್ರಿ.ಶ. ೧೬ ಮತ್ತು ೧೭ನೆಯ ಶತಮಾನ, ಪುಟ ೨೫೩.

೨೨೩. ಅದೇ, ಮಾನ್ವಿ-೭೬, ಕಲ್ಲೂರು-ಕ್ರಿ.ಶ. ೧೭೬೦, ಪುಟ ೨೯೬

೨೨೪. ಅದೇ, ಮಾನ್ವಿ-೧೮, ಭೋಗಾವತಿ-ಕ್ರಿ.ಶ. ೧೦ನೆಯ ಶತಮಾನ, ಪುಟ ೨೪೨.

೨೨೫. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿ.ಶ. ೧೧೦೧, ಪುಟ ೩೪೯.

೨೨೬. ಅದೇ, ಮಾನ್ವಿ-೧೦೩, ಮಲ್ಲಟ-ಕ್ರಿ.ಶ. ೧೧೪೮, ಪುಟ ೩೨೨.

೨೨೭. ಅದೇ, ಸಿಂಧನೂರು-೪೯, ಬೆಳಗುರ್ಕಿ-ಕ್ರಿ.ಶ .೯೯೨, ಪುಟ ೪೨೦.

೨೨೮. ಅದೇ, ಮಾನ್ವಿ-೮೧, ಬಲ್ಲಟಗಿ-ಕ್ರಿ.ಶ. ೧೦೨೮, ಪುಟ ೩೦೦-೦೧.

೨೨೯. ಅದೇ, ಸಿಂಧನೂರು-೪೬, ಮಾಡಸಿರವಾರ-ಕ್ರಿ.ಶ. ೧೦೩೩, ಪುಟ ೪೧೮.

೨೩೦. ಅದೇ, ದೇವದುರ್ಗ-೩೦, ಬಾಗೂರು-ಕ್ರಿ.ಶ.೧೦೬೩, ಪುಟ ೯೬.

೨೩೧. ಅದೇ, ಮಾನ್ವಿ-೭೬, ಕಲ್ಲೂರು-ಕ್ರಿ.ಶ. ೧೦೭೬, ಪುಟ ೨೯೬.

೨೩೨. ಅದೇ, ಲಿಂಗಸೂಗೂರು-೪, ಕರಡಕಲ್-೧೦೭೯, ಪುಟ ೧೨೯.

೨೩೩. ಅದೇ, ಲಿಂಗಸೂಗೂರು-೧೩, ಜಲದುರ್ಗ-ಕ್ರಿ.ಶ. ೧೦೮೭, ಪುಟ ೧೪೬.

೨೩೪. ಅದೇ, ದೇವದುರ್ಗ-೩೫, ಗಲಗ-ಕ್ರಿ.ಶ. ೧೭೨೬, ಪುಟ ೧೦೩.

೨೩೫. ಅದೇ, ದೇವದುರ್ಗ-ಕ್ರಿ.ಶ.೧೬೯೦, ಪುಟ ೧೧೪.

೨೩೬. ಅದೇ, ಈ ವಿಭಾಗವನ್ನು ಕುರಿತು ಏಳು ಶಾಸನಗಳು ಕಂಡುಬರುತ್ತವೆ. ಅವುಗಳು ಹೀಗಿವೆ. ರಾಯಚೂರು ತಾಲೂಕಿಗೆ ಸೇರಿದ ಇಡಪನೂರು-(೧), ಕ್ರಿ.ಶ.೧೧೨೨ರ ಶಾಸನ, ಕೂಡ್ಲೂರು-(೫೩), ಕ್ರಿ.ಶ. ೧೨ನೆಯ ಶತಮಾನ, ದೇವದುರ್ಗ ತಾಲೂಕಿನ ಗಬ್ಬೂರು-(೨೫) ಮತ್ತು (೨೬), ಕ್ರಿ.ಶ. ೧೦೮೪ರ ಶಾಸನ, ಹಿರೇರಾಯಕುಂಪಿ-(೨೭), ಕ್ರಿ.ಶ. ೧೧೩೦ರ ಶಾಸನ ಹಾಗೂ ಮಾನ್ವಿ ತಾಲೂಕಿನ ಕಲ್ಲೂರು-(೬೭), ಕ್ರಿ.ಶ. ೧೧೩೪ರ ಶಾಸನ ಮತ್ತು ಅತ್ತನೂರು-(೭೨), ಕ್ರಿ.ಶ. ೧೧ನೆಯ ಶತಮಾನದ ಶಾಸನಗಳು ಮುದಗುಂದೂರು-೩೦೦ನ್ನು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೩೭. ಈ ವಿಭಾಗವನ್ನು ಕುರಿತು ೮ ಶಾಸನಗಳು ಉಲ್ಲೇಖಿಸುತ್ತವೆ. ಅವು ದೇವದುರ್ಗ ತಾಲೂಕಿಗೆ ಸೇರಿದ ಗಬ್ಬೂರು (೨), ಕ್ರಿ.ಶ. ೧೦೮೫, ಗಬ್ಬೂರು (೪), ಕ್ರಿ.ಶ.೧೧೫೪, ಗಬ್ಬೂರು (೩), ಕ್ರಿ.ಶ. ೧೧೦೭ ಹಾಗೂ ಹಿರೇರಾಯಕುಂಪಿ,(೨೭), ಕ್ರಿ.ಶ.೧೧೩೦ರ ಶಾಸನಗಳು. ಮಾನ್ವಿ ತಾಲೂಕಿನ ಸುಂಕೇಶ್ವರ (೨೯), ಕ್ರಿ.ಶ.೧೯೯೭, ಕಲ್ಲೂರು(೬೮) ಕ್ರಿ.ಶ.೧೧೫೧, ಸಿರವಾರ (೭೪) ಕ್ರಿ.ಶ. ಒಂಬತ್ತನೆಯ ಶತಮಾನ ಹಾಗೂ ಬಲ್ಲಟಗಿ (೯೦), ಕ್ರಿ.ಶ. ೧೦೨೨ರ ಶಾಸನಗಳು ಬಹುಮುಖ್ಯ ಆಕರಗಳಾಗಿವೆ(ದೇವರಕೊಂಡಾರೆಡ್ಡಿ ೨೦೦೩).

೨೩೮. ಕರಡಿಕಲ್-೩೦೦ರ ವಿಭಾಗ ಕರಡಿಕಲ್ ಕದಂಬರ ಆಡಳಿತ ಕೇಂದ್ರವಾಗಿತ್ತು. ಇದರ ಮೂಲಕ ತಮ್ಮ ಅಧೀನವಾಗಿರುವವರನ್ನು ನಿಯಂತ್ರಿಸುತ್ತಿದ್ದರು. ಇದನ್ನು ಕುರಿತು ಲಿಂಗಸೂಗೂರು ತಾಲೂಕಿನ ಲಿಂಗಸೂಗೂರು (೧), ಕ್ರಿ.ಶ.೧೧೨೪, ಲಿಂಗಸೂಗೂರು (೨), ಕ್ರಿ.ಶ. ೧೦೭೭, ಕರಡಿಕಲ್ (೫), ಕ್ರಿ.ಶ. ೧೯೯೧, ನವಿಲೆ (೭), ಕ್ರಿ.ಶ.೧೧೨೮, ನವಿಲೆ (೯), ಕ್ರಿ.ಶ.೧೦೬೬, ನವಿಲೆ(೧೧) ೧೦೧೪, ಜಲದುರ್ಗ (೧೩), ಕ್ರಿ.ಶ.೧೦೮೭, ಯರಡೋಣಿ (೧೭), ಕ್ರಿ.ಶ. ೯೨೮, ಹಿರೇಹೆಸರೂರು (೨೭), ಕ್ರಿ.ಶ.೧೦೨೦, ಮುದಗಲ್(೪೯), ಕ್ರಿ.ಶ.೧೨೧೫, ಕಿಲಾರಹಟ್ಟಿ (೨೬), ೧೦೪೬ ಹಾಗೂ ಮಾನ್ವಿ ತಾಲೂಕಿನ ಕುರುಡಿ (೫೧), ಕ್ರಿ.ಶ.೧೧೯ ಮುಂತಾದ ಶಾಸನಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ (ದೇವರಕೊಂಡಾರೆಡ್ಡಿ ೨೦೦೩).

೨೩೯. ಈ ಪ್ರದೇಶದಲ್ಲಿ ಇದು ಕೂಡ ಪ್ರಮುಖ ಕಂಪಣವಾಗಿ ಗುರುತಿಸಿಕೊಂಡಿತ್ತು. ಇದು ಇಂದು ದೇವದುರ್ಗ ತಾಲೂಕಿನ ಪ್ರಮುಖ ಗ್ರಾಮವಾಗಿದೆ. ಪ್ರಾಚೀನ ಹೆಸರು ಮೊಸಳಿಕಲ್ಲು-೩೦೦ ಎಂದು, ಈಗ ಮೊಸರಕಲ್ಲು ಎಂದು ಕರೆಯಲಾಗುತ್ತದೆ. ಪ್ರಾಚೀನ ಮೊಸಳಿಕಲ್-೩೦೦ರ ಉಲ್ಲೇಖವನ್ನು ಕೆಲವು ಶಾಸನಗಳು ರುಜುವಾತು ಪಡಿಸುತ್ತವೆ. ಅವುಗಳೆಂದರೆ, ಮಾನ್ವಿ ತಾಲೂಕಿನ ಕಪಗಲ್ಲು (೫೫), ಕ್ರಿ.ಶ. ೧೦೭೯, ಸಿರವಾರ(೭೬)-ಕ್ರಿ.ಶ. ೧೦೭೬, ಬಲ್ಲಟಗಿ(೯೨)- ಕ್ರಿ.ಶ. ೧೦೩೬, ಬಲ್ಲಟಗಿ (೯೫)-ಕ್ರಿ.ಶ. ೧೦೫೮, ಬಲ್ಲಟಗಿ(೧೦೦)-ಕ್ರಿ.ಶ. ೧೦೩೬ ಹಾಗೂ ಬಲ್ಲಟಗಿ(೯೬)-ಕ್ರಿ.ಶ. ೧೦೯೧ ಮುಂತಾದ ಶಾಸನಗಳು ಕಂಡುಬರುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೪೦. ಮೊರಟ-೩೦೦ ಬಹುಪ್ರಮುಖ ಆಡಳಿತ ವಿಭಾಗವಾಗಿದೆ. ಈ ಆಡಳಿತ ವಿಭಾಗದಲ್ಲಿ ಹೈಹಯರು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ಹೈಹಯರ ರಾಜಧಾನಿ ಕೇಂದ್ರವೂ ಆಗಿತ್ತು. ಈ ಆಡಳಿತ ವಿಭಾಗದ ಕೆಲವು ಶಾಸನಗಳನ್ನು ಗಮನಿಸಬಹುದಾಗಿದೆ. ಅವು ಹೀಗಿವೆ. ಬಲ್ಲಟಗಿ (೯೩)-ಕ್ರಿ.ಶ. ೧೧ನೆಯ ಶತಮಾನ, ಮಲ್ಲಟ(೧೦೨)-ಕ್ರಿ.ಶ. ೧೧೯೬, ಮಲ್ಲಟ(೧೦೩)-ಕ್ರಿ.ಶ. ೧೧೪೮, ಕವಿತಾಳ (೧೧೫)- ಕ್ರಿ.ಶ. ೧೨೧೭, ಕವಿತಾಳ(೧೧೬)-ಕ್ರಿ.ಶ.೧೨೧೭ ಹಾಗೂ ಬಳಗಾನೂರು(೪೦)-೧೧೮೬ ಮುಂತಾದ ಶಾಸನಗಳು ಮೊರಟ-೩೦೦ನ್ನು ಉಲ್ಲೇಖಿಸುತ್ತವೆ.

೨೪೧. ಈ ಆಡಳಿತ ವಿಭಾಗದಲ್ಲಿ ಎಡೆದೊರೆ ನಾಡಿನ ಕೆಲವು ಹಳ್ಳಿಗಳು ಸೇರಿದ್ದವು. ಅವು ತುಂಗಭದ್ರಾ ನದಿಯ ಉತ್ತರಕ್ಕಿವೆ. ಆದರೂ ಯಾವುದೇ ಗಡಿ ಇಲ್ಲಿ ಅಡ್ಡ ಬಂದಿಲ್ಲ. ಈಗ ಇದು ತುಂಗಭದ್ರ ನದಿಯ ದಕ್ಷಿಣದಲ್ಲಿದೆ. ಈ ವಿಭಾಗವನ್ನು ಕುರಿತು ರಾಯಚೂರು ದೋ-ಅಬ್‌ನಲ್ಲಿ ಕೆಲವು ಶಾಸನಗಳು ಲಭಿಸಿವೆ. ಅವು, ಹಿರೇಭೇರಿಗೆ(೨೪)-೧೧೦೦, ಬೊಪ್ಪೂರು(೨೬)-೧೧೦೧, ದೇವರಗುಡಿ(೨೮)-ಕ್ರಿ.ಶ.೧೧೦೧, ದೇವರಗುಡಿ(೨೯)-ಕ್ರಿ.ಶ.೧೫೫೧ ಮುಂತಾದವುಗಳಾಗಿವೆ(ದೇವರಕೊಂಡಾರೆಡ್ಡಿ ೨೦೦೩).

೨೪೨. ದೇವರಕೊಂಡಾರೆಡ್ಡಿ(ಸಂ), ೨೦೦೩, ಸಿಂಧನೂರು-೨೮, ದೇವರಗುಡಿ-ಕ್ರಿ.ಶ. ೧೧೦೮, ಪುಟ ೩೪೯-೯೦

೨೪೩. ಆ ವಿಭಾಗದ ಉಲ್ಲೇಖಗಳು ಯಲಬುರ್ಗ ತಾಲೂಕಿನಲ್ಲಿ, ಲಿಂಗಸೂಗೂರು ತಾಲೂಕಿನಲ್ಲಿ ಕಂಡು ಬರುತ್ತವೆ. ಮೋಹನ್‌ಕೃಷ್ಣ ರೈ ಅವರು ಸೂಡಿ ಪಟ್ಟಣ ಕಿಸುಕಾಡು-೭೦ರ ಕೇಂದ್ರವಾಗಿತ್ತೆನ್ನುತ್ತಾರೆ. ನಾಗರಾಜ್ ರಾವ್ ಅವರು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಿಸುಕಾಡು-೭೦ ಪ್ರಮುಖ ಕೇಂದ್ರವಾಗಿತ್ತು. ಹಾಗೆಯೇ ಲಿಂಗಸೂಗೂರು ಇದರ ಕೇಂದ್ರವಾಗಿದ್ದಿತು ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಕಿಸುಕಾಡು-೭೦ ಯಲಬುರ್ಗಾ ಮತ್ತು ಲಿಂಗಸೂಗೂರು ಪ್ರದೇಶಗಳನ್ನು ಹೊಂದಿತ್ತೆಂದು ಹೇಳಬಹುದಾಗಿದೆ. ಈ ವಿಭಾಗದ ಕುರಿತು ದೇವದುರ್ಗ ತಾಲೂಕಿನ ಗಬ್ಬೂರು(೭)-ಕ್ರಿ.ಶ.೧೧೭೧, ಲಿಂಗಸೂಗೂರು ತಾಲೂಕಿನ ಬನ್ನಿಗೋಳ(೧೧೮)-ಕ್ರಿ.ಶ. ೧೦೨೫ ಮತ್ತು ಕಿಲಾರಹಟ್ಟಿ (೧೨೬)-ಕ್ರಿ.ಶ.೧೦೪೬ರ ಶಾಸನಗಳು ಉಲ್ಲೇಖಿಸುತ್ತವೆ. ಲಿಂಗಸೂಗೂರು ಬಾದಾಮಿ ಚಾಲುಕ್ಯರ ಕಾಲದಲ್ಲಿ ನಗರಸಭೆಯನ್ನು ಹೊಂದಿದ್ದ ಪಟ್ಟಣವಾಗಿತ್ತು. ಹಾಗಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದು ಕಿಸುಕಾಡು-೭೦ ಕೇಂದ್ರವಾಗಿರಬಹುದಾಗಿದೆ.

೨೪೪. ಈ ವಿಭಾಗವನ್ನು ಕುರಿತು ಸಿಂಧನೂರು ತಾಲೂಕಿನ ಸಾಲಗುಂದೆ (೨)-ಕ್ರಿ.ಶ.೧೧೫೩, ಸಾಲಗುಂದೆ (೪)-ಕ್ರಿ.ಶ. ೧೦೬೩, ಮುಕ್ಕುಂದಿ(೭)-ಕ್ರಿ.ಶ.೧೧೯೭ ಹಾಗೂ ದೇವರಗುಡಿ(೨೮)-ಕ್ರಿ.ಶ. ೧೧೦೮ರ ಶಾಸನಗಳು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೪೫. ದೇವರಕೊಂಡಾರೆಡ್ಡಿ(ಸಂ),೨೦೦೩,ಸಿಂಧನೂರು-೪, ಸಾಲಗುಂದೆ-ಕ್ರಿ.ಶ. ೧೦೬೮, ಪುಟ ೩೪೯-೫೨.

೨೪೬. ಅದೇ, ಸಿಂಧನೂರು-೧೧೮, ಬನ್ನಿಗೋಳ-ಕ್ರಿ.ಶ.೧೦೨೫, ಪುಟ ೨೧೮.

೨೪೭. ಅದೇ, ಸಿಂಧನೂರು-೨೯, ದೇವರಗುಡಿ,-ಕ್ರಿ.ಶ.೧೧೦೧, ಪುಟ ೩೪೯-೯೦.

೨೪೮. ಅದೇ, ಸಿಂಧನೂರು-೨೮, ದೇವರಗುಡಿ-ಕ್ರಿ.ಶ.೧೧೦೮, ಪುಟ ೩೪೯-೯೦.

೨೪೯. ರಾಜಧಾನಿ ಪಿರಿಯ ಮೊಸಂಗಿ ಮೌರ್ಯರ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ಮೌರ್ಯರ ಕಾಲದಲ್ಲಿ ರಾಜಧಾನಿ ಕೇಂದ್ರವಾಗಿತ್ತು. ಆದರ ಹಿನ್ನೆಲೆಯನ್ನರಿತ ಕಲ್ಯಾಣ ಚಾಲುಕ್ಯರು ರಾಜಕೀಯ ಹಿತದೃಷ್ಟಿಯಿಂದ ಮಸ್ಕಿಯನ್ನು ರಾಜಧಾನಿ ಕೇಂದ್ರವನ್ನಾಗಿ ಆಯ್ಕೆ ಮಾಡಿಕೊಂಡರು. ಇದು ಮುಖ್ಯ ರಾಜಧಾನಿ ಕೇಂದ್ರವಾಗಿರಲಿಲ್ಲ. ಅರಸರ ಸಂಬಂಧಿಕರೇ ಇಲ್ಲಿ ಅಧಿಕಾರ ಸ್ಥಾಪಿಸಿದ್ದರಿಂದ,

ಮುಖ್ಯ ರಾಜಧಾನಿ ಕೇಂದ್ರ-ಕಲ್ಯಾಣವಾಗಿತ್ತು. ಮಸ್ಕಿ ಒಂದು ಉಪರಾಜಧಾನಿಯಾಗಿತ್ತು. ಇದನ್ನು ಕುರಿತು ಮಸ್ಕಿ(೩೦)-ಕ್ರಿ.ಶ. ೧೦೩೨, ಮಸ್ಕಿ(೪೪)-ಕ್ರಿ.ಶ.೧೦೭೧, ಸುಂಕನೂರು(೩೨)-ಕ್ರಿ.ಶ.೧೦೨೩ ಹಾಗೂ ಸುಂಕನೂರು(೩೩) ಶಾಸನಗಳು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೫೦. ಇದು ದೇವಗಿರಿ ಯಾದವರ ಕಾಲದಲ್ಲಿ ಮುಂಚೂಣಿಗೆ ಬಂದಿತು. ಈ ವೇಳೆಗಾಗಲೇ ಇದು ಪ್ರಮುಖ ಸ್ಥಳವೆಂದು ಗುರುತಿಸಿಕೊಂಡಿತ್ತು. ಆದರೆ ಯಾದವರ ಕಾಲದಲ್ಲಿ ಕರಡಿಕಲ್ಲು-೩೦೦ರ ರಾಜಧಾನಿ ಕೇಂದ್ರವಾಗಿ ಪ್ರಸಿದ್ಧಿ ಪಡೆಯಿತು. ನಂತರ ವಿಜಯನಗರ ಮತ್ತು ಬಹಮನಿ, ಆದಿಲ್‌ಶಾಹಿಗಳ ಕಾಲದಲ್ಲಿ ಆಕರ್ಷಕ, ಆಯಕಟ್ಟಿನ ಸ್ಥಳವಾಗುವುದರ ಜೊತೆಗೆ ಯುದ್ಧ ಕೇಂದ್ರವಾಗಿ ನಿರ್ಮಾಣ ಗೊಂಡಿತು. ದೊಡ್ಡ ಪ್ರಮಾಣದ ಕೋಟೆಯನ್ನು ಹೊಂದಿದೆ. ಅನೇಕ ಜನಸಾಮಾನ್ಯರ ಸಾವಿಗೂ ಕಾರಣವಾಗಿದೆ. ಇದರ ಕುರಿತು ಸುಲ್ತಾನಪುರ (೪೭)- ಕ್ರಿ.ಶ.೧೬೪೨, ಮುದಗಲ್(೪೯)-ಕ್ರಿ.ಶ.೧೨೧೫, ಮುದಗಲ್(೫೭)-ಕ್ರಿ.ಶ. ೧೪೩೬ ಹಾಗೂ ಮುದಗಲ್(೫೬)-ಕ್ರಿ.ಶ.-೧೫೯೧ರ ಶಾಸನಗಳು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೫೧. ಈ ಆಡಳಿತ ಕೇಂದ್ರವನ್ನು ಕುರಿತು ಬನ್ನಿಗೋಳ (೧೧೮)-ಕ್ರಿ.ಶ. ೧೦೨೫, ಕಿಲಾರಹಟ್ಟಿ (೧೨೬)-೧೦೪೬ ಹಾಗೂ ಕುರುಡಿ(೫೧)-ಕ್ರಿ.ಶ.೧೧೯೯ರ ಶಾಸನಗಳು ತಿಳಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೫೨. ಇದು ಆಯಕಟ್ಟಿನ ಸ್ಥಳವಾಗಿತ್ತು. ಇದರ ಪ್ರಭಾವ ಹೆಚ್ಚಾಗಿ ಗುರುತಿಸಲಾಗಿದೆ. ಇದನ್ನು ಕುರಿತು ಹಿರೇಕೊಟ್ನೆಕಲ್(೧೭)-ಕ್ರಿ.ಶ. ೧೧೯೧ ಹಾಗೂ ದದ್ದಲ(೨೨)-ಕ್ರಿ.ಶ. ೧೦೬೦ರ ಶಾಸನಗಳು ತಿಳಿಪಡಿಸುತ್ತವೆ.

೨೫೩. ಈ ಕೇಂದ್ರವನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಾಣಬಹುದಾಗಿದೆ. ಈ ಆಡಳಿತ ವಿಭಾಗವನ್ನು ಕುರಿತು ಕಪಗಲ್(೫೫)-ಕ್ರಿ.ಶ. ೧೧೯೯ ಹಾಗೂ ಗೋರ್ಕಲ್ಲು(೩೪)-ಕ್ರಿ.ಶ. ೧೬೧೬ರ ಶಾಸನಗಳು ಉಲ್ಲೇಖಿಸುತ್ತವೆ. ಅಂದು ಇದು ಪ್ರಾಮುಖ್ಯತೆಯನ್ನು ಪಡೆದ ಕೇಂದ್ರವಾಗಿ ರೂಪಗೊಂಡಿತ್ತು (ದೇವರಕೊಂಡಾರೆಡ್ಡಿ ೨೦೦೩).

೨೫೪. ದೇವರಕೊಂಡಾರೆಡ್ಡಿ (ಸಂ), ೨೦೦೩, ಮಾನ್ವಿ-೪೨, ಕುರುಡಿ-ಕ್ರಿ.ಶ. ೧೧೨೩, ಪುಟ ೨೫೯-೬೧.

೨೫೫. ಇದು ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಬಹುಪ್ರಸಿದ್ಧಿಯನ್ನು ಪಡೆದಿತ್ತು. ಹಾಗೆಯೇ ಕಲ್ಯಾಣ ಚಾಲುಕ್ಯರ ಪ್ರಮುಖ ಕೇಂದ್ರದಂತೆ ಭಾಸವಾಗುತ್ತದೆ. ಈ ಕಾಲಾವಧಿಯಲ್ಲಿ ಹೆಚ್ಚು ದಾನ ಪಡೆದ ಕೇಂದ್ರವೆಂದರೂ ತಪ್ಪಾಗಲಿಕ್ಕಿಲ್ಲ. ಈ ಕುರಿತು ಕಲ್ಲೂರು(೬೪)- ಕ್ರಿ.ಶ. ೧೦೮೦ ಹಾಗೂ ಕಲ್ಲೂರು (೬೬)- ಕ್ರಿ.ಶ.೧೧೯೬ರ ಶಾಸನಗಳು ಬಹುಮುಖ್ಯವಾಗಿವೆ(ದೇವರಕೊಂಡಾರೆಡ್ಡಿ ೨೦೦೩).

೨೫೬. ಬಲ್ಲಟಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡ ಭತ್ತ ಗ್ರಾಮ. ಹಾಗೆಯೇ ಆಡಳಿತ ಕೇಂದ್ರವೂ ಆಗಿತ್ತು. ಇದನ್ನು ಕುರಿತು ಕೆಲವು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಅವೆಂದರೆ ಬಲ್ಲಟಗಿ (೮೧)-ಕ್ರಿ.ಶ. ೧೦೨೮, ಬಲ್ಲಟಗಿ (೮೭)-ಕ್ರಿ.ಶ.೧೦೭೯, ಬಲ್ಲಟಗಿ(೯೦)-ಕ್ರಿ.ಶ. ೧೦೨೨, ಬಲ್ಲಟಗಿ(೯೨)-ಕ್ರಿ.ಶ. ೧೦೩೬, ಬಲ್ಲಟಗಿ (೯೫)-ಕ್ರಿ.ಶ. ೧೦೫೮, ಬಲ್ಲಟಗಿ (೧೦೦)-ಕ್ರಿ.ಶ. ೧೦೩೬ ಹಾಗೂ ಬಲ್ಲಟಗಿ (೯೬)-ಕ್ರಿ.ಶ. ೧೧೯೧ರ ಶಾಸನಗಳು ಮುಖ್ಯವಾಗಿವೆ(ದೇವರಕೊಂಡಾರೆಡ್ಡಿ ೨೦೦೩).

೨೫೭. ಇದು ರಾಷ್ಟ್ರಕೂಟರ ಕಾಲದಿಂದಲೂ ಪ್ರಾಮುಖ್ಯತೆಯನ್ನು ಪಡೆದಿತ್ತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮೊರಟ-೩೦೦ರ ರಾಜಧಾನಿ ಕೇಂದ್ರವಾಗಿ ಗುರುತಿಸಿಕೊಂಡಿತ್ತು. ಹಾಗೆಯೇ ಯುದ್ಧ ಭೂಮಿಯೂ ಆಗಿತ್ತು. ಹಾಗೆಯೇ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಇದನ್ನು ಕುರಿತು ಸಿರವಾರ (೭೪)-

ಕ್ರಿ.ಶ. ಒಂಬತ್ತನೆಯ ಶತಮಾನ, ಮಲ್ಲಟ(೧೦೨)-ಕ್ರಿ.ಶ. ೧೧೯೬, ಕವಿತಾಳ(೧೧೫)-ಕ್ರಿ.ಶ. ೧೨೧೭, ಕವಿತಾಳ(೧೧೬)-ಕ್ರಿ.ಶ. ೧೨೧೭ ಹಾಗೂ ಬಳಗಾನೂರು (೩೯)-ಕ್ರಿ.ಶ.೧೧೯೨ರ ಶಾಸನಗಳು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೫೮. ಈ ಆಡಳಿತ ವಿಭಾಗ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಇದು ತುಂಗಭದ್ರ ನದಿಯ ಉತ್ತರ ದಂಡೆಯ ಮೇಲಿರುವುದರಿಂದ ಹೆಚ್ಚು ಪ್ರಾಮುಖ್ಯತೆ ಪಡೆದಿತ್ತು. ಈ ಆಡಳಿತ ವಿಭಾಗದ ಉಲ್ಲೇಖಗಳು ಮುಕ್ಕುಂದಿ(೫)-ಕ್ರಿ.ಶ. ೧೧೩೪, ಮುಕ್ಕುಂದಿ(೬)-ಕ್ರಿ.ಶ.೧೧೩೪, ಮುಕ್ಕುಂದಿ(೯)-ಕ್ರಿ.ಶ. ೧೦೪೯, ಮುಕ್ಕುಂದಿ (೧೬)-ಕ್ರಿ.ಶ.೧೨ನೆಯ ಶತಮಾನ ಹಾಗೂ ಮುಕ್ಕುಂದಿ (೨೦)-ಕ್ರಿ.ಶ.೧೦೬೬ರ ಶಾಸನಗಳಲ್ಲಿ ಕಂಡುಬರುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೫೯. ಈ ಕೇಂದ್ರವನ್ನು ಕುರಿತು ಬಳಗಾನೂರು (೩೯)-ಕ್ರಿ.ಶ.೧೧೯೧ ಹಾಗೂ ಬಳಗಾನೂರು(೪೧)-ಕ್ರಿ.ಶ.೧೧೮೭ರ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ(ದೇವರಕೊಂಡಾರೆಡ್ಡಿ ೨೦೦೩).

೨೬೦. ದೇವರಕೊಂಡಾರೆಡ್ಡಿ, ೨೦೦೩, ಸಿಂಧನೂರು-೪೩, ಬನ್ನಿಗನೂರು-ಕ್ರಿ.ಶ.೯೧೧, ಪುಟ ೪೧೬.

೨೬೧. ದೇವರಕೊಂಡಾರೆಡ್ಡಿ, ೨೦೦೩, ಸಿಂಧನೂರು-೩೯ ಬೇವಿನೂರು-ಕ್ರಿ.ಶ. ೧೨ನೆಯ ಶತಮಾನ, ಪುಟ ೨೭೬.

೨೬೨. ದೇವರಕೊಂಡಾರೆಡ್ಡಿ, ೨೦೦೩, ಸಿಂಧನೂರು-೫೩, ಒಳಬಳ್ಳಾರಿ-ಕ್ರಿ.ಶ.೧೧೧೭, ಪುಟ ೪೨೨.

೨೬೩. ದೇವರಕೊಂಡಾರೆಡ್ಡಿ, ೨೦೦೩, ದೇವದುರ್ಗ-೩೧, ವೀರಗೋಟ-ಕ್ರಿ.ಶ.೧೨೨೩, ಪುಟ ೯೭-೯೯.

೨೬೪. ಇದು ವಿಜಯನಗರದ ಕಾಲದಲ್ಲಿ ಸೀಮೆಯಾಗಿತ್ತು. ಅಮರನಾಯಕರ ಆಡಳಿತ ಕೇಂದ್ರವಾಗಿತ್ತು. ಈ ಸೀಮೆಯನ್ನು ಉಲ್ಲೇಖಿಸುವ ಶಾಸನಗಳು ಇಲ್ಲಿವೆ. ಅವು ಮಸ್ಕಿ(೩೭)-ಕ್ರಿ.ಶ.೧೫೩೪, ಮಸ್ಕಿ(೩೯)-ಕ್ರಿ.ಶ. ೧೫೩೭ ಹಾಗೂ ಸುಲ್ತಾನಪುರ (೪೬)-ಕ್ರಿ.ಶ.೧೫೩೭ರ ಶಾಸನಗಳನ್ನು ಗಮನಿಸಬಹುದು (ದೇವರಕೊಂಡಾರೆಡ್ಡಿ ೨೦೦೩.)

೨೬೫. ಇದನ್ನು ಕುರಿತು ಗೋಣವಾಟ್ಲ (೧೫)-ಕ್ರಿ.ಶ. ೧೫೮೫ ಮತ್ತು ಚಿತ್ರನಾಳ(೫೪)-ಕ್ರಿ.ಶ. ೧೮-೧೯ನೆಯ ಶತಮಾನ ಶಾಸನಗಳು ಉಲ್ಲೇಖಿಸುತ್ತವೆ(ದೇವರಕೊಂಡಾರೆಡ್ಡಿ ೨೦೦೩).

೨೬೬. ದೇವರಕೊಂಡಾರೆಡ್ಡಿ, ೨೦೦೩, ಸಿಂಧನೂರು-೭, ಮುಕ್ಕುಂದಿ-ಕ್ರಿ.ಶ.೧೯೯೭, ಪುಟ ೩೫೮.

೨೬೭. ಈ ಸೀಮೆ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಪ್ರಮುಖವಾದುದಾಗಿತ್ತು. ಇದನ್ನು ಕುರಿತು ಉಲ್ಲೇಖಿಸುವ ಶಾಸನಗಳು ಕಂಡುಬರುತ್ತವೆ. ಅವೆಂದರೆ, ಮಾನ್ವಿ(೮)-ಕ್ರಿ.ಶ. ೧೫೫೩, ರಾಯಚೂರು(೬೧)-ಕ್ರಿ.ಶ. ೧೪೯೮-೯೯, ದೇವಸೂಗೂರು(೫೫)-ಕ್ರಿ.ಶ. ೧೭ನೆಯ ಶತಮಾನ, ದೇವಸೂಗೂರು (೫೬)-ಕ್ರಿ.ಶ. ೧೮ನೆಯ ಶತಮಾನ ಹಾಗೂ ದೇವಸೂಗೂರು(೬೭)-ಕ್ರಿ.ಶ.೧೫ನೆಯ ಶತಮಾನ ಮುಂತಾದ ಶಾಸನಗಳಾಗಿವೆ(ದೇವರಕೊಂಡಾರೆಡ್ಡಿ ೨೦೦೩).

೨೬೮. ವಿಜಯನಗರ ಕಾಲದ ಮಹತ್ವದ ಸೀಮೆಯಾಗಿತ್ತು. ಇದನ್ನು ಕುರಿತು ಮುಕ್ಕುಂದಿ (೪೧)-ಕ್ರಿ.ಶ.೧೫೫೬, ಸಿದ್ಧರಾಂಪುರ(೨೨)-ಕ್ರಿ.ಶ.೧೫೨೩, ಸಾಲಗುಂದೆ(೩)-ಕ್ರಿ.ಶ.೧೫೨೮, ಮುಕ್ಕುಂದಿ(೧೦)-ಕ್ರಿ.ಶ. ೧೫೮೫ ಹಾಗೂ ಮುಕ್ಕುಂದಿ(೧೧)-ಕ್ರಿ.ಶ.೧೫೪೪ರ ಶಾಸನಗಳಲ್ಲಿ ಗುರುತಿಸಲಾಗಿದೆ(ದೇವರಕೊಂಡಾರೆಡ್ಡಿ ೨೦೦೩.).

೨೬೯. ದೇವರಕೊಂಡಾರೆಡ್ಡಿ, ೨೦೦೩, ಮಾನ್ವಿ-೫೩, ಕುರುಡಿ-ಕ್ರಿ.ಶ. ೯ನೆಯ ಶತಮಾನ, ಪುಟ ೨೭೪.

೨೭೦ ಅದೇ, ರಾಯಚೂರು-೭, ಗುಂಜಹಳ್ಳಿ-ಕ್ರಿ.ಶ.೧೬೪೭, ಪುಟ ೮-೯.

೨೭೧. ಅದೇ, ದೇವದುರ್ಗ-೩೫, ಗಲಗ-ಕ್ರಿ.ಶ.೧೭೨೬, ಪುಟ ೧೦೩.

೨೭೨. ಅದೇ, ದೇವದುರ್ಗ-೪೫, ರಾಮದುರ್ಗ-ಕ್ರಿ.ಶ.೧೬೧೬, ಪುಟ ೧೧೨.

೨೭೩. ಕೃಷ್ಣಕೊಲ್ಹಾರ ಕುಲಕರ್ಣಿ, ೨೦೦೨, ಬಿಜಾಪುರ ಆದಿಲ್‌ಶಾಹಿ, ಸಿಕ್ಕಾಬ, ಆದಿಲ್‌ಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ, ಪುಟ ೧೮೬.

೨೭೪. ಧ್ರುವನಾರಾಯಣ ಎಂ.(ಸಂ), ೨೦೦೫, ಸುರಪುರ ಸಂಸ್ಥಾನದ ಇತಿಹಾಸ, ಶಕ್ತಿ ಪ್ರಕಾಶನ, ಬೆಂಗಳೂರು, ಪುಟ ೬-೭.

೨೭೫. ಅದೇ, ಪುಟ ೩೧.

೨೭೬. ಅದೇ, ಪುಟ ೪೭.

೨೭೭. ಅದೇ, ಪುಟ ೧೨೪.

೨೭೮. ಅದೇ, ಪುಟ ೩೧.

೨೭೯. ಅದೇ, ಪುಟ ೩೭.

೨೮೦. ಅದೇ, ಪುಟ ೨೯.

೨೮೧. ಅದೇ, ಪುಟ ೧.

೨೮೨. ಅಮರೇಶ ಯತಗಲ್, ೨೦೦೭, ಇತಿಹಾಸ ಇಂಚರ, ಆದಿತಿ ಪ್ರಕಾಶನ, ಲಿಂಗಸೂಗೂರು, ಪುಟ ೫೭.

□

ಅಧ್ಯಾಯ ಐದು

# ರಾಯಚೂರು ದೋ-ಅಬ್ ಪ್ರದೇಶದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ

---

೫.೧.

**ಭಾ**ರತದ ೫೬೫ ದೇಶೀಯ ಸಂಸ್ಥಾನಗಳಲ್ಲಿ ಹೈದರಾಬಾದ್ ನಿಜಾಮ ಸಂಸ್ಥಾನ ದೊಡ್ಡ ಸಂಸ್ಥಾನ. ಈ ಸಂಸ್ಥಾನದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟಗಳು ರೂಪುಗೊಂಡವು, ನಡೆದವು ಮತ್ತು ದಮನಕ್ಕೊಳಗಾದವು. ಈ ಸಂಸ್ಥಾನದ ಭಾಗವಾಗಿದ್ದ ರಾಯಚೂರು ಜಿಲ್ಲೆಯಲ್ಲಿಯೂ ಹೋರಾಟದ ಬಿಸಿ ಕಾಣಬಹುದಾಗಿದೆ. ರಾಯಚೂರು ಜಿಲ್ಲೆ ತೆಲಂಗಾಣ ಪ್ರದೇಶಕ್ಕೆ ಹೊಂದಿಕೊಂಡಿದೆ. ತೆಲಂಗಾಣದಲ್ಲಿ ೧೯೪೬ರಲ್ಲಿ ನಿಜಾಮ, ಜಮೀನ್ದಾರ ಮತ್ತು ರಜಾಕಾರರ ವಿರುದ್ಧ ಬಹುದೊಡ್ಡ ಪ್ರಮಾಣದ ಸಶಸ್ತ್ರ ರೈತ ಹೋರಾಟ ನಡೆಯಿತು. ಇದು ನಿಜಾಮನಿಗಿಂತ ಸ್ಥಳೀಯ ಜಮೀನ್ದಾರರ ವಿರುದ್ಧ ರೂಪಗೊಂಡ ಚಳವಳಿಯಾಗಿತ್ತು. ಇದು ಹೈದರಾಬಾದ್ ವಿಮೋಚನೆಗಾಗಿ ಹೋರಾಟ ಮಾಡಿತು. ಆದರೆ ಬೆಂಕಿ ಹೊತ್ತಿಕೊಂಡು ಉರಿಯುತ್ತಿದ್ದ ತೆಲಂಗಾಣ ಹೋರಾಟಕ್ಕೆ ರಾಯಚೂರು ಜಿಲ್ಲೆ ಬೆಂಬಲಿಸದಿರುವುದು ಕಂಡುಬರುತ್ತದೆ. ಎಸ್.ಕೆ. ವಸಂತರಾಜ್ ಅವರು ಹೇಳುವಂತೆ, "ತೆಲಂಗಾಣ ರೈತರ ಸಶಸ್ತ್ರ ಹೋರಾಟವನ್ನು ಅದರ ಪ್ರಾಮುಖ್ಯತೆ, ವ್ಯಾಪಕತೆ ದೃಷ್ಟಿಯಿಂದ ೧೮೫೭ರ ಪ್ರಥಮ ಸ್ವಾತಂತ್ರ್ಯ ಸಮರದೊಡನೆ ಮಾತ್ರ ಹೋಲಿಸಲು ಸಾಧ್ಯ. ಇವೆರಡು ಹೋರಾಟಗಳು ಜನ ಸಮಾಜ ದೊಡ್ಡ ಪ್ರಮಾಣದಲ್ಲಿ ಭಾಗವಹಿಸಿದ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಳು. ೧೮೫೭ರ ಹೋರಾಟ ಅರಸರು, ಪಾಳೆಯಗಾರರು ಬ್ರಿಟಿಶರಿಂದ ಪ್ರಾಮುಖ್ಯತೆ ಕಳೆದುಕೊಂಡ ಧಾರ್ಮಿಕ ಶಕ್ತಿಗಳ ನಾಯಕತ್ವದಲ್ಲಿ ಬ್ರಿಟಿಶರ ಆಗಮನದಿಂದ ದಿವಾಳಿಯೆದ್ದ ಬಡರೈತರು, ಕುಶಲ ಕುಲಕಸುಬಿಗರು ಮತ್ತು ಅತೃಪ್ತ ಸೈನಿಕರ ಬೆಂಬಲದಿಂದ ನಡೆದ ಹೋರಾಟ. ಈ ಹೋರಾಟದಲ್ಲಿ ಕೊನೆಯ ಭಾರತದ ಹಳೆಯ ಪಾಳೆಯಗಾರಿ ವರ್ಗ ಬ್ರಿಟಿಶ್ ವಿರೋಧಿ ಹೋರಾಟಕ್ಕೆ ನಾಯಕತ್ವ ಕೊಟ್ಟು ಸೋತು ಅವಮಾನಕಾರಿ ಒಪ್ಪಂದಕ್ಕೆ ಬಂದಿತು. ಈ ಅವಮಾನಕಾರಿ ಸಾಮ್ರಾಜ್ಯಶಾಹಿ ಪಾಳೆಯಗಾರಿ ಒಪ್ಪಂದದ, ಸಖ್ಯದ ವಿರುದ್ಧ ಸುಮಾರು ನೂರು ವರ್ಷಗಳ ನಂತರ ಹೊಸದಾಗಿ ಹುಟ್ಟಿದ ಕಾರ್ಮಿಕ ವರ್ಗದ ನಾಯಕತ್ವದಲ್ಲಿ ಪ್ರಥಮ ಬಾರಿ ರೈತ ಮತ್ತು ಇತರ ಜನಸಮೂಹ ನಡೆಸಿದ ತಾಂತ್ರಿಕ ಪಾಳೆಯಗಾರ ವಿರೋಧಿ, ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ ಇದು. ಈ ಹೋರಾಟ ಆಕಸ್ಮಿಕವೂ ಅಲ್ಲ ಅಥವಾ ಕಮ್ಯುನಿಸ್ಟ್ ಪಕ್ಷದ ಅಥವಾ ಆಂಧ್ರ ಮಹಾಸಭಾದ ಶಿಶುವೂ ಅಲ್ಲ. ರೈತರು ಮತ್ತು ಮಧ್ಯಕಾಲೀನ ಜಮೀನುದಾರಿ ಪದ್ಧತಿಯಲ್ಲಿನ ವೈರುಧ್ಯ ಬಹುಸಂಖ್ಯಾತ ಹಿಂದೂ ಪ್ರಜೆಗಳು ಮತ್ತು ಮುಸ್ಲಿಮ್ ಏಕಾಧಿಕಾರಿ ರಾಜನ ನಡುವಿನ ವೈರುಧ್ಯ, ಬಹುಸಂಖ್ಯಾತ ತೆಲುಗು, ಮರಾಠಿ, ಕನ್ನಡ ಮಾತನಾಡುವ ಪ್ರಜೆಗಳು ಮತ್ತು ಆಡಳಿತ ಭಾಷೆ ಉರ್ದು ಹೇರಿಕೆಯಲ್ಲಿನ ವೈರುಧ್ಯ, ಅದೇ ತಾನೆ ಜನ್ಮ ತಾಳಿದ ಭಾರತ ಒಕ್ಕೂಟ ಮತ್ತು ನಿಜಾಮನ ರಾಜ್ಯಾಡಳಿತದ ಹೈದರಾಬಾದು ರಾಜ್ಯ ಹೇಗೆ ಬಹಳಷ್ಟು ವೈರುಧ್ಯಗಳು ಒಂದೇ ಕಾಲದಲ್ಲಿ ಒಂದೇ ಪ್ರದೇಶದಲ್ಲಿ ಉತ್ಕಟಗೊಂಡಾಗ ಹುಟ್ಟಿದ ಚಳವಳಿ ತೆಲಂಗಾಣ ರೈತರ

ಸಶಸ್ತ್ರ ಹೋರಾಟ. ತೆಲಂಗಾಣ ಚಳವಳಿಗೂ ಉಳಿದ ರೈತ ಚಳವಳಿಗೂ ಇರುವ ಪ್ರಮುಖ ವ್ಯತ್ಯಾಸವೆಂದರೆ ಅದು ಜಾರಿಗೆ ತಂದ ವ್ಯಾಪಕ ಸುಧಾರಣೆಗಳು ಪಾಳೆಯಗಾರಿ ಪದ್ಧತಿಯನ್ನು ಸೀಮಿತ ಅವಧಿಯಲ್ಲಿ ಮತ್ತು ಪ್ರದೇಶದಲ್ಲಿಯಾದರೂ ನಿರ್ನಾಮ ಮಾಡಿದ್ದು, ಒಂದೂವರೆ ವರ್ಷಗಳ ಕಾಲ ರೈತರ ನಾಯಕತ್ವದಲ್ಲಿ ಗ್ರಾಮರಾಜ್ಯ ಸ್ಥಾಪಿಸಿದ್ದು, ತೆಲಂಗಾಣ ಹೋರಾಟ ಇನ್ನೂ ಹಲವು ಕಾರಣಗಳಿಗಾಗಿ ಗಮನಾರ್ಹವಾಗಿದೆ. ಇದು ಮೊದಲಬಾರಿಗೆ ಭಾರತದ ಸಮಸ್ಯೆಗಳನ್ನು ಪರಿಹರಿಸಲು ದೇಶದ ಕೃಷಿ ಸಂಬಂಧಗಳಲ್ಲಿ ಮೂಲಭೂತ ಬದಲಾವಣೆಯ ಅನಿವಾರ್ಯತೆ ಮತ್ತು ತುರ್ತು ಅಗತ್ಯತೆಯನ್ನು ಬಲವಾಗಿ ದೇಶದ ಮುಂದಿರಿಸಿತು. ಕಾಂಗ್ರೆಸ್‌ನಂತಹ ಆಳುವ ವರ್ಗದ ಪಕ್ಷಗಳು ಸಹ ಭೂ ಸುಧಾರಣೆಯನ್ನು ಅಂಗೀಕರಿಸಿದ್ದು, ಈ ಹೋರಾಟದ ನೇರ ಫಲ. ಮುಂದೆ ಕಾಂಗ್ರೆಸ್ ಸರ್ಕಾರಗಳು ಮಾಡಿದ ಅರೆಮನಸ್ಸಿನ, ತಡವರಿಕೆಯ, ಅಸಮರ್ಪಕ ಭೂಸುಧಾರಣೆಯ ಪ್ರಯತ್ನಗಳೆಲ್ಲ ತೆಲಂಗಾಣ ಹೋರಾಟದಂತಹ ವ್ಯಾಪಕ ಹೋರಾಟದ ಬೆದರಿಕೆಯಿಂದ ಆದಂತಹವು. ವಿನೋಬಾರ ಕನಸಿನ ಲೋಕದ ಭೂದಾನ, ಗ್ರಾಮದಾನ ಚಳವಳಿಗಳು ಸಹ ಈ ಹೋರಾಟದ ಭಯದಿಂದ ಹುಟ್ಟಿದಂತಹುದು ಪೊಲೀಸ್ ಕಾರ್ಯಾಚರಣೆಯ ನಂತರ ವಿನೋಬಾ ತೆಲಂಗಾಣ ಪ್ರದೇಶದಲ್ಲೇ ಭೂದಾನ ಆರಂಭಿಸಿದರು ಎಂಬುದು ಗಮನಾರ್ಹವಾಗಿದೆ"(ವಸಂತರಾಜ್ ೨೦೧೦:೨೯).

ತೆಲಂಗಾಣ ಜಮೀನ್ದಾರ ಪದ್ಧತಿಗಿಂತ ರಾಯಚೂರು ಜಿಲ್ಲೆ ಅಷ್ಟೇನೂ ಭಿನ್ನವಾಗಿಲ್ಲ ಎನ್ನಬಹುದು. ತೆಲಂಗಾಣ ಜಮೀನ್ದಾರರಂತೆ ಈ ಜಿಲ್ಲೆಯ ಜಮೀನ್ದಾರರೂ ೧೦೦ ರಿಂದ ೧೦೦೦, ೨೦೦೦, ೩೦೦೦ ಎಕರೆ ಭೂಮಿ ಹೊಂದಿರುವುದನ್ನು ಗಮನಿಸಬಹುದಾಗಿದೆ. ಈ ಪ್ರದೇಶದ ವಿಮೋಚನಾ ಹೋರಾಟ ರಾಯಚೂರು ಪಟ್ಟಣಕ್ಕೆ ಮಾತ್ರ ಸೀಮಿತವಾಗಿತ್ತು. ಪಟ್ಟಣದಾಚೆ ೧೯೪೭-೧೯೪೮ ಸೆಪ್ಟೆಂಬರ್ ೧೭ರವರೆಗೆ ಭೂಗತವಾಗಿ ಹೋರಾಡಿದ್ದು ಕಂಡುಬರುತ್ತದೆ. ಇದು ಈ ಪ್ರದೇಶದ ವಿಮೋಚನೆಗಾಗಿ ಮಾಡಿದ ಪ್ರಮುಖ ಪ್ರಯತ್ನವಾಗಿದೆ.

ಈ ಅಧ್ಯಾಯದ ಮೂರು ಭಾಗಗಳಲ್ಲಿ ಮೊದಲನೆಯದು ರಾಯಚೂರು ಜಿಲ್ಲೆಯ ಆರಂಭಿಕ ಸ್ವಾತಂತ್ರ್ಯ ಹೋರಾಟದ ಹಾದಿಯನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಿದೆ. ಎರಡನೆಯ ಭಾಗದಲ್ಲಿ ೧೯೪೭ ಆಗಸ್ಟ್ ೧೫ರ ನಂತರದ ವಿಮೋಚನಾ ಹೋರಾಟದ ಸ್ವರೂಪವನ್ನು ನೀಡಲಾಗಿದೆ. ಈ ಭಾಗದ ನಾಲ್ಕು ಉಪ ವಿಭಾಗಗಳಲ್ಲಿ ಮೊದಲನೆಯ ವಿಭಾಗದಲ್ಲಿ ಲೆವಿ ವಿರೋಧಿ ಚಳವಳಿ, ಎರಡನೆಯ ವಿಭಾಗದಲ್ಲಿ ಒಕ್ಕೂಟ ಸೇರಿ ಚಳವಳಿ, ಮೂರನೆಯ ವಿಭಾಗದಲ್ಲಿ ಗಡಿ ಶಿಬಿರಗಳ ಸ್ಥಾಪನೆ ಹಾಗೂ ನಾಲ್ಕನೆಯ ವಿಭಾಗದಲ್ಲಿ ಭೂಗತ ಚಳವಳಿ ಕುರಿತು ಅವಲೋಕಿಸಲಾಗಿದೆ. ಮೂರನೆಯ ಭಾಗದಲ್ಲಿ ಭಾರತ ಯೂನಿಯನ್ ಸರ್ಕಾರದ ಮಧ್ಯ ಪ್ರವೇಶವನ್ನು ಕುರಿತು ವಿವರಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಸೂರ್ಯನಾಥ ಕಾಮತ್, ಬಿ.ಸಿ.ಮಹಾಬಲೇಶ್ವರಪ್ಪ, ಎಂ. ಧ್ರುವನಾರಾಯಣ, ರಾಮಣ್ಣ ಹವಳೆ, ಅಮರೇಶ ನುಗಡೋಣಿ, ಗೋಪಾಲ ರಾವ್ ಹೇಜೀಬ್, ಬಿಪನ್‌ಚಂದ್ರ, ಹಾಗೂ ಎನ್.ಪಿ.ಶಂಕರನಾರಾಯಣ ರಾವ್, ಶುಭಾ ಮುಂತಾದವರ ಬರಹಗಳನ್ನು ಬಳಸಿಕೊಳ್ಳಲಾಗಿದೆ. ಈ ಪ್ರದೇಶದ ಸ್ವಾತಂತ್ರ್ಯ ಹೋರಾಟವನ್ನು ಕುರಿತು ಗಮನ ಸೆಳೆದವರು ಸೂರ್ಯನಾಥ ಕಾಮತ್ ಎಂದರೆ ತಪ್ಪಾಗಲಿಕ್ಕಿಲ್ಲ. ಇಲ್ಲಿನ ಹೋರಾಟಗಳು ಬಹುತೇಕ ಸಾಂಘಿಕವಾಗಿರಲಿಲ್ಲ. ಮಾತ್ರವಲ್ಲ ಭೂಗತವೂ ಆಗಿದ್ದವು. ಹೋರಾಟಗಾರರ ಹೋರಾಟದ ಸ್ವರೂಪವನ್ನು ಮೌಖಿಕ ಸಂದರ್ಶನದ ಮೂಲಕ ಬೆಳಕಿಗೆ ತಂದದ್ದು ಗಂಭೀರ ಪ್ರಯತ್ನವಾಗಿದೆ.

## ೫.೨. ಆರಂಭಿಕ ಹಂತದ ಸ್ವಾತಂತ್ರ್ಯ ಹೋರಾಟದ ಹಾದಿ

ರಾಯಚೂರು ಜಿಲ್ಲೆ ಕೃಷಿ ಪ್ರಧಾನ ಜಿಲ್ಲೆಯಾಗಿದೆ. ಇಲ್ಲಿ ದುಡಿಯುವ ವರ್ಗ ಹೆಚ್ಚಿನ ಪ್ರಮಾಣದಲ್ಲಿದೆ. ನಂಜುಂಡಪ್ಪ ವರದಿ ಪ್ರಕಾರ ಏಷ್ಯಾದಲ್ಲಿ ಇದು ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ೨೦೦೨ರ ಈ ವರದಿಯನ್ನು ಚರ್ಚಿಸಿದ ನಂತರ ಸ್ವಾತಂತ್ರ್ಯ ಹೋರಾಟ ಕುರಿತು ಗಮನಿಸೋಣ.

ಡಿ.ಎಂ. ನಂಜುಂಡಪ್ಪ ವರದಿ ಈ ಪ್ರದೇಶದ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳ ಹಿನ್ನೆಲೆಯಲ್ಲಿ ಹಿಂದುಳಿದಿರುವಿಕೆಯನ್ನು ಸೂಚಿಸುತ್ತದೆ. ಶೈಕ್ಷಣಿಕವಾಗಿ ಅಕ್ಷರಸ್ಥರ ಸಂಖ್ಯೆಗಿಂತ, ಅನಕ್ಷರಸ್ಥರ ಸಂಖ್ಯೆಯೇ ಅಧಿಕವಾಗಿದೆ. ಈ ಅಂಶ ನಿಜಾಮ ಕಾಲದಿಂದ ನಂಜುಂಡಪ್ಪ ವರದಿ ಅಧ್ಯಯನ ಕಾಲದವರೆಗೆ ಮುಂದುವರೆದಿದೆ. ಸಾಮಾಜಿಕ ಅಸಮಾನತೆಯನ್ನು ಎದುರಿಸದವರು, ಆರ್ಥಿಕ ಸಂಕಷ್ಟಕ್ಕೆ ಸಿಲುಕದವರು ಶಿಕ್ಷಣವನ್ನು ಪಡೆಯಲು ಅರ್ಹರೆಂಬ ನಿಯಮ ಜಾರಿಯಲ್ಲಿತ್ತು. ಅಂದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲಿದ್ದವರು ಮತ್ತು ಆರ್ಥಿಕವಾಗಿ ಬಲಾಢ್ಯರಾಗಿದ್ದವರು ಶಿಕ್ಷಣ ಪಡೆದವರಾಗಿದ್ದರು. ರಾಮಣ್ಣ ಹವಳೆ ಅವರ ಮಾತಿನಂತೆ "ಸಾಮಾನ್ಯವಾಗಿ ೪೬ ಹಳ್ಳಿಗಳಿಗೆ ಒಂದರಂತೆ ಪ್ರಾಥಮಿಕ ಶಾಲೆಗಳು ಇದ್ದವು. ಶಾಲೆಗಳಿಲ್ಲದ ಹಳ್ಳಿಗಳಲ್ಲಿ ೫೦೦ ಗಾಂವಂಟಿ ಶಾಲೆಗಳು ಇದ್ದವು, ಅಲ್ಲದೆ ಅಯ್ಯನವರ ಶಾಲೆಗಳಿದ್ದವು. ಇವನ್ನು ಮಠಗಳ ಶಾಲೆಗಳೆಂದು ಕರೆಯುತ್ತಿದ್ದರು. ಶಿಕ್ಷಣ ಸಾರ್ವತ್ರಿಕವಾಗಿದ್ದರೂ ಗೌಡ, ಪಟೇಲ, ಶ್ರೀಮಂತ ವ್ಯಾಪಾರ ವರ್ಗವನ್ನು ದಾಟಿ ಬರಲಿಲ್ಲ"(ಹವಳೆ ೨೦೧೦:೬೧-೬೫). ಅಮರೇಶ ನುಗಡೋಣಿ ಅವರ ಮಾತಿನಲ್ಲೂ ಈ ವಿಚಾರವನ್ನು ಗಮನಿಸ ಬಹುದಾಗಿದೆ. "ಬ್ರಿಟಿಶರ ಅಧೀನದಲ್ಲಿ ನಿಜಾಮರಿದ್ದರು. ನಿಜಾಮರ ಅಧೀನದಲ್ಲಿ ಜಹಗೀರ್‌ದಾರರಿದ್ದರು. ಇವರ ಅಧೀನದಲ್ಲಿ ದೇಶಮುಖ, ದೇಸಾಯಿ, ಪಟೇಲ, ಗೌಡ, ಸಾಹುಕಾರರಿದ್ದರು. ಜನಸಾಮಾನ್ಯರು ಇವರ ಅಧೀನದಲ್ಲಿದ್ದರು"(ನುಗಡೋಣಿ ೨೦೧೦:೧೨೭). ಈ ಹಿನ್ನೆಲೆಯಲ್ಲಿ ಶಿಕ್ಷಣ ಪಡೆದವರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಪ್ರಬಲವಾಗಿದ್ದವರು ಎಂಬುದು ಕಂಡುಬರುವ ಸಂಗತಿ.

ರಾಯಚೂರು ಜಿಲ್ಲೆಯ ಬಹುತೇಕ ಹೋರಾಟಗಾರರು ಹೈದರಾಬಾದ್, ಪೂನಾ ಮುಂತಾದ ಆಯಕಟ್ಟಿನ, ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಹೈದರಾಬಾದ್‌ನ ಉಸ್ಮಾನಿಯ ವಿಶ್ವವಿದ್ಯಾಲಯ ಪ್ರಮುಖ ಶಿಕ್ಷಣ ಕೇಂದ್ರವಾಗಿತ್ತು. ಅಲ್ಲಿಯೇ ಶಿಕ್ಷಣ ಪಡೆದ ಈ ಪ್ರದೇಶದ ಅನೇಕರು ಹೈದರಾಬಾದಿನಲ್ಲಿ ವಿವಿಧ ರಾಜಕೀಯ ಮುಖಂಡರುಗಳ ಜೊತೆ ಒಡನಾಟವನ್ನು ಹೊಂದಿದ್ದರು. ಕಾಲಕ್ರಮೇಣ ಈ ಪ್ರದೇಶದ ವಿಮೋಚನೆಗಾಗಿ ಹೋರಾಟದ ಮುಖಂಡತ್ವವನ್ನೂ ವಹಿಸಿದರು. ರಾಜಕೀಯ ಜಾಗೃತಿ ಹಂತ ಹಂತವಾಗಿ ಮೂಡಿತೆನ್ನಬಹುದು. ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಮೊದಲು ಚಾಲನೆ ದೊರೆತದ್ದು ರಾಯಚೂರಿನಿಂದ ಎಂಬುದು ಗಮನಾರ್ಹ.

ಈ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಕಲ್ಪನೆ ಬಿತ್ತಲು, ಹೋರಾಟ ಆರಂಭಿಸಲು, ಈ ಕುರಿತು ಜನರ ಮೇಲೆ ಪ್ರಭಾವ ಬೀರಲು ಪಂಡಿತ ತಾರಾನಾಥ ಅವರೇ ಸ್ಫೂರ್ತಿ ಎನ್ನಬಹುದು. ಅವರೊಂದಿಗೆ ರಾಷ್ಟ್ರೀಯ ನಾಯಕರ ಪ್ರಭಾವವೂ ಕಂಡುಬರುತ್ತದೆ. ೧೯೨೦ರಲ್ಲಿ ಗಾಂಧೀಜಿಯವರು ಮದ್ರಾಸಿನಿಂದ ಮುಂಬಯಿಗೆ ರಾಯಚೂರು ಮಾರ್ಗವಾಗಿ ಪ್ರಯಾಣ ಬೆಳೆಸಿದ್ದರು. ಆಗ ವಿದೇಶಿ ಬಟ್ಟೆಗಳ ಬಹಿಷ್ಕಾರಕ್ಕೆ ಕರೆ ನೀಡಿದ್ದರು. ಈ ಸಂದರ್ಭದಲ್ಲಿ ಇಲ್ಲಿಯ ಪ್ರಮುಖರೆಲ್ಲರೂ ವಿದೇಶಿ

ವಸ್ತುಗಳನ್ನು ಬಹಿಷ್ಕರಿಸಿದರು. "೧೯೨೧-೨೨ರಲ್ಲಿ ಗಾಂಧೀಜಿಯವರು ಅಸಹಕಾರ ಚಳವಳಿಗೆ ಕರೆಕೊಟ್ಟಾಗ ಪೂನಾದಲ್ಲಿಯ ಫರ್‌ಗ್ಯೂಸನ್ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ ಅಡವಿರಾವ್ ಫಡ್ನವೀಸ್ ಅವರು ಕಾಲೇಜು ತೊರೆದು ರಾಯಚೂರಿನಲ್ಲಿ ರಾಷ್ಟ್ರೀಯ ಜಾಗೃತಿಗಾಗಿ ಶ್ರಮಿಸಿದರೆಂದು ತಿಳಿದುಬರುತ್ತದೆ"(ಧ್ರುವನಾರಾಯಣ ೧೯೭೧: ೨೯-೩೦). ಇವರೊಂದಿಗೆ ರಾ.ಗು. ಜೋಶಿ, ವೀರಣ್ಣ ಮಾಸ್ತರರು ಮತ್ತು ಗುಡಿಹಾಳ ಹನುಮಂತರಾಯರು ಆರಂಭಿಕ ಸ್ವಾತಂತ್ರ್ಯ ಹೋರಾಟದ ನಾಯಕರಾಗಿ ಗುರುತಿಸಿಕೊಂಡರು. ಆರಂಭದಲ್ಲಿ ಇವರಾರೂ ತೀವ್ರ ಪ್ರತಿಭಟನೆಗೆ ಇಳಿಯಲಿಲ್ಲ. ಅಂದು ರಾಜಕೀಯ ಜಾಗೃತಿ ಮೂಡಿಸುವುದು ಅಗತ್ಯವಿತ್ತು. ಸಂಘ, ಸಂಸ್ಥೆ, ವಾಚನಾಲಯ, ಕ್ಲಬ್ ಮತ್ತು ಇತರೆ ಕೇಂದ್ರಗಳನ್ನು ಸ್ಥಾಪಿಸುವ ಮೂಲಕ ರಾಜಕೀಯ ಜಾಗೃತಿಗೆ ಪ್ರಯತ್ನಿಸಿರುವುದು ಕಂಡುಬರುತ್ತದೆ. ನಿರಂಕುಶಮತಿಯಾದ ನಿಜಾಮ ಮತ್ತು ರಜಾಕಾರರನ್ನು ಎದುರಿಸಲು ಜನರ ಅಗತ್ಯವಿತ್ತು. ಜನರನ್ನು ಒಂದೆಡೆ ಕಲೆ ಹಾಕುವ ಪ್ರಯತ್ನಗಳು ನಡೆದವು. ಈ ಹಿನ್ನೆಲೆಯಲ್ಲಿ ೧೯೨೪-೨೫ರಲ್ಲಿ ಬಾಬಿಲಿ ಮಾಸ್ತರ ಪ್ರೋತ್ಸಾಹದಿಂದ ಮೊದಲನೆಯ ಉಚಿತ ವಾಚನಾಲಯವನ್ನು ರಾಯಚೂರಿನಲ್ಲಿ ಸ್ಥಾಪಿಸಲಾಯಿತು. ಇದರ ಮೊದಲನೆಯ ಸಭೆಯನ್ನು ಆನಂದರಾಯನ ಗುಡಿಯಲ್ಲಿ ಕರೆಯಲಾಗಿತ್ತು. ಅಲ್ಲಿ ಪಿ. ಕಿಶನರಾಯರೂ ಮತ್ತು ಲಾತೂರು ವೆಂಕೋಬರಾವ್ ಅವರು ಭಾಷಣ ಮಾಡಿದರು. ಇದರ ನಿರ್ವಹಣೆಯನ್ನು ರಾ.ಗು. ಜೋಶಿಯವರಿಗೆ ವಹಿಸಲಾಗಿತ್ತೆಂದು ತಿಳಿದುಬರುತ್ತದೆ. ಇದೇ ಗುಡಿಯ ಬಳಿ "ಯಂಗ್ಸ್‌ಮೆನ್ಸ್ ಟೆನ್ನಿಸ್ ಮತ್ತು ಬ್ಯಾಟಮಿಂಟನ್ ಕ್ಲಬ್" ಕೂಡ ಇದೇ ಸಮಯದಲ್ಲಿ ಆರಂಭವಾಯಿತೆಂದು ತಿಳಿದುಬರುತ್ತದೆ (ಧ್ರುವನಾರಾಯಣ ೧೯೭೧: ೩೧-೩೨).

೧೯೨೦ರಲ್ಲಿ ಹಮ್‌ದರ್ದ್ ಶಾಲೆಯ ಸ್ಥಾಪನೆಯಾಯಿತು. ಅಲ್ಲಿ ೧೯೨೬ರಲ್ಲಿ ಕರ್ನಾಟಕದ ಗಾಂಧಿ ಹರ್ಡೇಕರ್ ಮಂಜಪ್ಪನವರಿಂದ ಭಾಷಣ ನಡೆಯಿತು. ೧೯೨೮ರಲ್ಲಿ ಕರ್ನಾಟಕ ತರುಣ ಸಂಘದ ಸ್ಥಾಪನೆಯಾಯಿತು. ಇದು ನಂತರದ ಕಾಲದಲ್ಲಿ ತನ್ನ ಹೆಸರನ್ನು ಕರ್ನಾಟಕ ಸಂಘವೆಂದು ಬದಲಿಸಿಕೊಂಡಿತು. ಈ ಸಂಘದ ಮೂಲಕ ಅನೇಕ ಚಟುವಟಿಕೆಗಳು ನಡೆದವು. ಇದರ ಆಶ್ರಯದಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ(೧೯೩೪), ಆಯುರ್ವೇದ ಸಮ್ಮೇಳನ, ಮಕ್ಕಳ ಸಮ್ಮೇಳನ, ನಿಜಾಂ ಕರ್ನಾಟಕ ಪರಿಷತ್ತು ಹಾಗೂ ರಾಯಚೂರಿನ ಎಲ್ಲ ವಿಧದ ಸಾರ್ವಜನಿಕ ಸಾಂಸ್ಕೃತಿಕ ಚಟುವಟಿಕೆಗಳು ನಡೆದವು. ೧೯೨೬-೨೮ರಲ್ಲಿ ಖಾದಿ ಭಂಡಾರವನ್ನು ಸ್ಥಾಪಿಸಲಾಯಿತು (ಧ್ರುವನಾರಾಯಣ ೧೯೭೧: ೩೩-೩೫). ಈ ಎಲ್ಲ ಚಟುವಟಿಕೆಗಳು ಮತ್ತು ಸಭೆ, ಸಮಾರಂಭಗಳನ್ನು ಆಯ್ದ ಕೆಲವೇ ಸ್ಥಳಗಳಲ್ಲಿ ಹಾಗೂ ಮನೆಗಳಲ್ಲೆ ನಡೆಸಲಾಗುತ್ತಿತ್ತು. ರಾಯಚೂರಿನಲ್ಲಿ ಸ್ವಾತಂತ್ರ್ಯ ಹೋರಾಟ ಆರಂಭವಾಗಿ ಹೈದರಾಬಾದ್ ಸಂಸ್ಥಾನದಾದ್ಯಂತ ಅದರ ತೀವ್ರತೆ ಹೆಚ್ಚಿತು. ಹೈದರಾಬಾದ್‌ನ ಮೂರು ಪ್ರಾಂತಗಳ ಮುಖಂಡರು ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸ್ಥಾಪನೆಗೆ ಅವಕಾಶ ಮಾಡಿಕೊಡಬೇಕೆಂದು ರಾಷ್ಟ್ರೀಯ ನಾಯಕರನ್ನು ಒತ್ತಾಯಿಸಿದರು. ಇದರ ಪರಿಣಾಮವಾಗಿ "ಕಾಂಗ್ರೆಸ್ ನಾಯಕರಲ್ಲಿ ಸಂಸ್ಥಾನೀ ಜನರ ಬೆಂಬಲ ಗಳಿಸಿ ತಾವು ಪ್ರಬಲರಾಗುವ ಆಕಾಂಕ್ಷೆ ಮೂಡಿತು. ಹಾಗಾಗಿ ಹರಿಪುರ ಕಾಂಗ್ರೆಸ್ ಅಧಿವೇಶನದಲ್ಲಿ ಚರ್ಚೆ ನಡೆಸಿದ ತರುವಾಯ ಕ್ರಿ.ಶ. ೧೯೩೮ರಲ್ಲಿ ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸ್ಥಾಪನೆಯಾಯಿತು"(ಕಾಮತ್ ೧೯೭೭: ೧೯೫). ೧೯೪೨ರಲ್ಲಿ ರಾಯಚೂರಿನಲ್ಲಿ ನಾರಾಯಣಪ್ಪ ಗಾಣಧಾಳ ಅವರ ನೇತೃತ್ವದಲ್ಲಿ ಚಲೇಜಾವ್ ಚಳವಳಿಯ ಮನವಿ

ಪತ್ರವನ್ನು ಜಿಲ್ಲಾಧಿಕಾರಿಗಳಿಗೆ ನೀಡಲು ಹೋಗುತ್ತಿದ್ದರು. ಆಗ ಈ ಸತ್ಯಾಗ್ರಹದ ಸುದ್ದಿ ಕಾಡ್ಗಿಚ್ಚಿನಂತೆ ಊರೆಲ್ಲ ವ್ಯಾಪಿಸಿತು. ಜನ ತಂಡೋಪತಂಡವಾಗಿ ಸೇರಿ ಮೆರವಣಿಗೆಯ ಹಿಂದೆ ಹೊರಟಿತು. ಗೋಲ್ಖಾಣದಿಂದ ಸಾತ್‌ಕಚೇರಿಗೆ ಹೊರಟಿದ್ದ ಜನ ಘೋಷಣೆ ಮಾಡುತ್ತಿದ್ದರೆ ಹೊರತು ಯಾವ ಧಾಂದಲೆಯಲ್ಲೂ ನಿರತರಾಗಿರಲಿಲ್ಲ(ಹವಳೆ ೨೦೧೦:೯೫-೯೬). ೧೯೪೭ ಆಗಸ್ಟ್ ೧೫ ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಆದರೆ ಹೈದ್ರಾಬಾದ್ ಪ್ರಾಂತ್ಯದ ನಿಜಾಮ ತಾನು ಭಾರತ ಒಕ್ಕೂಟಕ್ಕೆ ಸೇರದೆ ಸ್ವತಂತ್ರ ರಾಜನೆಂದು ಘೋಷಿಸಿಕೊಂಡನು. ಈ ಸಮಯದಲ್ಲಿ ರಾತ್ರಿ ೧೯೪೭ ಆಗಸ್ಟ್ ೧೪ರ ಮಧ್ಯರಾತ್ರಿ ಎಂ. ನಾಗಪ್ಪ ಅವರು ತಿರಂಗ ರಾಷ್ಟ್ರಧ್ವಜವನ್ನು ಸಾತ್ ಕಛೇರಿಯ ಮೇಲೆ ಹಾರಿಸಿದರು(ಧ್ರುವನಾರಾಯಣ ೧೯೭೧: ४೮).

೧೯೨೦ರಿಂದ ೧೯೪೭ರವರೆಗೆ ನಡೆದ ಸ್ವಾತಂತ್ರ್ಯ ಹೋರಾಟದ ಹಾದಿ ಜನರಿಗೆ ಉಪಯುಕ್ತ ಮಾರ್ಗದರ್ಶನ ನೀಡುವಲ್ಲಿ ವಿಫಲವಾಯಿತೆನ್ನಬಹುದಾಗಿದೆ. ಇಲ್ಲಿನ ಹೋರಾಟಗಾರರು ಚಳವಳಿಗೆ ಮಾರ್ಗದರ್ಶನ ನೀಡಲು, ಪರಿಣಾಮಕಾರಿಯಾದ ನಾಯಕತ್ವವನ್ನು ನೀಡಲು ಅಥವಾ ಪರಿಣಾಮಕಾರಿ ಸಂಸ್ಥೆಯನ್ನು ರೂಪಿಸಲು ಸಾಧ್ಯವಾಗಲಿಲ್ಲ. ಅವರು ಜನರನ್ನು ಜಾಗೃತಿಗೊಳಿಸಲು ಪ್ರಯತ್ನಿಸಿದರು. ಉದಾಹರಣೆಗೆ ೧೯೪೨ರ ಚಲೇಜಾವ್ ಚಳವಳಿಯ ಗೋಲ್ಖಾನ ಪ್ರತಿಭಟನೆ ಜನರನ್ನು ಹೇಗೆ ಆಕರ್ಷಿಸಬೇಕು, ಅವರನ್ನು ಹೇಗೆ ಸಜ್ಜುಗೊಳಿಸಬೇಕು ಅಥವಾ ಜನರಲ್ಲಿ ಹೊಸದಾಗಿ ಕಾಣುತ್ತಿರುವ ಶಕ್ತಿಯನ್ನು ಹೇಗೆ ಬಳಸಿಕೊಳ್ಳಬೇಕು ಅಥವಾ ರಾಜಕೀಯ ಹೋರಾಟದ ಹೊಸ ವಿಧಾನಗಳನ್ನು ಹೇಗೆ ರೂಪಿಸಬೇಕೆಂದು ತಿಳಿದಿರಲಿಲ್ಲ. ಇವರು ಈ ಪ್ರದೇಶದ ನಿಜವಾದ ಜನಸಮೂಹ ರೈತರನ್ನು ತಲುಪುವಲ್ಲಿ ವಿಫಲರಾದರು. ಇದು ರಾಯಚೂರು ಪಟ್ಟಣಕ್ಕೆ ಮಾತ್ರ ಸೀಮಿತವಾಗಿತ್ತು. ಬಹುತೇಕವಾಗಿ ಈ ಹೋರಾಟದಲ್ಲಿ ಭಾಗವಹಿಸಿದವರು ನಗರವಾಸಿಗಳು ಮತ್ತು ಶ್ರೀಮಂತರು, ಹಳ್ಳಿಯಿಂದ ಬಂದು ನಗರಕ್ಕೆ ಶಿಕ್ಷಣ ಕಲಿಯಲು ಬಂದವರು ಜಮೀನ್ದಾರರಾಗಿದ್ದರು.

ರಾಯಚೂರು ಜಿಲ್ಲೆಯ ಹೋರಾಟಗಾರರು ರಾಷ್ಟ್ರೀಯವಾದಿಗಳಾಗಿದ್ದರು. ಪಕ್ಕದಲ್ಲಿಯೇ ತೆಲಂಗಾಣದಲ್ಲಿ ಸಮಾಜವಾದಿ ಹೋರಾಟ ತೀವ್ರವಾಗಿ ನಡೆದಿತ್ತು. ಅಲ್ಲಿನ ಹೋರಾಟದ ಒಂದು ತುಣುಕಾದರೂ ಇಲ್ಲಿ ಕಾಣುವುದಿಲ್ಲ. ಸಮಾಜವಾದದ ಹೋರಾಟವನ್ನು ಇವರು ಬೆಂಬಲಿಸಲಿಲ್ಲ, ಇವರು ಯಾರ ಉಳಿವಿಗಾಗಿ ಹೋರಾಟ ನಡೆಸಿದರು, ಹಾಗಾದರೆ ಸ್ವಾತಂತ್ರ್ಯ ಯಾರಿಗೆ ಸಿಕ್ಕಿತು, ತೆಲಂಗಾಣ ಹೋರಾಟ ಯಾರ ವಿರುದ್ಧ, ಯಾರ ಉಳಿವಿಗಾಗಿ ನಡೆಯಿತೆಂಬುದನ್ನು ಗಮನಿಸುವುದು ಅಗತ್ಯವಿದೆ.

ದೇಶೀಯ ಸಂಸ್ಥಾನಗಳಲ್ಲಿ ಅತ್ಯಂತ ದೊಡ್ಡದಾದ ಹೈದರಾಬಾದಿನಲ್ಲಿ ೧೯೪೬ರಿಂದ ೫೧ರ ವರೆಗೆ ನಡೆದ ತೆಲಂಗಾಣ ಹೋರಾಟ ಹಲವು ದೃಷ್ಟಿಗಳಿಂದ ವಿಶಿಷ್ಟವಾದುದು. ಅದು ಸಂಸ್ಥಾನೀ ಜನರ ಹೋರಾಟ ಮಾತ್ರವಲ್ಲ, ಬಡರೈತ ವರ್ಗದ ಸಶಸ್ತ್ರ ದಂಗೆಯೂ ಆಗಿತ್ತು. ಅವರ ಉದ್ದೇಶವೂ ಸಹ ನಿಜಾಮರ, ಜಮೀನ್ದಾರರ ಮತ್ತು ರಜಾಕಾರರ ವಿರುದ್ಧ ಹೋರಾಡುವುದಾಗಿತ್ತು. ಆದರೆ ಇಲ್ಲಿನ ಜಮೀನ್ದಾರರ ವಿರುದ್ಧ ಒಂದು ಚಟುವಟಿಕೆಯೂ ನಡೆದಿಲ್ಲ. ಬಹುತೇಕ ಹೋರಾಟಗಾರರೆಲ್ಲ ಮಧ್ಯಮವರ್ಗದ ಜನರಾಗಿದ್ದರು. ಅವರ ಹೋರಾಟವೇನಿದ್ದರೂ ನಿಜಾಮ ಮತ್ತು ರಜಾಕಾರರ ವಿರುದ್ಧವಾಗಿತ್ತು. ತೆಲಂಗಾಣ ಹೋರಾಟ ಜನಸಾಮಾನ್ಯರ, ಕೂಲಿಕಾರ್ಮಿಕರು, ರೈತಾಪಿ ವರ್ಗದ ಉಳಿವಿಗಾಗಿ ನಡೆಯಿತು. ತೆಲಂಗಾಣ ಹೋರಾಟ ಬಡರೈತರ ಪರವಾಗಿ ನಡೆಯಿತು. ರಾಯಚೂರಿನಲ್ಲಿ

ನಡೆದ ಹೋರಾಟ ಮಧ್ಯಮ ವರ್ಗದ ಹಿನ್ನೆಲೆಯಿಂದ ಕೂಡಿತ್ತು. ಇವರು ತೆಲಂಗಾಣ ಮಾದರಿಯಲ್ಲಿ ಹೋರಾಡಲಿಲ್ಲ. ಸಾಂಘಿಕ ಹೋರಾಟವಂತೂ ನಡೆಯಲಿಲ್ಲ, ಇಲ್ಲಿನ ಹೋರಾಟಗಾರರು ರಾಷ್ಟ್ರೀಯ ವಾದಿಗಳಾಗಿದ್ದರು. ಇಲ್ಲಿನ ಹೋರಾಟಗಾರರ ಹೋರಾಟ ಸೌಮ್ಯವಾಗಿತ್ತು. ಸೌಮ್ಯವಾದಿಗಳ ನಾಯಕತ್ವದಲ್ಲಿ ನಡೆದ ಆರಂಭಿಕ ಹೋರಾಟ ನಿರೀಕ್ಷಿತ ಫಲಿತಾಂಶಗಳನ್ನು ನೀಡಲಿಲ್ಲ. ಈ ಹೋರಾಟದ ನಾಯಕತ್ವ ಜನರಿಗೆ ಉಪಯುಕ್ತ ಮಾರ್ಗದರ್ಶನವನ್ನು ನೀಡಲು ವಿಫಲವಾದ ಕಾರಣದಿಂದ ಹೆಚ್ಚಿದ ನಿಜಾಮ ಸರ್ಕಾರದ ಮತ್ತು ರಜಾಕಾರರ ದಬ್ಬಾಳಿಕೆ ವಿರೋಧಿ ಹೋರಾಟ ಪ್ರಯತ್ನದ ಪರಿಣಾಮ ಭೂಗತ ಹೋರಾಟಕ್ಕೆ ದಾರಿಯಾಯಿತು.

## ೫.೩. ೧೯೪೭ರ ನಂತರದ ವಿಮೋಚನಾ ಹೋರಾಟದ ಸ್ವರೂಪ

ಭಾರತಕ್ಕೆ ೧೯೪೭ ಆಗಸ್ಟ್ ೧೫ರಂದು ಸ್ವಾತಂತ್ರ್ಯ ಸಿಕ್ಕಿತು. ಇದು ಹೋರಾಟಗಾರರಿಗೆ ಸಂತೋಷವನ್ನಿತ್ತಿತ್ತು. ಈ ಸ್ವಾತಂತ್ರ್ಯ ಲಭಿಸಬೇಕಾದರೆ ಅನೇಕ ಜನ ಸಮಾಜವಾದಿ ಹೋರಾಟಗಾರರ ಫಲವೇ ಭಾರತದ ಸ್ವಾತಂತ್ರ್ಯ ಈ ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನೇ ತ್ಯಾಗ ಮಾಡಿದ ಭಗತ್‌ಸಿಂಗ್ ಮತ್ತು ಈ ಗುಂಪಿನ ಕಾರ್ಯ ಭಾರತಕ್ಕೆ ಸ್ವಾತಂತ್ರ್ಯ ಬರಲು ಬಹುಮುಖ್ಯ ಕಾರಣವಾಗಿದೆ. ಇವರ ಚಿಂತನೆ "ಸರ್ವರಿಗೂ ಸಮಬಾಳು ಸರ್ವರಿಗೂ ಸಮ ಪಾಲು" ಎಂಬುದಾಗಿತ್ತು. ಈ ಸೈದ್ಧಾಂತಿಕ ನಿಲುವನ್ನು ಹೊಂದಿದ್ದ ಭಗತ್ ಸಿಂಗ್ ಅವರು ಬರೆದ ಪತ್ರಗಳಲ್ಲಿ ಅನಾವರಣಗೊಂಡಿದೆ. ಅದನ್ನು ಬಿಪನ್‌ಚಂದ್ರ ಅವರ ಮಾತಿನಲ್ಲೇ ಹೇಳುವುದಾದರೆ, ತನ್ನ ಕೊನೆಯ ಎರಡು ಪತ್ರಗಳಲ್ಲಿ ೨೩ ವರ್ಷದ ಭಗತ್‌ಸಿಂಗ್ ತನಗೆ ಸಮಾಜವಾದದಲ್ಲಿ ಇರುವ ವಿಶ್ವಾಸದ ಬಗ್ಗೆ ದೃಢೀಕರಿಸಿದ್ದ. ಅವನು ಬರೆದ: "ರೈತರು ವಿದೇಶಿ ನೊಗದಿಂದ ಮಾತ್ರವಲ್ಲ, ಭೂಮಾಲಿಕರು ಮತ್ತು ಬಂಡವಾಳಗಾರರ ನೊಗದಿಂದಲೂ ತಮ್ಮನ್ನು ತಾವು ಬಿಡುಗಡೆ ಮಾಡಿಕೊಳ್ಳಬೇಕು." ೧೯೩೧ರ ಮಾರ್ಚ್ ೩ರ ತನ್ನ ಕೊನೆಯ ಸಂದೇಶದಲ್ಲಿ ಅವನು "ಶೋಷಕರು ಕೇವಲ ಬ್ರಿಟಿಶ್ ಬಂಡವಾಳಗಾರರಾಗಿರಬಹುದು ಅಥವಾ ಬ್ರಿಟಿಶ್ ಮತ್ತು ಭಾರತೀಯ ಮೈತ್ರಿಯವನಾಗಿರಬಹುದು ಅಥವಾ ಕೇವಲ ಭಾರತೀಯ ನಾಗಿರಬಹುದು, ಕೈ ಹಿಡಿಯಷ್ಟು ಶೋಷಕರು ತಮ್ಮನ್ನು ಗುರಿ ಸಾಧನೆಗಾಗಿ ಸಾಮಾನ್ಯ ಜನರ ಶ್ರಮವನ್ನು ಶೋಷಣೆ ಮಾಡುತ್ತಿರುವವರೆಗೆ ಭಾರತದಲ್ಲಿ ಹೋರಾಟವು ಮುಂದುವರೆಯುತ್ತದೆ" ಎಂದು ಘೋಷಿಸಿದ. ಭಗತ್‌ಸಿಂಗ್ ಸಮಾಜವಾದವನ್ನು ವೈಜ್ಞಾನಿಕ ವಿಧಾನದಲ್ಲಿ ವ್ಯಾಖ್ಯಾನಿಸಿದ. ಅದರ ಅರ್ಥ ಬಂಡವಾಳಶಾಹಿ ಮತ್ತು ವರ್ಗ ವ್ಯವಸ್ಥೆಯನ್ನು ರದ್ದುಗೊಳಿಸುವುದು ಎಂದು ತಿಳಿಸುತ್ತಾರೆ(ಬಿಪನ್‌ಚಂದ್ರ ೨೦೧೨: ೩೨೪).

ಈ ಬಗೆಯ ಸಾಮಾಜಿಕ ಕಳಕಳಿಯನ್ನು ಹೊಂದಿರುವ ಹೋರಾಟಗಾರರಿಂದಾಗಿ ಭಾರತಕ್ಕೆ ಸ್ವಾತಂತ್ರ್ಯ ಬಂದಿತೆಂದು ಹೇಳಬಹುದಾಗಿದೆ. ಜವಾಹರಲಾಲ್ ನೆಹರೂ ಅವರೂ ಈ ಸಮಾಜವಾದವನ್ನು ಒಪ್ಪಿಕೊಳ್ಳುತ್ತಾರೆ. ಇದನ್ನು ಇರ್ಫಾನ್ ಹಬೀಬ್ ಅವರ ಮಾತಿನಲ್ಲಿ ಗ್ರಹಿಸುವುದಾದರೆ. "ಕಾಂಗ್ರೆಸ್ ನಾಯಕರು, ಬಂಡವಾಳಗಾರರು, ಭೂಮಾಲಿಕರೊಂದಿಗೆ ಹೊಂದಿಕೊಂಡು ಬ್ರಿಟಿಶರು ದೇಶ ಬಿಟ್ಟು ಹೋಗುವುದನ್ನು ಬಯಸುವುದೇ ಇಲ್ಲ" ಎಂಬ ಕಮ್ಯುನಿಸ್ಟರ ನಂಬಿಕೆ ಕೇವಲ "ಭ್ರಮಾತ್ಮಕ" ಎಂದು ತಳ್ಳಿ ಹಾಕುತ್ತಾರೆ. ಆದರೂ ಕಮ್ಯುನಿಸ್ಟರು ಮಾಡಿದ ಹೆಚ್ಚಿನ ಸೈದ್ಧಾಂತಿಕ ಟೀಕೆಗಳು ಸಮರ್ಥವಾಗಿಯೂ ನಿರ್ದಿಷ್ಟವಾಗಿಯೂ ಇದ್ದು, ಮುಂದೆ ನಡೆದ ಘಟನೆಗಳು ಅವನ್ನು ಸಮರ್ಥಿಸಿವೆ ಎಂದು ನೆಹರೂ ಅವರು ಒಪ್ಪಿಕೊಳ್ಳುತ್ತಾರೆ(ಇರ್ಫಾನ್ ಹಬೀಬ್ ೨೦೧೨: ೧೧೬).

ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ಕೂಡಾ ಬ್ರಿಟನ್ನಿನಲ್ಲಿ ಸಮಾಜವಾದಿ ಚಿಂತನೆಗಳನ್ನು ಆಶಯ ವಾಗಿಟ್ಟುಕೊಂಡು ಬಂದ ಲೇಬರ್ ಪಕ್ಷದಿಂದ ಎಂಬುದು ಗಮನಾರ್ಹ. ಬ್ರಿಟನ್ನಿನಲ್ಲಿ ೧೯೪೬ರಲ್ಲಿ ನಡೆದ ಪಾರ್ಲಿಮೆಂಟ್ ಸಾರ್ವಜನಿಕ ಚುನಾವಣೆಯಲ್ಲಿ ಲೇಬರ್ ಪಕ್ಷ ಗೆಲುವು ಸಾಧಿಸಿತು. ಈ ಮುಂಚೆ ಕಂಜರ್‌ವೇಟಿವ್ ಪಕ್ಷ ಅಧಿಕಾರದಲ್ಲಿದ್ದಾಗ ಚರ್ಚಿಲ್ ಪ್ರಧಾನಿಯಾಗಿದ್ದ. ಲೇಬರ ಪಕ್ಷ ಅಧಿಕಾರಕ್ಕೆ ಬಂದ ತಕ್ಷಣವೇ ಪ್ರಧಾನಿಯಾಗಿದ್ದ ಕ್ಲಿಮೆಂಟ್ ಆಟ್ಲೆ ಭಾರತಕ್ಕೆ ಸ್ವಾತಂತ್ರ್ಯವನ್ನು ಘೋಷಣೆ ಮಾಡಿದನು. ಇದಕ್ಕೆ ಸಮಾಜವಾದಿ ಚಿಂತನೆಯೇ ಕಾರಣವೆಂದು ಗುರುತಿಸಬಹುದು. ಕಾರ್ಮಿಕರ, ಕೃಷಿ ಕೂಲಿಕಾರರ, ರೈತಾಪಿ ವರ್ಗದ ಶೋಷಣೆಯನ್ನು ಅರಿತಿದ್ದ ಲೇಬರ್ ಪಕ್ಷ ಕೃಷಿ ಪ್ರಧಾನವಾದ ಭಾರತ, ಮೊದಲು ಸ್ವಾತಂತ್ರ್ಯ ಪಡೆಯಲಿ ಎಂದು ಘೋಷಿಸಿತು.

೧೯೪೭ರ ಜೂನ್ ತಿಂಗಳಲ್ಲಿ ವೈಸರಾಯರಾಗಿದ್ದ ಮೌಂಟ್ ಬ್ಯಾಟನ್, ಬ್ರಿಟಿಶರು ಅದೇ ವರ್ಷದ ಆಗಸ್ಟ್ ೧೫ರಂದು ಭಾರತವನ್ನು ಬಿಡಲಿದ್ದಾರೆ ಎಂದು ಘೋಷಣೆ ಮಾಡಿದುದು ಇಡೀ ಭಾರತದಲ್ಲಿ ರಾಜಕೀಯ ಬೆಳವಣಿಗೆಯನ್ನು ತ್ವರಿತಗೊಳಿಸಿದಂತೆ ಹೈದರಾಬಾದಿನಲ್ಲೂ ತ್ವರಿತಗೊಳಿಸಿತು. ಜೂನ್ ೧೨ರಂದು ನಿಜಾಮ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ ಹೈದರಾಬಾದ್ ಸ್ವತಂತ್ರ ದೇಶವಾಗಿರುತ್ತದೆಂದು ಘೋಷಿಸಿದನು. ಸಂಸ್ಥಾನ ಕಾಂಗ್ರೆಸ್ಸು ಹೈದರಾಬಾದ್ ಭಾರತ ಒಕ್ಕೂಟಕ್ಕೆ ಸೇರಬೇಕೆಂದೂ, ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕೆಂದೂ ಕೋರಿತು. ಆ ಬೇಡಿಕೆಗಾಗಿ ಆಗಸ್ಟ್ ೭ರಂದು 'ಭಾರತ ಸೇರ್ಪಡೆ ದಿನ'ವನ್ನು ಆಚರಿಸಲಾಯಿತು. ಆಗಸ್ಟ್ ೧೫ರಂದು ಭಾರತವೆಲ್ಲಾ ಸ್ವಾತಂತ್ರ್ಯ ದಿನದ ಸಂಭ್ರಮದಲ್ಲಿರುವಾಗ ಹೈದರಾಬಾದಿನಲ್ಲಿ ರಾಷ್ಟ್ರಧ್ವಜ ಹಾರಿಸಬಾರದೆಂದು ನಿಷೇಧಾಜ್ಞೆ ಜಾರಿಯಲ್ಲಿತ್ತು(ರಾವ್ ೨೦೦೬: ೨೮೪). ಇದನ್ನು ರಾಯಚೂರು ನಗರದಲ್ಲಿ ಯುವ ವಿದ್ಯಾರ್ಥಿ ಹೋರಾಟಗಾರರು ಆಜ್ಞೆಯನ್ನು ಮುರಿದು ಜೀವದ ಹಂಗು ತೊರೆದು ರಾಯಚೂರಿನ ಸಾತ್ ಕಚೇರಿಯ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿದ ಕೀರ್ತಿ ಎಂ.ನಾಗಪ್ಪನವರಿಗೆ ಸಲ್ಲುತ್ತದೆ.

ರಾಷ್ಟ್ರಧ್ವಜ ಹಾರಿಸುವ ಚಳವಳಿ ಸಂಸ್ಥಾನದಾದ್ಯಂತ ದೊಡ್ಡ ಪ್ರಮಾಣದಲ್ಲಿ ನಡೆಯಿತು. ಚಳವಳಿ ಬಿರುಸಾದಂತೆ, ರಜಾಕಾರರ ಸಂಖ್ಯೆ ಏರಿತು. ಸರ್ಕಾರ ಅವರಿಗೆ ಅಸ್ತ್ರಶಸ್ತ್ರ ಒದಗಿಸಿತು. ಜನರ ಗುಂಪುಗಳ ಮೇಲೆ ನಿರಾಯುಧ ಗ್ರಾಮಗಳ ಮೇಲೆ ರಜಾಕಾರರ ದಾಳಿ ಹೆಚ್ಚಾಯಿತು. ಈ ಹಾವಳಿಗೆ ತತ್ತರಿಸಿದ ಜನ ಜೀವನ ಅಸ್ತವ್ಯಸ್ತಗೊಂಡಿತು. ಇದರಿಂದಾಗಿ ೧೯೪೭ರ ನಂತರ ನಿಜಾಮ ಮತ್ತು ರಜಾಕಾರರ ವಿರುದ್ಧ ನಿಜಾಮ ರಾಜ್ಯ ಬಿಟ್ಟು ಭಾರತ ಸರ್ಕಾರದ ಪ್ರದೇಶದಲ್ಲಿ ಶಿಬಿರಗಳನ್ನು ಸ್ಥಾಪಿಸಿಕೊಂಡು ಹೋರಾಟ ಮಾಡುವ ಸ್ಥಿತಿ ಬಂದಿತು. ಈ ಹಿನ್ನೆಲೆಯಲ್ಲಿ ಈ ಭಾಗದಲ್ಲಿ ಲೆವಿ ಸಂಗ್ರಹದ ವಿರುದ್ಧ ಹೋರಾಟ, ಒಕ್ಕೂಟ ಸೇರಿ ಚಳವಳಿ, ಗಡಿಶಿಬಿರಗಳ ಸ್ಥಾಪನೆ ಮತ್ತು ಭೂಗತ ಚಳವಳಿಗಳನ್ನು ಕುರಿತು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

### ೫.೩.೧. ಲೆವಿ ಸಂಗ್ರಹ ವಿರೋಧಿ ಚಳವಳಿ

ಹೈದರಾಬಾದ್ ನಿಜಾಮನ ತೆರಿಗೆಗಳಲ್ಲಿ ಲೆವಿ ಸಂಗ್ರಹವೂ ಒಂದು. ಲೆವಿ ಎಂದರೆ ವಸೂಲಿ ಕಾರ್ಯ. ಈ ಲೆವಿಯನ್ನು ಸಾಧಾರಣವಾಗಿ "ಆಣೇವಾರಿ" ಬೆಳೆಯನ್ನು ಸರಕಾರ ರೈತರಿಂದ ಪಡೆಯುವುದಾಗಿತ್ತು. ಇಲ್ಲಿ ಲೆವಿಯನ್ನು ವಸೂಲಿ ಮಾಡಲು ಬರುತ್ತಿದ್ದವರು, ವಸೂಲಿಗೆ ಬರುವವರಿಗೆ ಸಹಾಯಕರಾಗಿದ್ದವರು ಯಾರು ಎಂಬುದು ಮುಖ್ಯವಾಗುತ್ತದೆ. ಲೆವಿ ವಸೂಲಿಗೆ ಬರುತ್ತಿದ್ದವರು

ನಿಜಾಮನ ಅಧಿಕಾರಿಗಳು, ಬಹುತೇಕ ಎಲ್ಲರು ಪೊಲೀಸ್ ವೇಷಧಾರಿಗಳೇ ಆಗಿರುತ್ತಿದ್ದರು, ಇವರ ಜೊತೆಗೆ ಸ್ಥಳೀಯವಾಗಿದ್ದ ಗೌಡ, ಮಾಲಿಗೌಡ, ಪೊಲೀಸ್‌ಗೌಡರು ಇರುತ್ತಿದ್ದರು. ನಿಜಾಮ ಅಧಿಕಾರಿಗಳಿಗೆ ಮಾಹಿತಿಯನ್ನು ನೀಡುವವರು ಮಾಲಿ ಗೌಡ್ರು, ಪೊಲೀಸ್ ಗೌಡ್ರು ಆಗಿದ್ದರು. ಅವರು ಸೂಚಿಸಿದವರನ್ನು ಮಾತ್ರ ಲೆವಿ ಕೇಳುತ್ತಿದ್ದರು, ಪಡೆಯುತ್ತಿದ್ದರು. ಬರಗಾಲವಿರುತ್ತಿದ್ದರಿಂದ ರಜಾಕಾರರು ಒಂದೊಂದು ಸಲ ಮಾಲಿಗೌಡ, ಪೊಲೀಸ್‌ಗೌಡರ ಮಾಹಿತಿಯಾಧಾರಿಸಿ ಲೆವಿಯನ್ನು ವಸೂಲಿ ಮಾಡುತ್ತಿರಲಿಲ್ಲ. ಹೆಚ್ಚು ಕಡಿಮೆ ಭೂಮಿ ಹೆಚ್ಚು ಇರುವ ರೈತರಲ್ಲಿ ಧಾನ್ಯ ಸಂಗ್ರಹ ಮಾಡುತ್ತಿದ್ದದ್ದು ಕಂಡುಬರುತ್ತದೆ. ಜನಸಾಮಾನ್ಯರಿಗೆ ಲೆವಿ ಕಟ್ಟುವುದು ನಿಲುಕದ ಮಾತಾಗಿತ್ತು. ಅವರು ಬದುಕಿದರೆ ಸಾಕಾಗಿತ್ತು. ಏಕೆಂದರೆ ಅಷ್ಟೊಂದು ಬಡತನ ತಾಂಡವವಾಡುತ್ತಿತ್ತು. ಲೆವಿ ವಿಚಾರದಲ್ಲಿ ನಿಜಾಮನ ಅಧಿಕಾರಿಗಳು ಕಟುವಾಗಿಯೇ ವರ್ತಿಸುತ್ತಿದ್ದರು. ಲೆವಿ ಹೆಸರಿನಲ್ಲಿ ಜನರನ್ನು ಶೋಷಣೆ ಮಾಡಿದ್ದುಂಟು.

ಧ್ರುವನಾರಾಯಣ ಮತ್ತು ರಾಮಣ್ಣ ಹವಳೆ ಅವರು ಉಲ್ಲೇಖಿಸುವ ಸಾದಾಪುರ, ಹರವಿ, ನಾರಬಂಡಿ, ಕವಿತಾಳ, ಕಾಡಲೂರು ಘಟನೆಗಳು ನಡೆದದ್ದು ದುಡಿಯುವ ವರ್ಗದ ಮೇಲೆ ಎಂಬುದು ಗಮನಾರ್ಹ. ಇದು ಇಡೀ ಜಿಲ್ಲೆಯಾದ್ಯಂತ ವ್ಯಾಪಿಸಿತ್ತು. ಜನರ ಜೀವನದ ಮೇಲೆ ಪರಿಣಾಮ ಬೀರುವ ಲೆವಿ ಸಂಗ್ರಹದ ವಿರುದ್ಧ ಮುಖಂಡರಾಗಿದ್ದ ಅಡವಿರಾವ್ ಫಡ್ನವೀಸ್, ರಾ.ಗು.ಜೋಶಿ, ಗಾಣಧಾಳ ನಾರಾಯಣಪ್ಪ ಮತ್ತು ಬಿ.ಎಚ್.ಇನಾಮ್‌ದಾರ್ ಮುಂತಾದವರು "ಪ್ರಜಾಹಿತ ಸಂಘ"ವನ್ನು ಸ್ಥಾಪಿಸಿಕೊಂಡು ಹೋರಾಟ ಮಾಡಿದರು. ಜೊತೆಗೆ ಲೆವಿ ಸಂಗ್ರಹದ ವಸೂಲಿಯನ್ನು ಸ್ಥಗಿತಗೊಳಿಸ ಬೇಕೆಂದು ಸರ್ಕಾರಕ್ಕೆ ಮನವಿ ಪತ್ರಗಳ ಮೂಲಕ ಹೋರಾಡಿದ್ದು ಕಂಡು ಬರುತ್ತದೆ(ಧ್ರುವನಾರಾಯಣ ೧೯೭೧: ೪೪-೪೮ ಮತ್ತು ರಾಮಣ್ಣ ಹವಳೆ ೨೦೧೦: ೧೦೨-೧೦೪). ಈ ಪ್ರದೇಶದಲ್ಲಿ ಮಾಲಿಗೌಡಿಕೆ, ಪೊಲೀಸ್‌ಗೌಡಿಕೆ, ಶಾನಭೋಗ, ಪಟವಾರಿ ಮುಂತಾದ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದವರು ರಾಜೀನಾಮೆ ನೀಡಿ ರಾಯಚೂರು ವಿಮೋಚನಾ ಹೋರಾಟದಲ್ಲಿ ತೊಡಗಿಕೊಂಡರೆಂದು ತಿಳಿಸುತ್ತಾರೆ(ಹವಳೆ ೨೦೧೦: ೧೦೭). ಹೀಗೆ ಈ ಪ್ರದೇಶದಲ್ಲಿ ಲೆವಿ ಆಂದೋಲನ ತನ್ನದೇ ಆದ ಹೋರಾಟದ ಸ್ವರೂಪದ ಮೂಲಕ ಸರ್ಕಾರದ ಗಮನ ಸೆಳೆಯಲು ಪ್ರಯತ್ನಿಸಿತು.

**೫.೩.೨. ಒಕ್ಕೂಟ ಸೇರಿ ಚಳವಳಿ**

ಭಾರತ ಸ್ವಾತಂತ್ರ್ಯ ಪಡೆಯಿತು. ಬ್ರಿಟಿಶರ ನಿಯಮಗಳ ಪ್ರಕಾರ ಸಂಸ್ಥಾನಿಕರು ಸ್ವತಂತ್ರ ಭಾರತ ಅಥವಾ ಪಾಕಿಸ್ತಾನವನ್ನು ಸೇರಬಹುದು ಇಲ್ಲವೆ ಸ್ವತಂತ್ರವಾಗಿರಬಹುದು ಎಂಬುದಾಗಿತ್ತು. ಈ ಹಿನ್ನೆಲೆಯಲ್ಲಿ ನಿಜಾಮನು ೧೯೪೭ ಜೂನ್ ೧೨ರಂದೇ ಸ್ವತಂತ್ರ ದೇಶ ಹೈದರಾಬಾದ್ ಎಂದು ಘೋಷಿಸಿಕೊಂಡನು. "ನಾನು ಯಾವುದೇ ಒಕ್ಕೂಟಕ್ಕೆ ಸೇರುವುದಿಲ್ಲ. ಸ್ವತಂತ್ರ ರಾಷ್ಟ್ರವನ್ನು ಸ್ಥಾಪಿಸಿಕೊಂಡಿರುತ್ತೇನೆಂದು" ಘೋಷಿಸಿದನು. ಇದು ಸಂಸ್ಥಾನದ ಜನರಿಗೆ ಅಷ್ಟೇ ಅಲ್ಲ ಭಾರತದ ಸರ್ಕಾರಕ್ಕೂ ನುಂಗಲಾರದ ತುತ್ತಾಗಿ ಪರಿಣಮಿಸಿತು. ಇಂತಹ ಸಂದರ್ಭದಲ್ಲಿ ರಾಯಚೂರಿನಲ್ಲಿ ನಿಜಾಮ ಸಂಸ್ಥಾನ ಭಾರತ ಒಕ್ಕೂಟವನ್ನು ಸೇರಬೇಕೆಂದು ಬಯಸಿ ಹೋರಾಟ ನಡೆಯಿತು. ಈ ಸಂದರ್ಭದಲ್ಲಿ ಗೌಡ-ಪಟೇಲರ ರಾಜೀನಾಮೆ, ರಾಮಶಾಲಾ ಬಯಲಿನಲ್ಲಿ ಸತ್ಯಾಗ್ರಹ, ೧೯೪೭ ಆಗಸ್ಟ್ ೧೫ರಂದು ಸಾತ್ ಕಛೇರಿಯ ಮೇಲೆ ಧ್ವಜಾರೋಹಣ, ಜಿಲ್ಲೆಯಾದ್ಯಂತ ಧ್ವಜಾರೋಹಣ, ತಿಮ್ಮಾಪುರ ಪೇಟೆಯ ಗಲಾಟೆಯ ಹೋರಾಟ, ಧ್ವಜ ದಿನಾಚರಣೆ, ಆರ್ಯಭವನದ ಮೇಲೆ ಧ್ವಜ, ಬಿಡಾಡಿ ದನಗಳ ಮೇಲೆ ಘೋಷಣೆ, ಮಾಧ್ಯಮಗಳ ಚಳವಳಿ ಹಾಗೂ ಇತರ ಬಗೆಯ ಹೋರಾಟಗಳ

ಆಯೋಜಿಸಿ ಒಕ್ಕೂಟ ಸೇರಿ ಚಳವಳಿಯನ್ನು ರಾಯಚೂರಿನಲ್ಲಿ ಮಾಡಿದ್ದು ಗಮನಾರ್ಹ(ಹವಳೆ ೨೦೧೦: ೧೯೯-೧೩೦). ಬಹುತೇಕವಾಗಿ ೧೯೪೭ರ ನಂತರ ಸಂಸ್ಥಾನದ ಒಳಗಡೆಯಿಂದ ಹೋರಾಟಕ್ಕೆ ಅವಕಾಶ ಇಲ್ಲದಂತಾಯಿತು. ಅವಕಾಶವಿಲ್ಲವೆಂದು ಹೋರಾಟ ನಿಲ್ಲಿಸಲಿಲ್ಲ. ಭಾರತದ ಒಕ್ಕೂಟಕ್ಕೆ ಈ ಸಂಸ್ಥಾನ ಸೇರಬೇಕೆಂದು ಗಡಿಯಾಚೆ ಇದ್ದುಕೊಂಡು ಹೋರಾಟ ಮಾಡುವುದು ಅನಿವಾರ್ಯ ವಾಯಿತು. ಹಾಗಾಗಿ ಒಕ್ಕೂಟ ಸೇರಿ ಚಳವಳಿ ಜಿಲ್ಲೆಯ ಹೊರಗಿನಿಂದ ಹೋರಾಡಬೇಕಾದ ಪ್ರಮೇಯ ಉಂಟಾಯಿತು. ಈ ಸಂದರ್ಭದಲ್ಲಿ ಅನೇಕ ಜನ ಹೋರಾಟಗಾರರು ಬಂಧನಗೊಂಡದ್ದು ಕಂಡುಬರುತ್ತದೆ.

**೫.೩.೩. ಗಡಿ ಶಿಬಿರಗಳ ಸ್ಥಾಪನೆ**

ರಾಯಚೂರಿನಲ್ಲಿ ಇದ್ದುಕೊಂಡು ಹೋರಾಟ ಮಾಡುವುದು ಸಾಧ್ಯವಿರಲಿಲ್ಲ. ಹಾಗಾಗಿ ಗಡಿ ಶಿಬಿರಗಳನ್ನು ಸ್ಥಾಪಿಸಿಕೊಳ್ಳುವುದರ ಮೂಲಕ ನಿಜಾಮ ಮತ್ತು ರಜಾಕಾರರ ವಿರುದ್ಧ ಹೋರಾಟದಲ್ಲಿ ತೊಡಗಿದರು. ರಾಯಚೂರಿಗೆ ಹತ್ತಿರದಲ್ಲಿ ಅಂದರೆ ತುಂಗಭದ್ರ ನದಿಯ ದಕ್ಷಿಣದಲ್ಲಿ ಗಡಿ ಶಿಬಿರಗಳು ರಚಿತಗೊಂಡವು. ಅವೆಲ್ಲವುಗಳಿಗೆ ಗದಗ ಕೇಂದ್ರ ನಿರ್ದೇಶನ ಸ್ಥಳವಾಗಿತ್ತು. ಗಡಿಶಿಬಿರ ಚಟುವಟಿಕೆಗಳನ್ನು ಗದಗ ಕೇಂದ್ರದಿಂದ ನಿರ್ದೇಶಿಸಲಾಗುತ್ತಿತ್ತು. ಗಡಿ ಶಿಬಿರಗಳಲ್ಲಿ ಇದ್ದುಕೊಂಡು ಸಶಸ್ತ್ರ ಹೋರಾಟದಲ್ಲಿ ತೊಡಗಿಕೊಂಡರು. ಸ್ವಾತಂತ್ರ್ಯ ಪೂರ್ವ ತೆಲಂಗಾಣ ಸಶಸ್ತ್ರ ಹೊಂದಿ ಹೋರಾಡಿತು. ಇದೇ ಸ್ಥಿತಿ ೧೯೪೭ರ ನಂತರ ರಾಯಚೂರು ಜಿಲ್ಲೆಯ ಗಡಿ ಶಿಬಿರಗಳಲ್ಲಿ ಹಲವು ಬಗೆಯ ತರಬೇತಿಗಳನ್ನು ನೀಡುತ್ತಿದ್ದರು. ಶಸ್ತ್ರಗಳನ್ನು ಬಳಸುವ ಅನುಭವವಿಲ್ಲದವರು ಮಿಲಿಟರಿ ತರಬೇತಿಯನ್ನು ಪಡೆಯು ವಂತಾಯಿತು. ಆ ಸಂದರ್ಭದಲ್ಲಿ ತರಬೇತಿ ಕೇಂದ್ರಗಳಾಗಿ ಗುರುತಿಸಿಕೊಂಡಿದ್ದ ಡೆಹರಾಡೂನ್, ಪೂನಾ, ನಾಸಿಕ್, ಸತಾರಾ, ವಾರಂಗಲ್, ಚಾಂದ, ಸೊಲ್ಲಾಪುರ, ಕಪ್ಪತ್ತಗುಡ್ಡ, ಬೆಜವಾಡ, ಪಟಿಯಾಲ ಮುಂತಾದ ಕೇಂದ್ರಗಳಿಗೆ ಕಳುಹಿಸಿಕೊಡಲಾಗುತ್ತಿತ್ತು. ತರಬೇತುದಾರರಾಗಿ ನಿವೃತ್ತಿ ಸೇವೆಯಲ್ಲಿರುವ ಹಿರಿಯ ಅಧಿಕಾರಿಗಳನ್ನು ಸರ್ಕಾರವೇ ನೇಮಿಸಿತ್ತು. ಈ ಅವಧಿಯಲ್ಲಿ ಮದ್ದುಗುಂಡು ತಯಾರಿಕೆ, ಬಂದೂಕು, ಸ್ಟೆನ್‌ಗನ್, ಪಿಸ್ತೂಲು ಮತ್ತು ರಿವಾಲ್ವಾರ್‌ಗಳ ಬಳಕೆಯನ್ನು ಸೇನಾಧಿಕಾರಿಗಳು ತರಬೇತಿ ನೀಡುತ್ತಿದ್ದರು. ಗಡಿ ಶಿಬಿರಗಳಿಗೆ ಅಗತ್ಯವಾಗಿದ್ದ ಬುಲೆಟ್‌ಗಳು, ತಲವಾರ್, ಗುಪ್ತಿ, ತಮಂಚಾ, ಫೀಕ್‌ಪಟ್ಟಾ, ಕರ್ಬೀನು ಹಾಗೂ ವೈರ್‌ಲೆಸ್ ಉಪಕರಣಗಳನ್ನು ಗೋವಾ, ಮುಂಬಯಿಯಿಂದ ತರಲಾಗುತ್ತಿತ್ತು. ಹಾಗೆಯೇ ರಜಾಕಾರರ ಮೇಲೆ ದಾಳಿ ಮಾಡಲು ಹಲವಾರು ರೂಪುರೇಷೆಗಳನ್ನು ಶಿಬಿರಗಳಿಂದ ಸಿದ್ಧಪಡಿಸಲಾಗುತ್ತಿತ್ತು. ರಾಯಚೂರು ಪ್ರಸ್ತುತ ಜಿಲ್ಲೆಗೆ ಹೊಂದಿಕೊಂಡಂತೆ ತುಂಗಭದ್ರ ಮುಖ್ಯ ಶಿಬಿರವಾಗಿತ್ತು. ಇಲ್ಲಿ ಸಂಗಮ ಹುಚ್ಚಾಚಾರ್ ಶಿಬಿರಾಧಿಪತಿಯಾಗಿದ್ದರು. ಇದರ ಉಪಶಿಬಿರ ಚಳ್ಳೆಕೂಡ್ಲೂರುನಲ್ಲಿತ್ತು. ಇದರ ಶಿಬಿರಾಧಿಪತಿಯಾಗಿ ಬೆಟ್ಟದೂರು ಶಂಕರಗೌಡ ಇದ್ದರು. ಹಾಗೆಯೇ ಮಂತ್ರಾಲಯ ಉಪಶಿಬಿರದಲ್ಲಿ ಕಸ್ಬೆ ಪಾಂಡುರಂಗರಾವ್ ಮುಖ್ಯಸ್ಥರಾಗಿದ್ದರು. ಆದೋನಿ ಮುಖ್ಯ ಶಿಬಿರದಲ್ಲಿ ಗಿರಿನಾಥಗೌಡ ಶಿಬಿರಾಧಿಪತಿಯಾಗಿದ್ದರು. ಈ ಶಿಬಿರಗಳ ಮೂಲಕ ಹೋರಾಟ ಕೈಗೊಂಡಿರುವುದು ಗಮನಿಸಬಹುದಾಗಿದೆ(ಹವಳೆ ೨೦೧೦: ೧೩೫-೧೩೭).

ಈ ಗಡಿ ಶಿಬಿರಗಳು ಅಂದು ಪ್ರಮುಖ ಸ್ಥಾನವನ್ನು ಪಡೆದಿದ್ದವು. ಇಲ್ಲಿನ ಹೋರಾಟಗಾರರು ಸಶಸ್ತ್ರ ಬಂಡಾಯ ಹೂಡಿದವು. ಇದು ನಿಜಾಮ ಮತ್ತು ರಜಾಕಾರರ ವಿರುದ್ಧ ಎದ್ದ ದಂಗೆಯಾಗಿತ್ತು. ಇಲ್ಲಿ ಮುಖ್ಯವಾಗಿ ಕಾಂಗ್ರೆಸ್ಸಿನ ಅಹಿಂಸಾ ಸಿದ್ಧಾಂತಕ್ಕೆ ಧಕ್ಕೆಯಾಯಿತೆನಿಸುತ್ತದೆ. ಆದರೂ ರಾಯಚೂರು

ಜಿಲ್ಲೆಯ ಈ ಹೋರಾಟ ಯಾವುದೇ ಸಿದ್ಧಾಂತದಡಿ ನಡೆಯಲಿಲ್ಲ. ಬದಲಾಗಿ ತಮಗೆ ತೋಚಿದ ಹಾಗೆ ಕಾರ್ಯಪ್ರವೃತ್ತರಾಗುತ್ತಿದ್ದುದು ಕಂಡುಬರುತ್ತದೆ. ಈ ಗಡಿ ಶಿಬಿರಗಳ ಹೋರಾಟ ತೆಲಂಗಾಣ ಮಾದರಿಯದ್ದಾಗಿದ್ದಿದ್ದರೆ ಇನ್ನೂ ಬೇಗನೆ ಸ್ವಾತಂತ್ರ್ಯ ಗಳಿಸಬಹುದಾಗಿತ್ತು. ತೆಲಂಗಾಣ ರೈತ ಪರವಾಗಿತ್ತು. ಆದರೆ ಇದು ಕೆಲವರ ಪರವಾಗಿತ್ತು ಎನ್ನಬಹುದಾಗಿದೆ. ಈ ಗಡಿಶಿಬಿರ ಸ್ಥಾಪನೆ ಭೂಗತ ಹೋರಾಟಕ್ಕೆ ದಾರಿ ಮಾಡಿಕೊಟ್ಟಿತು. ಭೂಗತ ಹೋರಾಟಗಳು ಆತಂಕದಿಂದ ಕೂಡಿದ್ದವೆನ್ನಬಹುದಾಗಿದೆ.

**೫.೩.೪. ಭೂಗತ ಚಳವಳಿ**

ಈ ಪ್ರದೇಶದಲ್ಲಿ ನಿಜಾಮ ಮತ್ತು ರಜಾಕಾರರ ವಿರುದ್ಧ ೧೯೪೭ರ ನಂತರ ನಡೆದ ಹೋರಾಟಗಳಲ್ಲಿ ಪ್ರಮುಖವಾದದುದಾಗಿದೆ. ಈ ಹೋರಾಟ ಭಯಾನಕವಾಗಿತ್ತು. ಗುಂಪುಗಟ್ಟಿ ಈ ಹೋರಾಟದಲ್ಲಿ ತೊಡಗಿಕೊಳ್ಳುವಂತಿರಲಿಲ್ಲ. ಕೆಲವರು ಮಾತ್ರ ಅಂದರೆ ೪-೫ ಜನರು ಅಥವಾ ೭-೮ ಜನರಿರುತ್ತಿದ್ದರು. ಈ ಚಳವಳಿ ಹಲವು ಬದಲಾವಣೆಗಳಿಗೆ ಕಾರಣವಾಯಿತು. ಭೂಗತ ಚಳವಳಿಗೆ ಪ್ರೇರಣೆ ನೀಡಿದ್ದು, ಭಾರತದ ಯೂನಿಯನ್ ಸರ್ಕಾರವೆಂದರೆ ತಪ್ಪಾಗಲಿಕ್ಕಿಲ್ಲ. ಹೈದರಾಬಾದ್ ಸ್ವತಂತ್ರ ರಾಷ್ಟ್ರವಾಗಿ ರೂಪುಗೊಳ್ಳುವುದನ್ನು ಗಮನಿಸಿದ ಭಾರತ ಸರ್ಕಾರ ಯಥಾಸ್ಥಿತಿ ಒಪ್ಪಂದದ ಮೂಲಕ ಈ ಪ್ರದೇಶವನ್ನು ಭಾರತದ ಒಕ್ಕೂಟಕ್ಕೆ ಸೇರಿಸಿಕೊಳ್ಳಲು ಬಯಸಿತು. ಆದರೆ ನಿಜಾಮನು ತನ್ನ ರಕ್ಷಣೆಗಾಗಿ ರಜಾಕಾರರ ಸೈನಿಕ ಪಡೆಯನ್ನು ಬಳಸಿಕೊಳ್ಳಲಾರಂಭಿಸಿದನು. ಇದರಿಂದ ಈ ಸಂಸ್ಥಾನದಲ್ಲಿ ನಡೆಯುತ್ತಿದ್ದ ಹೋರಾಟ ಸ್ವತಂತ್ರ ಭಾರತದ ಪ್ರದೇಶಗಳ ಮೂಲಕ ನಡೆಯುತ್ತಿತ್ತು. ಇಂತಹ ಸಂದರ್ಭದಲ್ಲಿ ಇಲ್ಲಿನ ಶಿಬಿರಾರ್ಥಿಗಳಿಗೆ ಸೈನಿಕ ತರಬೇತಿಯನ್ನು ನೀಡಿ, ಮದ್ದು ಗುಂಡುಗಳ ಬಳಕೆಯನ್ನು ಕಲಿಸುವ ಪ್ರಯತ್ನ ಮಾಡಿತು. ಸರ್ಕಾರದ ಸಹಕಾರದಿಂದ ಇಲ್ಲಿನ ಹೋರಾಟಗಾರರು ತೀವ್ರವಾದಿ ಹೋರಾಟ ಗಾರರಾಗಿ ರೂಪುಗೊಂಡರು.

ತುಂಗಭದ್ರಾ, ಮಂತ್ರಾಲಯ ಮತ್ತು ಚಳ್ಳೀಕೂಡ್ಲೂರು ಕ್ಯಾಂಪ್‌ಗಳ ಮೂಲಕ ಹೋರಾಟಗಾರರು ಅನುಸರಿಸರಿಸಿದ ನೀತಿಯೆಂದರೆ ನಿಜಾಮ ಸಂಸ್ಥಾನ ಅಂದರೆ ರಾಯಚೂರು ಜಿಲ್ಲೆಯ ಒಳನಾಡಿನಲ್ಲಿ ರಜಾಕಾರರು ಭೂಗತ ಚಳವಳಿಯನ್ನು ಹತ್ತಿಕ್ಕಲು ತುಂಗಭದ್ರ ನದಿಯ ಉತ್ತರ ದಂಡೆಯ ಮೇಲೆ ಅಲ್ಲಲ್ಲಿ ಠಾಣೆಗಳನ್ನು ಸ್ಥಾಪಿಸಿ, ಗಸ್ತು ಕಾಯುತ್ತಿದ್ದರು. ಸಮಯ ಸಂದರ್ಭವನ್ನು ನೋಡಿ ರಜಾಕಾರರ ಠಾಣೆಗಳ ಮೇಲೆ, ಹೋರಾಟಗಾರರು ದಾಳಿ ಮಾಡುತ್ತಿದ್ದರು. ಈ ಬಗೆಯ ಹೋರಾಟ ಬಹು ಆತಂಕವಾಗಿತ್ತು. ಜೀವದ ಹಂಗು ತೊರೆದು ಹದಿಹರೆಯದ ವಯಸ್ಸಿನ ಪ್ರಭಾವದಿಂದ ಹಿಂದುಮುಂದು ನೋಡದೆ ದಾಳಿ ಮಾಡುತ್ತಿದ್ದರು ಎಂದು ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಇವರು ಯಾವುದೇ ಸಿದ್ಧಾಂತಗಳ ಮೂಲಕ ಹೋರಾಡಲು ಪ್ರಯತ್ನಿಸಲಿಲ್ಲ. ಒಟ್ಟಿನಲ್ಲಿ ಇವರ ಗುರಿ ನಿಜಾಮ ಭಾರತದ ಒಕ್ಕೂಟಕ್ಕೆ ಸೇರಬೇಕಿತ್ತು ಅಷ್ಟೇ. ಈ ಬಗೆಯ ಮನೋಧೋರಣೆ ಕಾಂಗ್ರೆಸ್ ನಾಯಕರದ್ದಾಗಿತ್ತು. ಇದೇ ಬಗೆಯ ಹೋರಾಟ ತೆಲಂಗಾಣದಲ್ಲಿ ಕಾಣಬರುತ್ತದೆ. ತೆಲಂಗಾಣ ಹೋರಾಟ ಸಾಂಘಿಕ ಮತ್ತು ತಾತ್ವಿಕ, ಸೈದ್ಧಾಂತಿಕ ನೆಲೆಗಟ್ಟಿನಿಂದ ಕೂಡಿದ್ದಾಗಿತ್ತು. ಆದರೆ ಇಲ್ಲಿನ ಹೋರಾಟದಲ್ಲಿ ಈ ಚಿಂತನೆ ಕಂಡುಬರುವುದಿಲ್ಲ.

ಭೂಗತ ಚಳವಳಿ ರಜಾಕಾರರ ಕಚೇರಿ, ಪೊಲೀಸ್ ಠಾಣೆ, ಸುಂಕದ ಕಟ್ಟೆ, ಅಂಚೆಕಚೇರಿ, ಕರೋಡಗಿರಿನಾಕಾ ನಾಶ, ದರೋಡೆ, ಪೊಲೀಸ್ ಚೌಕಿ ಮೇಲೆ ದಾಳಿ, ತಹಶೀಲ್ದಾರ ಡೇರೆಗೆ ಬೆಂಕಿ, ಪಂಪಹೌಸ್ ದಾಳಿ, ರಜಾಕಾರರ ಗುಡಿಸಿಲಿಗೆ ಬೆಂಕಿ, ಕಂದಾಯ ಅಧಿಕಾರಿಯ ಮೇಲೆ ದಾಳಿ,

ಹೀಗೆ ತುಂಗಭದ್ರಾ ಸೇತುವೆ, ಸಿಂಧನೂರು, ಎಡವಾಳ, ರಾಯಚೂರು, ಮ್ಯಾಳೂರು, ಗಾಣಧಾಳ, ಮಾನ್ವಿ, ಚೀಕಲಪರ್ವಿ, ಆಯನೂರು, ಮದ್ಲಾಪುರ, ಮುಂತಾದ ಕಡೆಗಳಲ್ಲಿ ದಾಳಿ ಮಾಡಿ ನಾಶ ಪಡಿಸುವ ಕಾರ್ಯದಲ್ಲಿ ಮಗ್ನರಾಗಿದ್ದರು. ಬಾಂಬ್ ದಾಳಿ ಈ ಹೋರಾಟದಲ್ಲಿ ಮುಖ್ಯ ಸ್ಥಾನ ಪಡೆದಿತ್ತು. ಒಟ್ಟಾರೆ ಎಲ್ಲ ಬಗೆಯಲ್ಲಿ ನಿಜಾಮ, ರಜಾಕಾರರ ವಿರುದ್ಧ ಹೋರಾಡಿದರು. ಜೀವ ಹೋಗುವ ಸಂದರ್ಭಗಳಲ್ಲಿ ಉಪಾಯದಿಂದ ಪಾರಾದರು. ಒಟ್ಟಾರೆಯಾಗಿ ಹೈದರಾಬಾದ್ ಸಂಸ್ಥಾನ ಭಾರತ ಒಕ್ಕೂಟಕ್ಕೆ ಸೇರಿಸಲು ಪ್ರಯತ್ನಿಸಿರುವುದು ಗಮನಾರ್ಹ(ಹವಳೆ ೨೦೧೦: ೧೩೪-೧೪೪).

ರಾಯಚೂರಿನ ಹೋರಾಟಗಾರರು ಮಾಡಿದ ಹೋರಾಟದ ಸ್ವರೂಪ ಸಾಂಘಿಕವಾಗಿರದೆ ಚದುರಿ ಚದುರಿ ಹೋಗಿತ್ತು. ನಿಜಾಮನ ದಮನಕಾರಿ ನೀತಿ ಇಲ್ಲಿನ ಹೋರಾಟಗಾರರನ್ನು ಕೆರಳಿಸಿತು. ಕ್ರಾಂತಿಕಾರಿ ಹೋರಾಟಕ್ಕೆ ದಾರಿ ಮಾಡಿತು. ಇದರಿಂದ ರಜಾಕಾರರ ವಿರುದ್ಧ ಭೂಗತ ಚಳವಳಿಯನ್ನು ಮಾಡಬೇಕಾಯಿತು. ಇಲ್ಲಿನ ಹೋರಾಟಗಾರರು ಸಾಮೂಹಿಕ ಪ್ರತಿಭಟನೆಯನ್ನು ಹುಟ್ಟು ಹಾಕಲು ಪ್ರಯತ್ನಿಸಲಿಲ್ಲ. ಬದಲಿಗೆ ಅವರು ಜನವಿರೋಧಿ ಅಧಿಕಾರಿಗಳನ್ನು ಅಥವಾ ನಿಜಾಮ ಸರ್ಕಾರದ ಅಧಿಕಾರಿಗಳನ್ನು ವಿರೋಧಿಸುವ ಕೆಲಸದಲ್ಲಿ ತೊಡಗಿದರು. ಈ ಕಾರ್ಯ ಸಹ ಸಾಮೂಹಿಕವಾಗಿ ನಡೆಯಲಿಲ್ಲ. ಇರುವ ಕಡೆಯೇ ಕಡಿಮೆ ಪ್ರಮಾಣದಲ್ಲಿನ ಹೋರಾಟಗಾರರು ಅಲ್ಲಲ್ಲಿ ಶಿಬಿರಗಳನ್ನು ಸ್ಥಾಪಿಸಿಕೊಂಡು ಹೋರಾಟಕ್ಕಿಳಿದರು. ಕೊನೆಗೆ ಯೂನಿಯನ್ ಸರ್ಕಾರದ ಸೈನಿಕ ಕಾರ್ಯಾಚರಣೆಯ ಮೂಲಕವೇ ಭಾರತದ ಒಕ್ಕೂಟಕ್ಕೆ ಹೈದರಾಬಾದನ್ನು ಸೇರಿಸಿದ್ದದ್ದು ಗಮನಾರ್ಹ.

ರಾಯಚೂರು ಜಿಲ್ಲೆಯ ವಿಮೋಚನೆಗಾಗಿ ಜನಸಾಮಾನ್ಯರು ಹೋರಾಡಿದರೇ ಎಂಬ ಪ್ರಶ್ನೆ ಬರುತ್ತದೆ. ಜನಸಾಮಾನ್ಯರನ್ನು ಕುರಿತು ರಾಮಣ್ಣ ಹವಳೆ ಅವರ ಮಾತಿನಲ್ಲಿ ಹೇಳುವುದಾದರೆ, "ಆರ್ಥಿಕ ಸ್ಥಿತಿಯಂತೂ ಅಧಃಪತನಕ್ಕೆ ತಳ್ಳಲ್ಪಟ್ಟಿತ್ತು. ಮುಖ್ಯವಾಗಿ ಮಳೆ ಅವಲಂಬಿತ ರೈತ ಉತ್ಪನ್ನಗಳು, ಭೂಮಿಯ ಹೆಚ್ಚು ಭಾಗ ನವಾಬನ ಆಪ್ತರಿಗೆ, ಜಮೀನ್ದಾರರಿಗೆ, ದೇಸಾಯಿ, ವತನದಾರರಿಗೆ ಸೇರಿತ್ತು. ಸರ್ಕಾರ ಕೊಡಮಾಡುವ ಮೂಲಭೂತ ಸೌಲಭ್ಯಗಳು ಯಾವುದೇ ಗ್ರಾಮಾಂತರ ಪ್ರದೇಶಕ್ಕೆ ಇರಲಿಲ್ಲ. ಕುಡಿಯುವ ನೀರಿಗೂ ತೊಂದರೆ. ಆಳವಾದ ಬಾವಿ, ಸೇದೋ ಹಗ್ಗ ಹೊರಲಿಕ್ಕೆ ಕೂಲಿಯಾಳು ಇಲ್ಲವೆ ಬಂಡಿಗಳೇ ಇದ್ದವು. ಹಳ್ಳ ಇದ್ದಲ್ಲಿ ಒರತೆ ತೆಗೆದು ನೀರು ತುಂಬುವ ವ್ಯವಸ್ಥೆ, ಕೆರೆಗಳಿದ್ದಲ್ಲಿ ಕೆರೆ ನೀರೇ ಮನುಷ್ಯರಿಗೂ ದನಗಳಿಗೂ ಸ್ಪೃಶ್ಯ-ಅಸ್ಪೃಶ್ಯತೆ ಆಚರಿಸಲ್ಪಡುತ್ತಿತ್ತು. ಅವರ ಜೀವನವಂತೂ ಊಹಿಸಲು ಸಾಧ್ಯವಾಗಲಾರದಷ್ಟು ಕಷ್ಟದ ಪರಿಸ್ಥಿತಿ. ಅವರೋ ಕೂಲಿಕಾರರಾಗಿ, ಚಪ್ಪಲಿ ಹೊಲಿಯುವವರಾಗಿ, ಸತ್ತ ದನಗಳನ್ನು ಹೊರುವ ಕೆಲಸ ಮಾಡುತ್ತ ಜೀವನ ಸಾಗಿಸುತ್ತಿದ್ದರು. ಇದು ಇಷ್ಟು ಗಂಭೀರ ಚಿಂತಾಜನಕ ಸ್ಥಿತಿಯಲ್ಲಿರುವಾಗ ಸತತವಾದ ಬರಗಾಲದ ಬವಣೆ ಬೇರೆ. ಇದಕ್ಕೆ ಸರ್ಕಾರ ಸ್ಪಂದಿಸುತ್ತಿರಲಿಲ್ಲ. ಹೊಲಗಂದಾಯ, ಲೆವಿ, ನಜರಾಣ ಆದಾಯ ಮೊದಲಾದ ಕರಗಳಿಂದ ಜನರು ಕಂಗೆಟ್ಟಿದ್ದರು ಎಂಬುದಾಗಿ ತಿಳಿದುಬರುತ್ತದೆ(ಹವಳೆ ೨೦೧೦: ೩೮-೩೯). ಇದಕ್ಕೆ ಇನ್ನೊಂದು ಮಾತು ಸೇರಿಸುವುದಾದರೆ ಸ್ಥಳೀಯವಾಗಿರುವ ಲೇವಾದೇವಿಗಾರರು ಮತ್ತು ಜಮೀನ್ದಾರರು ಜನಸಾಮಾನ್ಯರಿಗೆ ಸಾಲದ ನೆಪದಲ್ಲಿ ಭೂಮಿಯನ್ನು ಕಸಿದುಕೊಳ್ಳುವ ಪ್ರವೃತ್ತಿಯೂ ಇದ್ದಿತೆಂದು ಗಮನಿಸಬಹುದು.

ನಿಜಾಮನಿರಲಿ, ಬ್ರಿಟಿಶರಿರಲಿ ಜನರು ಪ್ರತಿಭಟನೆಗೆ ಇಳಿಯದಂತೆ ನೋಡಿಕೊಂಡರು. ತಮ್ಮ ಆಡಳಿತಾಧಿಕಾರಿಗಳ ಮೂಲಕ ದುಡಿಯುವ ವರ್ಗವನ್ನು ನಿಯಂತ್ರಿಸಲಾಗುತ್ತಿತ್ತು. ದುಡಿಯುವ

ವರ್ಗ ದುಡಿಯುತ್ತಲೇ ಇರಬೇಕು. ಹೋರಾಟದ ಕಡೆ ಮುಖ ಮಾಡಲಾರದಂತೆ ನೋಡಿಕೊಂಡದ್ದು ಜನಸಾಮಾನ್ಯರು ಈ ಚಳವಳಿಯಲ್ಲಿ ಭಾಗವಹಿಸಿದಿದ್ದುದಕ್ಕೆ ಕಾರಣ. ಜನಸಾಮಾನ್ಯರಿಗೆ ಹೋರಾಟ ಎಂಬ ಶಬ್ದವೇ ಗೊತ್ತಿರಲಿಲ್ಲವೆಂದರೂ ತಪ್ಪಾಗಲಿಕ್ಕಿಲ್ಲ. ಕಾರ್ಮಿಕರು, ದಲಿತರು, ಶೋಷಣೆಗೆ ಒಳಗಾಗಿದ್ದರಿಂದ ಸಹಜವಾಗಿಯೇ ಈ ಹೋರಾಟದಲ್ಲಿ ಪಾಲ್ಗೊಂಡಿರಲಿಲ್ಲವೆನ್ನಬಹುದಾಗಿದೆ.

ಈ ಪ್ರದೇಶದ ಮುಸ್ಲಿಮರು ನಿಜಾಮ ಮತ್ತು ರಜಾಕಾರರ ವಿರುದ್ಧದ ಚಳವಳಿಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನೆ ಚಳವಳಿಯಲ್ಲಿ ಮುಸ್ಲಿಮರು ಪಾಲ್ಗೊಂಡು ಹೋರಾಡಿದರೇ ಎಂಬ ಪ್ರಶ್ನೆಯನ್ನು ಸರಳವಾಗಿ ನೋಡುವಂತಿಲ್ಲ. ನೂರಾರು ಹಳ್ಳಿಗಳಲ್ಲಿ ದುಡಿದು ಬದುಕುವ ಮುಸ್ಲಿಂರು ಮತ್ತು ಒಳಪಂಗಡದ ಪಿಂಜಾರರು ಈ ಸಂದರ್ಭದಲ್ಲಿ ತಲ್ಲಣಕ್ಕೀಡಾಗಿರುವುದು ಕಂಡುಬರುತ್ತದೆ. ನಿಜಾಮರು ರಜಾಕಾರರ ಪರವಾಗಿದ್ದರೆ ಹಿಂದೂಗಳ ಸಿಟ್ಟಿಗೆ ಗುರಿಯಾಗಬೇಕು. ಯಾಕೆಂದರೆ ತಲೆತಲಾಂತರದಿಂದ ಒಟ್ಟಿಗೆ ಬದುಕುತ್ತ ಆಶ್ರಯಿಸಿಕೊಂಡಿದ್ದವರು ನಿಜಾಮರ ರಜಾಕಾರರನ್ನು ವಿರೋಧಿಸಿದರೆ ಧರ್ಮ ವಿರೋಧಿಗಳು, ಜನಾಂಗ ವಿರೋಧಿಗಳು ಎಂಬ ಅಪವಾದಕ್ಕೆ ಗುರಿಯಾಗಬೇಕು. ತಟಸ್ಥವಾಗಿಯೂ ಉಳಿಯುವಂತಿರಲಿಲ್ಲ. ಸಂದರ್ಭ ಹೇಗಿತ್ತೆಂದರೆ ಹಿಂದೂಗಳ ಕಡೆ ಸ್ಥಳೀಯ ಬಡ ಮುಸ್ಲಿಮರು ಸೇರಿದರೂ ಅವರನ್ನು ಅನುಮಾನಿಸುವ ಸಾಧ್ಯತೆಗಳೇ ಹೆಚ್ಚಿದವು. ಇಂತಹ ಹಲವು ಸ್ಥಳೀಯ ಮುಸ್ಲಿಮರು ಸಿಕ್ಕಿಕೊಂಡಿದ್ದರು. ಹಾಗೆಯೇ ಮುಂದುವರೆದು ಈ ಪ್ರಾಂತ್ಯದಲ್ಲಿ ನಿಜಾಮರ ಬೆಂಬಲಿಗರಂತೆ ವರ್ತಿಸಿದ ರಜಾಕಾರರು ಮಾಡಿದ ದಾಳಿ, ದೌರ್ಜನ್ಯ, ಅತ್ಯಾಚಾರಗಳಿಂದ ಜನರು ತಲ್ಲಣಗೊಂಡರು. ಹಿಂಸೆಗೆ ಒಳಗಾದರು. ಮನೆಮಾರು ತೊರೆದು ಗಡಿದಾಟಿ ವಲಸೆ ಹೋಗುವಂತಾಯಿತು. ಜನರೇ ಸಂಘಟಿತರಾಗಿ ಹೋರಾಡುವ ಅನಿವಾರ್ಯತೆ ಎದುರಾಯಿತು. ಇದರಿಂದ ಈ ಪ್ರಾಂತ್ಯದಲ್ಲಿ ಹಿಂದೂ ಮತ್ತು ಮುಸ್ಲಿಂ ಜನಾಂಗ ಇಬ್ಬರೂ ಹಾನಿಗೊಳಗಾದರು. ಮನಸ್ಸು ಕದಡಿದವು. ಇದರಲ್ಲಿ ಅನಂತರ ರಾಜಕೀಯವೂ ಸೇರಿ ಮತ್ತಷ್ಟು ಅಂತರ ಏರ್ಪಡುವಂತಾಯಿತು. ಆದರೆ ದುಡಿದು ಬದುಕುವ ಎರಡು ಜನಾಂಗಗಳ ಮಧ್ಯ ತನ್ನಿಂದ ತಾನೇ ಏರ್ಪಡುವ ಸಹಬಾಳ್ವೆಯನ್ನು ಒಡೆಯಲು ಯಾರಿಂದಲೂ ಸಾಧ್ಯವಾಗದು ಎಂಬುದನ್ನು ಈ ಪ್ರಾಂತ್ಯದಲ್ಲಿ ಕಾಣಬಹುದೆಂದು" ಅಮರೇಶ ನುಗಡೋಣಿಯವರು ಉಲ್ಲೇಖಿಸುತ್ತಾರೆ(ನುಗಡೋಣಿ ೨೦೧೦: ೧೧೮).

ರಾಮಣ್ಣ ಹವಳೆ ಮತ್ತು ಅಮರೇಶ ನುಗಡೋಣಿಯವರ ಹೇಳಿಕೆಗಳನ್ನಾಧರಿಸಿ ಅವಲೋಕಿಸಿದಾಗ ಜನಸಾಮಾನ್ಯರು ಮತ್ತು ಮುಸ್ಲಿಮರು ನಿಜಾಮ ಮತ್ತು ರಜಾಕಾರರ ವಿರುದ್ಧದ ಹೋರಾಟಗಳಲ್ಲಿ ಭಾಗವಹಿಸಲಾಗಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಈ ಹೋರಾಟ ಯಾರಿಂದ ನಡೆಯಿತೆಂಬುದು ಸಹಜವಾಗಿಯೇ ಅರ್ಥವಾಗುತ್ತದೆ. ಅದು ಬ್ರಾಹ್ಮಣ, ವೈಶ್ಯ ಮತ್ತು ಲಿಂಗಾಯತರ ಹಾಗೂ ಮಧ್ಯಮವರ್ಗದ ಜನರ ಹೋರಾಟವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಗೋಪಾಲರಾವ್ ಹೇಜೀಬ್ ಅವರು "ಕಮ್ಯುನಿಸ್ಟರು ತಮ್ಮ ಕಲ್ಪನೆಯ ಕ್ರಾಂತಿಯನ್ನು ಸಾಕಾರ ಗೊಳಿಸಲು ಹೈದರಾಬಾದ್ ರಾಜ್ಯದ ತೆಲಂಗಾಣ ಪ್ರದೇಶವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿ ಕೊಂಡರು. "ರಕ್ತ ಕ್ರಾಂತಿಯಿಂದಲೇ ಹೊಸ ಸಮಾಜ ಜನ್ಮ ತಾಳುತ್ತದೆ" ಎಂಬ ಕಾರ್ಲ್ ಮಾರ್ಕ್ಸ್‌ನ ಕಲ್ಪನೆಯನ್ನು ಅವರು ತೆಲಂಗಾಣದಲ್ಲಿ ಕಾರ್ಯಗತಗೊಳಿಸಿದರು. ಸಮಾಜವಾದವು ಶಾಂತಿ ಪ್ರಕ್ರಿಯೆಗಳ ಮೂಲಕ ಸಂಪನ್ನಗೊಳಿಸಬೇಕಾದ ಸಿದ್ಧಾಂತವಲ್ಲ. ಪ್ರತಿಗಾಮಿ ಶಕ್ತಿಗಳ ವಿರುದ್ಧ ಹೋರಾಡಿದ ಲಕ್ಷಾಂತರ ಜನರ ಶವಗಳ ಕ್ರಾಂತಿಯ ಕಾರ್ಯಧ್ವನಿ ಮೊಳಗಬೇಕು ಎಂದು ಮಾವೊತ್ಸೆತುಂಗ್

ಹೇಳಿಲ್ಲವೆ? ಕಮ್ಯುನಿಸ್ಟರು ತೆಲಂಗಾಣವನ್ನು ಕೇಂದ್ರವನ್ನಾಗಿ ಮಾಡಿಕೊಂಡು ರಾಷ್ಟ್ರದಾದ್ಯಂತ ರಕ್ತಕ್ರಾಂತಿಯ ಸಂದೇಶವನ್ನು ಹರಡಲು ಸಿದ್ಧತೆ ಮಾಡಿಕೊಂಡರೆಂದು ಹೇಜೀಬ್ ಅವರು ತೆಲಂಗಾಣ ಹೋರಾಟವನ್ನು ತರಾಟೆಗೆ ತೆಗೆದುಕೊಂಡದ್ದು ಕಂಡುಬರುತ್ತದೆ(ಹೇಜೀಬ್ ೨೦೦೧: ೫೯). ಹೇಜೀಬ್ ಅವರು ಸಮಾಜವಾದವನ್ನು ಕುರಿತು ನೀಡಿದ ಹೇಳಿಕೆಗೆ ಪ್ರತಿಯಾಗಿ ಕಾಂಗ್ರೆಸ್ ೧೯೪೭ರ ನಂತರ ಮಾಡಿದ್ದೇನು ಎಂಬ ಪ್ರಶ್ನೆ ಎದುರಾಗುತ್ತದೆ ಈ ಪ್ರಾಂತ್ಯದಲ್ಲಿ ಅದರ ಹೋರಾಟದ ಸ್ವರೂಪವೂ ಕೂಡಾ ಮದ್ದು, ಗುಂಡು, ಪಿಸ್ತೂಲ್, ರೈಫಲ್, ಬಂದೂಕುಗಳಿಂದ ಕೂಡಿರುವುದನ್ನು ಗಮನಿಸ ಬೇಕೆನಿಸುತ್ತದೆ.

"ವಿಲೀನ ಚಳವಳಿ ಯಶಸ್ವಿಯಾಗಿ ಮುಂದುವರೆಯುತ್ತಿದ್ದುದನ್ನು ಕಂಡು ಬೆರಗಾದ ನಿಜಾಮ ತನ್ನ ಸಂಸ್ಥಾನದ ಲಿಂಗಾಯತ ಹಾಗೂ ಬ್ರಾಹ್ಮಣ ಸಮುದಾಯಗಳನ್ನು ತನ್ನ ಪರ ಮಾಡಿಕೊಳ್ಳುವ ಕುತಂತ್ರ ಪ್ರಾರಂಭಿಸಿದನು. ಲಿಂಗಾಯತ ಮುಂದಾಳುಗಳಾಗಿದ್ದ ಬೀದರ್‌ನಿಂದ ಮಲ್ಲಿಕಾರ್ಜುನಪ್ಪ ತೋಡಕೇರಿ, ಶಹಾಪುರದ ಬಸವರಾಜ ಪಾಟೀಲ್, ರಾಯಚೂರಿನ ಬ್ರಾಹ್ಮಣ ಸಮುದಾಯದ ಧುರೀಣರಾಗಿದ್ದ ಜಿ.ರಾಮಾಚಾರ್‌ರವರನ್ನು ನಿಜಾಮ ಕ್ಯಾಬಿನೆಟ್ ಮಂತ್ರಿಗಳನ್ನಾಗಿ ಮಾಡಿದನು. ಇದೇ ರೀತಿ ಸಂಸ್ಥಾನದ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳನ್ನು ಬುಟ್ಟಿಗೆ ಹಾಕಿಕೊಳ್ಳಲು ಪ್ರಯತ್ನಿಸಿದನು. ಅವರಿಗೆಲ್ಲಾ ಹಲವಾರು ಪ್ರತಿಷ್ಠಿತ ಗೌರವ-ಬಿರುದುಗಳನ್ನೆಲ್ಲಾ ನೀಡಿದನು. ಅವರ ನಾಯಕರಾದ ಬಿ. ಶ್ಯಾಮಸುಂದರ್‌ರವರನ್ನು ಕ್ಯಾಬಿನೆಟ್ ಮಂತ್ರಿಗಳನ್ನಾಗಿ ಮಾಡಲಾಯಿತು. ಅವರು ನಿಜಾಮರಿಗೆ ನಿಷ್ಠರಾಗಿದ್ದರು. ಆದರೆ ಲಿಂಗಾಯತ ಹಾಗೂ ಬ್ರಾಹ್ಮಣ ಸಮುದಾಯಕ್ಕೆ ಸೇರಿದ್ದ ಮಂತ್ರಿಗಳು ರಜಾಕಾರರ ಅತ್ಯಾಚಾರದಿಂದ ಬೇಸರ ಪಟ್ಟುಕೊಂಡಿದ್ದರು. ರಜಾಕಾರರ ದೌರ್ಜನ್ಯವನ್ನು ತಡೆಯುವಲ್ಲಿ ನಿಜಾಮ ವಿಫಲನಾದಾಗ ಇವರೆಲ್ಲ ೨೨-೨-೧೯೪೮ರಂದು ನಿಜಾಮನ ಮಂತ್ರಿ ಮಂಡಲದಿಂದ ಹೊರಬಂದರು. ಜವಾಬ್ದಾರಿ ಸರ್ಕಾರದ ರಚನೆಯನ್ನು ಒತ್ತಾಯಿಸಿ ನಡೆಯುತ್ತಿದ್ದ ಚಳವಳಿಗೆ ಸೇರಿಕೊಂಡರೆಂದು" ಬಿ.ಸಿ. ಮಹಾಬಲೇಶ್ವರಪ್ಪ ಅವರು ಹೇಳುತ್ತಾರೆ(ಮಹಾಬಲೇಶ್ವರಪ್ಪ ೧೯೯೭: ೮೪). ನಿಜಾಮ ಮತ್ತು ರಜಾಕಾರರ ವಿರುದ್ಧ ಹೋರಾಡಿದವರು ಲಿಂಗಾಯತರು, ಬ್ರಾಹ್ಮಣರು ಎಂಬುದಾಗಿಯೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು ನಿಜಾಮನ ಪರವಾಗಿದ್ದವೆಂದೂ ಬಿ.ಸಿ. ಮಹಾಬಲೇಶ್ವರಪ್ಪ ತಿಳಿಸುತ್ತಾರೆ. ಅವರಿಗೆ ಜಮೀನ್ದಾರರ ಮನೆಗಳಲ್ಲಿ ಜೀತ, ಬಿಟ್ಟಿ ಚಾಕರಿ ಮಾಡುವುದನ್ನು ಬಿಟ್ಟರೆ ಮತ್ತೊಂದು ಗೊತ್ತಿರಲಿಲ್ಲ. ಮಾತ್ರವಲ್ಲದೆ ಅನಕ್ಷರಸ್ಥರಾಗಿಯೂ ಇದ್ದರು. ಒಬ್ಬ ಜಮೀನ್ದಾರನನ್ನು ಎದುರು ಹಾಕಿಕೊಂಡು ಬದುಕುವ ಧೈರ್ಯ ಈ ಸಮುದಾಯಗಳಿಗೆ ಇರಲಿಲ್ಲ. ರಜಾಕಾರರ ವಿರುದ್ಧ ಹೋರಾಟ ಮಾಡಿದ್ದು ಲಿಂಗಾಯತ ಮತ್ತು ಬ್ರಾಹ್ಮಣರೆಂದು ಬಹಳ ಸ್ಪಷ್ಟವಾಗಿ ಹೇಳುತ್ತಾರೆ. "ಬ್ರಿಟಿಶರಿಂದ ಭಾರತ ಸ್ವಾತಂತ್ರ್ಯಗೊಂಡಾಗ ನಿಜಾಮನು ತನ್ನ ಸಂಸ್ಥಾನವನ್ನು ಸ್ವತಂತ್ರ ಭಾರತದಲ್ಲಿ ವಿಲೀನಗೊಳಿಸಲು ನಿರಾಕರಿಸಿ ಸ್ವತಂತ್ರ ರಾಜ್ಯವನ್ನಾಗಿ ಉಳಿಸಿಕೊಂಡು ಆಳಲು ನಿಂತನು. ಇಲ್ಲಿಂದಲೇ ಈ ಪ್ರಾಂತ್ಯದ ಜನರು ಹೋರಾಟಕ್ಕೆ ತೀವ್ರವಾಗಿ ಅಣಿಯಾದದ್ದು. ಹಾಗೆ ನೋಡಿದರೆ ಬ್ರಿಟಿಶರ ಅಧೀನದಲ್ಲಿ ನಿಜಾಮರು, ನಿಜಾಮರ ಅಧೀನದಲ್ಲಿ ಜಹಗೀರುದಾರರು, ಜಹಗೀರ್‌ದಾರರ ಅಧೀನದಲ್ಲಿ ದೇಶಮುಖ, ದೇಸಾಯಿ, ಪಟೇಲ, ಗೌಡ, ಮಾಲಿಗೌಡ, ಪೊಲೀಸ್ ಗೌಡ, ಕುಲಕರ್ಣಿ ಮುಂತಾದವರಿದ್ದರು. ಇವರ ಕೈಕೆಳಗೆ ದುಡಿಯುವ ಸಾಮಾನ್ಯ ಜನರು ತಲೆತಲಾಂತರದಿಂದ ಜಮೀನುದಾರರ ಅಧೀನದಲ್ಲಿರುವ ಅವರಿಗೆ ಸ್ವಾತಂತ್ರ್ಯದ

ಕಲ್ಪನೆ ಕನಸು ಇರಲಿಲ್ಲ. ನಿಜಾಮ ಆಡಳಿತದಿಂದ ಜಮೀನುದಾರರಿಗೆ ಕುತ್ತು ಬಂದಾಗ, ಆಗ ಹೋರಾಡಲು ಜಮೀನ್ದಾರರ ಪರವಾಗಿ ಸಾಮಾನ್ಯರೇ ನಿಲ್ಲಬೇಕಾಯಿತು. ರಜಾಕಾರರು ಜಮೀನುದಾರರ ಮನೆಗೆ ದಾಳಿ ಮಾಡಿದಾಗಲೂ ಅವರ ರಕ್ಷಣೆಗೆ ಸಾಮಾನ್ಯ ಜನರೇ ನಿಂತರು" ಎಂಬ ಅಮರೇಶ ನುಗಡೋಣಿಯವರ ಹೇಳಿಕೆ ಈ ನಿಟ್ಟಿನಲ್ಲಿ ಗಮನಾರ್ಹ(ನುಗಡೋಣಿ ೨೦೧೦: ೧೧೬-೧೧೭).ಈ ಪ್ರದೇಶದಲ್ಲಿ ನಿಜಾಮ ಮತ್ತು ರಜಾಕಾರರ ವಿರುದ್ಧ ತೀವ್ರವಾದ ಹೋರಾಟವನ್ನು ರೂಪಿಸಲು ದೊಡ್ಡ ದೊಡ್ಡ ಜಹಗೀರ್‌ದಾರರು, ಜಮೀನ್ದಾರರು, ದೇಸಾಯಿಗಳು, ನಾಡಗೌಡರು, ಸಂಸ್ಥಾನಿಕರು ಮತ್ತು ಮಧ್ಯಮ ವರ್ಗದ ಭೂ ಹಿಡುವಳಿದಾರರು ಭಾಗವಹಿಸಲಿಲ್ಲ ಯಾಕೆ ಎಂಬುದು ಕುತೂಹಲ ಮೂಡಿಸುತ್ತದೆ.

ಎನ್.ಕೆ. ವಸಂತರಾಜ್ ಅವರು ಜಾಗೀರ್‌ದಾರರ ಪಾಳೆಯಗಾರಿಕೆ ಕುರಿತು ಹೀಗೆ ಹೇಳುತ್ತಾರೆ: "ಇಡೀ ರಾಜ್ಯ ಪಾಳೆಯಗಾರಿಕೆ ವ್ಯವಸ್ಥೆ ಅದರ ಎಲ್ಲ ಕ್ರೌರ್ಯಗಳೊಂದಿಗೆ ಭದ್ರವಾಗಿ ಬೇರೂರಿದ್ದ ಪ್ರದೇಶವಾಗಿತ್ತು. ಹೈದರಾಬಾದ್ ರಾಜ್ಯದ ಒಟ್ಟು ಜಮೀನಿನ ಶೇ. ೬೦ ಭಾಗ ಜಾಗೀರ್‌ದಾರಿ ಪದ್ಧತಿಯಲ್ಲಿ ಮತ್ತು ಶೇ. ೧೦ ನಿಜಾಮನ ಸ್ವಂತ ಜಮೀನು ಸರ್ಫ್ ಎ ಖಾಸ್ ಆಗಿತ್ತು. ಈಗಿನ ಹೈದರಾಬಾದ್ ಜಿಲ್ಲೆ ನಿಜಾಮನ ಸ್ವಂತು ಜಾಗೀರಾಗಿತ್ತು. ನಿಜಾಮ ಮತ್ತು ಅವನ ದೊಡ್ಡ ಕುಟುಂಬ ವರ್ಷಕ್ಕೆ ಸುಮಾರು ಎರಡು ಕೋಟಿ ರೂ. ಗಳನ್ನು ವೆಚ್ಚ ಮಾಡುತ್ತಿತ್ತು. ಜಾಗೀರ್‌ದಾರಿ ಇದ್ದ ಪ್ರದೇಶಗಳಲ್ಲಿ ಎಲ್ಲ ಜಮೀನು ಜಾಗೀರ್‌ದಾರನದ್ದೇ. ಮಾತ್ರವಲ್ಲ, ಅವನು ಎಲ್ಲವೂ ಆಗಿದ್ದ. ಆಡಳಿತ, ಪೊಲೀಸು, ಕೋರ್ಟು ಎಲ್ಲದಕ್ಕೂ ಅವನೇ ಮುಖ್ಯಸ್ಥ. ಆದ್ದರಿಂದ ಜಾಗೀರು ಪ್ರದೇಶಗಳಲ್ಲಿ ಅತ್ಯಂತ ಹೇಯವಾದ ದಬ್ಬಾಳಿಕೆ, ಪಾಳೆಯಗಾರಿಕೆ ಶೋಷಣೆ ಇತ್ತು. ಕಂದಾಯಕ್ಕೆ ಯಾವುದೇ ನಿಯಮ ಕಟ್ಟಳೆಗಳು ಇರಲಿಲ್ಲ. ಜಾಗೀರ್‌ದಾರನ ಮದುವೆ, ಕಾರುಕೊಂಡಾಗ, ಅರಮನೆ ವಿಸ್ತರಿಸುವಾಗ ಹೀಗೆ ಮನಸ್ಸಿಗೆ ಬಂದಂತೆ ಜನಸಾಮಾನ್ಯರ ಮೇಲೆ ಕಂದಾಯ ಹಾಕಲಾಗುತ್ತಿತ್ತು. ರೈತರ ಮನೆಯಲ್ಲಿರುವ ವಸ್ತುಗಳ ಮೇಲೂ ಕಂದಾಯ ಕೊಡಬೇಕಾಗುತ್ತಿತ್ತು. ಅಲ್ಲದೆ ಹಲವಾರು ವಸ್ತುಗಳು, ಸೇವೆಗಳನ್ನು ಆತನಿಗೆ ಪುಕ್ಕಟ್ಟೆ ಕೊಡಬೇಕಾಗಿತ್ತು. ದಿವಾನ ಪ್ರದೇಶಗಳಲ್ಲಿ ಪಾಳೆಯಗಾರಿಕೆ ಶೋಷಣೆ ಕಡಿಮೆ ಇರಬೇಕಾಗಿತ್ತು. ಆದರೆ ಇಲ್ಲೂ ವಿಶಿಷ್ಟ ರೀತಿಯ ಪಾಳೆಯಗಾರರು ಶೋಷಣೆಯನ್ನು ಇನ್ನಷ್ಟು ದುರ್ಬರಗೊಳಿಸಿದ್ದರು. ದೇಶಪಾಂಡೆ, ದೇಶಮುಖ್ ಮುಂತಾಗಿ ಕರೆಯಲಾಗುತ್ತಿದ್ದ ಇವರು ಸರ್ಕಾರ ಮತ್ತು ರೈತರ ನಡುವೆ ಭೂ ಕಂದಾಯ ವಸೂಲಿ ಮಾಡುವ ಮಧ್ಯವರ್ತಿಗಳಾಗಿದ್ದರು. ಆದರೆ ೧೯ನೆಯ ಶತಮಾನದ ಮಧ್ಯಭಾಗದಲ್ಲೇ ಈ ಪದ್ಧತಿಯನ್ನು ರದ್ದು ಮಾಡಲಾಗಿತ್ತು. ಇವರು ತಮ್ಮ ಹಳೇ ಸ್ಥಾನಮಾನ ಬಳಸಿ ಹೆಚ್ಚಾಗಿ ಬಲ ಪ್ರಯೋಗ ಮಾಡಿ ಕಾನೂನುಬಾಹಿರವಾಗಿ ದೊಡ್ಡ ಪ್ರಮಾಣದಲ್ಲಿ ಸರ್ಕಾರಿ ಮತ್ತು ರೈತರ ಜಮೀನನ್ನು ಕಬಳಿಸಿದ್ದರು. ಅದನ್ನು ರೈತರಿಗೆ ಕೊಟ್ಟು ಸಾಗುವಳಿ ಮಾಡಿಸಿ ಅವರಿಂದ ಕಂದಾಯ ವಸೂಲಿ ಮಾಡುತ್ತಿದ್ದರು. ಅವರು ಜಾಗೀರುದಾರರನ್ನು ಮೀರಿಸುವ ಪಾಳೆಯಗಾರಿಕೆ ಶೋಷಣೆ ನಡೆಸುತ್ತಿದ್ದರು"(ವಸಂತರಾಜ್ ೨೦೧೦: ೨೫೮-೫೯) ಎಂಬ ವಾಸ್ತವದ ಚಿತ್ರಣವನ್ನು ಹೊರಗೆಡವಿದೆ.

ರಾಯಚೂರು ಜಿಲ್ಲೆಯಲ್ಲಿ ಶೇಕಡಾ ೫೦-೬೦ರಷ್ಟು ಭೂಮಿ ಜಾಗೀರದಾರರ ಅಧೀನದಲ್ಲಿತ್ತು. ಒಂದು ವೇಳೆ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದ್ದರೆ ಅವರು ಭೂಮಿಯನ್ನು ಕಳೆದುಕೊಳ್ಳ ಬೇಕಾಗುತ್ತಿತ್ತು. ಹಾಗಾಗಿ ಈ ಹೋರಾಟದಲ್ಲಿ ಭಾಗವಹಿಸಲಿಲ್ಲವೆನಿಸುತ್ತದೆ. ಈ ಭೂಮಾಲಿಕರ

ಪ್ರತಿಕ್ಷಣದಲ್ಲೂ ರಕ್ಷಣೆಗಾಗಿ ಟೊಂಕಕಟ್ಟಿ ನಿಂತವರು ಜನಸಾಮಾನ್ಯರು. ಈ ಹಿನ್ನೆಲೆಯಲ್ಲಿ ಈ ಹೋರಾಟದಲ್ಲಿ ಪಾಲ್ಗೊಂಡವರು ಮೇಲ್ವರ್ಗದವರೆನ್ನಬಹುದು. ಇವರಿಂದ ತೀವ್ರವಾದ ಹೋರಾಟ ಕಂಡುಬರಲಿಲ್ಲ. ಹಾಗಾಗಿ ಕೊನೆಗೆ ಭಾರತದ ಯೂನಿಯನ್ ಸರ್ಕಾರವೇ ಮಧ್ಯಪ್ರವೇಶ ಮಾಡಬೇಕಾಯಿತು. ನಂತರ ನಿಜಾಮನಿಂದ ವಿಮೋಚನೆ ದೊರೆಯಿತೆಂದು ಹೇಳಬಹುದಾಗಿದೆ.

## ೫.೪. ಭಾರತ ಯೂನಿಯನ್ ಸರ್ಕಾರದ ಮಧ್ಯಪ್ರವೇಶ

ಹೈದ್ರಾಬಾದ್ ಸಂಸ್ಥಾನದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟ ನಿಜಾಮ ಮತ್ತು ರಜಾಕಾರರನ್ನು ನಿಯಂತ್ರಿಸಲು ಆಗಲಿಲ್ಲ. ಆಗ ಭಾರತ ಸರ್ಕಾರಕ್ಕೆ ಇದು ಕಗ್ಗಂಟಾಗಿ ಪರಿಣಮಿಸಿತು. ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ ಈ ಸಂಸ್ಥಾನವನ್ನು ಸೇರುವಂತೆ ಮಾಡಲು ಚಿಂತಿಸುತ್ತಿತ್ತು. ಅಲ್ಲದೆ ಆ ವೇಳೆಗೆ ಸ್ವತಂತ್ರ ರಾಷ್ಟ್ರವೆಂದು ಘೋಷಿಸಿಕೊಂಡಿತ್ತು. ಇದು ಬಗೆಹರಿಸಲಾರದಷ್ಟು ಬಿಗಡಾಯಿಸಿತ್ತು. ಮೇಲಾಗಿ ನಿಜಾಮ ವಿಶ್ವಸಂಸ್ಥೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದನು. ಈ ಹಿನ್ನೆಲೆಯಲ್ಲಿ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಅನೇಕ ಕಾಂಗ್ರೆಸ್ ನಾಯಕರ ಒತ್ತಾಯವೂ ಹೆಚ್ಚಾಯಿತು. ಇದರಿಂದಾಗಿ ಕ್ಯಾಬಿನೆಟ್ ಸಭೆಯನ್ನು ಕರೆದು ಹೈದರಾಬಾದ್ ಸಮಸ್ಯೆಯನ್ನು ಹೇಗೆ ಬಗೆಹರಿಸಿಕೊಳ್ಳಬೇಕೆಂದು ಗಂಭೀರ ಚಿಂತನೆ ನಡೆಯಿತು. ಆದರೆ ಈ ಕ್ಯಾಬಿನೆಟ್ ಸಭೆಯಲ್ಲಿ ಜವಾಹರಲಾಲ್ ನೆಹರು ಮತ್ತು ಸರ್ದಾರ ವಲ್ಲಭಬಾಯಿ ಪಟೇಲರ ನಡುವೆ ವೈರತ್ವ ಉಂಟಾಯಿತು. ಜೊತೆಗೆ ಪಟೇಲರು ಮಿಲಿಟರಿ ಮಾರ್ಗದಿಂದ ಈ ಸಮಸ್ಯೆಯನ್ನು ಬಗೆಹರಿಸಬೇಕೆಂದರು. ಆದರೆ ನೆಹರು ಅವರು ವಿಶ್ವಸಂಸ್ಥೆ ಮಾರ್ಗವನ್ನು ಅನುಸರಿಸಲು ಬಯಸಿದ್ದರು. ನೆಹರೂ ಅವರು ಪಟೇಲರ ಪ್ರಯತ್ನಕ್ಕೆ ಅಡ್ಡಗಾಲಾಗಿದ್ದರು. ಕೊನೆಗೆ ಅನೇಕ ಸಭೆಗಳ ಬಳಿಕ ಅಂತಿಮವಾಗಿ ಸೈನಿಕ ಕಾರ್ಯಾಚರಣೆಯನ್ನು ಕೈಗೊಳ್ಳಬೇಕೆಂದು ಸಚಿವ ಸಂಪುಟದಲ್ಲಿ ನಿರ್ಧರಿಸಲಾಯಿತು. ಈ ಸಭೆಯಲ್ಲಿ ಅಂಬೇಡ್ಕರ್ ಅವರು ಭಾಗವಹಿಸಿದ್ದು ಕೂಡ ಗಮನಾರ್ಹ. ಭಾರತ ಸರ್ಕಾರ ಸೈನಿಕ ಕಾರ್ಯಾಚರಣೆಗಾಗಿ ಹೈದರಾಬಾದಿಗೆ ಸೈನ್ಯವನ್ನು ಕಳಿಸಿದರೂ ಅದನ್ನು "ಪೊಲೀಸ್ ಕಾರ್ಯಾಚರಣೆ"ಯೆಂದು ಕರೆಯಲು ಅಂಬೇಡ್ಕರ್ ಅವರು ಸೂಚನೆ ನೀಡಿದಾಗ ಸಚಿವ ಸಂಪುಟದ ಎಲ್ಲಾ ಸದಸ್ಯರು ಅವರ ಸೂಚನೆಯನ್ನು ಸ್ವಾಗತಿಸಿದರು. ಸೈನಿಕ ಕಾರ್ಯಾಚರಣೆಯೆಂದರೆ ಒಂದು ರಾಜ್ಯ ಇನ್ನೊಂದು ರಾಜ್ಯದ ಮೇಲೆ ಆಕ್ರಮಣ ಮಾಡಿದಂತಾಗುತ್ತದೆ. ಪೊಲೀಸ್ ಕಾರ್ಯಾಚರಣೆಯೆಂದರೆ ಆಂತರಿಕ ಗಲಭೆಯನ್ನು ಹತ್ತಿಕ್ಕಲು ಮತ್ತು ಶಾಂತಿ ಸುವ್ಯವಸ್ಥೆ ಕಾಪಾಡಲು ತೆಗೆದುಕೊಂಡ ಕ್ರಮ ಎಂದು ಅರ್ಥವಾಗುತ್ತದೆ. ಆಂತರಿಕ ಗಲಭೆಗಳನ್ನು ಹತ್ತಿಕ್ಕಲು ಸೈನ್ಯವನ್ನು ಉಪಯೋಗಿಸಿದರೂ ಅದಕ್ಕೆ ಅಂತರರಾಷ್ಟ್ರೀಯ ಪ್ರತಿಕ್ರಿಯೆ ಸೃಷ್ಟಿಯಾಗುವುದಿಲ್ಲ ಎಂದು ಅಂಬೇಡ್ಕರರು ಹೇಳಿದರು. ಈ ಮಾತಿನಲ್ಲಿ ಅನುಭವಿ ರಾಜಕಾರಣಿಯ ದೂರ ದೃಷ್ಟಿಯಿತ್ತಲ್ಲದೆ ಅಂತರಾಷ್ಟ್ರೀಯ ವ್ಯವಹಾರ ಪರಿಜ್ಞಾನವಿತ್ತು ಎಂಬುದು ಗಮನಾರ್ಹ(ಹೇಜೇಬ್ ೨೦೦೧: ೭೯).

ಕೇಂದ್ರ ಸರ್ಕಾರ ನಿಜಾಮ ರಾಜ್ಯವನ್ನು ಭಾರತ ಒಕ್ಕೂಟದೊಳಗೆ ವಿಲೀನಗೊಳಿಸಲು ಪೊಲೀಸ್ ಕಾರ್ಯಾಚರಣೆ ಪ್ರಾರಂಭಿಸಲು ಬೇಕಾದ ರಾಜಕೀಯ ಪರಿಸ್ಥಿತಿಯನ್ನು ಸೃಷ್ಟಿಸಲು ಪ್ರಯತ್ನಿಸಲಾಯಿತು. ಇದೇ ಸಂದರ್ಭದಲ್ಲಿ ೯-೯-೧೯೪೮ರಂದು ಪ್ರಧಾನಮಂತ್ರಿ ಪಂಡಿತ ನೆಹರು ಕಾಮನ್‌ವೆಲ್ತ್ ಅಧಿವೇಶನದಲ್ಲಿ ಪಾಲ್ಗೊಳ್ಳಲು ಲಂಡನ್‌ಗೆ ಪ್ರಯಾಣ ಬೆಳೆಸಿದರು. ಈ ಕಡೆ ಅಪರಾಧಿಯನ್ನು ಶಿಕ್ಷಿಸಲು ಶಸ್ತ್ರಾಸ್ತ್ರಗಳನ್ನು ಬಳಸಲು ಸರದಾರ್ ಪಟೇಲರು ನಿರ್ಧರಿಸಿದರು. ಪಂಡಿತ ನೆಹರೂರವರ ಔದಾಸೀನ್ಯ ಹಾಗೂ ಅನಿಶ್ಚಿತ ಮನೋಭಾವದ ಅರಿವಿದ್ದೂ ಸಹ ಸರದಾರ್ ವಲ್ಲಭಬಾಯಿ ಪಟೇಲರು

ಹೈದರಾಬಾದ್ ಸಂಸ್ಥಾನದಲ್ಲಿದ್ದ ಗಂಭೀರ ಪರಿಸ್ಥಿತಿಯನ್ನು ಪರಿಗಣಿಸಿ ಅನಿವಾರ್ಯವಾಗಿ ೧೩-೦೯-೧೯೪೮ರಂದು ಪೊಲೀಸ್ ಕಾರ್ಯಾಚರಣೆಗೆ ಆಜ್ಞೆ ನೀಡಿದರು. ಮೇಜರ್ ಜನರಲ್ ಜೆ.ಎನ್. ಚೌದರಿ ಹಾಗೂ ದಕ್ಷಿಣ ವಿಭಾಗದ ಸೇನಾ ಮುಖ್ಯಸ್ಥ ಲೆಫ್ಟಿನೆಂಟ್ ಜನರಲ್ ಮಹಾರಾಜ ಶ್ರೀ ರಾಜೇಂದ್ರ ಸಿನ್ಹಾಜಿಯವರು ಭಾರತದ ಪಡೆಗಳ ನೇತೃತ್ವ ವಹಿಸಿದ್ದರು. ಹೈದರಾಬಾದ್ ಸಂಸ್ಥಾನವನ್ನು ಭಾರತೀಯ ಪಡೆಗಳು ೧೨ ದಿಕ್ಕಿನಿಂದ ದಾಳಿ ನಡೆಸಿದವು. ಈ ದಾಳಿಯ ಪರಿಣಾಮ ೧೭ನೆಯ ಸೆಪ್ಟೆಂಬರ್ ೧೯೪೮ರಂದು ಲಿಯಾಕ್ ಅಲಿ ಸಚಿವ ಸಂಪುಟ ತನ್ನ ರಾಜಿನಾಮೆ ನೀಡಿತು. ಎಲ್ಲಾ ರಾಷ್ಟ್ರೀಯ ನಾಯಕರನ್ನು ಬಿಡುಗಡೆ ಮಾಡಲಾಯಿತು. ಹೈದರಾಬಾದ್ ಪಡೆಗಳ ದಂಡನಾಯಕ ಮೇಜರ್ ಜನರಲ್ ಎಲ್. ಎಡ್ರೋಸ್‌ರವರು ೧೮ನೆಯ ಸೆಪ್ಟೆಂಬರ್ ೧೯೪೮ರಂದು ಸಂಜೆ ೫ ಗಂಟೆಯಲ್ಲಿ ಭಾರತೀಯ ಪಡೆಗಳಿಗೆ ಶರಣಾದರು. ಹೈದರಾಬಾದ್ ಸಂಸ್ಥಾನವನ್ನು ಭಾರತ ಒಕ್ಕೂಟ ದೊಂದಿಗೆ ವಿಲೀನಗೊಳಿಸುವ ಒಡಂಬಡಿಕೆಗೆ ನಿಜಾಮನು ಸಹಿ ಹಾಕಿದನು ಎಂದು ತಿಳಿದುಬರುತ್ತದೆ (ಮಹಾಬಲೇಶ್ವರಪ್ಪ ೧೯೯೭:೧೨೨-೨೩). ರಾಯಚೂರು ಸೇರಿದಂತೆ ಹೈದರಾಬಾದ್ ಸಂಸ್ಥಾನ ಭಾರತದ ಒಕ್ಕೂಟಕ್ಕೆ ಸೇರಿತು. ನಿಜಾಮನು ಭಾರತದಲ್ಲಿ ವಿಲೀನವಾದ ದಿನದ ಬಗ್ಗೆ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಭಿನ್ನಾಭಿಪ್ರಾಯಗಳಿರುವುದು ಕಂಡುಬರುತ್ತದೆ. ಕೆಲವರು ಸೆಪ್ಟೆಂಬರ್ ೧೭, ೧೯೪೮ರಂದು ನಿಜಾಮನು ಶರಣಾದನು. ಹಾಗಾಗಿ ಹೈದರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆಯನ್ನು ಸೆಪ್ಟೆಂಬರ್ ೧೭ರಂದು ಆಚರಿಸಲಾಯಿತು. ಆದರೆ ಇದರಲ್ಲಿ ಕೆಲವರು ನಿಜಾಮನು ಸೆಪ್ಟೆಂಬರ್ ೧೭ರ ಸಂಜೆ ಶರಣಾಗಿರುವುದರಿಂದ ನಾವು ಸ್ವತಂತ್ರಗೊಂಡದ್ದು ಸೆಪ್ಟೆಂಬರ್ ೧೮,೧೯೪೮ ರಂದು ಎಂದು ಅಭಿಪ್ರಾಯಪಡುತ್ತಾರೆ ಆದರೂ ಕರ್ನಾಟಕ ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಪ್ರದೇಶ ಹೋರಾಟಗಾರರ ಹೋರಾಟದ ನೆನಪಿಗಾಗಿ ೧೭ನೆಯ ಸೆಪ್ಟೆಂಬರ್ ದಿನದಂದು ಹೈದರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆಯನ್ನು ಆಚರಿಸಲು ಆದೇಶವನ್ನು ಹೊರಡಿಸಿತು. ಹೈದರಾಬಾದ್ ಕರ್ನಾಟಕ ವಿಮೋಚನಾ ದಿನವನ್ನು ಕರ್ನಾಟಕದಲ್ಲಿ ಮಾತ್ರ ಆಚರಿಸಲಾಗುತ್ತದೆ. ಆದರೆ ತೆಲಂಗಾಣ ಮತ್ತು ಮರಾಠವಾಡ ಪ್ರದೇಶಗಳಲ್ಲಿ ಆಚರಿಸದಿರುವುದು ಕಂಡುಬರುತ್ತದೆ.

ರಾಯಚೂರು ಜಿಲ್ಲೆಯಲ್ಲಿ ಬ್ರಿಟಿಶ್ ಮತ್ತು ನಿಜಾಮರ ವಿರುದ್ಧ ನಡೆದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತೆಲಂಗಾಣ ಹೋರಾಟದ ಪ್ರಭಾವಿರಲಿಲ್ಲ. ಕಾಂಗ್ರೆಸ್‌ನ ಹೋರಾಟಗಾರರ ಪ್ರಭಾವದ ಹಿನ್ನೆಲೆಯಲ್ಲಿ ಆರಂಭದ ಹೋರಾಟ ಅಹಿಂಸಾತ್ಮಕವಾಗಿ ನಡೆಯುತ್ತಿತ್ತು. ೧೯೪೭ರ ನಂತರ ಹೈದರಾಬಾದ್ ಸಂಸ್ಥಾನ ಸ್ವತಂತ್ರ ರಾಜ್ಯವಾಗಿ ರೂಪುಗೊಂಡಿತು. ಇದನ್ನು ಭಾರತ ಒಕ್ಕೂಟದಲ್ಲಿ ವಿಲೀನಗೊಳಿಸಲು ಒಂದು ಕಡೆ ಹೋರಾಟ ನಡೆದರೆ, ಮತ್ತೊಂದು ಕಡೆ ನಿಜಾಮ ಮತ್ತು ರಜಾಕಾರರ ವಿರುದ್ಧ ಸಂಸ್ಥಾನದ ಹೊರಗಿದ್ದು, ಗಡಿಶಿಬಿರಗಳನ್ನು ಸ್ಥಾಪಿಸಿಕೊಂಡು ಹೋರಾಟ ಮಾಡಲಾಗುತ್ತಿತ್ತು. ಈ ಸಂದರ್ಭದಲ್ಲಿ ರಜಾಕಾರರು ಗಡಿಗಳಲ್ಲಿ ಕ್ಯಾಂಪ್‌ಗಳನ್ನು ಸ್ಥಾಪಿಸಿಕೊಂಡು ಸ್ವಾತಂತ್ರ್ಯ ಹೋರಾಟಗಾರರ ಹೋರಾಟವನ್ನು ರದ್ದುಗೊಳಿಸುವ ಪ್ರಯತ್ನವನ್ನು ಮಾಡುತ್ತಿದ್ದರು ಆಗ ರಜಾಕಾರರ ವಿರುದ್ಧ ಹೋರಾಡಲು ಕಾಂಗ್ರೆಸ್ ಇಲ್ಲಿನ ಕೆಲವು ಹೋರಾಟಗಾರರಿಗೆ ತರಬೇತಿಯನ್ನು ನೀಡಿತು. ಅವರು ಗಂಡಾಂತರದ ಸಂದರ್ಭದಲ್ಲಿ ಮಾತ್ರ ಮದ್ದು-ಗುಂಡುಗಳನ್ನು ಬಳಸುತ್ತಿದ್ದರು. ಹಿಂಸಾತ್ಮಕ ಸ್ವರೂಪ ಹೋರಾಟದಲ್ಲಿ ತೊಡಗಿರಲಿಲ್ಲ. ಅಲ್ಲದೆ ಕಮ್ಯುನಿಸ್ಟರ ಪ್ರಭಾವ ಇರಲಿಲ್ಲ. ಪರಸ್ಪರ ಶಸ್ತ್ರಾಸ್ತ್ರಗಳನ್ನು ಬಳಸಿ ನಡೆದ ಹೋರಾಟದ ಉದಾಹರಣೆಗಳಿಲ್ಲ. ಕೇವಲ ರಕ್ಷಣಾತ್ಮಕವಾಗಿ ಈ ಮದ್ದು ಗುಂಡುಗಳನ್ನು

ಬಳಸುತ್ತಿದ್ದರು ದೊಡ್ಡ ಪ್ರಮಾಣದ ಹೋರಾಟ ವಿರಲಿಲ್ಲ. ರಜಾಕಾರರು ಹಾಕಿದ ಡೇರೆಗಳನ್ನು ನಾಶ ಮಾಡುವುದು, ಬೆಂಕಿ ಹಚ್ಚಿ ಸುಡುವುದು, ರಜಾಕಾರರಲ್ಲಿ ಭಯ ಹುಟ್ಟಿಸುವಂತಹ ಪ್ರಯತ್ನಗಳು ನಡೆದವೇ ಹೊರತು, ಕೊಲೆ ಮಾಡುವಂತ ಪ್ರಯತ್ನಗಳು ನಡೆದಿಲ್ಲವೆಂದು ಸ್ವಾತಂತ್ರ್ಯ ಹೋರಾಟಗಾರರಾದ ಅಮರೇಶ್ವರ ಪಾಟೀಲ್ ಆಲ್ಕೋಡ ಅವರು ತಿಳಿಸುತ್ತಾರೆ. ಈ ಆಧಾರದ ಮೇಲೆ ಇಲ್ಲಿ ನಡೆದ ಹೋರಾಟವು ಹಿಂಸಾತ್ಮಕವಾಗಿರದೆ, ಕಮ್ಯುನಿಸ್ಟರ ಪ್ರಭಾವಕ್ಕೆ ಸಿಲುಕದೆ, ಕಾಂಗ್ರೆಸ್‌ನ ಮಾರ್ಗದರ್ಶನದಂತೆ ಹೋರಾಟ ನಡೆದಿರುವುದು ಕಂಡುಬರುತ್ತದೆ.

## ೫.೫. ಉಪಸಂಹಾರ

ರಾಯಚೂರು ಜಿಲ್ಲೆಯಲ್ಲಿ ಸ್ವಾತಂತ್ರ ಹೋರಾಟ ಎರಡು ಬಗೆಯಲ್ಲಿ ನಡೆದಿದೆ. ಮೊದಲಿಗೆ ಬ್ರಿಟಿಶರ ವಿರುದ್ಧ ಹೋರಾಡಿದರೆ ನಂತರ ಹೈದರಾಬಾದ್ ನಿಜಾಮರ ವಿರುದ್ಧ ಹೋರಾಟ ಮಾಡಿರುವುದು ಕಂಡುಬರುತ್ತದೆ. ಈ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು ಶಿಕ್ಷಣವಂತರು. ಶಿಕ್ಷಣವನ್ನು ಕಲಿತವರು ಆರ್ಥಿಕವಾಗಿ ಬಲಾಢ್ಯರಾಗಿರುವವರು ಎಂಬುದಾಗಿ ತಿಳಿದುಬರುತ್ತದೆ. ಹಳ್ಳಿಗಳಲ್ಲಿರುವ ಗಾವಂಟಿ ಶಾಲೆಗಳು ಆ ಗ್ರಾಮಕ್ಕೆ ಕೆಲವೇ ವರ್ಗಗಳಿಗೆ ಸೀಮಿತವಾಗಿದ್ದವು. ಈ ಪ್ರದೇಶದಿಂದ ಶಿಕ್ಷಣ ಪಡೆದವರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೈದರಾಬಾದ್‌ಗೆ ಹೋಗಬೇಕಿತ್ತು. ಅಲ್ಲಿ ಶಿಕ್ಷಣ ಕಲಿತವರು ರಾಷ್ಟ್ರೀಯ ಹೋರಾಟದ ಒಲವುಗಳನ್ನು ಬಲ್ಲವರಾಗಿದ್ದರು. ರಾಷ್ಟ್ರೀಯ ನಾಯಕರ ಪ್ರಭಾವದ ಹಿನ್ನೆಲೆಯಲ್ಲಿ ಅನೇಕ ಜನ ಹಿರಿಯರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ರಾಷ್ಟ್ರೀಯ ಹೋರಾಟಕ್ಕಿಂತ ಹೈದರಾಬಾದ್ ನಿಜಾಮನ ವಿರುದ್ಧ ಹೋರಾಟ ಮಾಡಿದ್ದೇ ಹೆಚ್ಚು. ರಜಾಕಾರರ ದಬ್ಬಾಳಿಕೆಯನ್ನು ತೀವ್ರವಾಗಿ ವಿರೋಧಿಸಲಾಯಿತು. ಮಹಾತ್ಮ ಗಾಂಧೀಜಿಯವರು ೧೯೨೧ರಲ್ಲಿ ಮದ್ರಾಸಿನಿಂದ ಮುಂಬಯಿಗೆ ರೈಲಿನಲ್ಲಿ ರಾಯಚೂರು ಮಾರ್ಗವಾಗಿ ಪ್ರಯಾಣ ಮಾಡುವಾಗ ಇಲ್ಲಿನ ಹಿರಿಯರು ಅವರ ಅಸಹಕಾರ ಚಳವಳಿಯನ್ನು ಬೆಂಬಲಿಸಿದರು. ಆರಂಭಿಕ ಹೋರಾಟಗಾರರು ಬೀದಿಗಿಳಿದು ಪ್ರತಿಭಟನೆ ಮಾಡದೆ ಸಂಘ, ಸಂಸ್ಥೆ, ವಾಚನಾಲಯ, ಕ್ಲಬ್‌ಗಳನ್ನು ಸ್ಥಾಪಿಸಲಾಯಿತು. ಮಠ, ಮಂದಿರ ಹಾಗೂ ಗಣ್ಯರ ಮನೆಗಳಲ್ಲಿ ಸ್ವಾತಂತ್ರ್ಯ ಹೋರಾಟದ ಕುರಿತು ಚರ್ಚೆಗಳು ನಡೆಯುತ್ತಿದ್ದವು.

ಕ್ರಿ.ಶ. ೧೯೪೭ ಆಗಸ್ಟ್ ೧೪ರಂದು ರಾತ್ರಿ ಭಾರತಕ್ಕೆ ಸ್ವಾತಂತ್ರ್ಯ ಘೋಷಣೆ ಮಾಡಿದ ನಂತರ ರಾಯಚೂರಿನ ಸಾತ್ ಕಛೇರಿಯ ಮೇಲೆ ತಿರಂಗ ಧ್ವಜವನ್ನು ಎಂ. ನಾಗಪ್ಪ ಮತ್ತು ಸ್ನೇಹಿತರು ಹಾರಿಸಿದರು. ಇದೇ ಸಂದರ್ಭದಲ್ಲಿ ತೆಲಂಗಾಣದಲ್ಲಿ ದೊಡ್ಡ ಪ್ರಮಾಣದಲ್ಲಿ ರೈತರ ಹೋರಾಟ ನಡೆದಿತ್ತು. ಈ ಹೋರಾಟದ ಮೂರು ರೀತಿಯಲ್ಲಿ ಮಾಡಲಾಯಿತು. ಮೊದಲಿಗೆ ಭೂಮಾಲಿಕರ ವಿರುದ್ಧ, ನಂತರ ನಿಜಾಮ ಮತ್ತು ರಜಾಕಾರರ ವಿರುದ್ಧ ಹಾಗೂ ಭಾರತೀಯ ಸೈನ್ಯದ ವಿರುದ್ಧ ಹೋರಾಟ ಮಾಡಲಾಯಿತು. ಈ ಹೋರಾಟದ ಅಂಶ ಲವಲೇಶ ಅಂಶವೂ ರಾಯಚೂರು ಸ್ವಾತಂತ್ರ್ಯ ಹೋರಾಟದಲ್ಲಿ ಕಂಡುಬರಲಿಲ್ಲ. ಇದಕ್ಕೆ ಬಲವಾದ ಕಾರಣ ಕಂಡುಬರುತ್ತದೆ. ಈ ಪ್ರದೇಶದ ವಿಮೋಚನಾ ಹೋರಾಟದಲ್ಲಿ ಭಾಗವಹಿಸಿದರು ಶ್ರೀಮಂತರು, ಭೂಮಾಲಿಕರು ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಮೇಲ್ಜಾತಿಗೆ ಸೇರಿದವರು. ಕೆಲ ರೈತಾಪಿವರ್ಗ ಈ ಚಳವಳಿಯಲ್ಲಿ ಪ್ರಧಾನ ಪಾತ್ರ ವಹಿಸಿದರೂ ಜಮೀನ್ದಾರರದ್ದೇ ಮೇಲುಗೈ ಆಗಿತ್ತು. ಈ ಹೋರಾಟ ರಾಯಚೂರು ಪಟ್ಟಣಕ್ಕೆ ಮಾತ್ರ ಸೀಮಿತವಾಗಿತ್ತು ಮಾತ್ರವಲ್ಲ ಸಾಂಘಿಕ ಹೋರಾಟವಾಗಿಯೂ ರೂಪುಗೊಳ್ಳಲಿಲ್ಲವೆನಿಸುತ್ತದೆ.

ಒಂದು ಗಮನಾರ್ಹ ವಿಚಾರವೆಂದರೆ ಭಾರತಕ್ಕೆ ಸ್ವಾತಂತ್ರ್ಯ ಘೋಷಣೆ ಮಾಡಿದವರು ಇಂಗ್ಲೆಂಡಿನ ಲೇಬರ್ ಪಕ್ಷದವರು. ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು ಎಂಬ ಸಿದ್ಧಾಂತದ ಮೂಲಕ ಅಸ್ತಿತ್ವಕ್ಕೆ ಬಂದದ್ದು ಲೇಬರ್ ಪಕ್ಷವಾಗಿತ್ತು. ಇದು ಭಾರತದ ದುಡಿಯುವ ವರ್ಗವನ್ನು ಗಮನದಲ್ಲಿಟ್ಟುಕೊಂಡು ಭಾರತಕ್ಕೆ ಸ್ವಾತಂತ್ರ್ಯ ನೀಡಿರಬೇಕೆನಿಸುತ್ತದೆ. ಸ್ವಾತಂತ್ರ್ಯ ನಂತರ ರಾಯಚೂರು ಜಿಲ್ಲೆಯಲ್ಲಿ ನಿಜಾಮನ ವಿರುದ್ಧ ಹೋರಾಟಕ್ಕಿಳಿಯಬೇಕಾಯಿತು. ಇಲ್ಲಿನ ಹೋರಾಟಗಾರರಿಗೆ ವಿಷಯಗಳೇ ಇಲ್ಲವೆನಿಸುತ್ತದೆ. ಅದಕ್ಕಾಗಿ ಲೆವಿಸಂಗ್ರಹ ವಿರೋಧಿ ಚಳವಳಿ, ಒಕ್ಕೂಟ ಸೇರಿ ಚಳವಳಿ, ಗಡಿಶಿಬಿರಗಳ ಸ್ಥಾಪನೆ ಹಾಗೂ ಭೂಗತವಾಗಿ ಚಳವಳಿಗಳನ್ನು ಮಾಡಲಾಯಿತು. ತೆಲಂಗಾಣದ ಹೋರಾಟದ ಶಸ್ತ್ರಾಸ್ತ್ರ ದಂಗೆಯನ್ನು ೧೯೪೭ರ ನಂತರ ಅನುಸರಿಸಲಾಯಿತು. ಆದರೆ ತೆಲಂಗಾಣದ ಮಾದರಿಯಲ್ಲಿರಲಿಲ್ಲ. ಇಲ್ಲಿನ ಹೋರಾಟಗಾರರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳೇ ಭಾಗವಹಿಸಿದ್ದರು. ಇವರಿಗೆ ಶಸ್ತ್ರಾಸ್ತ್ರ ತರಬೇತಿಯನ್ನು ನೀಡಲಾಗಿತ್ತು. ರಾಷ್ಟ್ರೀಯತೆಯ ಪ್ರಭಾವದಿಂದಾಗಿ ವಿದ್ಯಾರ್ಥಿಗಳು ತರಬೇತುದಾರರಾಗಿದ್ದರು. ಸಾಕಷ್ಟು ಹೋರಾಟ ಮಾಡಿದರೂ ಹೋರಾಟಗಾರರ ಪ್ರಯತ್ನ ಸಾಲಲಿಲ್ಲ. ಇದರಿಂದ ಭಾರತದ ಯೂನಿಯನ್ ಸರ್ಕಾರದ ಸೈನ್ಯ ಮಧ್ಯ ಪ್ರವೇಶಿಸಿತು. ಇದು ನಿಜಾಮನನ್ನು ಭಾರತದ ರಾಷ್ಟ್ರೀಯತೆಯನ್ನು ಒಪ್ಪಿಕೊಳ್ಳುವಂತೆ ಮಾಡಿತು. ಇದರಿಂದಾಗಿ ೧೯೪೮ ಸೆಪ್ಟೆಂಬರ್ ೧೭ರಂದು ನಿಜಾಮನು ಭಾರತಕ್ಕೆ ಶರಣಾದನು. ಜಹಗೀರದಾರರು, ಜಮೀನ್ದಾರರು, ದೇಸಾಯಿ, ದೇಶಪಾಂಡೆ, ನಾಡಗೌಡರು, ಭೂಹಿಡುವಳಿದಾರರು ಮುಂತಾದವರು ಈ ಹೋರಾಟದಲ್ಲಿ ಭಾಗವಹಿಸದಿರುವುದು ಕಂಡುಬರುತ್ತದೆ. ಜನಸಾಮಾನ್ಯರ ಜೀವನ ಅತ್ಯಂತ ನಿಕೃಷ್ಟವಾಗಿತ್ತು. ಇವರು ಜಮೀನ್ದಾರರ ಅಡಿಯಾಳುಗಳಾಗಿ ಜೀತ, ಬಿಟ್ಟಿ ಚಾಕರಿಕೆಯನ್ನು ಮಾಡುವುದೇ ಕಾಯಕವಾಗಿತ್ತು. ಊಟಕ್ಕಾಗಿ ಹೋರಾಟ ಇವರದು, ಅಧಿಕಾರಕ್ಕಾಗಿ ಹೋರಾಟ ಮೇಲ್ವರ್ಗದವರದ್ದಾಗಿತ್ತು. ಈ ಪ್ರದೇಶ ನಿಜಾಮನಿಂದ ವಿಮೋಚನೆಗೊಂಡರೂ ಭೂಮಾಲಿಕರಿಂದ ವಿಮೋಚನೆ ಹೊಂದಲಿಲ್ಲವಾದ್ದರಿಂದ ಮತ್ತೆ ಊಳಿಗಮಾನ್ಯ ವ್ಯವಸ್ಥೆ ಮುಂದುವರೆಯುವಂತಾಯಿತು. ಈ ಪ್ರದೇಶದ ವಿಮೋಚನಾ ಹೋರಾಟ ತೆಲಂಗಾಣ ಹೋರಾಟಕ್ಕೆ ಸರಿಸಾಟಿಯಲ್ಲವೆಂದು ಹೇಳಬಹುದಾಗಿದೆ. ಆದರೆ ಈ ಪ್ರದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿರುವುದಕ್ಕಾಗಿ ಆ ಹೋರಾಟಗಾರರ ಪ್ರಯತ್ನವನ್ನು ಅವಲೋಕಿಸುವಂತದ್ದಾಗಿದೆ.

□

ರಾಯಚೂರು ದೋ-ಅಬ್ ಪ್ರದೇಶಕ್ಕೆ ಸಂಬಂಧಿಸಿದಂತೆ ಸ್ಥಳೀಯ ಚರಿತ್ರೆಯ ವಿವಿಧ ಮಜಲುಗಳನ್ನು ಅಧ್ಯಯನ ಮಾಡಲು ಈ ಮಹಾಪ್ರಬಂಧದಲ್ಲಿ ಪ್ರಯತ್ನಿಸಿರುವುದು ಸರಿಯಷ್ಟೆ. ಕರ್ನಾಟಕದ ಒಂದು ಮುಖ್ಯವಾದ ಆಡಳಿತ ಕೇಂದ್ರವಾಗಿ, ವಿವಿಧ ರಾಜಪ್ರಭುತ್ವಗಳ ಪ್ರತಿಷ್ಠೆಯ ಸಂಕೇತವಾಗಿ ರಾಯಚೂರು ದೋ-ಅಬ್ ಪ್ರದೇಶ ಅನನ್ಯವಾಗಿದೆ. ರೈತಾಪಿ ವರ್ಗಗಳು, ಕೃಷಿಕೇಂದ್ರಿತ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರು, ಕುಶಲಕರ್ಮಿಗಳು, ಸಣ್ಣಪುಟ್ಟ ವ್ಯಾಪಾರಸ್ಥರು ರೂಪಿಸಿ ಕೊಂಡಿದ್ದ ತಮ್ಮದೇ ವ್ಯವಸ್ಥೆಯಲ್ಲಿ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸುತ್ತಿದ್ದರು. ಆದಗ್ಯೂ ಇವರ ಮೇಲ್‌ಚಲಿಸುವಿಕೆಯೂ ಅಷ್ಟು ಪ್ರಭಾವಿಯಾಗಿ ಕಾಣಸಿಗುವುದಿಲ್ಲ. ಮೌರ್ಯರ ಕಾಲದಿಂದ ಹೈದರಾಬಾದ್ ನಿಜಾಮ ಕಾಲದವರೆಗಿನ ಆಡಳಿತದವರೆಗೆ ಬಹುತೇಕ ಕಾಲಘಟ್ಟದಲ್ಲಿ ಇದೇ ಬಗೆಯ ವ್ಯವಸ್ಥೆಯನ್ನು ಗಮನಿಸಬಹುದಾಗಿದೆ.

ರಾಯಚೂರು ದೋ-ಅಬ್ ಪ್ರದೇಶದ ಚರಿತ್ರೆಯನ್ನು ರಚಿಸಲು ಸಿದ್ಧ ಆಕರಗಳ ಜೊತೆಗೆ ಮೌಖಿಕ ಆಕರಗಳನ್ನು ಅವಲಂಬಿಸಲಾಗಿದೆ. ಬಹುಮುಖ್ಯವಾಗಿ ಪ್ರಾಥಮಿಕ ಆಕರಗಳಾದ ಶಾಸನಗಳನ್ನು ಪ್ರಭಾವಿಯಾಗಿ ಬಳಸಿಕೊಳ್ಳಲಾಗಿದೆ. ಆ ಮೂಲಕ ಚರಿತ್ರೆ ಬರವಣಿಗೆಯಲ್ಲಿ ಅವಜ್ಞೆಗೊಳಗಾಗಿದ್ದ ಸ್ಥಳೀಯ ಚರಿತ್ರೆಯ ವಿವಿಧ ಆಯಾಮಗಳನ್ನು ಚರ್ಚಿಸಿ, ರಾಯಚೂರು ದೋ-ಅಬ್ ಪ್ರದೇಶದ ಚರಿತ್ರೆಯನ್ನು ಪುನರ್‌ರಚಿಸಲು ಪ್ರಯತ್ನಿಸಲಾಗಿದೆ. ಆ ಮೂಲಕ ಕರ್ನಾಟಕ ಚರಿತ್ರೆಯ ಬರವಣಿಗೆಯಲ್ಲಿ ಸ್ಥಳೀಯ ಚರಿತ್ರೆಯನ್ನು ವಿಶ್ಲೇಷಿಸುವ ಸಣ್ಣ ಪ್ರಯತ್ನವನ್ನು ಈ ಸಂದರ್ಭದಲ್ಲಿ ಮಾಡಲಾಗಿದೆ.

ರಾಯಚೂರು ದೋ-ಅಬ್ ಪ್ರದೇಶದ ಭೌಗೋಳಿಕ ಪರಿಸರ ಇಲ್ಲಿನ ಜನರ ಚರಿತ್ರೆಯನ್ನು ರೂಪಿಸುವಲ್ಲಿ ವಹಿಸಿರುವ ಪಾತ್ರ ಗಮನಾರ್ಹವಾಗಿದೆ. ಭೌಗೋಳಿಕ ಪರಿಸರ ಮತ್ತು ಮಾನವ ಪರಿಸರ ಒಂದಕ್ಕೊಂದು ಪೂರಕವಾಗಿದ್ದ ಕಾರಣಕ್ಕಾಗಿಯೇ ಮಾನವ ಹಂತ ಹಂತವಾಗಿ ವ್ಯವಸ್ಥಿತ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಾಯಿತು. ರಾಜ್ಯ ನಿರ್ಮಾಣ ಪ್ರಕ್ರಿಯೆಯೂ ಈ ಹಿನ್ನೆಲೆಯಿಂದಲೇ ನಡೆಯಿತು. ಭೂಮಿಯ ಒಡೆತನವನ್ನು ಸಾಧಿಸಿದ ಪ್ರಬಲ ವರ್ಗಗಳು ಅಧಿಕಾರ ಮತ್ತು ಸವಲತ್ತುಗಳನ್ನು ಹೊಂದುವ ಮೂಲಕ ಮಾನವ ಪರಿಸರದ ಮೇಲೆ ನಿಯಂತ್ರಣ ಸಾಧಿಸಿದವು. ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳೆರಡೂ ಅಧಿಕಾರ ಹಾಗೂ ಮತಧರ್ಮಗಳ ಮೂಲಕ ಜನರನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳುವ ಪ್ರಯತ್ನ ಮಾಡಿದವು. ಪ್ರತಿಯೊಂದು ಅರಸುಮನೆತನವೂ ತನ್ನ ರಾಜಧಾನಿ ಕೇಂದ್ರವನ್ನು ಆಯ್ಕೆ ಮಾಡುವಾಗ ಆ ಪ್ರದೇಶದ ಭೌಗೋಳಿಕತೆಗೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತಿತ್ತು. ಪ್ರಾಕೃತಿಕವಾಗಿ ನಿರ್ಮಾಣಗೊಂಡಿರುವ ಬೆಟ್ಟ ಗುಡ್ಡಗಳು, ನದಿಗಳು, ಹಳ್ಳ, ಕೆರೆಗಳು ಮುಂತಾದವು ಅರಸುಮನೆತನಗಳ ಸರಹದ್ದುಗಳಿಗೆ ರಕ್ಷಣೆಯನ್ನು ಒದಗಿಸುವಂತಿದ್ದವು. ಬೆಟ್ಟ-ಗುಡ್ಡಗಳಲ್ಲಿ

ನಿರ್ಮಾಣಗೊಂಡಿರುವ ಕೋಟೆಗಳನ್ನು ಮತ್ತು ಕೆಲವು ಗ್ರಾಮಗಳು ಇಂದಿಗೂ ಕಾಣಬಹುದಾಗಿದೆ. ಉದಾಹರಣೆಗೆ ರಾಯಚೂರು, ಮುದಗಲ್, ದೇವದುರ್ಗ, ಗುರುಗುಂಟಾ, ಮಾನ್ವಿ, ಕೋಟೆಕಲ್ಲು ಮುಂತಾದ ಕೋಟೆಗಳು. ಕ್ಯಾದಿಗ್ಗೇರಿ, ಅರಕೇರಿ, ಕೊತ್ತದೊಡ್ಡಿ, ಮಲ್ಲಿನಾಯಕನದೊಡ್ಡಿ, ದೇವದುರ್ಗ, ಅಡಕಲಗುಡ್ಡ, ಅನವಾರ, ಆಕಳಕುಂಪಿ, ಕಸನದೊಡ್ಡಿ, ಕುರಕುಂದಿ ಮುಂತಾದ ಗ್ರಾಮಗಳು ನೆಲೆಸಿವೆ.

ದೋ-ಅಬ್ ಪದ ಜಲಸಂಪತ್ತನ್ನು ಸೂಚಿಸುತ್ತದೆ. ಈ ಮುಂಚೆ ನದಿಬಯಲು ಪ್ರದೇಶಗಳನ್ನು ಮೆಸಪಟೋಮಿಯ ಮತ್ತು ಎಡೆದೊರೆನಾಡು ಎಂದು ಕರೆಯುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಇವು ನದಿಗಳನ್ನು ಸೂಚಿಸುವುದೇ ಹೆಚ್ಚು. ರಾಯಚೂರು ದೋ-ಅಬ್ ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದ ಬಯಲು ಪ್ರದೇಶವಾಗಿದೆ. ಮೆಸಪಟೋಮಿಯ ಎಂಬುದು ಗ್ರೀಕ್ ಪದವಾದರೆ. ಎಡೆದೊರೆ ಎಂಬುದು ಕನ್ನಡ ಪದವಾಗಿದೆ. ದೋ-ಅಬ್ ಎಂಬುದು ಪರ್ಶಿಯನ್ ಮತ್ತು ಉರ್ದು ಭಾಷೆಗಳ ಸಂಯೋಜಿತ ಪದವಾಗಿದೆ. ಎರಡು ನದಿಗಳ ಮಧ್ಯದ ಪ್ರದೇಶ ಎಂಬರ್ಥವನ್ನು ನೀಡುತ್ತದೆ. ಇದು ಪಾರಿಭಾಷಿಕ ಪದವಾಗಿದೆ. ಭಾರತದಲ್ಲಿ ಗಂಗಾ-ಯಮುನಾ ದೋ-ಅಬ್, ಪಂಜಾಬ್ ದೋ-ಅಬ್ ಹಾಗೂ ರಾಯಚೂರು ದೋ-ಅಬ್‌ಗಳು ಪ್ರಮುಖವಾಗಿವೆ. ಕರ್ನಾಟಕದ ಸಂದರ್ಭದಲ್ಲಿ ಸಗರನಾಡು ದೋ-ಅಬ್, ರಾಯಚೂರು ದೋ-ಅಬ್, ಬೀಳಗಿ ದೋ-ಅಬ್, ಕೂಡಲಸಂಗಮ ದೋ-ಅಬ್ ಹಾಗೂ ಮೈಸೂರು ದೋ-ಅಬ್‌ಗಳು ಪ್ರಮುಖವಾಗಿವೆ. ಇವು ಪರಸ್ಪರ ಸಂಬಂಧ ಹೊಂದಿರುವುದು ಕಂಡುಬರುತ್ತದೆ.

ಗಂಗಾ-ಯಮುನಾ ದೋ-ಅಬ್ ಪ್ರದೇಶವು ರಾಯಚೂರು ದೋ-ಅಬ್ ಪ್ರದೇಶದೊಂದಿಗೆ ಅವಿನಾಭಾವ ಸಂಬಂಧ ಹೊಂದಿತ್ತೆಂದೇ ಹೇಳಬೇಕಾಗುತ್ತದೆ. ಕ್ರಿಪೂ. ೩ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಮೌರ್ಯರು ರಾಜಕೀಯ ಮತ್ತು ಆರ್ಥಿಕವಾಗಿ ಗುರುತಿಸಿಕೊಂಡಿದ್ದರು. ರಾಜಕೀಯ ಸಂಬಂಧವನ್ನು ಸೂಚಿಸಲು ರಾಯಚೂರು ದೋ-ಅಬ್ ಪ್ರದೇಶದ ಮಸ್ಕಿಯಲ್ಲಿ ಅಶೋಕನು ಹಾಕಿಸಿರುವ ಶಾಸನ ಸಾಕ್ಷಿಯಾಗಿದೆ. ಹಾಗೆಯೇ ಆರ್ಥಿಕವಾಗಿ ಭದ್ರವಾಗಲು ಈ ಪ್ರದೇಶದ ಹಟ್ಟಿ ಚಿನ್ನದ ಗಣಿಯಿಂದ ರಾಜಧಾನಿ ಪಾಟಲಿಪುತ್ರಕ್ಕೆ ಚಿನ್ನವನ್ನು ಸರಬರಾಜು ಮಾಡಲಾಗುತ್ತಿತ್ತು. ಧಾರ್ಮಿಕವಾಗಿ ಮಸ್ಕಿಯು ಬೌದ್ಧ ಮತದ ಪ್ರಚಾರದ ಕೇಂದ್ರವಾಗಿತ್ತು.

ಸಗರನಾಡು ದೋ-ಅಬ್ ಪ್ರದೇಶ ರಾಯಚೂರು ದೋ-ಅಬ್‌ಗೆ ಅಂಟಿಕೊಂಡಿದೆ. ಮೇಲಾಗಿ ಕೃಷ್ಣಾ ನದಿಗೆ ಹೊಂದಿಕೊಂಡಿದೆ. ರಾಜಕೀಯವಾಗಿ ಹೆಚ್ಚು ಕಡಿಮೆ ಒಂದೇ ಚೌಕಟ್ಟಿನಲ್ಲಿ ಒಳಪಟ್ಟಿವೆ. ಆದರೂ ಕೆಲವು ಬಾರಿ ಅರಸರು ರಾಯಚೂರು ದೋ-ಅಬ್‌ನ ಮೇಲೆ ಆಡಳಿತದ ನಿರ್ವಹಣೆಯನ್ನು ಸಗರನಾಡು ದೋ-ಅಬ್‌ನ ಏತಗಿರಿಯ(ಯಾದಗಿರಿಯ) ನೆಲದಿಂದ ಆಡಳಿತವನ್ನು ನಡೆಸುತ್ತಿದ್ದರು. ಈ ಬಗೆಯ ಆಡಳಿತವನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಂಡುಬರುತ್ತದೆ. ಆರ್ಥಿಕವಾಗಿಯೂ ಸಹ ಈ ಪ್ರದೇಶಗಳಲ್ಲಿ ಕಂಡುಬರುವ ಶಾಸನಗಳು ಕೃಷಿ, ವ್ಯಾಪಾರ, ವಾಣಿಜ್ಯ, ರೈತಾಪಿವರ್ಗ, ಕುಶಲಕರ್ಮಿಗಳು ಮುಂತಾದ ಉತ್ಪಾದನಾ ವಲಯ, ವರ್ತಕ ಸಂಘಗಳು, ಪರಸ್ಪರ ಕೊಡುಕೊಳ್ಳುವಿಕೆ ಯನ್ನು ಸಂಬಂಧವನ್ನು ಹೊಂದಿದ್ದವೆಂದು ಗುರುತಿಸಬಹುದಾಗಿದೆ. ಎರಡೂ ಸ್ಥಳಗಳಲ್ಲಿ ರಾಜಕೀಯವಾಗಿ ಕರ್ನಾಟಕದ ಎಲ್ಲ ಅರಸುಮನೆತನಗಳ ಆಳ್ವಿಕೆ ಇತ್ತು. ರಾಯಚೂರು ದೋ-ಅಬ್ ಪ್ರದೇಶದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದ ಸುರಪುರ ಸಂಸ್ಥಾನಿಕರು ಈ ಪ್ರದೇಶದೊಂದಿಗೆ ವೈವಾಹಿಕ,

ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಹೊಂದಿದ್ದರು. ನಿಜಾಮ ಮತ್ತು ಬ್ರಿಟಿಶ್‌ರ ಕಾಲದಲ್ಲಿ ಸುರಪುರ ಸಂಸ್ಥಾನವನ್ನು ನಿಯಂತ್ರಿಸಲು ಲಿಂಗಸೂಗೂರಿನಲ್ಲಿ ಕಂಟೋನ್ಮೆಂಟ್‌ನ್ನು ಸ್ಥಾಪಿಸಲಾಯಿತು.

ಮಲಪ್ರಭ ಮತ್ತು ಕೃಷ್ಣಾ ನದಿಗಳ ಕೂಡಲಸಂಗಮ ದೋ-ಅಬ್ ಪ್ರದೇಶವು ರಾಯಚೂರು ದೋ-ಅಬ್‌ನ ಪಶ್ಚಿಮಕ್ಕಿದೆ. ಹೊಂದಿಕೊಂಡಿದೆ. ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಒಂದೇ ಬಗೆಯ ಸಂಗತಿಗಳನ್ನು ಹೊಂದಿದ್ದವು. ಘಟಪ್ರಭಾ ಮತ್ತು ಕೃಷ್ಣಾನದಿಗಳ ಬೀಳಗಿ ದೋ-ಅಬ್‌ನೊಂದಿಗೆ ರಾಜಕೀಯ ಸಂಬಂಧವನ್ನು ಒಂದೇ ಬಗೆಯಲ್ಲಿ ಗುರುತಿಸಬಹುದು. ಆದರೆ ಸಾಮಾಜಿಕ ವಾಗಿ, ಆರ್ಥಿಕವಾಗಿ ಇದ್ದ ಸಂಬಂಧಗಳ ಬಗ್ಗೆ ಅಷ್ಟಾಗಿ ತಿಳಿದುಬರುವುದಿಲ್ಲ. ಮೈಸೂರು ದೋ-ಅಬ್‌ಗೆ ರಾಯಚೂರು ದೋ-ಅಬ್‌ನಿಂದ ವ್ಯಾಪಾರ ಮಾರ್ಗವಿದ್ದಿತು. ಅದು ಪ್ರಮುಖವಾಗಿತ್ತು. ಇದನ್ನು ಹೊರತು ಪಡಿಸಿ ಮತ್ತಾವ ಸಂಗತಿಗಳು ಅಷ್ಟಾಗಿ ತಿಳಿದುಬರುವುದಿಲ್ಲ. ಉತ್ತರ ಕರ್ನಾಟಕದಲ್ಲಿ ಕಂಡುಬರುವ ನಾಲ್ಕು ದೋ-ಅಬ್ ಪ್ರದೇಶಗಳೆಲ್ಲವೂ ಕೃಷ್ಣಾ ನದಿಗೆ ಹೊಂದಿಕೊಂಡಿವೆ.

ಇತಿಹಾಸ ಪೂರ್ವದ ಮಾನವ ಈ ಪ್ರದೇಶದಲ್ಲಿ ತನ್ನ ಜೀವನವನ್ನು ನಡೆಸುತ್ತಿದ್ದನೆಂಬ ಸಂಗತಿಯನ್ನು ಇಲ್ಲಿ ದೊರಕಿರುವ ಪ್ರಾಗೈತಿಹಾಸಿಕ ಸಂಸ್ಕೃತಿಯ ಚಿತ್ರಕಲೆ ನೆಲೆಗಳು ಮತ್ತು ಅವಶೇಷಗಳಿರುವ ಪುರಾತತ್ವ ನೆಲೆಗಳಿಂದ ತಿಳಿದುಕೊಳ್ಳಬಹುದಾಗಿದೆ. ಆ ನೆಲೆಗಳೆಂದರೆ, ಲಿಂಗಸೂಗೂರು, ಭಿಲ್ಲಮರಾಯನ ಗುಡ್ಡ, ಮಸ್ಕಿ, ಕಲ್ಲೂರು, ಸಿರವಾರ, ಅತ್ತನೂರು, ಪಿಕ್ಲಿಹಾಳ್, ಮಾಸ್ಕಿ ಬೈಲ್ ಮರ್ಚೇಡ, ಗಬ್ಬೂರ, ಮಲದಕಲ್, ಆಲ್ಕೋಡ ಮತ್ತು ಹಿರೇಬೂದೂರುಗಳಾಗಿವೆ.ಅಲ್ಲದೆ, ಕರಡಿಗುಡ್ಡ, ಅಂಚೆಸೂಗೂರು, ಕೋಣಚಪ್ಪಳಿ,ಗೂಗಲ್, ಕಲ್ಲೂರು, ಕವಿತಾಳ, ಕುನ್ನಟಗಿ, ನವಲ್‌ಕಲ್ಲು, ವಂದಲಿ, ಬಾದರ್ಲಿ, ವಟಗಲ್, ಕರಡಿಕಲ್ಲು, ಕರೆಕಲ್, ಸಾಲಗುಂದಿ,ಗೌಡೂರು ಮತ್ತು ಜಲದುರ್ಗ ಇನ್ನೂ ಮುಂತಾದವು. ಇವು ಈ ಪ್ರದೇಶದ ಜನಜೀವನದ ಭಾಗವಾಗಿ ಗುರುತಿಸಿಕೊಂಡಿದ್ದ ಬೇಟೆ ಸಂಸ್ಕೃತಿ, ತಾಮ್ರ, ಕಬ್ಬಿಣದ ಬಳಕೆಯಿಂದ ಪಶುಪಾಲನೆ ಮತ್ತು ಕೃಷಿ, ಗ್ರಾಮೀಣ ಮತ್ತು ನಗರ ಸಂಸ್ಕೃತಿ, ಮತ್ತು ಅಗತ್ಯ ಮೂಲಭೂತ ವಾಸದ ನೆಲೆಗಳು ಇಲ್ಲಿನ ಜನಜೀವನದ ವಾಸ್ತವ ಚರಿತ್ರೆಯನ್ನು ಕಟ್ಟಲು ಸಹಕಾರಿಯಾಗಿವೆ. ಭೂಗರ್ಭದಲ್ಲಿ ಆಡಗಿದ್ದ ಅವಶೇಷಗಳಾದ ಕಲ್ಲಿನ ಕೊಡಲಿ, ಕಲ್ಲಿನ ಆಯುಧ, ಕಲ್ಲಿನ ಚಾಕು, ಚೂರಿ, ಬೈರಿಗೆ, ಕುರುಪಿ ಮುಂತಾದವು. ಚಿತ್ರಕಲೆ ನೆಲೆಗಳಲ್ಲಿ ಕಂಡು ಬರುವ ಗೂಳಿ, ಕುದುರೆ, ಜಿಂಕೆ, ಆನೆ, ಎತ್ತು, ಎಮ್ಮೆ, ಕೋಣ, ಹುಲಿ ಮತ್ತು ಮನುಷ್ಯ ಮೊದಲಾದ ಚಿತ್ರಗಳು ರಾಜ್ಯವ್ಯವಸ್ಥೆ ಪೂರ್ವ ಸನ್ನಿವೇಶದ ಜನಚರಿತ್ರೆಯನ್ನು ಇವು ತಿಳಿಸುತ್ತವೆ. ಕೃಷ್ಣಾ ಮತ್ತು ತುಂಗಭದ್ರ ನದಿಗಳ ಮಧ್ಯದಲ್ಲಿನ ಫಲವತ್ತಾದ ಭೂಮಿ, ಖನಿಜ ಸಂಪನ್ಮೂಲ ಮತ್ತು ನೈಸರ್ಗಿಕ ಸಂಪನ್ಮೂಲಗಳು ಮಾನವನನ್ನು ಈ ಪ್ರದೇಶದಲ್ಲಿ ನೆಲೆಗೊಳ್ಳುವಂತೆ ಮಾಡಿವೆ. ಇಲ್ಲಿನ ಬೆಟ್ಟಗುಡ್ಡಗಳು ಜನವಸತಿ ಕೇಂದ್ರಗಳಾಗಿ ಮಾರ್ಪಟ್ಟಿದ್ದವು. ಹೀಗೆ ಹಳೆಯ, ಮಧ್ಯ, ಸೂಕ್ಷ್ಮ, ನವ ಶಿಲಾಯುಗಗಳ ಚರಿತ್ರೆಯಿರುವ ಈ ನಾಡಿನಲ್ಲಿ ಈ ಪ್ರದೇಶದ ಒಂದು ನಿರ್ದಿಷ್ಟವಾದ ಚಾರಿತ್ರಿಕ ಸಂಗತಿಯನ್ನು ಕಟ್ಟಿಕೊಳ್ಳುವುದು ಅಗತ್ಯವೆಂಬ ಕಾರಣಕ್ಕೆ ರಾಯಚೂರು ದೋ-ಅಬ್ ಪ್ರದೇಶದ ಚಾರಿತ್ರಿಕ ವಿಷಯಗಳನ್ನು ಅಂದಿನ ಜನ ಜೀವನದ ಹಿನ್ನೆಲೆಯಲ್ಲಿ ಅಭ್ಯಸಿಸಲಾಗಿದೆ.

ಕರ್ನಾಟಕ ಚರಿತ್ರೆಯಲ್ಲಿ ರಾಯಚೂರು ದೋ-ಅಬ್ ಪ್ರದೇಶ ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಹೊಂದಿದೆ. ಭೌಗೋಳಿಕವಾಗಿ ಹೇರಳವಾದ ಉತ್ತಮ

ಸಂಪನ್ಮೂಲಗಳು ಇಲ್ಲಿನ ಚರಿತ್ರೆಯನ್ನು ರೂಪಿಸಲು ಸಹಾಯಕವಾಗಿವೆ. ಮೌರ್ಯರು, ಶಾತವಾಹನರು, ವಾಕಾಟಕರು ಮತ್ತು ಚುಟುಗಳು, ಪಲ್ಲವರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಚೋಳರು, ಹೊಯ್ಸಳರು, ದೇವಗಿರಿ ಯಾದವರು(ಸೇವುಣರು), ವಾರಂಗಲ್ಲಿನ ಕಾಕತೀಯರು, ವಿಜಯನಗರ, ಬಹಮನಿ, ಆದಿಲ್‌ಶಾಹಿಗಳು, ಮೊಗಲರು, ಹೈದರಾಬಾದ್ ನಿಜಾಮರು ಅಲ್ಲದೆ ಸಾಮಂತರಾದ ಸಾಲಗುಂದೆಯ ಸಿಂಧರು, ಕರಡಕಲ್ ಕದಂಬರು, ಮೊರಟದ ಹೈಹಯರು, ಸಮಕಾಲೀನ ಸಾಮಂತರು, ಅಮರನಾಯಕರು ಹಾಗೂ ಸಂಸ್ಥಾನಿಕರಾದ ಗುರುಗುಂಟಾ, ಗುಂತಗೋಳ, ದೇವದುರ್ಗ, ಜಾಲಿಹಳ್ಳಿ, ಮುಂಡರಗಿ, ಕರಿಗುಡ್ಡ, ಗಲಗ, ಅರಕೇರಿ, ಕ್ಯಾದಿಗ್ಗೇರಿ, ರಾಮದುರ್ಗ ಮುಂತಾದವು ಈ ಪ್ರದೇಶವನ್ನು ಆಳ್ವಿಕೆ ಮಾಡಿದವು. ಅಲ್ಲದೆ ಅನೇಕ ಬಗೆಯ ರಾಜಕೀಯ ಸ್ಥಿತ್ಯಂತರಗಳಿಗೆ ಇವುಗಳು ಕಾರಣವಾದವು(ವಿವರಗಳಿಗಾಗಿ ಅಧ್ಯಾಯ ಎರಡರಲ್ಲಿ ಪುಟ ೯ರಿಂದ ೩೫ರಲ್ಲಿ ಗಮನಿಸಬಹುದು).

* * *

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಸಿಂಧೂನಾಗರಿಕತೆಯ ಕಾಲಘಟ್ಟದಿಂದ ಹೈದರಾಬಾದ್ ನಿಜಾಮರ ಕಾಲದವರೆಗೆ ವಿವಿಧ ಅರಸು ಮನೆತನಗಳು ಆಳ್ವಿಕೆ ನಡೆಸಿವೆ. ರಾಜಪ್ರಭುತ್ವ ವ್ಯವಸ್ಥೆ ಆರಂಭಗೊಂಡಂದಿನಿಂದ ಅಧೀನತೆಗೆ ಸಿಲುಕಿದ ಈ ಪ್ರದೇಶ ವರ್ತಮಾನದವರೆಗೂ ಅದರಿಂದ ಹೊರಬರಲು ಸಾಧ್ಯವಾಗಿಲ್ಲವೆಂದೇ ಹೇಳಬಹುದಾಗಿದೆ. ಈ ಪ್ರದೇಶ ಅನೇಕ ಯುದ್ಧಗಳಿಗೆ ಕಾರಣವಾದ ನೆಲವಾಗಿದೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ೬೧ ಯುದ್ಧಗಳು ನಡೆದ ಬಗ್ಗೆ ತಿಳಿದುಬರುತ್ತದೆ. ಅವುಗಳಿಗೆಲ್ಲ ಮೂಲಕಾರಣ ಈ ಪ್ರದೇಶದ ಫಲವತ್ತಾದ ಭೂಮಿಯಾಗಿದೆ. ಕರ್ನಾಟಕ ಪ್ರದೇಶವೊಂದರಲ್ಲಿ ಇಷ್ಟೊಂದು ಪ್ರಮಾಣದ ಯುದ್ಧಗಳು ಫಲವತ್ತಾದ ಭೂಮಿಯನ್ನು ವಶಪಡಿಸಿ ಕೊಳ್ಳಲೋಸುಗ ನಡೆದದ್ದು ವಿಶೇಷವೇ.ಈ ಭೂಮಿಯಲ್ಲಿ ಸತತವಾದ ಹೋರಾಟಗಳ ಮೂಲಕ ಅಧಿಕಾರ ಸ್ಥಾಪನೆ ಮಾಡಲು ಶತಶತಮಾನಗಳಿಂದಲೂ ಪ್ರಯತ್ನಗಳು ನಡೆದದ್ದು ವೈಶಿಷ್ಟ್ಯ ಪೂರ್ಣವಾಗಿದೆ. ಹೀಗಾಗಿ ದೋ-ಅಬ್ ಪ್ರದೇಶದ ಚರಿತ್ರೆ ಜಿಲ್ಲೆಯೊಂದರ ಚರಿತ್ರೆಗಿಂತ ಭಿನ್ನವಾಗಿ ಈ ಸಂದರ್ಭದಲ್ಲಿ ರೂಪುಗೊಂಡಿರುವುದಾಗಿದೆ.

ಈ ಪ್ರದೇಶದ ಚರಿತ್ರೆಯನ್ನು ವಿಜಯನಗರ ಮತ್ತು ಬಹಮನಿ ಅರಸರ ಕಾಲದ ಮೂಲಕ ಗುರುತಿಸಲಾಗುತ್ತದೆ. ಆದರೆ ಈ ಎರಡೂ ಮನೆತನಗಳ ಕಾಲಘಟ್ಟದಲ್ಲಿ ವಿವಾದಿತ ಕೇಂದ್ರವಾಗಿ ಗುರುತಿಸಿಕೊಂಡಿತ್ತಷ್ಟೆ, ವಿಜಯನಗರ ಮತ್ತು ಬಹಮನಿಗಳು ಈ ಪ್ರದೇಶಕ್ಕಾಗಿ ನಿರಂತರವಾಗಿ ಕಚ್ಚಾಡಿದಂತೆ ಇದಕ್ಕೂ ಪೂರ್ವದ ಹಲವು ಅರಸುಮನೆತನಗಳು ಹೋರಾಟ ಮಾಡಿರುವುದು ಕಂಡು ಬರುತ್ತದೆ. ಆದರೆ ರಾಯಚೂರು ದೋ-ಅಬ್ ಅಂದರೆ ವಿಜಯನಗರ ಮತ್ತು ಬಹಮನಿ ಕಾಲಕ್ಕೆ ಸೇರಿಸಲಾಗುತ್ತದೆ. ಈ ವೇಳೆಗಾಗಲೇ ಇದು ಪ್ರತಿಷ್ಠಿತ ಯುದ್ಧ ಕೇಂದ್ರವಾಗಿ ರೂಪುಗೊಂಡಿತ್ತು. ಮಸ್ಕಿಯು ಮೌರ್ಯರ ದಕ್ಷಿಣದ ಪ್ರಾಂತ್ಯ ಸುವರ್ಣಗಿರಿಯಾಗಿತ್ತೆಂದು ಹೇಳಬಹುದಾಗಿದೆ. ಅಶೋಕನ ಪೂರ್ಣ ಹೆಸರನ್ನು ದೇವನಾಂಪ್ರಿಯ ಅಶೋಕ ಎಂದು ಉಲ್ಲೇಖಿಸಿದ ಮಸ್ಕಿ ಶಾಸನ ಭಾರತದ ಸಂದರ್ಭದಲ್ಲಿ ವಿಶೇಷ ಸ್ಥಾನ ಪಡೆದಿರುವುದು ಗಮನಾರ್ಹ. ಈ ಯುದ್ಧಗಳಿಗೆ ಬಾದಾಮಿ ಚಾಲುಕ್ಯರು ಮತ್ತು ಪಲ್ಲವರ ನಡುವಿನ ಸಂಘರ್ಷ ಆರಂಭವಾಗಿ ಕಂಡುಬಂದರೂ, ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಈ ಪ್ರದೇಶ ಅತ್ಯಂತ ಪ್ರತಿಷ್ಠಿತ ಕೇಂದ್ರವಾಗಿತ್ತು. ಈ ಸಂದರ್ಭದಲ್ಲಿ

ಕಲ್ಯಾಣ ಚಾಲುಕ್ಯರು ಮತ್ತು ತಂಜಾವೂರಿನ ಚೋಳರ ನಡುವಿನ ಹೋರಾಟಗಳು ವೇದಿಕೆಯಾದವು. ಈ ಮನೆತನಗಳ ಮಧ್ಯ ಭಾರೀ ಪೈಪೋಟಿ ಕಂಡುಬರುತ್ತದೆ. ಆದರೆ ಚೋಳರ ಕುರಿತ ಶಾಸನಗಳು ಅಷ್ಟಾಗಿ ಕಂಡುಬರುತ್ತಿಲ್ಲ. ಹಾಗಾಗಿ ಚೋಳರನ್ನು ಕುರಿತು ಉಲ್ಲೇಖಿಸುವ ಶಾಸನಗಳ ಅಧ್ಯಯನದ ಅಗತ್ಯವಿದೆ. ಸ್ವಲ್ಪ ಕಾಲ ಈ ಪ್ರದೇಶ ಕಲಚೂರಿಗಳ ವಶದಲ್ಲಿತ್ತು. ದಕ್ಷಿಣ ಭಾರತದ ಸಂದರ್ಭದಲ್ಲಿ ಹೊಯ್ಸಳರು, ಸೇವುಣರು ಹಾಗೂ ಕಾಕತೀಯರು ಪರಸ್ಪರ ವಿರೋಧಿಗಳಾಗಿ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಲು ಪ್ರಯತ್ನಿಸಿದರು. ಕ್ರಿ.ಶ. ೧೩ನೆಯ ಶತಮಾನದ ವೇಳೆಗೆ ಈ ಪ್ರದೇಶವನ್ನು ಯುದ್ಧದ ಕಣವನ್ನಾಗಿ ರೂಪಿಸಲಾಯಿತು. ಇದು ಇನ್ನಷ್ಟು ವ್ಯಾಪಿಸಿಕೊಂಡದ್ದು, ಹೆಚ್ಚಿಸಿಕೊಂಡದ್ದು, ಮುಂದುವರೆದದ್ದು ವಿಜಯನಗರ ಮತ್ತು ಬಹಮನಿ ರಾಜ್ಯಗಳ ಕಾಲದಲ್ಲಿ. ಒಂದಿಲ್ಲೊಂದು ಕಾರಣದಿಂದ ಈ ಎರಡು ಮನೆತನಗಳು ನಿರಂತರವಾಗಿ ಕಾದಾಡಿವೆ. ಮುಖ್ಯವಾಹಿನಿಯ ಬರಹಗಳಲ್ಲಿ ಇವುಗಳ ಹೋರಾಟ ಹಿಂದು-ಮುಸ್ಲಿಂ ಹೋರಾಟವೆಂದೇ ಬಿಂಬಿಸಲಾಗಿದೆ. ಆದರೆ ಇವು ಅಧಿಕಾರ ಸ್ಥಾಪನೆಯೇ ಅವರ ಮುಖ್ಯ ಗುರಿಯಾಗಿತ್ತೇ ಹೊರತು ಧರ್ಮಕೇಂದ್ರಿತ ಹೋರಾಟವಾಗಿರಲಿಲ್ಲ. ಹಿಂದೂ ಮುಸ್ಲಿಂ ಸಂಬಂಧಗಳು ರೂಪುಗೊಳ್ಳುವ ಮೊದಲೇ ರಾಯಚೂರು ದೋ-ಅಬ್ ಮೇಲೆ ಹತೋಟಿ ಪಡೆಯಲು ಅನೇಕ ರಾಜಮನೆತನಗಳು, ರಾಜ್ಯಗಳು ಹೋರಾಟ ನಡೆಸಿದ್ದನ್ನು ಕಾಣಬಹುದಾಗಿದೆ.

ವಿಜಯನಗರ ಪತನದ ನಂತರ ಈ ಪ್ರದೇಶ ಬಿಜಾಪುರ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ಕಾಲಾವಧಿಯಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳ ಉದಯವಾದವು. ಆದಿಲ್‌ಶಾಹಿಗಳ ಅವನತಿಯ ನಂತರ ಈ ಪ್ರದೇಶ ಮೊಗಲರ ವಶವಾಯಿತು. ಮೊಗಲರ ಪ್ರತಿನಿಧಿಯಾಗಿ ಹೈದರಾಬಾದ್ ಸಂಸ್ಥಾನ ಉದಯವಾಯಿತು. ಈ ಸಂಸ್ಥಾನದ ನಿಜಾಮರು ಪ್ರಬಲರಾಗಿದ್ದರು. ಇದಕ್ಕೂ ಪೂರ್ವದಲ್ಲಿ ಈ ಪ್ರದೇಶದ ಸಾಲಗುಂದೆಯ ಸಿಂದರು, ಮೊರಟದ ಹೈಹಯರು ಹಾಗೂ ಕರಡಿಕಲ್ ಕದಂಬರು ಮುಂತಾದವರು ಸಾಮಂತರಾಗಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಇವರು ಕಲ್ಯಾಣ ಚಾಲುಕ್ಯರು ಮತ್ತು ಸೇವುಣರ ಕಾಲದಲ್ಲಿ ಪ್ರಬಲ ಸಾಮಂತರಾಗಿ ರಾಜಧಾನಿಗಳನ್ನು ಹೊಂದಿ, ರಾಜ್ಯಭಾರ ಮಾಡಿರುವುದು ಗೋಚರಿಸುತ್ತದೆ. ಸಾಮಂತರಂತೆ ಸಂಸ್ಥಾನಿಕರು ಸಹ ಸೀಮಿತ ಪ್ರದೇಶಗಳಲ್ಲಿ ಅಧಿಕಾರ ನಡೆಸಿ, ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ.

ರೈತಾಪಿ ವರ್ಗ, ಕೂಲಿಕಾರ್ಮಿಕರು, ಕುಶಲಕರ್ಮಿಗಳು ಮತ್ತು ಜನಸಾಮಾನ್ಯರು ಒಂದು ಪ್ರಬಲ ವ್ಯವಸ್ಥೆಯನ್ನು ರೂಪಿಸಲು ಕಾರಣರಾದರು. ರಾಯಚೂರು ದೋ-ಅಬ್ ಪ್ರದೇಶ ವ್ಯವಸ್ಥೆಯ ಪ್ರಬಲ ಭಾಗವಾದ ಈ ವರ್ಗಗಳು ಕೃಷಿಭೂಮಿ ವಿಸ್ತರಣೆ, ನೀರಾವರಿ ವ್ಯವಸ್ಥೆ, ದಾನ ಪಕ್ರಿಯೆ, ಭೂಮಾಲಿಕ ವರ್ಗ ಮತ್ತು ಊಳಿಗಮಾನ್ಯ ವ್ಯವಸ್ಥೆಯಲ್ಲಿ ಬಲಿಷ್ಠರಾದವರಿಂದ ಆರ್ಥಿಕವಾಗಿ ಜೀತ ಪದ್ಧತಿ, ಬಿಟ್ಟಿ ಚಾಕರಿಯಿಂದಾಗಿ ಅತ್ಯಂತ ಕೆಳಕ್ಕೆ ತಳ್ಳಲ್ಪಟ್ಟವು, ತುಳಿತಕ್ಕೊಳಗಾದವು, ಮೂಲೆಗೊತ್ತಲ್ಪಟ್ಟವು. ಹೆಚ್ಚುವರಿ ಉತ್ಪಾದನೆ ಅನೇಕ ವೃತ್ತಿಗಳನ್ನು ಸೃಷ್ಟಿಸಿತು. ಬಲಾಢ್ಯ ವ್ಯವಸ್ಥೆಯಲ್ಲಿ ದೊಡ್ಡ ಪಾಲುದಾರರಾದ ಜಮೀನುದಾರಿ ವರ್ಗ ಹಾಗೂ ವ್ಯಾಪಾರಿ ವರ್ಗವು ತಮ್ಮ ತಮ್ಮ ಆರ್ಥಿಕ ವಲಯವನ್ನು ಪ್ರಬಲವಾಗಿಸಲು ರೈತಾಪಿ ವರ್ಗ ಮತ್ತಿತರ ದುಡಿಯುವ ವರ್ಗಗಳ ಮೇಲೆ ನಿಯಂತ್ರಣ ಹೊಂದಿ, ಆರ್ಥಿಕತೆ ಸಬಲತೆಯನ್ನು ಸಾಧಿಸಿದವು. ಈ ದೋ-ಅಬ್ ಪದೇಶದಲ್ಲಿ ಸಾಕಷ್ಟು ಹೋರಾಟಗಳ ಮೂಲಕ ಅಧಿಕಾರ ಗಳಿಸಿಕೊಂಡವರು ಈ ಪ್ರದೇಶದಲ್ಲಿ ವಾಣಿಜ್ಯೋದ್ಯಮವನ್ನು ಸ್ಥಾಪಿಸುವುದಕ್ಕೆ ಹೆಣಗಿದರು ಅದು ಸಾಧ್ಯವಾಗಲಿಲ್ಲ. ಆ ಮೂಲಕ ಗ್ರಾಮೀಣ ಪ್ರದೇಶಗಳು ನಗರೀಕರಣದ ಪ್ರಭಾವಕ್ಕೆ ಒಳಗಾದರೂ

ಅವು ನಗರಗಳಾಗಿ ರೂಪುಗೊಳ್ಳಲಿಲ್ಲ. ಏಕೆಂದರೆ ಬಹುತೇಕ ಪಟ್ಟಣಗಳೆಲ್ಲವೂ ರಾಜಧಾನಿ ಮತ್ತು ಸೈನಿಕ ಬೀಡುಗಳಾಗಿದ್ದವು. ಆದ್ದರಿಂದ ಅವುಗಳು ನಗರಗಳಾಗಲಿಲ್ಲ. ಒಂದೊಂದು ವ್ಯವಸ್ಥೆಯು ಬಲಾಢ್ಯವಾಗುವುದಕ್ಕಿಂತ ಮೊದಲೇ, ಅಲ್ಲೊಂದು ವ್ಯವಸ್ಥೆ ಪ್ರಬಲವಾಗುವುದಕ್ಕೆ ಮೊದಲೇ ಹೊಸ ಹೋರಾಟಗಳು/ಯುದ್ಧಗಳು ಆರಂಭವಾಗುತ್ತಿದ್ದದ್ದರಿಂದ ನಗರದ ಬೆಳವಣಿಗೆ ಪ್ರಕ್ರಿಯೆ ಕುಂಠಿತವಾಗಿರ ಬಹುದಾಗಿದೆ.

ಊಳಿಗಮಾನ್ಯ ವ್ಯವಸ್ಥೆಯ ಬಗೆಗೆ ಚರಿತ್ರೆಕಾರರಲ್ಲಿ ಭಿನ್ನಭಿಪ್ರಾಯಗಳಿವೆ. ರಾಯಚೂರು ದೋ–ಅಬ್ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆ ಅಸ್ತಿತ್ವದಲ್ಲಿತ್ತೇ ಅಥವಾ ಇರಲಿಲ್ಲವೋ ಎಂಬುದು ಕೂಡಾ ಅಷ್ಟೇ ಕುತೂಹಲಕಾರಿ ಸಂಗತಿ ಎನ್ನಬಹುದು. ಈ ವಾದವನ್ನು ಕುರಿತು ಚರಿತ್ರೆಕಾರರಾದ ಡಿ.ಡಿ. ಕೊಸಾಂಬಿ, ಆರ್.ಎಸ್. ಶರ್ಮ ಮುಂತಾದವರು ಹಾಗೂ ಕರ್ನಾಟಕದ ಮಟ್ಟಿಗೆ ಅಶೋಕ ಶೆಟ್ಟರ್, ರಾಜಾರಾಮ ಹೆಗಡೆ ಮುಂತಾದವರು ಅಧ್ಯಯನ ಮಾಡಿರುವುದು ಕಂಡುಬರುತ್ತದೆ. ಊಳಿಗಮಾನ್ಯವಾದದ ಕುರಿತು ಮೊದಲ ಬಾರಿಗೆ ಚಾರಿತ್ರಿಕವಾಗಿ ವಿಶ್ಲೇಷಣೆ ಮಾಡಿ, ಮಾರ್ಕ್ಸ್‌ವಾದಕ್ಕೆ ರೂಪುರೇಷೆಯನ್ನು ನೀಡಿ ಗಮನ ಸೆಳೆದವರು ಡಿ.ಡಿ. ಕೊಸಾಂಬಿ ಅವರು. ಡಿ.ಡಿ. ಕೊಸಾಂಬಿ ಮತ್ತು ಅವರ ಜಾಡಿನಲ್ಲಿ ಸಾಗಿದ ಆರ್.ಎಸ್. ಶರ್ಮ ಊಳಿಗಮಾನ್ಯ ವ್ಯವಸ್ಥೆ ಅಸ್ತಿತ್ವದಲ್ಲಿತ್ತೆಂದು ತಿಳಿಸುತ್ತಾರೆ. ಲೇಖನವೊಂದರಲ್ಲಿ ಅಶೋಕ ಶೆಟ್ಟರ್ ಈ ಕುರಿತಂತೆ ಎರಡು ಪ್ರಶ್ನೆಗಳನ್ನು ಎತ್ತಿರುವರು. ಅವೆಂದರೆ, ಮೊದಲನೆಯದ್ದು, ನಾವು ಪರಿಗಣಿಸಬೇಕಾದುದು ಬ್ರಾಹ್ಮಣರಿಗಾಗಲಿ, ದೇವಾಲಯಗಳಿಗಾಗಲಿ ಕೊಡುಗೆಯಾಗಿ ಕೊಡಲ್ಪಟ್ಟ ಭೂಮಿಯು ಬೇಸಾಯಕ್ಕೊಳ ಪಟ್ಟ ಭೂಮಿಯಾಗಿತ್ತೋ. ಬೇಸಾಯ ಕ್ಕೊಳಪಡದ ಭೂಮಿಯಾಗಿತ್ತೋ ಎಂಬುದು. ಎರಡನೆಯ ಪ್ರಶ್ನೆ ಏನೆಂದರೆ, ಹೀಗೆ ಕೊಡಲ್ಪಟ್ಟ ದಾನಗಳ ಫಲಾನುಭವಿಗಳು ಅಥವಾ ಇತರ ಭೂಮಾಲಿಕರು ತಮ್ಮ ಮಣ್ಣಿನ ವಾಸ್ತವ ಉಳುಮೆಗಾರ ರಾಗಿದ್ದರೋ ಅಥವಾ ತಮ್ಮ ಜಮೀನುಗಳನ್ನು ರೈತಾಪಿಗಳಿಂದ ಉಳುಮೆ ಮಾಡಿಸಿಕೊಳ್ಳುತ್ತಿದ್ದರೋ ಎಂಬುದು. ಈ ಹಿನ್ನಲೆಯಲ್ಲಿ ರಾಯಚೂರು ದೋ–ಅಬ್ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆ ಕುರಿತು ಅವಲೋಕಿಸಿದಾಗ ಶಾಸನಗಳನ್ನು ಆಧರಿಸಿ ಮೊದಲನೆಯದಾಗಿ ಬ್ರಾಹ್ಮಣರಿಗೆ, ದೇವಾಲಯಗಳಿಗೆ ದಾನವಾಗಿ ಕೊಡಲ್ಪಟ್ಟ ಭೂಮಿಯು ಬೇಸಾಯಕ್ಕೊಳಪಟ್ಟ ಭೂಮಿಯಾಗಿತ್ತು. ಎರಡನೆಯದಾಗಿ, ಭೂಮಾಲಿಕರ ಭೂಮಿಯಲ್ಲಿ ರೈತಾಪಿ ವರ್ಗದ ಜನರೇ ಉಳುಮೆ ಮಾಡುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಆರ್.ಎಸ್. ಶರ್ಮ ಅವರು ಕೂಡಾ "ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ಬಂಜರು ಭೂಮಿಗಳನ್ನು ನೀಡುವ ಹಾಗಿರಲಿಲ್ಲ. ಗ್ರಾಮದಲ್ಲಿನ ಬೇಸಾಯಕ್ಕೆ ಒಳಗಾದ ಭೂಮಿಯನ್ನು ಮಾತ್ರ ನೀಡಲಾಗುತ್ತಿತ್ತು. ಕ್ರಿ.ಶ. ೫ನೆಯ ಶತಮಾನದಿಂದ ಬೇಸಾಯಕ್ಕೊಳಗಾದ ಭೂಮಿಯನ್ನು ನೀಡಲಾಗುತ್ತಿತ್ತು"(ಶರ್ಮ ೨೦೦೭:೧೮೨) ತಿಳಿಸುತ್ತಾರೆ. ಈ ಕುರಿತು ತಿಳಿಸುವ ಅನೇಕ ಶಾಸನಗಳಲ್ಲಿ ಭೂಒಡೆಯರು ತಮ್ಮ ಭೂಮಿಯನ್ನು ಬೇಸಾಯ ಮಾಡುವ ರೈತಾಪಿ ಜನರಿಗೆ ವರ್ಷಕ್ಕೆ ಇಂತಿಷ್ಟು ರಕಮು, ಪಾಲಿಗೆ, ಗುತ್ತಿಗೆ ಮುಂತಾದ ಕ್ರಮದಂತೆ ನೀಡಲಾಗುತ್ತಿತ್ತು. ಇದು "ಊಳಿಗಮಾನ್ಯ ವ್ಯವಸ್ಥೆಯನ್ನು" ಪ್ರತಿಫಲಿಸುತ್ತದೆ.

ರಾಜಾರಾಮ ಹೆಗಡೆ ಅವರ ವಿಮರ್ಶೆಯು ಮೇಲ್ಕಂಡ ವಾದಗಳಿಗಿಂತ ಭಿನ್ನವಾಗಿ ಕಾಣುತ್ತದೆ. ರಾಜರಾಮ ಹೆಗಡೆ ಅವರ ಪ್ರಕಾರ –

ಮೂಲತಃ ಭಾರತೀಯ ಸಮಾಜವು ಸಂಪ್ರದಾಯ ಸಮಾಜವಾಗಿದೆ. ಇದು ರಿಲಿಜಿಯಸ್ ಸಮಾಜವಾಗಿಲ್ಲ. ಪಾಶ್ಚಾತ್ಯ ಸಂಸ್ಕೃತಿ ಕ್ರಿಶ್ಚಿಯನ್ ರಿಲಿಜನ್ನಿನ ಕುರಿತ ಥಿಯಾಲಜಿಯ ಲೋಕದೃಷ್ಟಿಯಿಂದ ರೂಪುಗೊಂಡಿದೆ. ಇದರಿಂದ ರೂಪುಗೊಂಡ ಪಾಶ್ಚಾತ್ಯ ಚಿಂತನೆಗಳು ಬೆಳೆಸಿದ ಪರಿಭಾಷೆಗಳು ಹಾಗೂ ಪರಿಕಲ್ಪನೆಗಳು ಭಾರತದಲ್ಲಿ ಇರುವುದು ಸಾಧ್ಯವಿಲ್ಲ. ಅವುಗಳನ್ನು ಭಾರತದಲ್ಲಿ ಕಾಣದೇ ಹೋದುದರಿಂದಲೇ ಪಾಶ್ಚಾತ್ಯ ಚಿಂತಕರು ಭಾರತೀಯ ಸಂಸ್ಕೃತಿಯಲ್ಲಿ ಏನೋ ಐಬಿದೆ ಎಂದು ತರ್ಕಿಸುತ್ತಾರೆ. ಅಲ್ಲದೆ ಲೋಕವನ್ನು ಏಕತ್ರವಾಗಿ ವ್ಯವಸ್ಥಿತಗೊಳಿಸುವ ವೈಚಾರಿಕ ರಚನೆಗಳು ಭಾರತೀಯ ರಲ್ಲಿ ಇಲ್ಲ. ಭಾರತೀಯ ವಿಧಿ ಆಚರಣೆಗಳಿಗೆ ಅರ್ಥವಿಲ್ಲ. ಪುರಾಣ ಇತಿಹಾಸಗಳು ನಿಜವೂ ಅಲ್ಲ\ಸುಳ್ಳು ಅಲ್ಲ ಮುಂತಾದವು ಭಾರತೀಯ ಸಂಸ್ಕೃತಿಯ ವಾಸ್ತವಗಳಾದರೆ, ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳದೆ ಸ್ಟೇಟ್‌ನ ಕುರಿತು ಅಧ್ಯಯನ ಮಾಡಲು ಸಾಧ್ಯವಿಲ್ಲ. ಭಾರತೀಯರಿಗೆ ರಿಲಿಜನ್ ಹಾಗೂ ಆದ್ದರಿಂದ ಹುಟ್ಟಿಕೊಳ್ಳಬಲ್ಲ ಲೋಕ ದೃಷ್ಟಿಯೇ ಇಲ್ಲದಿದ್ದರೆ ಐರೋಪ್ಯರಂತೆ ಭಾವಿಸಬೇಕಾಗುತ್ತದೆ. ಹಾಗಾಗಿ ಲೋಕದೃಷ್ಟಿ ಯಿಂದ ಇಲ್ಲಿನ ಯಾವುದೇ ವ್ಯವಸ್ಥೆಯನ್ನು ಯತಾರ್ಥವಾಗಿ ತಿಳಿದುಕೊಳ್ಳಬಹುದು (ತಂಬಂಡ ೨೦೧೦:೪೩೬-೪೩೭).

ರಾಜಾರಾಮ ಹೆಗಡೆ ಅವರು ಯುರೋಪ್ ಕೇಂದ್ರಿತ ಜ್ಞಾನದ ಹಿನ್ನೆಲೆಯಲ್ಲಿ ಊಳಿಗಮಾನ್ಯ ವ್ಯವಸ್ಥೆ ಭಾರತದಲ್ಲಿತ್ತೆಂದು ಹೇಳುವುದು ಸಮಂಜಸವಲ್ಲವೆಂದು ಹೇಳುತ್ತಾರೆ. ಭಾರತದಲ್ಲಿ/ಕನಾಟಕದಲ್ಲಿ ಊಳಿಗಮಾನ್ಯ ವ್ಯವಸ್ಥೆ ಇತ್ತೋ ಇಲ್ಲವೋ ಎನ್ನುವುದಕ್ಕಿಂತ ಮುಖ್ಯವಾಗಿ ದೋ-ಅಬ್ ಪ್ರದೇಶದ ಚರಿತ್ರೆಯನ್ನು ನಿರ್ವಚಿಸುವಲ್ಲಿ ಈ ವಾದಗಳು ಸಹಕಾರಿಯಾಗುತ್ತವೆ ಎನ್ನುವುದು ಈ ಸಂದರ್ಭದಲ್ಲಿ ಮುಖ್ಯವಾಗುತ್ತದೆ(ಈ ಕುರಿತ ವಿವರಗಳಿಗಾಗಿ ಮೂರನೆಯ ಅಧ್ಯಾಯದಲ್ಲಿ ಪುಟ ೧೦೧ರಿಂದ ೧೦೫ರಲ್ಲಿ ಗಮನಿಸಬಹುದಾಗಿದೆ).

* * *

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಆಳಿದ ವಿವಿಧ ಅರಸುಮನೆತನಗಳು ತಮ್ಮ ಆಳ್ವಿಕೆಯ ಕಾಲಘಟ್ಟದಲ್ಲಿ ಸಾಮಂತರನ್ನು ನೇಮಿಸಿಕೊಂಡು ಆಡಳಿತ ನಡೆಸಿದವು. ಈ ಪ್ರದೇಶದಲ್ಲಿ ಸಾಮಂತ ಪದ್ಧತಿ ಕುಟುಂಬ ಪ್ರಭುತ್ವದ ಹಿನ್ನೆಲೆಯಲ್ಲಿ ರೂಪುಗೊಂಡಿತ್ತು. ಸಾಲಗುಂದೆಯ ಸಿಂದರು, ಮೊರಟದ ಹೈಹಯರು, ಕರಡಿಕಲ್ಲು ಕದಂಬರು ಎಂಬ ಸಾಮಂತರು ವಂಶಪಾರಂಪರ್ಯವಾಗಿ ಆಳ್ವಿಕೆ ನಡೆಸಿದರೆ, ಇವರ ಸಮಕಾಲೀನ ಸಾಮಂತರ ಆಳ್ವಿಕೆ ಜೀವಿತಾವಧಿವರೆಗೆ ಮಾತ್ರ ಇತ್ತು. ಜೊತೆಗೆ ಸಾರ್ವಭೌಮರ ಸಂಬಂಧಿಕರ ಆಳ್ವಿಕೆಯೂ ಇಲ್ಲಿ ಗೋಚರಿಸುತ್ತದೆ. ಹೆಚ್ಚು ಕಡಿಮೆ ಈ ಪ್ರದೇಶ ಸಾರ್ವಭೌಮರಿಗಿಂತ ಸಾಮಂತರ ಆಳ್ವಿಕೆಗೆ ಒಳಪಟ್ಟದ್ದೇ ಹೆಚ್ಚು. ಸಾಮಂತರಂತೆ ವಿಜಯನಗರೋತ್ತರ ಕಾಲಘಟ್ಟದಲ್ಲಿ ಈ ಪ್ರದೇಶದಲ್ಲಿ ಹಲವು ಸಂಸ್ಥಾನಿಕರು ಅಸ್ತಿತ್ವಕ್ಕೆ ಬರುತ್ತಾರೆ. ಅವರಲ್ಲಿ ಗುಂತಗೋಳ, ಗುಡಗುಂಟ, ದೇವದುರ್ಗ, ಕರಿಗುಡ್ಡ, ಜಾಲಹಳ್ಳಿ, ಅರಕೇರಿ, ಕ್ಯಾದಿಗ್ಗೇರಿ, ಗಲಗ, ಮುಂಡರಗಿ ಹಾಗೂ ರಾಮದುರ್ಗ ಮುಂತಾದ ಸಂಸ್ಥಾನಗಳ ಸಂಸ್ಥಾನಿಕರು ಪ್ರಮುಖರಾಗಿದ್ದಾರೆ. ಇಲ್ಲಿನ ಸಂಸ್ಥಾನಗಳ ಹುಟ್ಟು

ಬೆಳವಣಿಗೆಯನ್ನು ವಿಜಯನಗರದೊಂದಿಗೆ ಸಮೀಕರಿಸಲು ಅಥವಾ ತಳಕು ಹಾಕಲು ಪ್ರಯತ್ನಿಸಿರುವುದೇ ಹೆಚ್ಚು. ಸಂಸ್ಥಾನಿಕರ ಚರಿತ್ರೆಯನ್ನು ಇನ್ನಷ್ಟು ಹಿಂದಕ್ಕೆ ಹಿಗ್ಗಿಸಬಹುದಾದ ಪ್ರಯತ್ನವೆ ಹೊರತು ಮತ್ತೇನಲ್ಲ ಎನ್ನಬಹುದು. ವಾಸ್ತವವಾಗಿ ಈ ಸಂಸ್ಥಾನಗಳು ಹೆಚ್ಚು ಕಡಿಮೆ ಕ್ರಿಶ. ೧೬೬೯ರ ನಂತರ ಅಸ್ತಿತ್ವಕ್ಕೆ ಬರುತ್ತವೆ.

ಈ ಪ್ರದೇಶದ ಸಂಸ್ಥಾನಿಕರು ಬಿಜಾಪುರದ ಆದಿಲ್‌ಶಾಹಿಗಳು, ಮೊಗಲರು ಹಾಗೂ ಹೈದರಾಬಾದ್ ನಿಜಾಮರ ಕಾಲಘಟ್ಟದಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿರುವುದು ಕಂಡುಬರುತ್ತದೆ. ಆದಿಲ್‌ಶಾಹಿಗಳ ಪ್ರಭಾವದಲ್ಲಿ ಸುರಪುರದ ಆಧೀನದಲ್ಲಿ ಇಲ್ಲಿನ ಸಂಸ್ಥಾನಗಳು ಕಾಲ ನೂಕಿದವು. ಆದಿಲ್‌ಶಾಹಿಗಳ ಪತನಾನಂತರದಲ್ಲಿ ಈ ಪ್ರದೇಶವನ್ನು ಮೊಗಲರು ವಶಪಡಿಸಿಕೊಂಡರು. ಮೊಗಲರ ನಂತರ ಹೈದರಾಬಾದ್ ನಿಜಾಮರು ಈ ಪ್ರದೇಶಕ್ಕೆ ಅಧಿಪತಿಗಳಾದರು. ಈ ಕಾಲದಲ್ಲಿ ನಿಜಾಮರಿಗೆ ಇಲ್ಲಿನ ಸಂಸ್ಥಾನಿಕರು ವಾರ್ಷಿಕ ಪೊಗದಿಯನ್ನು ಸಲ್ಲಿಸುತ್ತಿದ್ದರು. ಈ ಸಂದರ್ಭದಲ್ಲಿ ಹಂತ ಹಂತವಾಗಿ ಸಂಸ್ಥಾನಿಕರ ಪ್ರಭಾವ ಕಡಿಮೆಯಾಯಿತೆಂದೇ ಹೇಳಬೇಕಾಗುತ್ತದೆ. ಏಕೆಂದರೆ ನಿಜಾಮರು ತಮ್ಮ ಆಡಳಿತ ವ್ಯವಸ್ಥೆಯನ್ನು ಭದ್ರಪಡಿಸಿಕೊಳ್ಳಲು ಸ್ಥಳೀಯವಾಗಿ ಬ್ರಾಹ್ಮಣ ಮತ್ತು ಲಿಂಗಾಯತರನ್ನು ಅಧಿಕಾರಿಗಳನ್ನಾಗಿ ನೇಮಕ ಮಾಡಿದರು. ಇವರ ಜೊತೆಗೆ ಇತರೆ ಹಿಂದುಳಿದ ವರ್ಗದ ಜನರನ್ನು ಗ್ರಾಮಾಡಳಿತದಲ್ಲಿ ಪಾಲ್ಗೊಳ್ಳುವಂತೆ ಮಾಡಲಾಯಿತು. ದೊರೆತ ಅವಕಾಶವನ್ನು ಉಪಯೋಗಿಸಿಕೊಂಡ ಈ ಪ್ರದೇಶದ ಬ್ರಾಹ್ಮಣ ಮತ್ತು ಲಿಂಗಾಯತರು, ಅಲ್ಲಲ್ಲಿ ಇತರೆ ಹಿಂದುಳಿದ ವರ್ಗದ ಜನರು ಹಂತ ಹಂತವಾಗಿ ಭೂಮಾಲಿಕರಾಗಿ ರೂಪುಗೊಂಡರು.

ರಾಯಚೂರು ದೋ-ಅಬ್ ಪ್ರದೇಶದಲ್ಲಿ ಬ್ರಿಟಿಶರು ಲಿಂಗಸೂಗೂರಿನಲ್ಲಿ ೧೯೪೨ರ ವೇಳೆಗೆ ಕಂಟೋನ್ಮೆಂಟ್‌ನ್ನು ಸ್ಥಾಪಿಸಲು ಇಲ್ಲಿನ ಫಲವತ್ತಾದ ಭೂಮಿ ಮತ್ತು ಸ್ಥಳೀಯವಾಗಿದ್ದ ಸಂಸ್ಥಾನಿಕರು ತಮ್ಮ ವಿರುದ್ಧ ಯಾವ ಸಂದರ್ಭದಲ್ಲಾದರೂ ದಂಗೆ ಏಳಬಹುದು ಎಂಬುದು ಕಾರಣವಾಗಿತ್ತು. ಜಾಗತಿಕ ಆರ್ಥಿಕ ವ್ಯವಸ್ಥೆಯ ಮೇಲೆ ಹಿಡಿತ ಸಾಧಿಸಲು ಈಜಿಪ್ಟ್, ಬ್ರೆಜಿಲ್ ನಂತಹ ಹತ್ತಿ ತಳಿಗಳನ್ನು ಇಲ್ಲಿ ಪ್ರಯೋಗಿಸಿ, ಯಶಸ್ವಿಯಾದರು. ಬ್ರಿಟಿಶರು, ಸಹಾಯಕ ಸೈನಿಕ ಪದ್ಧತಿ ಒಪ್ಪಂದದ ಪ್ರಕಾರ ಸಲ್ಲಿಸಬೇಕಾದ ಬಾಕಿ ಹಣವನ್ನು ಪಾವತಿಸಲಿಲ್ಲವೆಂಬ ಕಾರಣವೊಡ್ಡಿ ಹೈದರಾಬಾದ್ ನಿಜಾಮರಿಂದ ಬೀರಾರ್ ಒಪ್ಪಂದವನ್ನು ೧೮೫೩ರಲ್ಲಿ ಮಾಡಿಕೊಂಡರು. ಇದರನ್ವಯ ಉಸ್ಮಾನಾಬಾದ್ ಮತ್ತು ರಾಯಚೂರು ಜಿಲ್ಲೆಗಳನ್ನು ಬ್ರಿಟಿಶರು ತಮ್ಮ ವಶಕ್ಕೆ ಪಡೆದರು. ಈ ಒಪ್ಪಂದದ ನಂತರ ಈ ಪ್ರದೇಶದಲ್ಲಿ ಅನೇಕ ಬೆಳವಣಿಗೆಗಳು ನಡೆದವು. ಅವೆಂದರೆ, ಭೂಕಂದಾಯ ನಿಗದಿಪಡಿಸಲು ೧೮೫೯ರಲ್ಲಿ ಬಾಂಬೆ ಮಾದರಿಯಲ್ಲಿ ಭೂ ಸರ್ವೇಕಾರ್ಯ ಮಾಡಿ ಗಡಿಗಳನ್ನು ನಿರ್ಧರಿಸಲಾಯಿತು.ರಾಯಚೂರು ದೋ-ಅಬ್ ಮದರಾಸು ಮತ್ತು ಮುಂಬಯಿಗೆ ರೈಲು ಮತ್ತು ರಸ್ತೆ ಸಾರಿಗೆ ಸಂಪರ್ಕ ಕಲ್ಪಿಸುವ ಕೇಂದ್ರವಾಯಿತು. ಅಲ್ಲದೆ ಆಂತರಿಕ ಸಾರಿಗೆ ಸಂಪರ್ಕ ಹೊಂದಿತ್ತು. ನೀರಾವರಿ ವ್ಯವಸ್ಥೆ, ವಿದ್ಯುತ್ ಸರಬರಾಜು, ಇದಲ್ಲದೆ ಲಿಂಗಸೂಗೂರು ಮತ್ತು ರಾಯಚೂರುಗಳಲ್ಲಿ ಜೈಲುಗಳನ್ನು ಸ್ಥಾಪಿಸಲಾಯಿತು. ಇವು ಬ್ರಿಟಿಶರು ರಾಯಚೂರು ದೋ-ಅಬ್ ಪ್ರದೇಶವನ್ನು ೧೮೫೩ರಲ್ಲಿ ಬೀರಾರ್ ಒಪ್ಪಂದದ ಪ್ರಕಾರ ಅಧೀನಕ್ಕೊಳಪಡಿಸಿಕೊಂಡ ನಂತರ ಆದ ಬೆಳವಣಿಗೆಗಳಾಗಿವೆ. ಬ್ರಿಟಿಶರ ವಿರುದ್ಧ ೧೮೫೭-೫೮ರಲ್ಲಿ ಈ ಪ್ರದೇಶದಲ್ಲಿ ಜನರು ದಂಗೆ ಎದ್ದಿದ್ದರೆಂದು ತಿಳಿದುಬರುತ್ತದೆ. ಆದರೆ ಈ ಕುರಿತು ಸ್ಪಷ್ಟವಾದ ಮಾಹಿತಿ ಲಭ್ಯವಿಲ್ಲ.

ನಿಜಾಮರ ಕಾಲದಲ್ಲಿ **ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡದ ಬಳಕೆ** ಹೆಚ್ಚಾಗಿ ರಾಯಚೂರು ದೋ-ಅಬ್ ಪ್ರದೇಶದಲ್ಲಿ ಕಂಡುಬರುತ್ತದೆ. **ಕನ್ನಡ ಪ್ರಜ್ಞೆ**ಯನ್ನು ಬೆಳೆಸುವುದಕ್ಕಾಗಿ ನಿಜಾಮ ಸರ್ಕಾರದ ಸಹಕಾರವಿತ್ತು. ಮೇಲಾಗಿ ಸರ್ಕಾರದ ವತಿಯಿಂದ ರಾಯಚೂರು ಜಿಲ್ಲೆಯಲ್ಲಿ ೨೯೬ ಕನ್ನಡ ಶಾಲೆಗಳನ್ನು ತೆರೆಯಲಾಗಿತ್ತು. ಈ ಜಿಲ್ಲೆಯಲ್ಲಿ ಮಾತ್ರ ಪ್ರಾಥಮಿಕ ಶಿಕ್ಷಣ ಕ್ರಮವು ಕನ್ನಡದಲ್ಲಿಯೇ ಜರುಗುತ್ತಿತ್ತು. ನಿಜಾಮ ಸರ್ಕಾರವು ಅನಕ್ಷರತೆಯನ್ನು ಹೋಗಲಾಡಿಸಲು ಪ್ರಯತ್ನಿಸಿತು. ಸರಕಾರದಿಂದ ಅಕ್ಷರಾಭ್ಯಸ ಮಾಡುವವರಿಗೆ ಅವಕಾಶ ಕಲ್ಪಿಸಿಕೊಡಲಾಗಿತ್ತು. ಸರ್ಕಾರಿ ಕಚೇರಿಗಳಲ್ಲಿ ಪತ್ರ ವ್ಯವಹಾರವೆಲ್ಲವೂ ಕನ್ನಡದಲ್ಲಿಯೇ ನಡೆಯುತ್ತಿತ್ತು. ೧೯೨೮ರಲ್ಲಿ ರಾಯಚೂರಿನಲ್ಲಿ "ರಾಯಚೂರು ಕರ್ನಾಟಕ ತರುಣ ಸಂಘ" ಹುಟ್ಟಿತು. ಇದು ಹೈದರಾಬಾದ್ ಕರ್ನಾಟಕದಲ್ಲಿಯ ಮೊದಲ ಸಂಘವಾಗಿದೆ. ಈ ಸಂಘವು ಕನ್ನಡ ಪ್ರಜ್ಞೆಯನ್ನು ಬೆಳೆಸುವುದಕ್ಕಾಗಿ ಪ್ರಯತ್ನ ಮಾಡಿತು. ರಾಯಚೂರಿನಲ್ಲಿ ೧೯೩೪ರಲ್ಲಿ ೨೪ನೆಯ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವನ್ನು ನಡೆಸಿತು. ಈ ಸಮ್ಮೇಳನದ ಅಧ್ಯಕ್ಷತೆಯನ್ನು ದಕ್ಷಿಣ ಕನ್ನಡದ ಪಂಜೇ ಮಂಗೇಶರಾಯರು ವಹಿಸಿದ್ದರು. ೧೯೪೫ರಲ್ಲಿ ಡಿ.ಕೆ. ಭೀಮಸೇನರಾಯರ ಅಧ್ಯಕ್ಷತೆಯಲ್ಲಿ ಹೈದರಾಬಾದ್ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿ ಯಶಸ್ವಿಯಾಯಿತು. ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಇದ್ದಂತೆ ಹೈದರಾಬಾದ್‌ನಲ್ಲೂ ಒಂದು "ನಿಜಾಮ್ ಸಾಹಿತ್ಯ ಪರಿಷತ್ತು" ಇತ್ತು. ಈ ರೀತಿಯಾಗಿ ರಾಯಚೂರಿನ ಕರ್ನಾಟಕ ಸಂಘವು ತನ್ನದೆಯಾದ ಕಾರ್ಯ ಚಟುವಟಿಕೆಗಳನ್ನು ನಡೆಸುತ್ತಿತ್ತು. ನಿಜಾಮ ಸರ್ಕಾರದ ವತಿಯಿಂದ ರಾಯಚೂರಿನ 'ಕರ್ನಾಟಕ ಸಂಘ' ಒಂದು ಸ್ವಂತ ಕಟ್ಟಡಕ್ಕಾಗಿ ನಿವೇಶನ ಪಡೆದು, ೧೯೪೭ರಲ್ಲಿ ಅಂದಿನ ಹೈದರಾಬಾದ್ ಸಂಸ್ಥಾನದ ಮುಖ್ಯಮಂತ್ರಿಗಳಾಗಿದ್ದ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರಿಂದ ರಾಯಚೂರಿನ 'ಕರ್ನಾಟಕ ಸಂಘ'ದ ಕಟ್ಟಡದ ಶಂಕು ಸ್ಥಾಪನೆ ಮಾಡಿಸಲಾಯಿತು(ಕೃಷ್ಣಕೊಲ್ಹಾರ ಕುಲಕರ್ಣಿ ೨೦೦೬:೫೫-೧೭೧). ಬ್ರಿಟಿಶರು ಸಹ ಈ ಪ್ರದೇಶದಲ್ಲಿ ೩೨೬ ಕನ್ನಡ ಮಾಧ್ಯಮ ಶಾಲೆಗಳನ್ನು ತೆರೆದದ್ದು ಕಂಡುಬರುತ್ತದೆ(ವಾರ್ಷಿಕ ವರದಿ ೧೮೫೮-೫೯:೧೨೫-೩೫). ಹೈದರಾಬಾದ್ ಸಂಸ್ಥಾನದಲ್ಲಿ ಪ್ರಕಟವಾಗುವ ಕನ್ನಡ ನಿಯತಕಾಲಿಕೆ ಪತ್ರಿಕೆಗಳ ಸಂಖ್ಯೆ ನಾಲ್ಕು ಹೈದರಾಬಾದಿನ ಸುದ್ದಿ ಖಾತೆಯಿಂದ ಹೊರಡುವ ಮಾಸ ಪತ್ರಿಕೆ 'ಹೈದರಾಬಾದ ಸಮಾಚಾರ'ವೂ ಒಂದು. 'ಹೈದರಾಬಾದು' ಮಧ್ಯಪಾನ ನಿರೋಧಕ ಸಭೆಯಿಂದ ಹೊರಡುವ ಎರಡನೆಯ ಮಾಸಿಕ ಪತ್ರಿಕೆ. ಸಹಕಾರ ಕೇಂದ್ರ ಸಮಿತಿಯವರು ಹೊರಡಿಸುತ್ತಿದ್ದ 'ಗ್ರಾಮ ಸುಧಾರಕ'ವೂ ಮೂರನೆಯದು. ಈ ಮೂರು ಪತ್ರಿಕೆಗಳು ಸರಕಾರಿ ಪತ್ರಿಕೆಗಳು ರಾಯಚೂರಿನಿಂದ ರಾಚೋಟೆಪ್ಪನವರ ಸಂಪಾದಕತ್ವದಲ್ಲಿ "ಡೆಕ್ಕನ್ ಪ್ರಭಾತ್" ಎಂಬ ವಾರಪತ್ರಿಕೆ ಹೊರಡುತ್ತಿತ್ತು. ಇದು ಹೈದರಾಬಾದ್ ಕರ್ನಾಟಕದ ಸಂಗತಿಗಳನ್ನು ಎಲ್ಲ ಕನ್ನಡಿಗರಿಗೆ ಮುಟ್ಟಿಸುವ ಕಾರ್ಯ ಮಾಡುತ್ತಿತ್ತು. ಈ ಹಿನ್ನೆಲೆಯಲ್ಲಿ ನಿಜಾಮರು ಕನ್ನಡದ ವಿರೋಧಿಗಳಾಗಿರದೆ ಕನ್ನಡದ ಬೆಳವಣಿಗೆಗೆ ಸಹಕರಿಸಿದರು. ಹಾಗಾಗಿ ರಾಯಚೂರು ಜಿಲ್ಲೆಯಲ್ಲಿ ಕನ್ನಡವನ್ನೇ ಬಳಸಲಾಗುತ್ತಿತ್ತು ಎಂದು ಗುರುತಿಸಬಹುದಾಗಿದೆ(ಜಾಗಿರದಾರ ಮತ್ತು ವಿಠಲರಾವ್ ೧೯೪೧:೨-೪, ೪೬,೫೦-೫೧,೬೩-೬೫)(ವಿವರಗಳಿಗಾಗಿ ಅಧ್ಯಾಯ ನಾಲ್ಕರಲ್ಲಿ ಪುಟ ೨೩೦ರಿಂದ ೨೩೫ ನೋಡಿ).

* * *

ಭಾರತದ ಸ್ವಾತಂತ್ರ್ಯ ಹೋರಾಟದ ನೆರಳು ಇಲ್ಲಿ ಕಂಡುಬರುತ್ತದೆ. ಆರಂಭದಲ್ಲಿ ಮಂದಗತಿಯಲ್ಲಿ ಮನೆ, ಮಠಗಳಲ್ಲಿ ಸಭೆ ಸೇರಿ ಪ್ರತಿಭಟಿಸುವುದಾಗಿತ್ತು. ಆದರೆ ಅವರು ಬ್ರಿಟಿಶ್ ಮತ್ತು ನಿಜಾಮರ ವಿರುದ್ಧ ಬೀದಿಗಿಳಿದು ಸಾಮೂಹಿಕವಾಗಿ ಹೋರಾಡಲಿಲ್ಲ. ೧೯೪೭ರ ನಂತರ ಹೋರಾಟವು

ತೀವ್ರತೆಯನ್ನು ಪಡೆದುಕೊಂಡಿತು. ಆದರೆ ನಿಜಾಮ ಸಂಸ್ಥಾನದ ಹೊರಗಿದ್ದು ಹೋರಾಟ ಮಾಡುವ ಅನಿವಾರ್ಯತೆಯುಂಟಾಯಿತು. ಆ ಸಂದರ್ಭದಲ್ಲಿ ಗಡಿಯ ಹೊರಗಿದ್ದು, ಗಡಿ ಶಿಬಿರಗಳನ್ನು ಸ್ಥಾಪಿಸಿಕೊಂಡು ಹೋರಾಡಿದರು. ಆಗ ರಜಾಕಾರರ ಕ್ಯಾಂಪ್‌ಗಳ ಮೇಲೆ ದಾಳಿ ಮಾಡಲು ಯುವಕ ರಾಗಿದ್ದವರನ್ನು ಕಳಿಸುತ್ತಿದ್ದರು. ಅವರು ರಾಯಚೂರು ಹೈಸ್ಕೂಲಿನಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಾಗಿದ್ದರು. ಹಾಗಾಗಿ ಅದು ವಿದ್ಯಾರ್ಥಿಗಳಿಂದ ಕೂಡಿದ ಹೋರಾಟವಾಗಿತ್ತೆನ್ನಬಹುದಾಗಿದೆ. ಜಹಗೀರ್‌ದಾರರು, ಜಮೀನ್ದಾರರು ಮತ್ತು ಭೂಮಾಲಿಕ ವರ್ಗ ಈ ವಿಮೋಚನಾ ಚಳವಳಿಯಲ್ಲಿ ಭಾಗವಹಿಸಲಿಲ್ಲ. ಈ ಈ ವರ್ಗಗಳು ವ್ಯವಸ್ಥೆ ಪರವಾಗಿದ್ದವು. ಸ್ವಾತಂತ್ರ್ಯ ಹೋರಾಟಗಾರರಾದ ಅಮರೇಶ್ವರ ಪಾಟೀಲ ಆಲ್ಕೋಡ ಅವರ ಹೇಳಿಕೆಯಾಧರಿಸಿ ಈ ಪ್ರದೇಶದಲ್ಲಿ ತೆಲಂಗಾಣ ಹೋರಾಟದ ಪ್ರಭಾವ ಇಲ್ಲಿ ಕಾಣುವುದಿಲ್ಲ. ಕಮ್ಯುನಿಸ್ಟರ ಪ್ರಭಾವ ಅಷ್ಟಾಗಿ ಕಾಣಸಿಗುವುದಿಲ್ಲ. ದೊಡ್ಡ ಪ್ರಮಾಣದ ಹಿಂಸಾತ್ಮಕ ಚಟುವಟಿಕೆಗಳು ನಡೆಯಲಿಲ್ಲ. ರಕ್ಷಣೆಗಾಗಿ ಮದ್ದುಗುಂಡುಗಳನ್ನು ಬಳಸಲಾಗುತ್ತಿತ್ತೇ ಹೊರತು ಅವುಗಳ ಮೂಲಕವೇ ಹೋರಾಟ ಮಾಡಲಿಲ್ಲ ಎಂಬುದು ತಿಳಿದುಬರುತ್ತದೆ. ಇಲ್ಲಿನ ಹೋರಾಟಗಾರರು ಮಧ್ಯಮ ವರ್ಗದ ರೈತಾಪಿ ವರ್ಗಕ್ಕೆ ಸೇರಿದವರಾಗಿದ್ದರು. ಆರಂಭದಲ್ಲಿ ಹೋರಾಟದ ಸ್ವರೂಪವು ಅಹಿಂಸಾತ್ಮಕವಾಗಿತ್ತು. ನಂತರ ದಿನಗಳೆದಂತೆ, ಹೋರಾಟ ಬಲಾಢ್ಯರಿಂದ ನಿಯಂತ್ರಣಕ್ಕೊಳಗಾದ ಸಂದರ್ಭದಲ್ಲಿ ಅನಿವಾರ್ಯವಾಗಿ ಹೋರಾಟಗಾರರು ಅಹಿಂಸಾ ಹೋರಾಟದಿಂದ ವಿಮುಖರಾದರು. ಆಗ ಹೈದರಾಬಾದ್ ಕರ್ನಾಟಕದ ವಿಮೋಚನೆಗಾಗಿ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಟ ಮುಂದುವರೆಯಿತು. ಭಾರತದ ಹೃದಯ ಭಾಗವಾಗಿದ್ದ ಹೈದರಾಬಾದ್ ಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ಸೇರಿಸಲು ಅಂದಿನ ಗೃಹಮಂತ್ರಿಗಳಾಗಿದ್ದ ಸರ್ದಾರ ವಲ್ಲಭಬಾಯಿ ಪಟೇಲ್ ಅವರು "ಪೋಲೀಸ್ ಕಾರ್ಯಾಚರಣೆ" ನಡೆಸಿ ವಿಮೋಚನೆಗೊಳಿಸಿದರು. ನಿಜಾಮರಿಂದ "ವಿಮೋಚನೆಗೊಂಡ" ಈ ಪ್ರದೇಶ ಸ್ಥಳೀಯ ಜಮೀನ್ದಾರರ ಹತೋಟಿಯಲ್ಲಿರುವ ವ್ಯವಸ್ಥೆಯ ಸುಪರ್ದಿಗೆ ಬಂದಿತು. ಹಾಗಾಗಿ ದೇಶಕ್ಕೆ ಸ್ವಾತಂತ್ರ್ಯ ಬಂದರೂ ಅನೇಕರಿಗೆ ಈ ಭಾಗದಲ್ಲಿ ಸ್ವಾತಂತ್ರ್ಯ ಎನ್ನುವುದು ಈಗಲೂ ವಿಡಂಬನೆಯಾಗಿದೆ. ಡಾ. ಡಿ.ಎಂ. ನಂಜುಂಡಪ್ಪ ಅವರ ವರದಿಯು ಈ ವಿಡಂಬನೆಗೆ ಕೈಗನ್ನಡಿಯಾಗಿದೆ ಎಂದರೆ ಉತ್ಪ್ರೇಕ್ಷೆಯಲ್ಲ.

□

# ಅನುಬಂಧಗಳು

೧. **ಪರಾಮರ್ಶನ ಗ್ರಂಥಗಳು**

೧.೧. ಪ್ರಕಟಿತ ಗ್ರಂಥಗಳು

೧.೨. ಪಿಎಚ್.ಡಿ ಮಹಾಪ್ರಬಂಧಗಳು

೧.೩. ಡಿ.ಲಿಟ್. ಮಹಾಪ್ರಬಂಧಗಳು

೧.೪. ಎಂ.ಫಿಲ್ ನಿಬಂಧಗಳು

೧.೫. ವಿಶ್ವಕೋಶಗಳು

೧.೬. ಸಂಪುಟಗಳು

೧.೭. ಸ್ಮರಣ ಸಂಚಿಕೆಗಳು

೧.೮. ಗೆಜೆಟಿಯರ್‌ಗಳು

೧.೯. ನಿಯತಕಾಲಿಕೆಗಳು

೧.೧೦.ದಿನಪತ್ರಿಕೆಗಳು

೨. **ನಕಾಶೆಗಳು**

೩. **ಛಾಯಾಚಿತ್ರಗಳು**

## ೧. ಪರಾಮರ್ಶನ ಗ್ರಂಥಗಳು

### ೧.೧. ಪ್ರಕಟಿತ ಗ್ರಂಥಗಳು


೧. ಅಕ್ಕಮಹಾದೇವಿ(ಸಂಪಾದಕರು), ೨೦೦೩, ಶ್ರೀಗೋಪಾಲದಾಸರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨. ಅಂತೋನವ ಕೆ., ಜಿ. ಬೋಗಾರ್ಡ್ ಲೆವಿನ್, ೧೯೮೭, ಭಾರತದ ಇತಿಹಾಸ, ಪ್ರಗತಿ ಪ್ರಕಾಶನ, ಮಾಸ್ಕೋ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩. ಅಂತೋನವ ಕೆ., ಕತೋವಸ್ಕಿ ಜಿ, ೧೯೮೮, ಭಾರತದ ಇತಿಹಾಸ, ಪ್ರಗತಿ ಪ್ರಕಾಶನ, ಮಾಸ್ಕೋ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪. ಅನಂತರಾಮು ಟಿ.ಆರ್., ೧೯೯೨, ರಾಜರ ಲೋಹ, ಲೋಹಗಳ ರಾಜ ಚಿನ್ನ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫. ಅಮರೇಶ ನುಗಡೋಣಿ, ೧೯೯೯, ನುಡಿವ ಬೆಡಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಅಮರೇಶ ನುಗಡೋಣಿ, ೨೦೦೦, ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ ಕರ್ನಾಟಕ ವಿಮೋಚನ ಚಳವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಅಮರೇಶ ನುಗಡೋಣಿ, ೨೦೦೩, ಹೈದರಾಬಾದು ಕರ್ನಾಟಕ ಹಾಡು–ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಅಮರೇಶ ಯತಗಲ್, ೨೦೦೭, ಇತಿಹಾಸ ಇಂಚರ, ಅದಿತಿ ಪ್ರಕಾಶನ, ಲಿಂಗಸೂಗೂರು.

೯. ಅಮರೇಶ ಯತಗಲ್, ೨೦೦೭, ಇತಿಹಾಸ ಮಂಥನ, ಅದಿತಿ ಪ್ರಕಾಶನ, ಲಿಂಗಸೂಗೂರು.

೧೦. ಅಮರೇಶ ಯತಗಲ್, ೨೦೦೮, ವಾಲ್ಮೀಕಿ ಸಮುದಾಯ ಮತ್ತು ಚರಿತ್ರೆ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೧. ಅಮರೇಶ ಯತಗಲ್(ಸಂಪಾದಕರು), ೨೦೧೦, ದೋ–ಅಬ್ ರಾಯಚೂರು ಇತಿಹಾಸ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು

೧೨. ಅರಳು ಮಲ್ಲಿಗೆ ಪಾರ್ಥ ಸಾರಥಿ, ೧೯೮೭, ಧೀಮಂತ ಕರ್ನಾಟಕ, ರಾಘವೇಂದ್ರ ಪ್ರಕಾಶನ, ಬೆಂಗಳೂರು.

೧೩. ಇರ್ಫಾನ್ ಹಬೀಬ್(ಮೂಲ), ಅಬ್ದುಲ್ ರೆಹಮಾನ್ ಪಾಷ ಎಂ.(ಅನು), ೨೦೧೨, ರಾಷ್ಟ್ರೀಯ ಆಂದೋಲನ ಸಿದ್ಧಾಂತದ ಮತ್ತು ಇತಿಹಾಸದ ಅಧ್ಯಯನಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೪. ಕಲಬುರ್ಗಿ ಎಂ.ಎಂ., ೧೯೮೦, ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಐಬಿಎಚ್ ಪ್ರಕಾಶನ, ಬೆಂಗಳೂರು.

೧೫. ಕ್ಯಾಪ್ಟನ್ ಹೆಸ್ಟಿಂಗ್ಸ್ ಫ್ರೆಸರ್, ೧೮೬೫, ದಿ ನಿಜಾಮ ಆ್ಯನ್ ಹಿಸ್ಟಾರಿಕಲ್ ಸ್ಕೆಚ್ ಆಫ್ ಈವೆಂಟ್ಸ್, ಲಂಡನ್.

೧೬. ಕುಲಕರಣಿ ಎಲ್.ಆರ್., ೧೯೭೨, ಬಹಮನಿ ರಾಜ್ಯ, ಐಬಿಎಚ್ ಪ್ರಕಾಶನ, ಬೆಂಗಳೂರು.

೧೭. ಕೃಷ್ಣಕೊಲ್ಹಾರ ಕುಲಕರ್ಣಿ(ಅನು), ೧೯೯೯, ಬುಸಾತಿನೆ- ಸಲಾತೀನೆ, ಬಿಜಾಪುರ ಆದಿಲಶಾಹಿಗಳ ಚರಿತ್ರೆ, ಮಹಮ್ಮದ ಇಬ್ರಾಹಿಮ ಜುಬೇರಿ(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಕೃಷ್ಣಕೊಲ್ಹಾರ ಕುಲಕರ್ಣಿ, ೨೦೦೨, ಬಿಜಾಪುರ ಆದಿಲಶಾಹಿ, ಸಿಕ್ಯಾಬ ಆದಿಲಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ.

೧೯. ಕೃಷ್ಣಕೊಲ್ಹಾರ ಕುಲಕರ್ಣಿ, ೨೦೦೬, ಅಖಂಡ ಕರ್ನಾಟಕದ ಹೆಜ್ಜೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೦. ಕೃಷ್ಣಯ್ಯ ಎಸ್.ಎ.(ಸಂಪಾದಕರು), ೧೯೯೨, ಬಾಚಿಗೊಂಡನಹಳ್ಳಿ ಮತ್ತು ಏಣಗಿ ಬಸಾಪುರದ ಜನಪದ ಗೀತೆಗಳು, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ.

೨೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., ೧೯೭೦, ಕರ್ನಾಟಕದ ಇತಿಹಾಸ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು.

೨೨. ಕೊಟ್ರಯ್ಯ ಸಿ.ಟಿ.ಎಂ., ೨೦೦೧, ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಕೊಟ್ರೇಶ ಎಂ.(ಸಂಪಾದಕರು), ೨೦೧೦, ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಕೋಡದ ಎಸ್.ಬಿ., ೧೯೬೬, ವಿಜಯನಗರ ಸಾಮ್ರಾಜ್ಯ ಹಾಗೂ ಹಿಂದೂ-ಮುಸ್ಲಿಂ ಬಾಂಧವ್ಯ, ಎಸ್.ಬಿ. ಕೋಡದ ಪ್ರಕಾಶಕರು, ಧಾರವಾಡ.

೨೫. ಕೋಡದ ಎಸ್.ಬಿ., ೧೯೬೬, ವಿಜಯನಗರದ ಉಚ್ಛ್ರಾಯ ಕಾಲ(೧೫೪೨-೬೪), ಪ್ರಭಾ ಪಬ್ಲಿಷರ್ಸ್, ಧಾರವಾಡ.

೨೬. ಕೋಡದ ಎಸ್.ಬಿ., ೧೯೯೯, ತಾಳಿಕೋಟೆ ಯುದ್ಧ, ಪ್ರಭಾ ಪಬ್ಲಿಷರ್ಸ್, ಧಾರವಾಡ.

೨೭. ಖಂಡೋಬರಾವ್ ಹೆಚ್., ೨೦೦೨, ನಾಣ್ಯ ಕರ್ನಾಟಕ, ಮಗರ ಪಬ್ಲಿಕೇಷನ್ಸ್, ಶಿವಮೊಗ್ಗ.

೨೮. ಗಣೇಶ ಕೆ.ಆರ್., ೧೯೯೬, ಆಂಧ್ರಪ್ರದೇಶದ ಕನ್ನಡ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೯. ಗಿರಿಜ ಟಿ., ೨೦೦೭, ಭಾರತದ ನದಿಗಳು, ನಿಹಾರಿಕಾ ಪ್ರಕಾಶನ, ದಾವಣಗೆರೆ.

೩೦. ಗಿರಿರಾಜ ಹೊಸಮನಿ, ೧೯೮೬, ಲಿಂಗಸೂಗೂರು ತಾಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು.

೩೧. ಗುರುದತ್ ಎಸ್., ೨೦೧೧, ಆರ್ಯರಿಗಾಗಿ ಹುಡುಕಾಟ, ಶರ್ಮ ಆರ್.ಎಸ್.(ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೨. ಗುರುರಾಜಾಚಾರ್ ಎಸ್.(ಅನು), ೧೯೯೪, ಲೋಥಲ್ ಮತ್ತು ಸಿಂಧೂ ನಾಗರಿಕತೆ, ಎಸ್.ಆರ್. ರಾವ್(ಮೂಲ), ಶ್ರೀಹರಿ ಪ್ರಕಾಶನ, ಧಾರವಾಡ.

೩೩. ಗೊರೂರು ರಾಮಸ್ವಾಮಿ ಅಯ್ಯಂಗಾರ(ಅನು), ೨೦೦೪, ಕೆ.ಎಂ. ಮುನ್ಶಿ ವಿರಚಿತ ಭಗವಾನ್ ಕೌಟಿಲ್ಯ, ಐಬಿಎಚ್ ಪ್ರಕಾಶನ, ಬೆಂಗಳೂರು.

೩೪. ಗೋಪಾಲಕೃಷ್ಣಯ್ಯ ಕೆ.ಎಲ್., ೨೦೧೧, ಇತಿಹಾಸದ ರಾಜಕೀಯ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೫. ಗೋಪಾಲಕೃಷ್ಣರಾವ್ ಕೆ.ಎಲ್.(ಅನು), ಕರೋವ್ಕಿನ್ ಎಫ್.(ಮೂಲ), ೧೯೮೭, ಪುರಾತನ ಜಗತ್ತಿನ ಇತಿಹಾಸ, ಪ್ರಗತಿ ಪ್ರಕಾಶನ, ಮಾಸ್ಕೋ ಮತ್ತು ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೬. ಗೋಪಾಲಕೃಷ್ಣರಾವ್ ಕೆ.ಎಲ್.(ಅನು), ೨೦೦೫, ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ, ಸರ್ದೇಸಾಯಿ ಎಲ್.ಜಿ.(ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೭. ಗೋಪಾಲರಾವ್ ಹೆಚ್.ಎಸ್., ೧೯೯೫, ನಮ್ಮನಾಡು ಕರ್ನಾಟಕ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೮. ಗೋಪಾಲರಾವ್ ಹೆಚ್.ಎಸ್.(ಅನು), ೨೦೦೮, ಭಾರತೀಯ ಬಹುಮುಖೀ ಸಂಸ್ಕೃತಿ, ಭಗವತ್ ಶರಣ ಉಪಾಧ್ಯಾಯ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೯. ಗೋಪಾಲರಾವ್ ಹೆಚ್.ಎಸ್.(ಅನು), ೨೦೧೨, ಆಧುನಿಕ ಭಾರತದ ಇತಿಹಾಸ, ಬಿಪನ್‌ಚಂದ್ರ(ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೦. ಚಂದ್ರಪ್ಪ ಎನ್., ೨೦೦೨, ಎಲ್ಲಮ್ಮ- ಒಂದು ಜಾನಪದೀಯ ಅಧ್ಯಯನ, ಮುಂಡ ಪ್ರಕಾಶನ, ಬೆಂಗಳೂರು.

೪೧. ಚಂದ್ರಶೇಖರ್ ಎಸ್., ೨೦೦೨, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾಲೂಕು.

೪೨. ಚಂದ್ರಶೇಖರ್ ಎಸ್., ೨೦೦೬, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೩. ಚಂದ್ರಶೇಖರ್ ನಾರಣಾಪುರ, ೨೦೦೨, ಕರ್ನಾಟಕದ ವೀರಶೈವ ಮಠಗಳು, ಗೆಳೆಯ ಪ್ರಕಾಶನ, ಕೋಟೆ ಚಿಕ್ಕಮಗಳೂರು.

೪೪. ಚಂದ್ರಶೇಖರಯ್ಯ ಬಿ.ಎಂ., ೨೦೦೫, ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ, ಡಿವಿಜಿ ಪ್ರಕಾಶನ, ಬೆಂಗಳೂರು.

೪೫. ಚನ್ನಬಸವ ಹಿರೇಮಠ(ಸಂಪಾದಕರು), ೧೯೯೯, ರಾಯಚೂರು ಕೊಪ್ಪಳ ಜಿಲ್ಲೆಯ ಶಾಸನಗಳು, ಚೇತನ ಪ್ರಕಾಶನ, ಮಸ್ಕಿ(ರಾಯಚೂರು ಜಿಲ್ಲೆ).

೪೬. ಚನ್ನಬಸವ ಹಿರೇಮಠ, ೨೦೦೦, ಮಾನ್ವಿ ತಾಲೂಕಿನ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೭. ಚನ್ನಬಸವ ಹಿರೇಮಠ, ೨೦೦೦, ಎಡೆದೊರೆನಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೮. ಚನ್ನಬಸವ ಹಿರೇಮಠ, ೨೦೦೮, ಸತ್ಯದ ಹಾದಿ-೧, ಬಂಡಾರ ಪ್ರಕಾಶನ, ಮಸ್ಕಿ.

೪೯. ಚಿತ್ರಗಾರ ಹೆಚ್.ಎನ್., ೨೦೧೦, ರಾಯಚೂರು ಜಿಲ್ಲೆಯ ಪ್ರಾಚೀನ ದೇವಾಲಯಗಳು, ನಿರಂಜನ ಸಾಹಿತ್ಯ ಮತ್ತು ಸಾಂಸ್ಕೃತಿಕ ಅಕಾಡೆಮಿ, ರಾಯಚೂರು.

೫೦. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನಬುಕ್ ಹೌಸ್, ಬೆಂಗಳೂರು.

೫೧. ಚಿನ್ನಸ್ವಾಮಿ ಸೋಸಲೆ ಎನ್., ೨೦೦೧, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೫೨. ಚಿನ್ನಸ್ವಾಮಿ ಸೋಸಲೆ ಎನ್., ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಚೆನ್ನಸ್ವಾಮಿ ಸೋಸಲೆ ಎನ್., ೨೦೧೨, ದಲಿತರ ಬದುಕು-ಮೆಲುಕು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೪. ಚೆನ್ನಣ್ಣ ವಾಲೀಕಾರ, ೧೯೯೮, ಹೈದರಾಬಾದ ಕರ್ನಾಟಕದ ಗ್ರಾಮ ದೇವತೆಗಳ ಜಾನಪದೀಯ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗಾ.

೫೫. ಚೆನ್ನಣ್ಣ ವಾಲೀಕಾರ, ೨೦೦೧, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗಾ.

೫೬. ಜಯತೀರ್ಥ ರಾಜಪುರೋಹಿತ ಮತ್ತು ಸನದಿ ಬಿ.ಎ.(ಸಂಪಾದಕರು), ೧೯೬೮, ತುಂಗಾ-ತರಂಗ, ತುಂಗಭದ್ರಾ ಯೋಜನೆಯ ಆಡಳಿತಾಧಿಕಾರಿಗಳು, ಕಲಬುರ್ಗಿ.

೫೭. ಜಯತೀರ್ಥ ರಾಜಪುರೋಹಿತ, ೧೯೭೫, ಕನಕಗಿರಿ, ಐಬಿಎಚ್ ಪ್ರಕಾಶನ, ಬೆಂಗಳೂರು.

೫೮. ಜಯಪ್ಪಗೌಡ ಡಿ.ಎಸ್., ೧೯೮೩, ಕರ್ನಾಟಕದ ಕಡಲಾಚೆಯ ಸಂಪರ್ಕಗಳು, ಶುಭೋದಯ ಪ್ರಕಾಶನ, ಮೈಸೂರು.

೫೯. ಜಯವಂತ ಕುಳ್ಳಿ(ಅನು), ೨೦೧೨, ಪ್ರಾಚೀನ ಭಾರತದ ಕಂದಾಯ ವ್ಯವಸ್ಥೆ, ಗೋಶಾಲ್ ಯು.ಎನ್.(ಮೂಲ), ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, ಬೆಂಗಳೂರು.

೬೦. ಜಯ ವೀರನಾಥ ಜಿ.ಎಂ.(ಅನು), ೨೦೦೭, ಭಾರತೀಯ ಊಳಿಗಮಾನ್ಯ(ಸರಂಜಾಮಿ) ಪದ್ಧತಿ, ಆರ್.ಎಸ್. ಶರ್ಮ(ಮೂಲ), ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು ಮತ್ತು ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೬೧. ಜವರಯ್ಯ ಮ.ನ., ೧೯೯೭, ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ ಪ್ರಕಾಶನ, ಮೈಸೂರು.

೬೨. ಜಾಗೀರ್‌ದಾರ್ ಆರ್.ಜಿ. ಮತ್ತು ವಿಠಲರಾವ್ ಲಿಂಗಸೂಗೂರು(ಸಂಪಾದಕರು), ೧೯೪೧, ಹೈದರಾಬಾದ ಕರ್ನಾಟಕ, ಪ್ರೇಮಸಾಗರ ಮುದ್ರಣಾಲಯ, ಹೈದರಾಬಾದು.

೬೩. ಜೀರಗೆ ಕಟ್ಟೆ ಬಸವಪ್ಪ, ೧೯೭೩, ಕರ್ನಾಟಕದ ಯಾತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೪. ಜೋಶಿ ರಾ.ಗು., ೧೯೩೧, ನಿಜಾಂ ಕರ್ನಾಟಕ, ಕರ್ನಾಟಕ ತರುಣ ಸಂಘ, ರಾಯಚೂರು.

೬೫. ತಾರಾನಾಥ ಎನ್.ಎಸ್.(ಸಂ), ೨೦೦೧, ಶತಮಾನದ ಸಂಶೋಧನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೬. ತಾರಿಹಳ್ಳಿ ಹನುಮಂತಪ್ಪ(ಸಂ), ೨೦೧೨, ಕನಕಗಿರಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ತಾಳ್ತಜೆ ವಸಂತಕುಮಾರ, ೧೯೮೮, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ವಿನಯ ಪ್ರಕಾಶನ, ಬೆಂಗಳೂರು.

೬೮. ತಿಪ್ಪೇಸ್ವಾಮಿ ಎನ್.ಡಿ.(ಸಂಪಾದಕರು), ೨೦೧೦, ಲೋಹಿಯಾವಾದಿ ಡಾ. ಎಂ.ನಾಗಪ್ಪ ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೬೯. ತ್ರಿವಿಕ್ರಮ, ೧೯೫೪, ಕೃಷ್ಣದೇವರಾಯ, ಸುದರ್ಶನ ಅಂಡ್ ಕಂಪೆನಿ ಪ್ರಕಾಶನ, ಬೆಂಗಳೂರು.

೭೦. ದೀಕ್ಷಿತ್ ಜಿ.ಎಸ್. ಮತ್ತು ಇತರರು, ೧೯೯೭, ಶ್ರೀಕೃಷ್ಣದೇವರಾಯ- ಜೀವನ ಸಾಧನೆಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೭೧. ದೇವೇಂದ್ರಕುಮಾರ ಹಕಾರಿ(ಸಂಪಾದಕರು), ೨೦೦೦, ಡಿ.ಕೆ. ಭೀಮಸೇನರಾವ್ ಅವಲೋಕನ ಸಂಶೋಧನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭೨. ದೇಸಾಯಿ ಪಾಂಡುರಂಗರಾಯ, ೧೯೮೩, ಕರ್ನಾಟಕ ಕಲಚೂರಿಗಳು, ಆಲೂರು ವೆಂಕಟರಾವ ಪ್ರತಿಷ್ಠಾನ, ಧಾರವಾಡ.

೭೩. ಧ್ರುವನಾರಾಯಣ ಎಂ., ೧೯೭೧, ಸ್ವಾತಂತ್ರ್ಯಾಂದೋಲನ, ರಾಯಚೂರು ಜಿಲ್ಲೆ, ಕರ್ನಾಟಕ ಸಂಘ, ರಾಯಚೂರು.

೭೪. ಧ್ರುವನಾರಾಯಣ ಎಂ.(ಸಂ), ೨೦೦೫, ಕಪಟರಾಳ ಕೃಷ್ಣರಾಯರ ಸುರಪುರ ಸಂಸ್ಥಾನದ ಇತಿಹಾಸ, ಪುಸ್ತಕ ಶಕ್ತಿ ಪ್ರಕಾಶನ, ಬೆಂಗಳೂರು.

೭೫. ಧ್ರುವನಾರಾಯಣ ಎಂ.(ಸಂಪಾದಕರು), ೨೦೦೬, ಕಪಟರಾಳ ಕೃಷ್ಣರಾಯರ ನಾಡುನುಡಿ ಮತ್ತು ಲಾಕುಳ ಶೈವ ಇತಿಹಾಸ, ಪುಸ್ತಕ ಶಕ್ತಿ ಪ್ರಕಾಶನ, ಬೆಂಗಳೂರು.

೭೬. ಧ್ರುವನಾರಾಯಣ ಎಂ.(ಸಂಪಾದಕರು), ೨೦೦೬, ಪಂಡಿತ ತಾರಾನಾಥರು-ಬದುಕು ಮತ್ತು ಬರಹ, ಸಾಹಿತ್ಯ ಆಕಾಡೆಮಿ, ದೆಹಲಿ.

೭೭. ನಂಜಮ್ಮಣ್ಣಿ ಎಂ., ೧೯೮೦, ಪ್ರಾಚೀನ ಭಾರತದ ಸಾಮಾಜಿಕ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಲಯ, ಮೈಸೂರು.

೭೮. ನಂಜುಂಡಸ್ವಾಮಿ ಕೆ.ಎಸ್., ೧೯೭೧, ಚಾಲುಕ್ಯರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೭೯. ನಂಜುಂಡಸ್ವಾಮಿ ಕೆ.ಎಸ್., ೧೯೯೯, ವಿಜಯನಗರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೮೦. ನಂಜುಂಡಸ್ವಾಮಿ ಕೆ.ಎಸ್., ೨೦೦೪, ಕದಂಬ ಮತ್ತು ಗಂಗರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೮೧. ನಂಜುಂಡಸ್ವಾಮಿ ಕೆ.ಎಸ್., ೨೦೦೪, ರಾಷ್ಟ್ರಕೂಟರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೮೨. ನಂದನ ವೈ.ಬಿ., ೨೦೦೯, ಸಾಮ್ರಾಟ ಅಶೋಕ ಮತ್ತು ಆತನ ಶಿಲಾಶಾಸನ, ಬುದ್ಧವಚನ ಟ್ರಸ್ಟ್ ಬೆಂಗಳೂರು.

೮೩. ನರಸಿಂಹಮೂರ್ತಿ ಎ.ವಿ., ೨೦೦೩, ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮೪. ನರಸಿಂಹಮೂರ್ತಿ ಎ.ವಿ., ೨೦೧೦, ಕರ್ನಾಟಕದ ಸೇವುಣರ ಇತಿಹಾಸ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,ಮೈಸೂರು.

೮೫. ನಲವಡಿ ಶ್ರೀಕಂತಶಾಸ್ತ್ರಿ, ೧೯೯೮, ಹೈದರಾಬಾದ್ ರಜಾಕಾರರ ಲಾವಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೬. ನಾಗಣ್ಣ ಸಿ.(ಅನು), ೨೦೦೦, ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಎಸ್.ಚಂದ್ರಶೇಖರ್(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೭. ನಾಗಯ್ಯ ಜೆ.ಎಂ., ೧೯೯೨, ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ.

೮೮. ನಾಗರಾಜಯ್ಯ ಹಂ.ಪ., ೧೯೯೯, ವಡ್ಡಾರಾಧನೆ: ಸಮಗ್ರ ಅಧ್ಯಯನ, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೮೯. ನಾಗರಾಜು ಎಚ್.ಎಂ., ೧೯೯೯, ವಿಜಯನಗರದ ಇಮ್ಮಡಿದೇವರಾಯ, ಸಂವಹನ ಪ್ರಕಾಶನ, ಮೈಸೂರು.

೯೦. ನಾರಾಯಣಾಚಾರ್ಯ ಕೆ.ಎಸ್., ೨೦೦೬, ಆಚಾರ್ಯ ಚಾಣಕ್ಯ(ಕಾದಂಬರಿ), ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ-೨೦
೯೧. ನಾರಾಯಣಮೂರ್ತಿ ಜಿ.ವಿ.(ಅನು), ೧೯೭೫, ಭಾರತೀಯ ಇತಿಹಾಸ ಸಮೀಕ್ಷೆ, ಕೆ.ಎಂ. ಪಣಿಕ್ಕರ್(ಮೂಲ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೯೨. ನೆಲಮಂಗಲ ಲಕ್ಷ್ಮೀನಾರಾಯಣರಾಯ ಮತ್ತು ಆರ್.ಎಸ್. ಪಂಚಮುಖಿ, ೨೦೦೮, ಕರ್ನಾಟಕದ ಅರಸುಮನೆತನಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.
೯೩. ಪಂಚಮುಖಿ ಆರ್.ಎಸ್., ೨೦೦೮, ಕರ್ನಾಟಕದ ಇತಿಹಾಸ-೧, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.
೯೪. ಪರಮಶಿವಮೂರ್ತಿ ಡಿ.ವಿ., ೨೦೦೭, ಪ್ರೌಢ ದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೯೫. ಪರಮಶಿವಮೂರ್ತಿ ಡಿ.ಎಸ್., ೨೦೧೦, ಕೃಷ್ಣದೇವರಾಯನ ಶಾಸನಗಳು-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೯೬. ಪರಮಶಿವಮೂರ್ತಿ ಡಿ.ವಿ., ೨೦೧೧, ತುರುಗೊಳ್ ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೯೭. ಪಾಟೀಲ ಪುಟ್ಟಪ್ಪ, ೧೯೯೧, ಕರ್ನಾಟಕದ ಕಥೆ, ಎಸ್.ಬಿ.ಎಸ್.ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್, ಬೆಂಗಳೂರು.
೯೮. ಪಾಟೀಲ ಬಿ.ಸಿ., ೧೯೯೮, ಕೊಪ್ಪಳ: ಸಾಂಸ್ಕೃತಿಕ ಪರಂಪರೆ, ಬಿ.ಸಿ.ಪಾಟೀಲ ಹರಿಹರ ಪ್ರಕಾಶನ, ಕೊಪ್ಪಳ.
೯೯. ಪಾಟೀಲ ಎಸ್.ಸಿ., ೧೯೯೩, ಕರ್ನಾಟಕ ಜನಪದ ಚಿತ್ರಕಲೆ, ವೀರಶೈವ ಅಧ್ಯಯನ ಸಂಸ್ಥೆ, ಗದಗ.
೧೦೦. ಪುಟ್ಟಯ್ಯ ಬಿ.ಎಂ., ೨೦೦೮, ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೦೧. ಪ್ರದೀಪ್ ಬೆಳಗಲ್(ಅನು), ೨೦೦೮, ಪೂರ್ವೇತಿಹಾಸ, ಇರ್ಫಾನ್ ಹಬೀಬ್(ಮೂಲ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.
೧೦೨. ಪ್ರದೀಪ್ ಬೆಳಗಲ್ ಮತ್ತು ಹೆಚ್.ಎಸ್. ಜೈಕುಮಾರ್(ಅನು), ೨೦೧೧, ಸಿಂಧೂ ನಾಗರಿಕತೆ, ಇರ್ಫಾನ್ ಹಬೀಬ್(ಮೂಲ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.
೧೦೩. ಪ್ರಧಾನ್ ಗುರುದತ್ತ(ಅನು), ೨೦೦೮, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಭಗವತ್‌ಶರಣ ಉಪಾಧ್ಯಾಯ(ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೦೪. ಪ್ರಭು ಖಾನಾಪುರೆ(ಸಂಪಾದಕರು), ೧೯೯೯, ಶಾಂತಶ್ರೀ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೧೦೫. ಫಣಿರಾಜ್ ಕೆ., ೨೦೦೩, ಅಂಟೋನಿಯೊ ಗ್ರಾಮ್ಷಿ, ಅಭಿನವ ಪ್ರಕಾಶನ, ಬೆಂಗಳೂರು.
೧೦೬. ಬಂಜಗೆರೆ ಜಯಪ್ರಕಾಶ(ಅನು), ೨೦೧೧, ಮಧ್ಯಯುಗೀನ ಭಾರತ ಅಂತ್ಯಜರ ತತ್ವ ಚಿಂತನೆ, ಶಂಕರ ಮೊಕಾಶಿ ಪುಣೇಕರ್(ಮೂಲ), ಚಾರು ಪ್ರಕಾಶನ, ಬೆಂಗಳೂರು.
೧೦೭. ಬರಗೂರು ರಾಮಚಂದ್ರಪ್ಪ(ಪ್ರಧಾನ ಸಂಪಾದಕರು), ೨೦೦೨, ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.
೧೦೮. ಬಸವರಾಜ ಪೊಲೀಸ್ ಪಾಟೀಲ್(ಸಂಪಾದಕರು), ೨೦೦೨, ಬಿಡುಗಡೆ, ಅಮರ ಪ್ರಕಾಶನ, ಗುಲ್ಬರ್ಗಾ.

೧೧೯. ಬಸವರಾಜ ಸಬರದ(ಸಂಪಾದಕರು), ೨೦೦೦, ಹೈದರಾಬಾದ ಕರ್ನಾಟಕದ ತತ್ವಪದಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೦. ಬಸವರಾಜ ಟಿ.ಕುಮ್ನೂರ್, ೨೦೦೭, ಡಾ. ನಂಜುಂಡಪ್ಪನವರ ವರದಿ ಮತ್ತು ಅನುಷ್ಠಾನ, ಶುಭಕಿರಣ ಪ್ರಕಾಶನ, ಗುಲ್ಬರ್ಗಾ.

೧೧೧. ಬಸವರಾಜು ಎಚ್.ಎಂ., ೨೦೦೭, ಉತ್ತರ ಭಾರತ ಹಾಗೂ ದಕ್ಷಿಣ ಭಾರತದ ಸಮಗ್ರ ಇತಿಹಾಸ, ಉಮಾ ಪ್ರಕಾಶನ, ಮೈಸೂರು.

೧೧೨. ಬಾರ್ಕೂರು ಉದಯ, ೨೦೧೨, ವಾಸ್ತವದ ಒಡಕುಗಳು ಇತಿಹಾಸದ ತೊಡಕುಗಳು, ಚಿಂತನ ಪ್ರಕಾಶನ, ಬೆಂಗಳೂರು.

೧೧೩. ಬಾಲಸುಬ್ರಹ್ಮಣ್ಯ(ಅನು), ೨೦೦೦, ಮರೆಯಲಾಗದ ಮಹಾಸಾಮ್ರಾಜ್ಯ, ಸೂರ್ಯನಾರಾಯಣರಾವ್ ಬಿ.(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೪. ಬಾವಾ ವಿ.ಕೆ., ೧೯೯೨, ದಿ ಲಾಸ್ಟ್ ನಿಜಾಮ ದಿ ಲೈಫ್ ಅಂಡ್ ಟೈಮ್ಸ್ ಆಫ್ ಮೀರ್ ಉಸ್ಮಾನ್ ಅಲಿಖಾನ್, ವಿಕಿಂಗ್, ಪೆಂಗ್ವಿನ್ ಬುಕ್ಸ್, ಇಂಡಿಯಾ.

೧೧೫. ಬೋರಲಿಂಗಯ್ಯ ಹಿ.ಚಿ.(ಸಂಪಾದಕರು), ೨೦೦೭, ಅಭಿವೃದ್ಧಿ ಪಥ, ಸುವರ್ಣ ಕರ್ನಾಟಕ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೬. ಭಟ್ ಎಸ್.ಆರ್., ೨೦೦೭, ಪ್ರಾಚೀನ ಭಾರತದಲ್ಲಿ ಜನಜೀವನ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೧೭. ಭೂಸರೆಡ್ಡಿ ಎಸ್.ಎಸ್., ೧೯೭೫, ರಾಯಚೂರು, ಐಬಿಎಚ್ ಪ್ರಕಾಶನ, ಬೆಂಗಳೂರು.

೧೧೮. ಮಂಜಪ್ಪಶೆಟ್ಟಿ ಮಸಗಲಿ ಎಂ.ಪಿ.(ಸಂಪಾದಕರು), ೧೯೯೨, ತುಂಬಿದಕೊಡ, ಕಾಶಿ ವಿಶ್ವನಾಥ ಶೆಟ್ಟಿ ಸಂಸ್ಮರಣ ಗ್ರಂಥ ಸಮಿತಿ, ಚಿಕ್ಕಮಗಳೂರು.

೧೧೯. ಮಂಜುನಾಥ ಎಂ.ಜಿ., ೨೦೦೯, ಕರ್ನಾಟಕ ಸಾಂಸ್ಕೃತಿಕ ಇತಿಹಾಸ ಸುಮುಖ ಪ್ರಕಾಶನ, ಬೆಂಗಳೂರು.

೧೨೦. ಮಲ್ಲಾಪುರ ಬಿ.ವಿ., ೨೦೦೦ ಪ್ರೌಢ ದೇವರಾಯ ವಿಜಯಕಲ್ಯಾಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೧. ಮಲ್ಲಿಕಾರ್ಜುನ ಕೆ. ಮತ್ತು ಇತರರು(ಸಂಪಾದಕರು), ೨೦೧೨, ಬಿ.ಆರ್. ಹೀರೇಮಠರ ಶಾಸನ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೨. ಮಹಾಬಲೇಶ್ವರಪ್ಪ ಬಿ.ಸಿ., ೧೯೯೭, ಹೈದ್ರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೨೩. ಮಹಾಬಲೇಶ್ವರರಾವ್(ಅನು), ೧೯೯೦, ಇತಿಹಾಸದ ಕಣ್ಣಲ್ಲಿ ರಾಮಾಯಣ, ಹೆಚ್.ಡಿ. ಸಂಕಾಲಿಯಾ (ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೨೪. ಮಾಹಾಬಲೇಶ್ವರರಾವ್(ಅನು), ೨೦೧೨, ರಥಿಕ-ಸಾರಥಿ ಸಂವಾದ, ಮೋಹನರಾಜ್ ವಿ.ಎಂ(ಮೂಲ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.

೧೨೫. ಮಾಧವ ಬಿ.(ಅನು), ೧೯೮೮, ಭಾರತದ ಚರಿತ್ರೆಯ ಸಿಂಹಾವಲೋಕನ, ಇ.ಎಂ.ಎಸ್, ನಂಬೂದಿರಿಪ್ಪಾಡ್(ಮೂಲ), ಭಾರತೀ ಪ್ರಕಾಶನ, ಮೈಸೂರು.

೧೨೬. ಮುರಿಗೆಪ್ಪ ಎ.(ಪ್ರಧಾನ ಸಂಪಾದಕರು), ಪರಮಶಿವಮೂರ್ತಿ ಡಿ.ವಿ. ಮತ್ತು ಇತರರು(ಸಂಪಾದಕರು), ೨೦೦೮, ಕೃಷ್ಣದೇವರಾಯ ಆಯ್ದ ಲೇಖನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೭. ಮುರಿಗೆಪ್ಪ ಎ.(ಪ್ರಧಾನ ಸಂಪಾದಕರು), ೨೦೦೯, ಬಾದಾಮಿ ಚಾಲುಕ್ಯರು ಲೇಖನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೮. ಮೂರ್ತಿರಾವ್ ಎ.ಎನ್., ೧೯೩೪, ಸಾಕ್ರಟೀಸ್‌ನ ಕೊನೆಯ ದಿನಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨೯. ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ(ಸಂಪಾದಕರು), ೨೦೦೫, ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾನಿಲಯ ಗುಲ್ಬರ್ಗಾ.

೧೩೦. ಮೈಸೂರು ಕೈಪಿಡಿ, ೧೯೩೭, ಮೈಸೂರು ವಿದ್ಯಾಶಾಖೆ, ಬೆಂಗಳೂರು.

೧೩೧. ಮೊಗಳ್ಳಿ ಗಣೇಶ್, ೨೦೦೯, ಅವ್ಯಕ್ತ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೨. ಮೋಹನ್‌ಕೃಷ್ಣ ರೈ ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೩. ಮೋಹನ್‌ಕೃಷ್ಣ ರೈ ಕೆ., ೨೦೦೬, ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೪. ಮೋಹನ್‌ಕೃಷ್ಣ ರೈ ಕೆ., ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೫. ಮೋಹನ್‌ಕೃಷ್ಣ ರೈ ಕೆ., ೨೦೦೯, ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೩೬. ಮೋಹನ್‌ಕೃಷ್ಣ ರೈ ಕೆ., ೨೦೧೦, ಕೆನರಾದ ವಿಭಜನೆ–ಹತ್ತಿ ರಾಜಕೀಯದ ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೭. ಮೋಹನ್‌ಕೃಷ್ಣ ರೈ ಕೆ., ೨೦೧೨, ತುಳುನಾಡು ಕನ್ನಡ ನುಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೮. ಯಾಸೀನ್ ಖದ್ದೂಸಿ ಎಂ., ಸೀತಾರಾಮ ಜಾಗೀರ್‌ದಾರ್(ಸಂಪಾದಕರು), ೨೦೦೧, ಕರ್ನಾಟಕ ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೯. ಯೋಗೀಶ್ವರಪ್ಪ ಡಿ.ಎನ್., ೧೯೯೯, ಹಾಗಲವಾಡಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪೦. ಯೋಗೀಶ್ವರಪ್ಪ ಡಿ.ಎನ್., ೨೦೦೯, ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು, ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು.

೧೪೧. ರಂಗನಾಥ(ಅನು), ೧೯೮೫, ಚೆಲುವ ಕನ್ನಡ ನಾಡು, ಎಂ.ವಿ.ಕಾಮತ್(ಮೂಲ), ಕರ್ನಾಟಕ ಸರ್ಕಾರ ಮತ್ತು ವಿಕಾಸ ಪಬ್ಲಿಸಿಂಗ್, ಹೊಸದೆಹಲಿ.

೧೪೨. ರಂಗನಾಥ ಶರ್ಮ ಎನ್.(ಅನು), ೧೯೯೬, ಅಮರಸಿಂಹನ ನಾಮಲಿಂಗಾನುಶಾಸನ ಅಥವಾ ಅಮರಕೋಶ, ಸುವಿದ್ಯಾ ಪ್ರಕಾಶನ, ಬೆಂಗಳೂರು.

೧೪೩. ರಂಗಸ್ವಾಮಯ್ಯ ಜಿ.ಆರ್., ೧೯೯೬, ಪ್ರಾಚೀನ ಭಾರತ, ಅನಂತ ಪ್ರಕಾಶನ, ಮೈಸೂರು.

೧೪೪. ರಂಗಸ್ವಾಮಯ್ಯ ಜಿ.ಆರ್. ಮತ್ತು ಶಿವಣ್ಣ, ೨೦೦೩, ಉತ್ತರ ಭಾರತದ ಇತಿಹಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪೫. ರಂಗಸ್ವಾಮಯ್ಯ ಜಿ.ಆರ್., ೨೦೦೫, ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು.

೧೪೬. ರಮೇಶ ಬೆ.ಗೋ., ೨೦೦೦, ಅಶೋಕ, ಸಪ್ನಬುಕ್‌ಹೌಸ್, ಬೆಂಗಳೂರು.
೧೪೭. ರಮೇಶ್ ಸ.ಚಿ.(ಸಂಪಾದಕರು), ೨೦೦೫, ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೪೮. ರವೀಂದ್ರನಾಥ ಕೆ.(ಸಂಪಾದಕರು), ೨೦೧೧, ಅಧ್ಯಯನದ ವಿಧಿ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೪೯. ರಾಘವೇಂದ್ರರಾವ್ ವಿ., ೧೯೪೯, ವಿಜಯನಗರ, ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್, ಮೈಸೂರು.
೧೫೦. ರಾಘವೇಂದ್ರರಾವ್ ಕೆ., ೨೦೦೧, ಪ್ರೊ.ಡಿ.ಕೆ. ಭೀಮಸೇನರಾಯರು(ಬದುಕುಬರಹ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೧೫೧. ರಾಜಗೋಪಾಲ್ ಟಿ.ಎಸ್., ೧೯೮೩, ಕನ್ನಡ ನಾಡು ಕಂಡ ಬೌದ್ಧಯುಗ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
೧೫೨. ರಾಜಪ್ಪ ಟಿ.ಎಸ್.(ಸಂಪಾದಕರು), ೧೯೭೬, ರಾಯಚೂರು ಜಿಲ್ಲೆಯ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೧೫೩. ರಾಜಶೇಖರ ಎಸ್.ಎಸ್., ೧೯೭೫, ವಿಜಯನಗರ ಕಾಲದ ಘಟನಾವಳಿ ಸೂಚಿ, ಸುಜಾತ ಪಬ್ಲಿಕೇಶನ್ಸ್, ಧಾರವಾಡ.
೧೫೪. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್(ಸಂಪಾದಕರು), ೨೦೦೧, ಮಲೆಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೫೫. ರಾಧಾಕೃಷ್ಣ ಬಿ.ಪಿ., ೨೦೦೩, ಕರ್ನಾಟಕದ ಖನಿಜ ಸಂಪತ್ತು, ಜಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾ, ಬೆಂಗಳೂರು.
೧೫೬. ರಾಮಣ್ಣ ಹವಳೆ, ೨೦೧೦, ಹೈದರಾಬಾದ ಸಂಸ್ಥಾನ ವಿಮೋಚನೆಯಲ್ಲಿ ರಾಯಚೂರು ಜಿಲ್ಲೆಯ ಹೋರಾಟ, ರಾಯಚೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಹಾಗೂ ಉತ್ತರಾಧಿಕಾರಿಗಳ ಸಂಘ, ರಾಯಚೂರು.
೧೫೭. ರಾಮಯ್ಯಂಗಾರ್ ಹೆಚ್.ಜೆ., ೧೯೯೬, ಮುಸಲ್ಮಾನರ ಆಳ್ವಿಕೆಯಲ್ಲಿ ಭಾರತ, ಹೆಚ್.ಜೆ. ರಾಮಯ್ಯಂಗಾರ ಪ್ರಕಾಶನ, ಬೆಂಗಳೂರು.
೧೫೮. ರಾಮಯ್ಯಂಗಾರ್ ಹೆಚ್.ಜೆ., ೧೯೯೬, ಸಮಗ್ರ ಭಾರತ ದರ್ಶನ, ಹೆಚ್.ಜೆ. ರಾಮಯ್ಯಂಗಾರ ಪ್ರಕಾಶನ, ಬೆಂಗಳೂರು.
೧೫೯. ರಾಮೇಶ್ವರ ಎ.ಕೆ., ೨೦೦೭, ೧೮೫೭ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲಬರ್ಗಾ.
೧೬೦. ರೋಮಿಲ ಥಾಪರ್ ಮತ್ತು ಇತರರು, ೧೯೯೮, ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ, ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೬೧. ಲಕ್ಕಪ್ಪಗೌಡ ಎಚ್.ಜೆ., ೨೦೦೭, ಸಾಹಿತ್ಯ ಶೋಧನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೬೨. ಲಕ್ಷ್ಮಣ್ ತೆಲಗಾವಿ(ಸಂಪಾದಕರು), ೨೦೦೩, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೬೩. ಲಕ್ಷ್ಮಣ್ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬೪. ಲಕ್ಷ್ಮಣ್ ತೆಲಗಾವಿ, ೨೦೦೮, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ವಾಲ್ಮೀಕಿ ಸಾಹಿತ್ಯ ಸಂಪದ ಪ್ರಕಾಶನ, ಹರ್ತಿಕೋಟೆ.

೧೬೫. ಲಕ್ಷ್ಮಣ್ ತೆಲಗಾವಿ(ಸಂಪಾದಕರು), ೨೦೧೧, ರಾಮಾಜಿ ತಿರುಮಲ ಹರಿಕಾರೆಯ ರಾಮರಾಜನ ಬಖೈರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬೬. ಲಕ್ಷ್ಮಣದಸ್ತಿ, ೨೦೦೯, ನಮ್ಮ ಇತಿಹಾಸ ಕೈಫಿಯತ್, ವಿ.ಕೆ. ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು.

೧೬೭. ಲಕ್ಷ್ಮೀದೇವಿ ಶಾಸ್ತ್ರಿ, ೨೦೦೫, ರಾಯಚೂರು ಕೋಟೆ ನರಬಲಿ ಪ್ರಸಂಗ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

೧೬೮. ವೆಂಕಟೇಶ ನರಸಿಂಗರಾವ ಮಗದಾಳ, ೧೯೨೮, ಕರ್ನಾಟಕದ ವರ್ಣನೆಯೂ ಇತಿಹಾಸವೂ, ಬಾಸೆಲ್ ಮಿಸೆನ್ ಪ್ರೆಸ್ ಮತ್ತು ಬುಕ್ ಡಿಪೋ, ಮಂಗಳೂರು.

೧೬೯. ವಸು ಎಂ.ವಿ.(ಸಂಪಾದಕರು), ೨೦೦೯, ಕನ್ನಡದೋಳ್ ಭಾವಿಸಿದ ಜನಪದಂ, ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.

೧೭೦. ವಾಸುದೇವನ್ ಸಿ.ಎಸ್., ೨೦೧೨, ಕರ್ನಾಟಕ ದೇವಾಲಯ ಕೋಶ, ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೧. ವಿಜಯ್ ಪೂಣಚ್ಚ ತಂಬಂಡ, ೧೯೯೯, ರೈತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೨. ವಿಜಯ್ ಪೂಣಚ್ಚ ತಂಬಂಡ, ೨೦೦೪, ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೩. ವಿಜಯ್ ಪೂಣಚ್ಚ ತಂಬಂಡ, ೨೦೦೫, ಕೊಡಗು ವಿವರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೪. ವಿಜಯ್ ಪೂಣಚ್ಚ ತಂಬಂಡ, ೨೦೦೯, ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೫. ವಿಠಲರಾವ್ ಗಾಯಕ್ವಾಡ್(ಅನು), ೨೦೦೦, ತಾರೀಖೆ-ಇಸ್ಕಂದರಿ, ಮು.ಮಾ ಜಗತಾಪ್(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೭, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

೧೭೭. ವಿವೇಕ ರೈ ಬಿ.ಎ., ೨೦೧೦, ಪ್ರವಾಸಿಕಂಡ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೮. ವೇಣುಗೋಪಾಲ್ ಟಿ.ಎಸ್.(ಅನು), ೨೦೦೯, ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭೯. ವೇಣುಗೋಪಾಲ್ ಟಿ.ಎಸ್., ಶೈಲಜಾ(ಅನು), ೨೦೦೩, ಪುರಾಣ ಮತ್ತು ವಾಸ್ತವ, ದಾಮೋದರ ಧರ್ಮಾನಂದ ಕೊಸಾಂಬಿ(ಮೂಲ), ಚಿಂತನ, ಉತ್ತರ ಕನ್ನಡ.

೧೮೦. ವೇಣುಗೋಪಾಲ್ ಟಿ.ಎಸ್., ಶೈಲಜಾ(ಅನು), ೨೦೧೧, ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪರೇಷೆ, ಡಿ.ಡಿ.ಕೊಸಾಂಬಿ(ಮೂಲ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು.

೧೮೧. ಶಂಕರನಾರಾಯಣರಾವ್ ಎನ್.ಪಿ., ೧೯೯೧, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೮೨. ಶಂಕರನಾರಾಯಣರಾವ್ ಎನ್.ಪಿ., ೧೯೯೬, ಸ್ವಾತಂತ್ರ್ಯದ ಗುರಿ ಭಾರತದ ದಾರಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೮೩. ಶಂಕರನಾರಾಯಣರಾವ್ ಎನ್.ಪಿ(ಅನು), ೨೦೧೦, ಪ್ರಾಚೀನ ಭಾರತ, ರಾಮ್ ಶರಣ್ ಶರ್ಮ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೮೪. ಶಾಂತರಸ(ಸಂಪಾದಕರು), ೧೯೯೩, ಬಾರಮಾಸ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮೫. ಶಾಂತರಸ, ೨೦೦೬, ಗಜಲ್ ಮತ್ತು ಬಿಡಿ ದ್ವಿಪದಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೮೬. ಶಾಂತರಸ ಹೆಂಬೇರಾಳು, ೨೦೦೭, ಉಲಿವ ಮರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮೭. ಶರಣಪ್ಪ ಗುಡದಿನ್ನಿ, ೨೦೦೮, ದೇವದುರ್ಗ, ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ, ಗುಲ್ಬರ್ಗಾ.

೧೮೮. ಶರಣೇಗೌಡ ಎಸ್.(ಸಂಪಾದಕರು), ೨೦೦೪, ರಾಯಚೂರು ಜಿಲ್ಲಾ ಕಥಾ ಸಂಕಲನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮೯. ಶರ್ಮ ತೀ.ತಾ., ೧೯೭೦, ವಿಚಾರ, ಕರ್ನಾಟಕ ಪುರೋಗಾಮಿ ಸಾಹಿತ್ಯ ಸಂಘ, ಬೆಂಗಳೂರು.

೧೯೦. ಶರ್ಮ ತೀ.ತಾ., ೧೯೭೧, ಚಾರಿತ್ರಿಕ ದಾಖಲೆಗಳು, ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ, ಬೆಂಗಳೂರು.

೧೯೧. ಶರ್ಮ ತೀ.ತಾ., ೧೯೭೧, ಕರ್ನಾಟಕದಲ್ಲಿ ಸ್ವಾತಂತ್ರ ಸಂಗ್ರಾಮ.

೧೯೨. ಶರ್ಮಾ ಬಿ.ಎಂ.(ಅನು), ೨೦೦೭, ವೋಲ್ಗಾ ಗಂಗಾ, ರಾಹುಲ್ ಸಾಂಕೃತ್ಯಾಯನ(ಮೂಲ), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೯೩. ಶರ್ಮ ಆರ್.ಎಸ್., ೨೦೦೬, ಪ್ರಾಚೀನ ಭಾರತದಲ್ಲಿ ಶೂದ್ರರು, ಶ್ರೀನಿವಾಸಮೂರ್ತಿ ಜೆ. ಮತ್ತು ಇತರರು(ಅನು), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೯೪. ಶಾಶ್ವತಸ್ವಾಮಿ ಮುಕ್ಕುಂದಿಮಠ, ೨೦೦೮, ಕೃಷ್ಣತುಂಗೆ ನೆಲದ ಸಿರಿ, ಸುಮುಖ ಪ್ರಕಾಶನ, ಬೆಂಗಳೂರು.

೧೯೫. ಶಾಸ್ತ್ರಿ ಕೆ.ಜಿ., ಪಾಟೀಲ್ ಎಸ್.ಪಿ.(ಅನು), ೧೯೭೬, ಕರ್ನಾಟಕ ಸಂಸ್ಕೃತಿಯ ಪರಂಪರೆ, ಸಮಾಜ ಪುಸ್ತಕಾಲಯ, ಧಾರವಾಡ.

೧೯೬. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯೭. ಶಿವಪ್ರಸಾದ್ ಟಿ.ಆರ್., ೨೦೦೯, ಶ್ರೀಕೃಷ್ಣದೇವರಾಯ, ಚಿಂತನಗಂಗಾ, ಪ್ರಕಾಶನ ದಾವಣಗೆರೆ.

೧೯೮. ಶ್ರೀಕಂಠಯ್ಯ ಕೆ., ೧೯೮೩, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ(ಸಾಮಾಜಿಕ, ಆರ್ಥಿಕ, ರಾಜಕೀಯ), ಗೀತಾ ಬುಕ್ ಹೌಸ್, ಮೈಸೂರು.

೧೯೯. ಶ್ರೀಕಂಠಶಾಸ್ತ್ರಿ ಎಸ್., ೨೦೦೬, ಭಾರತೀಯ ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೦೦. ಶ್ರೀಕಂಠಶಾಸ್ತ್ರಿ(ಸಂಪಾದಕರು), ೧೯೭೫, ಸಂಶೋಧನ ಲೇಖನಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೦೧. ಶ್ರೀಧರ ಅಡಿಗ, ೨೦೦೭, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ಕೃಷಿ ವಿಕಾಸ್, ಪಬ್ಲಿಕೇಷನ್ಸ್, ಬೆಂಗಳೂರು.

೨೦೨. ಶ್ರೀನಿವಾಸ ಪಾಡಿಗಾರ, ೨೦೦೪, ಭಾರತೀಯ ಇತಿಹಾಸದ ಶಾಸನ ಆಕರಗಳು, ರಾಮಾಶ್ರಯ ಪಬ್ಲಿಕೇಷನ್ಸ್, ಧಾರವಾಡ.

೨೦೩. ಶ್ರೀನಿವಾಸರಾವ್ ಬಿ.ವಿ., ೧೯೫೬, ರಾಯಚೂರು ಇತಿಹಾಸ, ಡಿ.ಎಂ.ಸೂಗವೀರ ಶರ್ಮ ಪ್ರಕಾಶನ, ರಾಯಚೂರು.

೨೦೪. ಶ್ರೀನಿವಾಸ ರಿತ್ತಿ(ಸಂಪಾದಕರು), ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೦೫. ಶ್ರೀನಿವಾಸ ರಿತ್ತಿ(ಸಂಪಾದಕರು), ೨೦೦೭, ಆಲೂರು ವೆಂಕಟರಾಯರ ಸಮಗ್ರ ಕೃತಿಗಳು-ಸಂಪುಟ-೧, ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾವ ಪ್ರತಿಷ್ಠಾನ, ಧಾರವಾಡ.

೨೦೬. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೦೭. ಶ್ರೀನಿವಾಸ ಹಾವನೂರು, ೨೦೦೮, ತುಂಗಭದ್ರೆ ನಾಡಿಗೆ ವರವೊ, ಶಾಪವೊ, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು.

೨೦೮. ಶ್ರೀಮತಿ ಎಚ್.ಎಸ್.(ಅನು), ೨೦೧೨, ಪ್ರಾಚೀನ ಭಾರತದ ಚರಿತ್ರೆ ಡಿ.ಡಿ. ಕೊಸಾಂಬಿ ಅವರ ಚಿಂತನೆಗಳು, ಬಾಲಗೋಪಾಲ್ ಕೆ(ಮೂಲ), ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೨೦೯. ಶೆಟ್ಟರ್ ಷ., ೨೦೧೧, ಶಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ, ಅಭಿನವ ಪ್ರಕಾಶನ, ಬೆಂಗಳೂರು.

೨೧೦. ಶೇಷಾಶಾಸ್ತ್ರಿ ಆರ್., ೧೯೮೨, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧೧. ಸುಂದರ ಅ., ೧೯೭೧, ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕದ ಪ್ರಾಗಿತಿಹಾಸ, ಐಬಿಎಚ್ ಪ್ರಕಾಶನ, ಬೆಂಗಳೂರು.

೨೧೨. ಸುಂದರ ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೨೧೩. ಸುಂದರ ಅ., ೧೯೯೮, ಪ್ರಾಚ್ಯ ವೈಭವ(ಆಕಾಶವಾಣಿ ಭಾಷಣಗಳು), ಮಾಗತ್ತಿ ಪ್ರಕಾಶನ, ಬೆಳಗಾವಿ.

೨೧೪. ಸಕಲೇಶ ಮ., ೨೦೦೨, ಹೊಯ್ಸಳೋದಯ ಸಂಶೋಧನ, ಹಿಮಾಶೈಲ ಪ್ರಕಾಶನ, ಶಿವಮೊಗ್ಗ.

೨೧೫. ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು., ೨೦೧೦, ಕೌಟಿಲ್ಯ ಅರ್ಥಶಾಸ್ತ್ರ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೨೧೬. ಸದಾನಂದ ಕನವಳ್ಳಿ(ಅನು), ೨೦೧೦, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ರಾಬರ್ಟ್ ಸಿವೆಲ್(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧೭. ಸಾಲತೊರೆ ಬಿ.ಎ., ದೇಸಾಯಿ ಪಾಂಡುರಂಗರಾಯ, ೧೯೭೯, ಕನ್ನಡ ನಾಡಿನ ಚರಿತ್ರೆ ಭಾಗ-೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೧೮. ಸುಗುಣಶರ್ಮ ವಿ., ೧೯೯೮, ಹಿಸ್ಟರಿ ಅಂಡ್ ಆ್ಯಂಟಿಕ್ವ್ಯುಟೀಸ್ ಆಫ್ ರಾಯಚೂರು ಫೋರ್ಟ್, ಭಾರತೀಯ ಕಲಾ ಪ್ರಕಾಶನ, ದೆಹಲಿ.

೨೧೯. ಸುಜ್ಞಾನಮೂರ್ತಿ ಬಿ.(ಅನು), ೨೦೧೨, ಜಾತಿವಿನಾಶ ವರ್ಗವಿನಾಶ, ಬೊಜ್ಜಾತಾರಕಂ(ಮೂಲ), ಪಲ್ಲವ ಪ್ರಕಾಶನ, ಚನ್ನಪಟ್ಟಣ.

೨೨೦. ಸೂರ್ಯನಾಥ ಕಾಮತ್, ೧೯೭೩, ವಿಜಯನಗರ ಸಾಮ್ರಾಜ್ಯ, ಅರ್ಚನಾ ಪ್ರಕಾಶನ, ಬೆಂಗಳೂರು.

೨೨೧. ಸೂರ್ಯನಾಥ ಕಾಮತ್, ೧೯೭೭, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಭಾಗ-೨, ರಾಯಚೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು, ಗೀತಾ ಬುಕ್ ಹೌಸ್, ಮೈಸೂರು.

೨೨೨. ಸೂರ್ಯನಾಥ ಕಾಮತ್, ೨೦೦೬, ತ್ರಿಭುವನ ಸ್ಕೂಲ್ ಅಟ್ಲಾಸ್-ಕರ್ನಾಟಕ, ಪ್ರೊಟಾನ್ ಸೊಲ್ಯೂಷನ್ಸ್ ಲಿಮಿಟೆಡ್, ಬೆಂಗಳೂರು.

೨೨೩. ಹನುಮಾಕ್ಷಿ ಗೋಗಿ, ೧೯೯೫, ಸುರಪುರ ತಾಲೂಕಿನ ಶಾಸನಗಳು, ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ.

೨೨೪. ಹಳೆಮನೆ ರಾಜಶೇಖರ, ೨೦೦೮, ಹೈದರಾಬಾದ ಕರ್ನಾಟಕ ಸಾಹಿತ್ಯ ಮತ್ತು ರಜಾಕಾರರು, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು.

೨೨೫. ಹಿರೇಮಠ ಬಿ.ಆರ್., ೧೯೮೬, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೨೨೬. ಹೆನ್ರಿ ಜಾರ್ಜ್ ಬ್ರಿಗ್ಸ್, ೧೮೬೧, ದಿ ನಿಜಾಮ ಹಿಸ್ ಹಿಸ್ಟರಿ ಅಂಡ್ ರಿಲೇಷನ್ಸ್ ವಿಥ್ ದಿ ಬ್ರಿಟಿಶ್ ಗವರ್ನಮೆಂಟ್, ಸಂಪುಟ-೨, ಲಂಡನ್.

**೧.೨. ಪಿಎಚ್.ಡಿ. ಮಹಾಪ್ರಬಂಧಗಳು(ಅಪ್ರಕಟಿತ)**

೧. ಅಜ್ಜಯ್ಯ ಸಿ., ೨೦೦೬, ಹೈದರಾಬಾದ್-ಕರ್ನಾಟಕದ ಅಲೆಮಾರಿಗಳ ಸಮಾಜೋ-ಆರ್ಥಿಕ ವ್ಯವಸ್ಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಮರೇಶ ಎನ್., ೧೯೯೮, ಹೈದಬಾರಾದ ಕರ್ನಾಟಕ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಅಮರೇಶ ಯತಗಲ್, ೨೦೦೫, ಕರ್ನಾಟಕ ನಾಯಕ ಅರಸು ಮನೆತನಗಳ ವಿಶಿಷ್ಟ ಸಾಂಸ್ಕೃತಿಕಾ ಚರಣೆಗಳು: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪. ಅಶ್ವಥ್ ಡಿ.ಎಸ್., ೨೦೦೧, ಕೊಪ್ಪಳ: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫. ಉಮೇಶ ಗುರಿಕಾರ, ೨೦೦೭, ಹೈದ್ರಾಬಾದ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬. ಕೊಟ್ರೇಶ ಎಂ., ೨೦೦೮, ಹೈದ್ರಾಬಾದ್-ಕರ್ನಾಟಕದ ವೈಶ್ಯರ ಜಾನಪದ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭. ಗಿರೇಗೌಡ ಅರಳಹಳ್ಳಿ, ೨೦೧೧, ರಾಯಚೂರು ಜಿಲ್ಲೆಯ ಐತಿಹ್ಯಗಳು, ಅನುಷಾ ಪ್ರಕಾಶನ, ವಿರುಪಾಪುರ, ರಾಯಚೂರು ಜಿಲ್ಲೆ(ಪ್ರಕಟಿತ ಪಿಎಚ್.ಡಿ.).

೮. ಚನ್ನಬಸಪ್ಪ ಕುಂಬಾರ, ೨೦೦೫, ಕಲ್ಲೂರಿನ ಲಿಂಗಯ್ಯ ಕವಿ ಮತ್ತು ಆತನ ವಂಶಜರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೯. ಜಗದೀಶ ಕುಮಾರ, ೨೦೦೯, ಬೇಡ ಸಮುದಾಯದ ಮಹಿಳೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೦. ಜಯಮ್ಮ ಎಚ್., ೨೦೦೨, ರಾಷ್ಟ್ರಕೂಟರ ಶಾಸನಗಳು: ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೧. ಜಯಲಕ್ಷ್ಮಿ ಮಂಗಳಮೂರ್ತಿ, ೨೦೦೪, ಹೈದ್ರಾಬಾದ್ ಕರ್ನಾಟಕದ ಆಧುನಿಕ ದಾಸಸಾಹಿತ್ಯ, ಶ್ರೀರಾಘವೇಂದ್ರ ಸ್ವಾಮಿಗಳವರ ಮಠ, ಮಂತ್ರಾಲಯ(ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೨. ಜೋಗನಕಟ್ಟೆ ಮಂಜುನಾಥ, ೨೦೧೧, ಮಸ್ಕಿ ಕನ್ನಡ: ಒಂದು ಭಾಷಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೩. ತುಕಾರಾಮ, ೨೦೧೦, ಸ್ವಾತಂತ್ರ್ಯ ಪೂರ್ವ ಹೈದ್ರಾಬಾದ್ ಕರ್ನಾಟಕದ ಸಾಹಿತ್ಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೪. ದೀಪಕ ಆಲೂರು, ೨೦೧೨, ಸಿಂದ್ ಮನೆತನಗಳ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ದುರಗಪ್ಪ ಎಂ.ಕೆ., ೨೦೦೩, ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೬. ದೇವರಾಜ ಓ., ೨೦೦೭, ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೭. ದೊಡ್ಡನಗೌಡ ಪಾಟೀಲ್, ೨೦೦೨, ಭೌತಿಕ ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆ: ಒಂದು ಅಧ್ಯಯನ(ಹೈದ್ರಾಬಾದ್-ಕರ್ನಾಟಕ ಪ್ರದೇಶ ಅನುಲಕ್ಷಿಸಿ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೮. ನಾಗರಾಜ ಹೀರಾ, ೨೦೦೨, ರಾಯಚೂರು ಪರಿಸರದ ಶರಣ ಸಾಹಿತ್ಯ: ಒಂದು ಅಧ್ಯಯನ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೯. ಪ್ರಭಾಕರರಾವ್ ಕೆ., ೨೦೦೬, ಮಧ್ಯಕಾಲೀನ ಕರ್ನಾಟಕದಲ್ಲಿ ಯುದ್ಧಗಳು, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ

೨೦. ಬಸವರಾಜ ಚವಡಿ, ೨೦೦೭, ಕಲ್ಯಾಣ ಚಾಲುಕ್ಯರ ಕಾಲದ ಕೃಷಿ ಪದ್ಧತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೧. ಬಿದರಿ ಚಂದ್ರಭಾಗಾ, ೨೦೦೭, ಹೈದ್ರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೨. ಮಂಜುನಾಥಯ್ಯ ಟಿ.ಎಂ., ೨೦೦೩, ಕುಮ್ಮಟ ನಾಯಕರು: ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೩. ಮಂಜುನಾಥ ಟಿ., ೨೦೦೬, ಚಿತ್ರದುರ್ಗ ಹಾಗೂ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ, ಕುವೆಂಪು ವಿಶ್ವವಿದ್ಯಾಲಯ, ಶಂಕರ ಘಟ್ಟ, ಶಿವಮೊಗ್ಗ.

೨೪. ಮಹಾದೇವಪ್ಪ, ೨೦೧೧, ಮುದಗಲ್ಲ: ಒಂದು ಸಾಂಸ್ಕೃತಿಕ ಅಧ್ಯಯನ, ಸ್ನಾತಕೋತ್ತರ ಕೇಂದ್ರ, ರಾಯಚೂರು, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲ್ಬರ್ಗಾ.

೨೫. ಮಹಾನಂದ ಎಂ.ಗೊಂದಿ, ೨೦೦೮, ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಆರ್ಥಿಕ, ಸಾಮಾಜಿಕ ಸ್ಥಿತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೬. ಮಹೇಶ, ೨೦೦೬, ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೭. ಮಹೇಶ ಕೆ., ೨೦೦೨, ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೮. ಮುಸ್ತಾಕ ಅಹ್ಮದ, ೨೦೧೨, ಮಹಮ್ಮದ ಆದಿಲ್‌ಶಾಹ ಜೀವನ ಮತ್ತು ಸಾಧನೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ರಮೇಶ ಮೂಲಗಿ, ೨೦೦೨, ಹೈದ್ರಾಬಾದ್-ಕರ್ನಾಟಕ ವೀರಶೈವ ಮಠಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩೦. ರಾಜಕುಮಾರ ಕೆ., ೨೦೦೨, ಸ್ವಾತಂತ್ರೋತ್ತರ ಕರ್ನಾಟಕದಲ್ಲಿ ಮಾದಿಗರು: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೧. ಶರಣಬಸಪ್ಪ ಪಿ., ೨೦೦೨, ಕೊಪ್ಪಳ, ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩೨. ಶಿವಾನಂದ ವಿರಕ್ತಮಠ, ೨೦೦೧, ಕೊಡೆಕಲ್ಲ ರಾಚಪ್ಪಯ್ಯ: ಒಂದು ಅಧ್ಯಯನ,ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೩. ಶ್ರೀಧರರಾವ್ ಪಿಸ್ಸೆ, ೨೦೦೪, ಕನ್ನಡ ದಾಸ ಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೪. ಶ್ರೀನಿವಾಸಾಚಾರ್ಯ ಮಾನಕರಿ, ೨೦೦೫, ಹರಿದಾಸ ಸಾಹಿತ್ಯ ಶ್ರೀ ಮದ್ಭಾಗವತ ಋಣ ಮತ್ತು ವೃದ್ಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೫. ಸತೀಶ ಕೆ., ೨೦೦೪, ವಿಜಯನಗರ ಕಾಲದ ಶೈವ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩೬. ಸಂತೋಷಕುಮಾರ ಹೆಚ್.ಬಿ., ೨೦೧೨, ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳವಳಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ಸರ್ವಮಂಗಳ ಸಕ್ರಿ, ೨೦೦೮, ರಾಯಚೂರು ಜಿಲ್ಲೆಯ ತತ್ತ್ವಪದಕಾರರು ಮತ್ತು ಅವರ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಸಿದ್ಧಲಿಂಗಮ್ಮ ಬಿ.ಜಿ., ೨೦೦೭, ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ, ಕುವೆಂಪು, ವಿಶ್ವವಿದ್ಯಾಲಯ, ಶಿವಮೊಗ್ಗ.

೩೯. ಸಿದ್ಧಲಿಂಗಪ್ಪ ಕೊಟ್ನೆಕಲ್, ೨೦೧೦, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ಮೇಘನಾ ಪ್ರಕಾಶನ, ಕೊಪ್ಪಳ(ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ).

೪೦. ಸುಜಾತ ಮಲ್ಲನಗೌಡ, ೨೦೦೦, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೧. ಸೋಮಶೇಖರ್ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧ ನೀತಿ, ಸಂಚಿಕೆ ಪ್ರಕಾಶನ, ಚಿತ್ರದುರ್ಗ(ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ).

೧.೩. ಡಿ.ಲಿಟ್. ಮಹಾಪ್ರಬಂಧಗಳು(ಅಪ್ರಕಟಿತ)

೧. ವೆಂಕಟಸ್ವಾಮಿ ಎಂ., ೨೦೧೦, ಕೋಲಾರ ಚಿನ್ನದ ಗಣಿಗಳು, ಚಾರಿತ್ರಿಕ, ಸಾಂಸ್ಕೃತಿಕ, ವೈಜ್ಞಾನಿಕ, ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧.೪. ಎಂ.ಫಿಲ್. ನಿಬಂಧಗಳು(ಅಪ್ರಕಟಿತ)

೧. ಅಮರೇಶ ಆಲ್ಕೋಡ, ೨೦೧೨, ದೇವದುರ್ಗ: ಚಾರಿತ್ರಿಕ ಅಧ್ಯಯನ, ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು(ಪ್ರಕಟಿತ)

೨. ಕವಿರತ್ನ ಬಾಬುರಾವ್, ೨೦೦೯, ಬಹಮನಿ ಕಾಳಗಗಳು, ಕ.ರಾ.ಸಿ. ಸ್ನಾತಕೋತ್ತರ ಕೇಂದ್ರ, ಬೀದರ.

೩. ಗುಂಡಮ್ಮ, ೨೦೦೯, ಮಾನ್ವಿ ತಾಲೂಕಿನ ಶಾಸನಗಳು: ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪. ಚನ್ನಬಸಪ್ಪ ಬಿ., ೨೦೦೦, ದೇವದುರ್ಗ ತಾಲೂಕು: ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫. ತಿರುಪತಿ, ೨೦೦೭, ಮುಕ್ಕುಂದಿ ಇತಿಹಾಸ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬. ನಲ್ಲಾರೆಡ್ಡಿ, ೨೦೦೪, ದೇವದುರ್ಗ ತಾಲೂಕಿನ ಹಗಲು ವೇಷಗಾರರು: ಸಬಾಲ್ಟರ್ನ್ ಅಧ್ಯಯನ ಹಿನ್ನೆಲೆಯಲ್ಲಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭. ಪದ್ಮಜಾ ದೇಸಾಯಿ, ೨೦೦೮, ರಾಯಚೂರು ಪರಿಸರದ ಪ್ರಾಚೀನ ದೇವಾಲಯಗಳ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೮. ಭೀಮೇಶ, ೨೦೦೯, ಉದ್ಯೋಗ ಖಾತ್ರಿ ಯೋಜನೆ: ಲಿಂಗಸಂಬಂಧಿ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೯. ಬೇಬಿ, ೨೦೦೮, ಬೀದರ್ ಕೋಟೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಮಲ್ಲಿಕಾರ್ಜುನ ಸೂಗಪ್ಪ, ೨೦೧೧, ಕೃಷ್ಣಾ ಮೇಲ್ದಂಡೆ ಯೋಜನೆ: ಒಂದು ಸಮೀಕ್ಷೆ (ರಾಯಚೂರು ಜಿಲ್ಲೆ ನಾರಾಯಣಪುರ ಬಲದಂಡೆ ಕಾಲುವೆಯನ್ನು ಅನುಲಕ್ಷಿಸಿ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಮಹೇಶ, ೨೦೦೨, ಗಬ್ಬೂರು ಶಾಸನಗಳು ಮತ್ತು ದೇವಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೨. ಯರಿಯಪ್ಪ, ೨೦೦೮, ರಾಯಚೂರು ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ ಸಮಾಜೋಭಾಷಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೩. ರಜನಿಕಾಂತ, ೨೦೦೯, ದೇವದುರ್ಗ ತಾಲೂಕಿನ ಮಹಿಳಾ ಕೂಲಿಕಾರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೪. ರಂಗನಾಥ ಆರ್., ೨೦೦೯, ರಾಜಶೇಖರ ನೀರಮಾನ್ವಿಯವರ ಸಣ್ಣ ಕಥೆಗಳು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೫. ರಾಜಶೇಖರ, ೨೦೧೦, ಚರಿತ್ರೆ ಲೇಖನಶಾಸ್ತ್ರ ಗುಲ್ಬರ್ಗಾ ಪ್ರದೇಶದ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೬. ವಿಜಯಲಕ್ಷ್ಮೀ, ೨೦೦೬, ಹಟ್ಟಿ ಚಿನ್ನದ ಗಣಿ: ಚಾರಿತ್ರಿಕ ಹಾಗೂ ಸಮಾಜೋ-ಆರ್ಥಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

